॥ ಶ್ರೀಃ ॥

—×—

# ಮುನ್ನುಡಿ



ಈ ಪುಸ್ತಕದಲ್ಲಿ ಶ್ರೀ ಕೃಷ್ಣನ ಚರಿತ್ರೆಯನ್ನು ವರ್ಣಿಸುತ್ತ ಆತನ ವೃಂದಾವನ ವಿಹಾರವನ್ನು ವಿಶೇಷವಾಗಿ ವಿವರಿಸುತ್ತಾನೆ. ಆ ವೃಂದಾವನದ ಸ್ವರೂಪ ಅಲ್ಲಿರುವ ಜನರು ಅಲ್ಲಿನ ಸೌಖ್ಯಗಳು ಅಸದೃಶವಾದುವು. ಅಲ್ಲಿ ಹೆಂಗಸರಿಗೆ ಮಾತ್ರ ಪ್ರವೇಶ ವಿರುವುದೇ ಹೊರತಾಗಿ ಕೃಷ್ಣನೊಬ್ಬನು ಹೊರತಾದ ಬೇರೆ ಗಂಡಸರಿರುವಂತಿಲ್ಲ. ಪ್ರವೇಶವೂ ಕೂಡ ಇಲ್ಲವೇ ಇಲ್ಲ. ಆದರೆ ಅಲ್ಲಿರುವ ಹೆಂಗಸರೆಲ್ಲರೂ ಮೋಕ್ಷ ಕ್ಕೋಸ್ಕರ ಶ್ರೀಕೃಷ್ಣನ ಅಂಗಸಂಗವನ್ನು ಅಪೇಕ್ಷಿಸಿದ ಋಷಿಗಳೆಂಬುದನ್ನು ಮನದಟ್ಟು ಮಾಡುತ್ತಾನೆ. ಇಂತಹ ಗೋಪಿಯರಿಂದ ಕೂಡಿದ ಶ್ರೀ ಕೃಷ್ಣ ಸಹಿತವಾದ ವೃಂದಾ ವನವನ್ನು ಧ್ಯಾನಮಾಡಿದರೆ ಮುಕ್ತಿಯೆಂಬುದು ಸಿಕ್ಕುತ್ತದೆಂದು ವರ್ಣಿತವಾಗಿದೆ. ಈ ರೀತಿಯಾದ ವೃಂದಾವನವನ್ನು ನೋಡಬೇಕೆಂದು ಬ್ರಹ್ಮನ ಮಾನಸ ಪುತ್ರನಾದ ನಾರದನೂ, ಶ್ರೀ ಕೃಷ್ಣನ ಅತ್ಯಂತ ಪ್ರಿಯನಾದ ಅರ್ಜುನನೂ ಅಪೇಕ್ಷಿಸಿ ಅವರೂ ಕೂಡ ಸ್ವಸ್ವರೂಪದಿಂದ ಅಲ್ಲಿಗೆ ಹೋಗಲಾರದೆ ಕೃಷ್ಣನ ಅನುಮತಿಯ ಮೇರೆಗೆ ಒಂದೊಂದು ಕೊಳದಲ್ಲಿ ಸ್ನಾನಮಾಡಿ ಹೆಂಗಸರಾಗಿ ಅಲ್ಲಿ ಸುಖವನ್ನು ಅನುಭವಿಸಿ ಅನಂತರ ಮತ್ತೊಂದು ಕೊಳದಲ್ಲಿ ಸ್ನಾನಮಾಡಿ ಗಂಡಸರಾಗಿ ಮೊದಲಿನಂತೆ ಹೋಗುತ್ತಾರೆ. ಇವರು ಈ ವಿಷಯಗಳನ್ನು ಪ್ರಪಂಚಕ್ಕೆ ಹರಡುತ್ತಾರೆ. ಶ್ರೀ ಕೃಷ್ಣನನ್ನು ಯಾವ ರೀತಿಯಲ್ಲಾದರೂ ಧ್ಯಾನಿಸಬಹುದು. ಅವನು ಮೋಕ್ಷವನ್ನು ಕೊಡುತ್ತಾನೆ. ಆದರೆ ಗಂಡಸಾದವನೂ ಹೆಂಗಸಿನಂತೆ ಶೀರೆಯುಟ್ಟು ಬಳೆ ತೊಟ್ಟು ಧ್ಯಾನಮಾಡಿದರೆ ಬೇಗನೆ ದರ್ಶನಕೊಡುವನೆಂದು ಹೇಳಿ ಕಾರಣಗಳನ್ನು ವಿಶದೀಕರಿಸಿದ್ದಾನೆ. ಇದರ ಅಂಗವಾಗಿ ವೈಷ್ಣವನ ಧರ್ಮಗಳು, ತಿಲಕಧಾರಣ, ಮುದ್ರೆಯನ್ನು ಧರಿಸುವುದು ಇವೆಲ್ಲವನ್ನೂ ಹೇಳಿದ್ದಾನೆ. ಆ ಕೃಷ್ಣನು ವೃಂದಾವನದಲ್ಲಿ ಮಾಡತಕ್ಕ ನಿತ್ಯಕೃತ್ಯಗಳನ್ನು ವರ್ಣಿಸಿ ದ್ದಾನೆ. ಮತ್ತು ಹರಿಯನ್ನು ಪೂಜೆಮಾಡಲು ಅಂಗದೇವತೆಗಳನ್ನು ಆವಾಹನೆ ಗಳನ್ನೂ ಹೇಳಿರುವುದು ಚೆನ್ನಾಗಿದೆ.

ವೈಶಾಖಮಾಸದ ಮಹಿಮೆಯನ್ನು ವಿಶೇಷವಾಗಿ ನಿರೂಪಿಸಿ, ಆ ತಿಂಗಳಲ್ಲಿ ಪ್ರಾತಸ್ಸ್ನಾನವು ಬಹು ಪುಣ್ಯಕರವೆಂದು ವಿವರಿಸಿದ್ದಾನೆ. ಇದಕ್ಕೋಸ್ಕರವಾಗಿ ಅನೇಕ ವಾದ ಹೃದಯಂಗಮವಾದ ಕಥೆಗಳನ್ನು ಹೇಳಿ ಕೈಲಾಗದವನಾದರೂ ಆ ತಿಂಗಳಲ್ಲಿ ಪ್ರಾತಸ್ಸ್ನಾನ ಮಾಡಬೇಕೆಂದೆನ್ನುವಂತೆ ಪ್ರಬೋಧಿಸುತ್ತಾನೆ. ಯಾವನಾದರೂ ಸರಿಯೆ, ತಾನು ಮಾಡಿದ ಪುಣ್ಯವನ್ನು ಮತ್ತೊಬ್ಬರಿಗೆ ಕೊಟ್ಟರೆ, ಆದರಿಂದ ಪುಣ್ಯವು ಮತ್ತೂ ಹೆಚ್ಚುವುದೆಂಬುದನ್ನು ವಿವರಿಸಿರುವುದು ಯಾವಾಗಲೂ ಪರೋಪಕಾರ ಮಾಡಬೇಕೆಂಬುದನ್ನು ಒತ್ತಿ ಹೇಳಿದಂತೆ ಇರುತ್ತದೆ.

ಈ ರೀತಿಯಾದ ಉತ್ತಮ ಗ್ರಂಥಗಳನ್ನು ಕನ್ನಡಿಗರಿಗೆ ತಿಳಿಯುವಂತೆ ಮಾಡುತ್ತ ಯಶೋಭಾಗಿಗಳಾಗುತ್ತಿರುವ **ನಮ್ಮ ಮಹಾಸ್ವಾಮಿಯವರಿಗೆ** ಸರ್ವೇಶ್ವರನು ಸಕಲ ಸೌಖ್ಯಗಳನ್ನು ಕೊಟ್ಟು ಕಾಪಾಡಲೆಂದು ಏಕಚಿತ್ತದಿಂದ ಪ್ರಾರ್ಥಿಸುತ್ತೇನೆ.

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದರಾಸ್)



## ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಮೂರನೆಯ ಭಾಗದ

# ವಿಷಯಾನುಕ್ರಮಣಿಕೆ



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಏಕೋನಸಪ್ತತಿತಮೋಽಧ್ಯಾಯಃ ॥



॥ ಋಷಯ ಊಚುಃ ॥

ಸಮ್ಯಕ್ಪೃತೋ ಮಹಾರಾಜ ತ್ವತ್ತೋ ರಾಮಾಶ್ವಮೇಧಕಃ ।
ಇದಾನೀಂ ವದ ಮಾಹಾತ್ಮ್ಯಂ ಶ್ರೀಕೃಷ್ಣಸ್ಯ ಮಹಾತ್ಮನಃ ॥ ೧ ॥

॥ ಸೂತ ಉವಾಚ ॥

ಶೃಣ್ವನ್ತು ಮುನಿಶಾರ್ದೂಲಾಃ ಶ್ರೀಕೃಷ್ಣಚರಿತಾಮೃತಂ ।
ಶಿವಾ ಪಪ್ರಚ್ಛ ಭೂತೇಶಂ ಯತ್ತದ್ವಃ ಕೀರ್ತಯಾಮ್ಯಹಂ ॥ ೨ ॥

ಏಕದಾ ಪಾರ್ವತೀದೇವೀ ಶಿವಸಂಸ್ನಿಗ್ಧಮಾನಸಾ ।
ಪ್ರಣಯೇನ ನಮಸ್ಕೃತ್ಯ ಪ್ರೋವಾಚ ವಚನಂ ತ್ವಿದಂ ॥ ೩ ॥

---

## ಅರವತ್ತೊಂಭತ್ತನೆಯ ಅಧ್ಯಾಯವು

೧. ಋಷಿಗಳು ಹೇಳಿದರು—ಎಲೈ ದೊರೆಯೇ ನೀನು ರಾಮಾಶ್ವಮೇಧವನ್ನು ಹೇಳಿದೆ. ಈಗ ಕೃಷ್ಣಮಹಾತ್ಮೆಯನ್ನು ಹೇಳು. ಕೇಳಬೇಕೆಂದಿದ್ದೇನೆ.

೨. ಸೂತನು ಹೇಳಿದನು—ಎಲೈ ಋಷಿಗಳೇ ಕೇಳಿರಿ. ಕೃಷ್ಣಚರಿತ್ರೆಯನ್ನು ಪಾರ್ವತಿಗೆ ಶಿವನು ಹೇಳಿದಂತೆ ಹೇಳುತ್ತೇನೆ.

೩. ಒಂದು ಸಾರಿ ಪಾರ್ವತಿಯು ಶಿವನನ್ನು ಪ್ರೀತಿಯಿಂದ ನಮಸ್ಕರಿಸಿ ಇಂತೆಂದಳು.

॥ ಪಾರ್ವತ್ಯುವಾಚ ॥

ಅನನ್ತಕೋಟಿಬ್ರಹ್ಮಾಣ್ಡೇ ತದ್ಬಾಹ್ಯಾಭ್ಯಂತರಸ್ಥಿತೇ ।
ವಿಷ್ಣೋಃಸ್ಥಾನಂ ಪರಂ ತೇಷಾಂ ಪ್ರಧಾನಂ ಪರಮುತ್ತಮಂ ॥ ೪ ॥

ಯತ್ಪರಂ ನಾಸ್ತಿ ಕೃಷ್ಣಸ್ಯ ಪ್ರಿಯಂ ಸ್ಥಾನಂ ಮನೋರಮಂ ।
ತತ್ಸರ್ವಂ ಶ್ರೋತುಮಿಚ್ಛಾಮಿ ಕಥಯಸ್ವ ಮಹಾಪ್ರಭೋ ॥ ೫ ॥

॥ ಈಶ್ವರ ಉವಾಚ ॥

ಗುಹ್ಯಾದ್ಗುಹ್ಯತರಂ ಪುಣ್ಯಂ ಪರಮಾನಂದಕಾರಕಂ ।
ಅತ್ಯದ್ಭುತಂ ರಹಸ್ಥಾನಂ ರಹಸ್ಯಂ ಪರಮಂ ಪದಂ ॥ ೬ ॥

ದುರ್ಲಭಾನಾಂ ಚ ಪರಮಂ ದುರ್ಲಭಂ ಮೋಹನಂ ಪದಂ ।
ಸರ್ವಶಕ್ತಮಿದಂ ದೇವಿ ಸರ್ವಸ್ಥಾನೇಷು ಗೋಪಿತಂ ॥ ೭ ॥

ಸಾತ್ವತಾಂ ಸ್ಥಾನಮೂರ್ಧನ್ಯಂ ವಿಷ್ಣೋರತ್ಯನ್ತದುರ್ಲಭಂ ।
ನಿತ್ಯಂ ವೃಂದಾವನಂ ನಾಮ ಬ್ರಹ್ಮಾಣ್ಡೋಪರಿಸಂಸ್ಥಿತಂ ॥ ೮ ॥

ಪೂರ್ಣಬ್ರಹ್ಮಸುಖೈಶ್ವರ್ಯಂ ನಿತ್ಯಮಾನಂದಮವ್ಯಯಂ ।
ವೈಕುಂಠಾದಿ ತದಂಶಾಂಶಂ ಸ್ವಯಂ ವೃಂದಾವನಂ ಭುವಿ ॥ ೯ ॥

---

೪. ಪಾರ್ವತಿಯು ಹೇಳಿದಳು— ಈ ಅನೇಕ ಕೋಟಿ ಬ್ರಹ್ಮಾಂಡಗಳಿರುವ ಈ ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲೂ ಇರುವವರಿಗೆ ವಿಷ್ಣುವಿನ ಸ್ಥಾನವು ಸಿಕ್ಕುವುದು ಸರಿಯಷ್ಟೆ.

೫. ಆದರೆ ಕೃಷ್ಣನಿಗೆ ಉತ್ತಮಸ್ಥಾನವಿರುವುದನ್ನು ನಾನೆಲ್ಲೂ ಕೇಳಿಲ್ಲ. ಅದೆಲ್ಲವನ್ನೂ ದಯವಿಟ್ಟು ಹೇಳು.

೬–೮. ಬೃಂದಾವನವೆಂಬ ಒಂದು ಸ್ಥಾನವಿದೆ. ಅದು ಗುಟ್ಟುಗಳಲ್ಲಿ ಗುಟ್ಟಾದುದು. ಆನಂದವಾದುದು. ಅದ್ಭುತವಾದುದು. ಅದು ಪರಮಪದವು. ದುರ್ಲಭದಲ್ಲಿ ದುರ್ಲಭವು. ಮೋಹಕವಾದುದು. ಸರ್ವಸ್ಥಾನದಲ್ಲೂ ಗುಪ್ತವಾದುದು. ಸರ್ವಶಕ್ತವಾದುದು. ಸಾತ್ವಿಕಸ್ಥಾನವು. ಬ್ರಹ್ಮಾಣ್ಡದಮೇಲಿದೆ.

೯. ಪೂರ್ಣಬ್ರಹ್ಮನೇ ಅದಾಗಿದೆ. ಆನಂದರೂಪವಾದುದು. ವೈಕುಂಠವೇ ಆದಿಯಾದುವು ಅದರ ಅಂಶಾಂಶಗಳು.

ಗೋಲೋಕೈಶ್ವರ್ಯಂ ಯತ್ಕಿಂಚಿದ್ಗೋಕುಲಂ ತತ್ಪ್ರತಿಷ್ಠಿತಿ ।
ವೈಕುಂಠವೈಭವಂ ಯದ್ವೈ ದ್ವಾರಕಾಯಾಂ ಪ್ರಕಾಶಿತಂ ॥ ೧೦ ॥

ಯದ್ಬ್ರಹ್ಮ ಪರಮೈಶ್ವರ್ಯಂ ನಿತ್ಯಂ ವೃಂದಾವನಾಶ್ರಯಂ
ಕೃಷ್ಣಧಾಮ ಪರಂ ತೇಷಾಂ ವನಮಧ್ಯೇ ವಿಶೇಷತಃ ॥ ೧೧ ॥

ತಸ್ಮಾತ್ತ್ರೈಲೋಕ್ಯಮಧ್ಯೇ ತು ಪೃಥ್ವೀ ಧನ್ಯೇತಿ ವಿಶ್ರುತಾ ।
ಯಸ್ಮಾನ್ಮಾಥುರಕಂ ನಾಮ ವಿಷ್ಣೋರೇಕಾನ್ತವಲ್ಲಭಂ ॥ ೧೨ ॥

ಸ್ವಸ್ಥಾನಮಧಿಕಂ ನಾಮ ಧ್ಯೇಯಂ ಮಾಥುರಮಂಡಲಂ ।
ನಿಗೂಢಂ ವಿವಿಧಂ ಸ್ಥಾನಂ ಪುರ್ಯಭ್ಯನ್ತರಸಂಸ್ಥಿತಂ ॥ ೧೩ ॥

ಸಹಸ್ರಪತ್ರಕಮಲಾಕಾರಂ ಮಾಥುರಮಂಡಲಂ ।
ವಿಷ್ಣುಚಕ್ರಪರೀಮಾಣಂ ಧಾಮವೈಷ್ಣವಮದ್ಭುತಂ ॥ ೧೪ ॥

ಕರ್ಣಿಕಾಪರ್ಣವಿಸ್ತಾರಂ ರಹಸ್ಯಂ ದ್ರುಮಮೀರಿತಂ ।
ಪ್ರಧಾನಂ ದ್ವಾದಶಾರಣ್ಯಂ ಮಾಹಾತ್ಮ್ಯಂ ಕಥಿತಂ ಕ್ರಮಾತ್ ॥ ೧೫ ॥

---

೧೦. ಆ ಗೋಕುಲದಲ್ಲಿ ಗೋಲೋಕದ ಐಶ್ವರ್ಯವೇ ಇದೆ. ವೈಕುಂಠದ ವೈಭವವೇ ದ್ವಾರಕೆಯಲ್ಲಿ ಪ್ರಕಾಶಿತವಾಗಿದೆ

೧೧. ಬ್ರಹ್ಮನ ಪರಮೈಶ್ವರ್ಯವೇ ಆ ಬೃಂದಾವನದಲ್ಲಿರುವುದು. ಅದು ಆ ಕೃಷ್ಣನ ಸ್ಥಳವು. ವನಮಧ್ಯದಲ್ಲಿ ಪ್ರಕಾಶಿಸಿದೆ.

೧೨. ಆದ್ದರಿಂದಲೇ ಮೂರು ಲೋಕಗಳ ಮಧ್ಯದಲ್ಲಿ ಭೂಲೋಕವು ಧನ್ಯವಾದುದು. ಈ ಭೂಮಿಯಲ್ಲಿ ಆ ಪ್ರಸಿದ್ಧವಾದ ದೇವರ ಪ್ರಿಯವಾದ ಮಧುರೆಯಿರುವುದೇ ಕಾರಣ.

೧೩ ಇದು ಉತ್ತಮವಾದ ಸ್ಥಾನವು. ಈ ಮಧುರೆಯು ಧ್ಯಾನಕ್ಕೆ ತಕ್ಕುದು. ಈ ಮಧುರಾಪುರಿಯ ಮಧ್ಯದಲ್ಲಿ ಗುಟ್ಟಾದ ಒಂದು ಸ್ಥಾನವಿದೆ.

೧೪. ಆ ಮಧುರೆಯು ಸಾವಿರ ದಳವುಳ್ಳ ಕಮಲದ ಆಕಾರದಲ್ಲಿದೆ. ವಿಷ್ಣುವಿನ ಚಕ್ರದಷ್ಟಗಲವಿದೆ. ಇದೇ ವೈಷ್ಣವಸ್ಥಾನವು.

೧೫. ಅಲ್ಲಿ ಒಂದು ಮರವಿದೆ. ಅದು ಕಮಲದ ಕರ್ಣಿಕೆಯಷ್ಟಿದೆ ಅಲ್ಲಿ ಮುಖ್ಯವಾಗಿ ಹನ್ನೆರಡು ಅರಣ್ಯಗಳಿವೆ. ಅವುಗಳ ಮಹಿಮೆ ಹೆಚ್ಚು.

ಭದ್ರಶ್ರೀಲೋಹ ಭಾಂಡೀರಮಹಾತಾಳಖದೀರಕಾಃ ।
ವಕುಲಂಕುಮುದಂ ಕಾಮ್ಯಂ ಮಧು ವೃಂದಾವನಂ ತಥಾ ॥ ೧೬ ॥

ದ್ವಾದಶೈತಾವತೀ ಸಂಖ್ಯಾ ಕಾಲಿಂದ್ಯಾಸ್ಸಪ್ತ ಪಶ್ಚಿಮೇ ।
ಪೂರ್ವೇ ಪಂಚವನಂ ಪ್ರೋಕ್ತಂ ತತ್ರಾಸ್ತಿ ಗುಹ್ಯಮುತ್ತಮಂ ॥ ೧೭ ॥

ಮಹಾರಣ್ಯಂ ಗೋಕುಲಾಖ್ಯಂ ಮಧುವೃಂದಾವನಂ ತಥಾ ।
ಅನ್ಯೇಶ್ಚೋಪವನಂ ಪ್ರೋಕ್ತಂ ಕೃಷ್ಣಕ್ರೀಡಾರಸಸ್ಥಳಂ ॥ ೧೮ ॥

ಕದಂಬಖಂಡಕಂ ನಂದಂ ವನಂ ನಂದೀಶ್ವರಂ ತಥಾ ।
ನಂದನಂ ವನಖಂಡಂ ಚ ಪಲಾಶಾಶೋಕಕೇತಕೀ ॥ ೧೯ ॥

ಸುಗಂಧಮಾನ ಕಂಕೈಲಮಮೃತಂ ಭೋಜನಸ್ಥಳಂ ।
ಸುಖಪ್ರಸಾಧನಂ ವತ್ಸಹರಣಂ ಶೇಷಶಾಯಿಕಂ ॥ ೨೦ ॥

ಶ್ಯಾಮಪುರ್‍ಯೋ ದಧಿಗ್ರಾಮಶ್ಚಕ್ರಭಾನುಪುರಂ ತಥಾ ।
ಸಂಕೇತಂ ದ್ವಿಪದಂ ಚೈವ ಬಾಲಕ್ರೀಡನಧೂಸರಂ ॥ ೨೧ ॥

---

೧೬–೧೭. ಭದ್ರ, ಶ್ರೀ, ಲೋಹ ಭಾಂಡೀರ, ಮಹಾ, ತಾಳ, ಖದೀರ, ವಕುಳ, ಕುಮುದ, ಕಾಮ್ಯ, ಮಧು, ವೃಂದಾವನ ಎಂಬುದಾಗಿ ಹನ್ನೆರಡು ವನಗಳಿವೆ. ಇವುಗಳಲ್ಲಿ ಕಾಳಿಂದೀನದಿಯ ಪಶ್ಚಿಮಕ್ಕೆ ಏಳು ವನಗಳೂ, ಪೂರ್ವಕ್ಕೆ ಐದು ವನಗಳೂ ಇವೆ.

೧೮. ಗೋಕುಲ, ಮಧು, ವೃಂದಾವನಗಳು, ಮಹಾರಣ್ಯಗಳು, ಮಿಕ್ಕವು ಉಪವನಗಳು ಎಂದೆನಿಸಿಕೊಳ್ಳುತ್ತವೆ.

೧೯–೨೨. ಕದಂಬ, ಖಂಡಕ, ನಂದವನ, ನಂದೀಶ್ವರ, ನಂದನವನಖಂಡದಲ್ಲಿ ಅನೇಕವಾದ ಮುತ್ತುಗ, ಅಶೋಕ, ತಾಳೆ, ಇವೆಲ್ಲವೂ ಇವೆ. ಇದು ಒಳ್ಳೆ ಸುಗಂಧವಾದ ಜಾಗ ಮತ್ತು ಸ್ವಾಮಿಯ ಭೋಜನಸ್ಥಳ. ಇಲ್ಲಿಯೇ ಸುಖಪ್ರಸಾಧನ ಸ್ಥಳ, ವತ್ಸಹರಣಸ್ಥಳ, ಶೇಷಶಾಯಿಸ್ಥಳ, ಶ್ಯಾಮಪುರಿ, ದಧಿಗ್ರಾಮ, ಚಕ್ರಭಾನುಪುರ, ಸಂಕೇತ, ದ್ವಿಪದ, ಬಾಲಕ್ರೀಡನ, ಬಾಲಧೂಸರ, ಕೇಳಿದ್ರುಮ, ಸುಲಲಿತ, ಉತ್ಸುಕ,

**ಕೇಳಿದ್ರುಮಂ ಸುಲಲಿತಮುತ್ಸಕಂ ಚಾಪಿ ಕಾನನಂ ।**
**ನಾನಾವಿಧರಸಕ್ರೀಡಾನಾನಾಲೀಲಾರಸಸ್ಥಳಂ　　॥ ೨೨ ॥**

**ನಗವಿಸ್ತಾರ ವಿಷ್ಟಂಭಂ ರಹಸ್ಯಂ ದ್ರುಮಮೀರಿತಂ ।**
**ಸಹಸ್ರಪತ್ರಕಮಲಂ ಗೋಕುಲಾಖ್ಯಂ ಮಹತ್ಪದಂ　　॥ ೨೩ ॥**

**ಕರ್ಣಿಕಾ ತನ್ಮಹದ್ಧಾಮ ಗೋವಿಂದಸ್ಥಾನಮುತ್ತಮಂ ।**
**ತತ್ರೋಪರಿ ಸ್ವರ್ಣಪೀಠೇ ಮಣಿಮಂಟಪಮಂಡಿತಂ　　॥ ೨೪ ॥**

**ಕರ್ಣಿಕಾಯಾಂ ಕ್ರಮಾದ್ದಿಕ್ಷು ವಿದಿಕ್ಷು ದಳಮೀರಿತಂ ।**
**ಯದ್ದಳಂ ದಕ್ಷಿಣೇ ಪ್ರೋಕ್ತಂ ಪರಂ ಗುಹ್ಯೋತ್ತಮೋತ್ತಮಂ　　॥ ೨೫ ॥**

**ತಸ್ಮಿನ್ದಳೇ ಮಹಾಪೀಠಂ ನಿಗಮಾಗಮದುರ್ಗಮಂ ।**
**ಯೋಗೀಂದ್ರೈರಪಿ ದುಷ್ಪ್ರಾಪ್ಯಂ ಸರ್ವಾತ್ಮಾ ಯಚ್ಚ ಗೋಕುಲಂ ॥ ೨೬ ॥**

**ದ್ವಿತೀಯಂ ದಳಮಾಗ್ನೇಯ್ಯಾಂ ತದ್ರಹಸ್ಯಂ ದಳಂ ತಥಾ ।**
**ಸಂಕೇತಂ ದ್ವಿಪದಂ ಚೈವ ಕುಟೀ ದ್ವೌ ತದ್ದಳೇ ಸ್ಥಿತೇ　　॥ ೨೭ ॥**

---

ಎಂಬದಾಗಿ ನಾನಾಬಗೆಯಾದ ಸ್ಥಳಗಳಿವೆ. ಇಲ್ಲೆಲ್ಲವೂ ಕೃಷ್ಣನು ನಾನಾಬಗೆಯಾದ ಕ್ರೀಡೆಗಳನ್ನು ಅನುಭವಿಸಿರುವನು.

೨೩. ಇಲ್ಲಿ ಬೆಟ್ಟದಂತೆ ವಿಸ್ತಾರವಾಗಿ ಗಟ್ಟಿಯಾಗಿರುವ ಒಂದು ಮರವಿದೆ. ಅದು ರಹಸ್ಯವಾದುದು. ಗೋಕುಲವೆಂಬ ಜಾಗವು ಸಾವಿರದಳದ ಕಮಲದಂತಿರುವುದು.

೨೪. ಅದರ ಕರ್ಣಿಕೆಯೇ ಗೋವಿಂದ. ಅದರ ಮೇಲೆ ಸ್ವರ್ಣಪೀಠದಲ್ಲಿ ಮಂಟಪವಿದೆ. ಅದರಲ್ಲಿ ಸ್ವಾಮಿಯು ಕುಳಿತುಕೊಳ್ಳುವುದು.

೨೫. ಆ ಕರ್ಣಿಕೆಯಲ್ಲಿ ದಿಕ್ಕು ವಿದಿಕ್ಕುಗಳಲ್ಲಿ ದಳಗಳಿವೆ. ಅವರಲ್ಲಿ ದಕ್ಷಿಣದ ದಳವು ಗುಹ್ಯವಾದುದು. ಉತ್ತಮೋತ್ತಮವಾದುದು.

೨೬. ಅಲ್ಲಿರುವ ಪೀಠವು ವೇದವೇದಾಂತಗಳಿಗೂ ನಿಲುಕದಿರುವುದು. ಯೋಗೀಂದ್ರರೂ ತಿಳಿಯಲಾರರು. ಅದು ಗೋಕುಲವು. ಸರ್ವಾತ್ಮವಾದುದು.

೨೭. ಆಗ್ನೇಯದ ದಳವು ರಹಸ್ಯವಾದುದು. ಸಂಕೇತ ದ್ವಿಪದಗಳೆಂಬುವು ಆ ದಳದಲ್ಲಿರುವ ಎರಡು ಎಲೆಮನೆಗಳು.

ಪೂರ್ವಂ ದಳಂ ತೃತೀಯಂ ಯತ್ಪ್ರಧಾನಸ್ಥಾನಮುತ್ತಮಂ ।
ಗಂಗಾದಿ ಸರ್ವತೀರ್ಥೇಭ್ಯಃ ಸ್ಪರ್ಶಾಚ್ಛತಗುಣಂ ಸ್ಮೃತಂ ॥ ೨೮ ॥

ಚತುರ್ಥಂ ದಳಮೈಶಾನ್ಯಂ ಸಿದ್ಧಪೀಠೇ ತು ತತ್ಪದಂ ।
ಕಾತ್ಯಾಯನ್ಯರ್ಚನಾದ್ಗೋಪೀ ತತ್ರ ಕೃಷ್ಣಂ ಪತಿಂ ಲಭೇತ್ ॥ ೨೯ ॥

ವಸ್ತ್ರಾಲಂಕಾರಹರಣಂ ತದ್ದಳೇ ಸಮುದಾಹೃತಂ ।
ಉತ್ತರೇ ಪಂಚಮಂ ಪ್ರೋಕ್ತಂ ದಳಂ ಸರ್ವದಳೋತ್ತಮಂ ॥ ೩೦ ॥

ದ್ವಾದಶಾದಿತ್ಯಮತ್ರೈವ ದಳಂ ಚ ಕರ್ಣಿಕಾಸಮಂ ।
ವಾಯವ್ಯಾಂ ತು ದಳಂ ಷಷ್ಠಂ ತತ್ರ ಕಾಳೀಹ್ರದಃ ಸ್ಮೃತಃ ॥ ೩೧ ॥

ದಳೋತ್ತಮೋತ್ತಮಂ ಚೈವ ಪ್ರಧಾನಂ ಸ್ಥಾನಮುಚ್ಯತೇ ।
ಸರ್ವೋತ್ತಮದಳಂ ಚೈವ ಪಶ್ಚಿಮೇ ಸಪ್ತಮಂ ಸ್ಮೃತಂ ॥ ೩೨ ॥

---

೨೮. ಮೂರನೆಯದಾದ ಪೂರ್ವದಳವು ಪ್ರಧಾನವಾದುದು ಉತ್ತಮವಾದುದು. ಅದನ್ನು ಮುಟ್ಟುವುದರಿಂದಲೇ ಗಂಗಾದಿ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯಬರುತ್ತದೆ.

೨೯. ಈಶಾನ್ಯದಲ್ಲಿ ನಾಲ್ಕನೆಯ ದಳವಿದೆ. ಅದು ಸಿದ್ಧಪೀಠ. ಅಲ್ಲಿ ಗೋಪಿಯು ಕಾತ್ಯಾಯನಿಯನ್ನು ಪೂಜಿಸಿ ಕೃಷ್ಣನನ್ನು ಪತಿಯನ್ನಾಗಿ ಹೊಂದಿದಳು.

೩೦. ಈಶಾನ್ಯದಳದಲ್ಲಿಯೇ ಗೋಪಿಗಳ ವಸ್ತ್ರಾಲಂಕಾರಹರಣವು ಮಾಡಲ್ಪಟ್ಟಿತು. ಉತ್ತರದಲ್ಲಿರುವ ದಳವು ಐದನೆಯ ದಳವು ಇದು ಉತ್ತಮವಾದುದು.

೩೧. ಈ ಐದನೆಯ ದಳದಲ್ಲಿಯೇ ದ್ವಾದಶಾದಿತ್ಯರು ಇರುವುದು. ಇದು ಕರ್ಣಿಕೆಗೆ ಸಮವಾದುದು. ವಾಯುವ್ಯದಲ್ಲಿ ಆರನೆಯ ದಳವಿದೆ. ಅಲ್ಲೇ ಕಾಳಿಯ ಮಡುವಿರುವುದು.

೩೨. ಆ ಕಾಳಿಯ ಹ್ರದವು ಉತ್ತಮೋತ್ತಮವಾದ ಸ್ಥಳವು. ಪ್ರಧಾನವಾದ್ದು. ಪಶ್ಚಿಮದಲ್ಲಿ ಸಪ್ತದಳವಿದೆ ಅದು ಉತ್ತಮವಾದುದು.

ಯಜ್ಞಪತ್ನೀಗಣಾನಾಂ ಚ ತದೀಪ್ಸಿತವರಪ್ರದಂ ।
ಅತ್ರಾಸುರೋಪಿ ನಿರ್ವಾಣಂ ಪ್ರಾಪ ತ್ರಿದಶದುರ್ಲಭಂ ॥ ೩೩ ॥

ಬ್ರಹ್ಮಮೋಹನಮತ್ರೈವ ದಳಂ ಬ್ರಹ್ಮಹ್ರದಾಭಿದಂ ।
ನೈಋತ್ಯಾಂ ತು ದಳಂ ಪ್ರೋಕ್ತಂ ಅಷ್ಟಮಂ ವ್ಯೋಮಘಾತನಂ ॥ ೩೪ ॥

ಶಂಖಚೂಡವಧಸ್ತತ್ರ ನಾನಾಕೇಳಿರಸಸ್ಥಳಂ ।
ಶ್ರುತಮಷ್ಟದಳಂ ಪ್ರೋಕ್ತಂ ವೃಂದಾರಣ್ಯಾಂತರಸ್ಥಿತಂ ॥ ೩೫ ॥

ಶ್ರೀಮದ್ವೃಂದಾವನಂ ರಮ್ಯಂ ಯಮುನಾಯಾಃ ಪ್ರದಕ್ಷಿಣಂ ।
ಶಿವಲಿಂಗಮಧಿಷ್ಠಾನಂ ದೃಷ್ಟಂ ಗೋಪೀಶ್ವರಾಭಿದಂ ॥ ೩೬ ॥

ತದ್ಬಾಹ್ಯೇ ಷೋಡಶದಳಂ ಶ್ರಿಯಾಪೂರ್ಣಂ ತವಿಾಶ್ವರಂ ।
ಸರ್ವಾಸು ದಿಕ್ಷು ಯತ್ಪ್ರೋಕ್ತಂ ಪ್ರಾದಕ್ಷಿಣ್ಯಾದ್ಯಥಾಕ್ರಮಂ ॥ ೩೭ ॥

ಮಹತ್ಪದಂ ಮಹದ್ಧಾಮ ಸ್ವಧಾಮಾಧವಸಂಜ್ಞಿಕಂ ।
ಪ್ರಥಮೈಕದಳಂ ಶ್ರೇಷ್ಠಂ ಮಾಹಾತ್ಮ್ಯಂ ಕರ್ಣಿಕಾಸಮಂ ॥ ೩೮ ॥

---

೩೩. ಈ ಸಪ್ತಮದಳದಲ್ಲಿ ಯಜ್ಞಪತ್ನೀಗಣಗಳಿವೆ. ಅದು ಈಪ್ಸಿತವಾದುದನ್ನು ಕೊಡುತ್ತದೆ. ಅಲ್ಲಿ ರಾಕ್ಷಸನೂ ಕೂಡ ದೇವತೆಗಳಿಗೂ ಅಸಾಧ್ಯವಾದ ಮೋಕ್ಷವನ್ನು ಹೊಂದಿದನು.

೩೪. ಈ ಏಳನೆಯ ದಳದಲ್ಲಿಯೇ ಬ್ರಹ್ಮಮೋಹನಾದಿಗಳು ಉಂಟಾದುದು. ಅಲ್ಲಿ ಬಹ್ಮಹ್ರದವಿದೆ. ನೈಋತ್ಯದಲ್ಲಿ ಅಷ್ಟಮದಳವಿದೆ. ಅದು ವ್ಯೋಮಘಾತನವೆಂಬುದು. ಅಲ್ಲಿ ಶಂಖಚೂಡನನ್ನು ಕೊಂದುದು. ನಾನಾಬಗೆಯ ಆಟಗಳನ್ನು ಆಡಿದುದು.

೩೫–೩೬, ಈ ರೀತಿ ಬೃಂದಾವನದಲ್ಲಿ ಎಂಟು ದಳಗಳಿವೆ. ಈ ವೃಂದಾವನವನ್ನು ಯಮುನೆಯು ಪ್ರದಕ್ಷಿಣೆ ಮಾಡುತ್ತದೆ. ಇಲ್ಲಿ ಒಂದು ಶಿವಲಿಂಗವಿದೆ. ಅದಕ್ಕೆ ಗೋಪೀಶ್ವರನೆಂದು ಹೆಸರು.

೩೭. ಇವುಗಳ ಹೊರಗೆ ಹದಿನಾರು ದಳಗಳಿವೆ. ಸಂಪದ್ಯುಕ್ತವಾದುದು. ಪ್ರದಕ್ಷಿಣದಿಂದ ಎಲ್ಲಾ ದಿಕ್ಕಿನಲ್ಲಿಯೂ ಹಿಗೆಯೇ ಇದೆ.

೩೮. ಅದರಲ್ಲಿ ಒಂದನೆಯ ದಳವು ಶ್ರೇಷ್ಠವಾದುದು. ಮಾಹಾತ್ಮೆಯುಳ್ಳದ್ದು. ಮಹತ್ಪದವು ಅದರ ಹೆಸರು ಸ್ವಧಾಮಾಧವವೆಂದು.

ತತ್ರ ಗೋವರ್ಧನಗಿರೌ ರಮ್ಯೇ ನಿತ್ಯರಸಾಶ್ರಯೇ ।
ಕರ್ಣಿಕಾಯಾಂ ಮಹಾಲೀಲಾ ತಲ್ಲೀಲಾರಸಗಹ್ವರೌ ॥ ೩೯ ॥

ತತ್ರ ಕೃಷ್ಣೋ ನಿತ್ಯವೃಂದಾ ಕಾನನಸ್ಯ ಪತಿರ್ಭವೇತ್ ।
ಕೃಷ್ಣೋ ಗೋವಿಂದತಾಂ ಪ್ರಾಪ್ತಃ ಕಿಮನ್ಯೈರ್ಬಹುಭಾಷಿತೈಃ ॥ ೪೦ ॥

ದಳಂ ತೃತೀಯಮಾಖ್ಯಾತಂ ಸರ್ವಶ್ರೇಷ್ಠೋತ್ತಮೋತ್ತಮಂ ।
ಚತುರ್ಥಂ ದಳಮಾಖ್ಯಾತಂ ಮಹಾದ್ಭುತರಸಸ್ಥಳಂ ॥ ೪೧ ॥

ನಂದೀಶ್ವರವನಂ ರಮ್ಯಂ ತತ್ರ ನಂದಾಲಯಸ್ಸ್ಮೃತಃ ।
ಕರ್ಣಿಕಾದಳಮಾಹಾತ್ಮ್ಯಂ ಪಂಚಮಂ ದಳಮುಚ್ಯತೇ ॥ ೪೨ ॥

ಅಧಿಷ್ಠಾತಾತ್ರ ಗೋಪಾಲೋ ಧೇನುಪಾಲನತತ್ಪರಃ ।
ದಳಂ ಷಷ್ಠಂ ಯದಾಖ್ಯಾತಂ ತತ್ರನಂದವನಂ ಸ್ಮೃತಂ ॥ ೪೩ ॥

ಸಪ್ತಮಂ ವಕುಳಾರಣ್ಯಂ ದಳಂ ರಮ್ಯಂ ಪ್ರಕೀರ್ತಿತಂ ।
ತತ್ರಾಷ್ಟಮಂ ತಾಳವನಂ ತತ್ರ ಧೇನುವಧಸ್ಸ್ಮೃತಃ ॥ ೪೪ ॥

---

೩೯. ನಿತ್ಯರಸವಾದ ಸುಖಕ್ಕೆ ಆಶ್ರಯವಾದ ಗೋವರ್ದನಗಿರಿಯಲ್ಲಿ ಲೀಲೆಗೆ ಸ್ಥಾನವಾದ ಕರ್ಣಿಕೆಯಲ್ಲಿ ಕೃಷ್ಣನು ವೃಂದಾವನ ಕಾನನಕ್ಕೆ ಪತಿಯಾಗಿದ್ದಾನೆ

೪೦. ಕೃಷ್ಣನು ಅಲ್ಲಿ ಗೋವಿಂದನಾದನು ಎಂದರೆ ಧರ್ಮವನ್ನು ಬಲ್ಲವನಾದನು, ಎಂದಮೇಲೆ ಹೇಳತಕ್ಕದ್ದೇನಿದೆ.

೪೧. ಮೂರನೆಯ ದಳವೂ ಸರ್ವಶ್ರೇಷ್ಠವಾದುದು. ಉತ್ತಮವಾದುದು. ನಾಲ್ಕನೆಯ ದಳವೂ ಅದ್ಭುತವಾದ ಸ್ಥಳವು.

೪೨. ನಂದೀಶ್ವರವನವು ರಮ್ಯವಾದುದು. ಅಲ್ಲಿಯೇ ನಂದನ ಮನೆಯಿರುವುದು. ಕರ್ಣಿಕಾದಳವೆಂಬುದೇ ಐದನೆಯದಳವು.

೪೩. ಇಲ್ಲಿಯೇ ದನಗಳನ್ನು ಕಾಯುತ್ತಾ ಗೋಪಾಲನಿದ್ದ ಸ್ಥಳವು. ಆರನೆಯ ದಳದಲ್ಲಿಯೇ ನಂದವನವಿರುವುದು.

೪೪. ವಕುಳಾರಣ್ಯವಿರುವುದೇ ಸಪ್ತಮದಳವು. ಅದು ರಮ್ಯವಾದುದು. ಅಷ್ಟಮದಳವೇ ತಾಳವನವು. ಅಲ್ಲಿಯೇ ಧೇನುಕಾಸುರನನ್ನು ಕೊಂದುದು.

ನವಮಂ ಕುಮುದಾರಣ್ಯಂ ದಳಂ ರಮ್ಯಂ ಪ್ರಕೀರ್ತಿತಂ ।
ಕಾಮಾರಣ್ಯಂ ಚ ದಶಮಂ ಪ್ರಧಾನಂ ಸರ್ವಕಾರಣಂ ॥೪೫॥

ಬ್ರಹ್ಮಪ್ರಸಾದನಂ ತತ್ರ ವಿಷ್ಣುಚ್ಛದ್ಮಪ್ರದರ್ಶನಂ ।
ಕೃಷ್ಣಕ್ರೀಡಾರಸಸ್ಥಾನಂ ಪ್ರಧಾನಂ ದಳಮುಚ್ಯತೇ ॥ ೪೬ ॥

ದಳಮೇಕಾದಶಂ ಪ್ರೋಕ್ತಂ ಭಕ್ತಾನುಗ್ರಹಕಾರಕಂ ।
ನಿರ್ಮಾಣಂ ಸೇತುಬಂಧಸ್ಯ ನಾನಾವನಮಯಸ್ಥಳಂ ॥ ೪೭ ॥

ಭಾಂಡೀರಂ ದ್ವಾದಶದಳಂ ವನಂ ರಮ್ಯಂ ಮನೋಹರಂ ।
ಕೃಷ್ಣಃ ಕ್ರೀಡಾರಸಸ್ತತ್ರ ಶ್ರೀದಾಮಾದಿಭಿರಾವೃತಃ ॥ ೪೮ ॥

ತ್ರಯೋದಶಂ ದಳಂ ಶ್ರೇಷ್ಠಂ ತತ್ರ ಭದ್ರವನಂ ಸ್ಮೃತಂ ।
ಚತುರ್ದಶದಳಂ ಪ್ರೋಕ್ತಂ ಸರ್ವಸಿದ್ಧಿಪ್ರದಸ್ಥಳಂ ॥ ೪೯ ॥

---

೪೫. ಒಂಭತ್ತನೆಯದು ಕುಮುದಾರಣ್ಯವು. ದಶಮದಳವು ಕಾಮಾರಣ್ಯವು. ಅದು ಮುಖ್ಯವಾದುದು.

೪೬. ಆ ಕಾಮಾರಣ್ಯದಲ್ಲಿಯೇ ಬ್ರಹ್ಮಪ್ರಸಾದನ. ವಿಷ್ಣುವು ಕಪಟತನವನ್ನು ತೋರಿದುದು. ಮತ್ತು ಕೃಷ್ಣನಿಗೆ ಇದು ಮುಖ್ಯವಾದ ಕ್ರೀಡಾಸ್ಥಾನವಾದುದರಿಂದ ಪ್ರಧಾನದಳವು.

೪೭. ಹನ್ನೊಂದನೆಯ ದಳವು ಭಕ್ತರಿಗೆ ಅನುಗ್ರಹವನ್ನು ಉಂಟುಮಾಡತಕ್ಕದ್ದು. ಸೇತುಬಂಧದ ಜಾಗವೂ ನಾನಾವಿಧವಾದ ವನಗಳೂ ಅಲ್ಲಿವೆ.

೪೮. ಭಾಂಡೀರವೆಂಬುದೇ ಹನ್ನೆರಡನೆಯ ವನವು ಈ ವನವು ಮನೋಹರವಾಗಿದೆ. ಕೃಷ್ಣನು ಹಗ್ಗದಿಂದ ಕಟ್ಟಿಸಿಕೊಂಡು ಆಟವಾಡಿದ ಜಾಗವಿದೇನೆ.

೪೯. ಹದಿಮೂರನೆಯ ದಳವು ಶ್ರೇಷ್ಠವಾದುದು. ಅಲ್ಲಿ ಭದ್ರವನವಿದೆ. ಹದಿನಾಲ್ಕನೆಯ ದಳವು ಸರ್ವಸಿದ್ಧಿಯನ್ನೂ ಕೊಡುತ್ತದೆ

ಶ್ರೀವನಂ ತತ್ರ ರುಚಿರಂ ಸರ್ವೈಶ್ವರ್ಯಸ್ಯ ಕಾರಣಂ ।
ಕೃಷ್ಣಕ್ರೀಡಾಮಯದಳಂ ಶ್ರೀಕಾಂತಿಕೀರ್ತಿವರ್ಧನಂ ॥ ೫೦ ॥

ಪಂಚದಶಂ ದಳಂ ಶ್ರೇಷ್ಠಂ ತತ್ರ ಲೋಹವನಂ ಸ್ಮೃತಂ ।
ಕಥಿತಂ ಷೋಡಶದಳಂ ಮಹಾತ್ಮ್ಯಂ ಕರ್ಣಿಕಾಸಮಂ ॥ ೫೧ ॥

ಮಹಾವನಂ ತತ್ರ ಗೀತಂ ತತ್ರಾಸ್ತಿ ಗುಹ್ಯಮುತ್ತಮಂ ।
ಬಾಲಕ್ರೀಡಾರತಸ್ತತ್ರ ವತ್ಸಪಾಲೈಸ್ಸಮಾವೃತಃ ॥ ೫೨ ॥

ಪೂತನಾದಿವಧಸ್ತತ್ರ ಯಮಳಾರ್ಜುನಭಂಜನಂ ।
ಅಧಿಷ್ಠಾತಾ ತು ಬಾಲಸ್ಯ ಗೋಪಾಲಃ ಪಂಚವಾರ್ಷಿಕಃ ॥ ೫೩ ॥

ನಾಮ್ನಾ ದಾಮೋದರಃ ಪ್ರೋಕ್ತಃ ಪ್ರೇಮಾನಂದರಸಾರ್ಣವಃ ।
ದಳಂ ಪ್ರಸಿದ್ಧಮಾಖ್ಯಾತಂ ಸರ್ವಶ್ರೇಷ್ಠದಳೋತ್ತಮಂ ॥ ೫೪ ॥

ಕೃಷ್ಣಕ್ರೀಡಾ ಚ ಕಿಂಜಲ್ಕೇ ಸಿಹಾರಪಳಮುಚ್ಯತೇ ।
ಸಿದ್ಧಪ್ರಸಾದಕಿಂಜಲ್ಕಂ ದಳಂ ಚ ಸಮುದಾಹೃತಂ ॥ ೫೫ ॥

---

೫೦ ಅದಕ್ಕೆ ಶ್ರೀವನವೆಂದು ಹೆಸರು. ಸರ್ವೈಶ್ವರ್ಯಕ್ಕೂ ಕಾರಣವಾದುದು. ಕೃಷ್ಣ ಕ್ರೀಡಾಮಯದಳವೂ ಆಗಿರುತ್ತದೆ. ಸಂಪತ್ತನ್ನೂ ಕಾಂತಿಯನ್ನೂ ಕೊಡುತ್ತದೆ.

೫೧. ಹದಿನೈದನೆಯ ದಳವು ಶ್ರೇಷ್ಠವಾದುದು. ಅಲ್ಲಿ ಲೋಹವನವಿದೆ. ಹದಿನಾರನೆಯ ದಳವು ಮಹತ್ತಾದುದು. ಕರ್ಣಿಕೆಗೆ ಸಮವು.

೫೨. ಹದಿನಾರನೆಯ ವನಕ್ಕೆ ಗೀತವನವೆಂದು ಹೆಸರು. ಅದು ಗುಹ್ಯವಾದ ಸ್ಥಳವು. ಅಲ್ಲಿ ಕೃಷ್ಣನು ದನಕರು ಕಾಯುವವರೊಡನೆ ಆಟವಾಡಿದನು.

೫೩. ಪೂತನೆಯ ವಧವು ಅಲ್ಲೇ ಆದುದು. ಯಮಳಾರ್ಜನನಾಶವು ಅಲ್ಲೇ ಆದುದು. ಅಲ್ಲಿ ಐದುವರ್ಷ ವಯಸ್ಸಿನ ಗೋಪಾಲನಿದ್ದನು.

೫೪. ಅಲ್ಲಿ ದಾಮೋದರನೆಂದು ಕೃಷ್ಣನಿಗೆ ಹೆಸರು ಸಾರ್ಥಕವಾಯಿತು. ಪ್ರೇಮವೂ, ಆನಂದವೂ ಅಲ್ಲಿ ಹೆಚ್ಚು. ಇದು ಸರ್ವಶ್ರೇಷ್ಠವಾದ ದಳವು.

೫೫. ಕೃಷ್ಣನು ಕ್ರೀಡೆಯಾಡಿದುದರಿಂದ ಕಿಂಜಲ್ಕದಳವೆಂದು ಹೆಸರು. ಆ ಕಿಂಜಲ್ಕವು ಸಿದ್ಧರಿಗೆ ಮುಖ್ಯವಾದುದೆಂದು ಹೇಳಲ್ಪಟ್ಟದೆ.

॥ ಪಾರ್ವತ್ಯುವಾಚ ॥

ವೃಂದಾರಣ್ಯಸ್ಯ ಮಾಹಾತ್ಮ್ಯಂ ರಹಸ್ಯಂ ವಾ ಕಿಮದ್ಭುತಂ ।
ತದಹಂ ಶ್ರೋತುಮಿಚ್ಛಾಮಿ ಕಥಯಸ್ವ ಮಹಾಪ್ರಭೋ ॥ ೫೬ ॥

॥ ಈಶ್ವರ ಉವಾಚ ॥

ಕಥಿತಂ ತೇ ಪ್ರಿಯತಮಂ ಗುಹ್ಯಾದ್ಗುಹ್ಯೋತ್ತಮೋತ್ತಮಂ ।
ರಹಸ್ಯಾನಾಂ ರಹಸ್ಯಂ ಯದ್ದುರ್ಲಭಾನಾಂಚ ದುರ್ಲಭಂ ॥ ೫೭ ॥

ತ್ರೈಲೋಕ್ಯಗೋಪಿತಂ ದೇವಿ ದೇವೇಶ್ವರಸುಪೂಜಿತಂ ।
ಬ್ರಹ್ಮಾದಿ ವಾಂಛಿತಂ ಸ್ಥಾನಂ ಸುರಸಿದ್ಧಾದಿಸೇವಿತಂ ॥ ೫೮ ॥

ಯೋಗೀಂದ್ರಾದಿ ಮುನೀಂದ್ರಾದಿ ಸದಾ ತದ್ಧ್ಯಾನತತ್ಪರಂ ।
ಅಪ್ಸರೋಭಿಶ್ಚ ಗಂಧರ್ವೈರ್ನೃತ್ಯಗೀತನಿರಂತರಂ ॥ ೫೯ ॥

ಶ್ರೀಮದ್ವೃಂದಾವನಂ ರಮ್ಯಂ ಪೂರ್ಣಾನಂದರಸಾಶ್ರಯಂ ।
ಭೂರಿ ಚಿಂತಾಮಣಿ ಸ್ತೋಯಮಮೃತಂ ರಸಪೂರಿತಂ ॥ ೬೦ ॥

---

೫೬. ಪಾರ್ವತಿಯು ಹೇಳಿದಳು—ವೃಂದಾರಣ್ಯದ ಮಾಹಾತ್ಮ್ಯೆ ಅಥವಾ ರಹಸ್ಯವಾದರೂ ಏನಿದೆ? ದಯವಿಟ್ಟು ಅದನ್ನು ಹೇಳು, ಕೇಳಬೇಕೆಂದಿದ್ದೇನೆ.

೫೭. ಈಶ್ವರನು ಹೇಳಿದನು—ನಿನಗೆ ಪ್ರಿಯವಾದ ಅತಿರಹಸ್ಯವಾದ ದುರ್ಲಭವಾದ ವಿಷಯವನ್ನು ತಿಳಿಸಿದ್ದೇನೆ.

೫೮. ಮೂರುಲೋಕದಲ್ಲಿಯೂ ರಹಸ್ಯವಾದುದು. ದೇವೇಶ್ವರನಿಂದ ಪೂಜಿತವಾದುದು. ಬಹ್ಮಾದಿಗಳಿಂದಲೂ ಸುರಸಿದ್ಧರಿಂದಲೂ ಅಪೇಕ್ಷಿತವಾದುದು.

೫೯-೬೦. ಆ ಸ್ಥಳವು ಯೋಗೀಂದ್ರರು, ಮುನೀಂದ್ರರು, ಇವರು ಧ್ಯಾನ ಮಾಡತಕ್ಕ ಸ್ಥಳ. ಅಪ್ಸರರು ನೃತ್ಯಮಾಡುವ ಜಾಗವು. ಗಂಧರ್ವರು ಹಾಡುವ ಸ್ಥಳವು. ಚಿಂತಾಮಣಿಯಂತಿರುವ ನೀರಿಗೆ ಆಶ್ರಯವಾಗಿರುತ್ತೆ. ಆ ಬೃಂದಾವನವು ಬಹು ರಮ್ಯವಾದುದು.

ವೃಕ್ಷಂ ಸುರದ್ರುಮಂ ತತ್ರ ಸುರಭೀವೃಂದಸೇವಿತಂ ।
ಸ್ತ್ರೀಂ ಲಕ್ಷ್ಮೀಂ ಪುರುಷಂ ವಿಷ್ಣುಂ ತದ್ದಶಾಂಶಸಮುದ್ಭವಂ ॥ ೬೧ ॥

ತತ್ರ ಕೈಶೋರವಯಸಂ ನಿತ್ಯಮಾನಂದವಿಗ್ರಹಂ ।
ಗತಿನಾಟ್ಯಕಥಾಲಾಪಂ ಸ್ಮಿತವಕ್ತ್ರಂ ನಿರಂತರಂ ॥ ೬೨ ॥

ಶುದ್ಧಸತ್ವೈಃ ಪ್ರೇಮಪೂರ್ಣೈಃ ವೈಷ್ಣವೈಸ್ತದ್ವನಾಶ್ರಯಂ ।
ಪೂರ್ಣಬ್ರಹ್ಮಸುಖೇ ಮಗ್ನಂ ಸ್ಫುರತ್ತನ್ಮೂರ್ತಿ ತನ್ಮಯಂ ॥ ೬೩ ॥

ಮತ್ತಕೋಕಿಲಭೃಂಗಾದ್ಯೈಃ ಕೂಜತ್ಕಲಮನೋಹರಂ ।
ಕಪೋತಶುಕಸಂಗೀತಮುನ್ಮತ್ತಾಳಿ ಸಹಸ್ರಕಂ ॥ ೬೪ ॥

ಭುಜಂಗ ಶತ್ರು ನೃತ್ತಾಢ್ಯಂ ಸಕಲಾಮೋದವಿಭ್ರಮಂ ।
ನಾನಾವರ್ಣೈಶ್ಚ ಕುಸುಮೈಸ್ತದ್ರೇಣು ಪರಿಪೂರಿತಂ ॥ ೬೫ ॥

ಪೂರ್ಣೇಂದುನಿತ್ಯಾಭ್ಯುದಯಂ ಸೂರ್ಯಮಂದಾಂಶುಸೇವಿತಂ ।
ಅದುಃಖಂ ದುಃಖವಿಚ್ಛೇದಂ ಜರಾಮರಣವರ್ಜಿತಂ ॥ ೬೬ ॥

---

೬೧. ಅಲ್ಲಿರುವ ಮರಗಳು ಕಲ್ಪವೃಕ್ಷಗಳು ಅನೇಕ ಕಾಮಧೇನುಗಳು ಅಲ್ಲಿರುವುವು. ಅಲ್ಲಿರುವ ಸ್ತ್ರೀಯರೂ ಪುರುಷರೂ ಲಕ್ಷ್ಮೀ, ವಿಷ್ಣುಗಳ ಹತ್ತನೆಯ ಒಂದು ಪಾಲಾಗಿ ಹುಟ್ಟಿದವರು.

೬೨-೬೩. ಅಲ್ಲಿ ಆನಂದ ವಿಗ್ರಹವಾದ, ನಾಟ್ಯಕಲೆಯಲ್ಲಿ ಆಸಕ್ತಿಯುಳ್ಳ, ಯಾವಾಗಲೂ ಹಸನ್ಮುಖವುಳ್ಳ, ಪ್ರೀತಿಯಿಂದ ಕೂಡಿದ, ಶುದ್ಧಪ್ರಾಣಿಗಳಿಂದ ಸೇವಿಸಲ್ಪಡುವ, ಐದು ವರ್ಷದ ಕೃಷ್ಣನು ಅಲ್ಲಿರುವನು. ಆ ಆಶ್ರಮವು ಪೂರ್ಣಬ್ರಹ್ಮದಿಂದ ಕೂಡಿಕೊಂಡಿದೆ.

೬೪. ಆ ಆಶ್ರಮವು ಮದಿಸಿರುವ ಕೋಕಿಲೆಯ ಮತ್ತು ಭೃಂಗದ ಧ್ವನಿಯಿಂದ ರಮ್ಯವಾಗಿದೆ ಕಪೋತಗಳು, ಗಿಳಿಗಳು, ದುಂಬಿಗಳು ಅಲ್ಲಿ ಅನೇಕವಾಗಿವೆ.

೬೫. ನವಿಲು ನರ್ತನಮಾಡುತ್ತದೆ. ಸುವಾಸನಾಭರಿತವಾಗಿದೆ. ಅನೇಕ ಬಗೆಯ ಹೂಗಳಿಂದಲೂ ಅವುಗಳ ರೇಣುಗಳಿಂದಲೂ ಕೂಡಿದೆ.

೬೬-೬೭ ಅಲ್ಲಿ ಚಂದ್ರನು ಯಾವಾಗಲೂ ಪೂರ್ಣನಾಗಿರುತ್ತಾನೆ. ಸೂರ್ಯನು ಸಾಧಾರಣವಾದ ಬೆಳಕನ್ನು ಕೊಡುತ್ತಾ ಸೇವಿಸುತ್ತಾನೆ. ಕ್ರೋಧವೂ, ಹೊಟ್ಟೆಕಿಚ್ಚೂ

**ಅಕ್ರೋಧಂ ಗತಮಾತ್ಸರ್ಯಂ ಅಭಿನ್ನಮನಹಂಕೃತಂ ।**
**ಪೂರ್ಣಾನಂದಾಮೃತರಸಂ ಪೂರ್ಣಪ್ರೇಮಸುಖಾರ್ಣವಂ ॥ ೬೭ ॥**

**ಗುಣಾತೀತಂ ಮಹದ್ಧಾಮ ಪೂರ್ಣಪ್ರೇಮಸ್ವರೂಪಕಂ ।**
**ಯತ್ರ ವೃಕ್ಷಾದಿಪುಲಕೈಃ ಪ್ರೇಮಾನಂದಾಶ್ರುವರ್ಷಿತಂ ॥ ೬೮ ॥**

**ಕಿಂ ಪುನಶ್ಚೇತನಾಯುಕ್ತೈರ್ವಿಷ್ಣುಭಕ್ತೈಃ ಕಿಮುಚ್ಯತೇ ।**
**ಗೋವಿಂದಾಂಘ್ರಿರಜಸ್ಸ್ಪರ್ಶಾನ್ನಿತ್ಯಂ ವೃಂದಾವನಂ ಭುವಿ ॥ ೬೯ ॥**

**ಸಹಸ್ರದಳಪದ್ಮಸ್ಯ ವೃಂದಾರಣ್ಯಂ ವರಾಟಕಂ ।**
**ಯತ್ರ ಸ್ಪರ್ಶನಮಾತ್ರೇಣ ಪೃಥ್ವೀ ಧನ್ಯಾ ಜಗತ್ತ್ರಯೇ ॥ ೭೦ ॥**

**ಗುಹ್ಯಾದ್ಗುಹ್ಯತಮಂ ರಮ್ಯಂ ಮಧ್ಯಂ ವೃಂದಾವನಂ ಭುವಿ ।**
**ಅಕ್ಷರಂ ಪರಮಾನಂದಂ ಗೋವಿಂದಸ್ಥಾನಮವ್ಯಯಂ ॥ ೭೧ ॥**

---

ಇಲ್ಲದ ಜಾಗವು. ಮುಪ್ಪು ಮರಣಗಳಿಲ್ಲದ ಸ್ಥಳವು. ದುಃಖವಿಲ್ಲ. ದುಃಖನಾಶದಸ್ಥಳ. ಭೇದವೂ, ಅಹಂಕಾರವೂ ಇಲ್ಲದ ಜಾಗ. ಆನಂದರಸವು ಅಲ್ಲೇ ಪೂರ್ಣವಾಗಿರುವುದು. ಪೂರ್ಣಪ್ರೇಮಕ್ಕೆ ಸಮುದ್ರವು.

೬೮. ತ್ರಿಗುಣಕ್ಕೂ ಮೀರಿದುದು. ಉತ್ತಮವಾದ ತೇಜಸ್ಸುಳ್ಳದು ಪ್ರೀತಿಯಾದ ಪ್ರೇಮದ ಸ್ವರೂಪವು. ಅಲ್ಲಿರುವ ಮರಗಳು ರೋಮಾಂಚವನ್ನು ಹೊಂದುತ್ತ ಆನಂದಬಾಷ್ಪವನ್ನು ಸುರಿಸುತ್ತವೆ.

೬೯. ಹೀಗೆ ಸಮೃದ್ಧಿಯಾಗಿರುವ ಜಾಗದಲ್ಲಿ ಬುದ್ಧಿಯಿರುವ ವಿಷ್ಣುಭಕ್ತರು ಸೇವಿಸುತ್ತಿದ್ದಾರೆಂಬುದನ್ನು ಹೇಳಬೇಕಾದುದೇ ಇಲ್ಲ. ಗೋವಿಂದನ ಪಾದದ ಧೂಳಿನಿಂದ ಆ ಜಾಗವು ಪವಿತ್ರವಾಗಿದೆ.

೭೦. ಸಹಸ್ರದಳವುಳ್ಳ ಪದ್ಮಕ್ಕೆ ಈ ವೃಂದಾರಣ್ಯವು ಮಧ್ಯದಲ್ಲಿರುವ ಕೋಶವು ಅದನ್ನು ಹೊಂದಿದುದರಿಂದಲೇ ಭೂಮಿಯು ಮೂರುಲೋಕದಲ್ಲಿಯೂ ಪವಿತ್ರವಾಗಿದೆ.

೭೧. ಆ ಮಧ್ಯದಲ್ಲಿರುವ ವೃಂದಾವನವೇ ಉತ್ತಮವಾದುದು. ರಮ್ಯವಾದುದು. ನಾಶರಹಿತವಾದುದು. ಪರಮಾನಂದವಾದುದು. ಅದು ಅವ್ಯಯವಾದ ಗೋವಿಂದನ ಸ್ಥಾನವು.

ಗೋವಿಂದದೇಹತೋ ಭಿನ್ನಂ ಪೂರ್ಣಬ್ರಹ್ಮಸುಖಾಶ್ರಯಂ ।
ಮುಕ್ತಿಃ ತತ್ರ ರಜಸ್ಸ್ಪರ್ಶಾತ್ತನ್ಮಹಾತ್ಮ್ಯಂ ಕಿಮುಚ್ಯತೇ ॥ ೭೨ ॥

ತಸ್ಮಾತ್ಸರ್ವಾತ್ಮನಾ ದೇವಿ ಹೃದಿಸ್ಥಂ ತದ್ವನಂ ಕುರು ।
ವೃಂದಾವನವಿಹಾರೇಷು ಕೃಷ್ಣಂ ಕೈಶೋರವಿಗ್ರಹಂ ॥ ೭೩ ॥

ಕಾಲಿಂದೀಚಾಕರೋದ್ಯಸ್ಯ ಕರ್ಣಿಕಾಯಾಃ ಪ್ರದಕ್ಷಿಣಂ ।
ಲೀಲಾನಿರ್ವಾಣಗಂಭೀರಂ ಜಲಂ ಸೌರಭಮೋಹನಂ ॥ ೭೪ ॥

ಆನಂದಾಮೃತತನ್ಮಿಶ್ರ ಮಕರಂದಘನಾಲಯಂ ।
ಪದ್ಮೋತ್ಪಲಾದ್ಯೈಃ ಕುಸುಮೈರ್ನಾನಾವರ್ಣಸಮುಜ್ವಲಂ ॥ ೭೫ ॥

ಚಕ್ರವಾಕಾದಿವಿಹಗೈಃ ಮಂಜು ನಾನಾಕಲಸ್ವನೈಃ ।
ಶೋಭಮಾನಂ ಜಲಂ ರಮ್ಯಂ ತರಂಗಾತಿಮನೋಹರಂ ॥ ೭೬ ॥

ತಸ್ಯೋಭಯತಟೇ ರಮ್ಯಾ ಶುದ್ಧಕಾಂಚನನಿರ್ಮಿತಾ ।
ಗಂಗಾಕೋಟಿಗುಣಃ ಪ್ರೋಕ್ತೋ ಯತ್ರ ಸ್ಪರ್ಶವರಾಟಿಕಃ ॥ ೭೭ ॥

---

೭೨. ಆ ಜಾಗವು ಗೋವಿಂದನ ದೇಹಕ್ಕಿಂತ ಬೇರೆಯಲ್ಲ. ಪೂರ್ಣಬ್ರಹ್ಮ ಸುಖಕ್ಕೆ ಆಶ್ರಯವಾದುದು. ಅಲ್ಲಿನ ಧೂಳನ್ನು ಮುಟ್ಟಿದರೇನೇ ಮುಕ್ತಿಯು ಬರುತ್ತದೆ. ಅದರ ಮಹಿಮೆಯನ್ನು ಏನೆಂದು ಹೇಳೋಣ.

೭೩ ಬಾಲಕೃಷ್ಣನು ವಾಸಿಸುವ ವೃಂದಾವನವನ್ನು ಎಲೈ ಪಾರ್ವತಿಯೇ ಹೃದಯದಲ್ಲಿ ಯಾವಾಗಲೂ ಧ್ಯಾನಿಸು.

೭೪. ಆ ಕೃಷ್ಣನು ಲೀಲೆಯಾಡಿರುವುದರಿಂದ ಮನೋಹರವಾದ ವಾಸನೆಯುಳ್ಳ ಕಾಳಿಂದಿಯು ಆ ಕರ್ಣಿಕೆಯನ್ನು ಪ್ರದಕ್ಷಿಣೆಮಾಡುತ್ತದೆ.

೭೫-೭೬. ಆ ನೀರು ಆನಂದದಿಂದಲೂ, ಅಮೃತದಿಂದಲೂ ಕೂಡಿದೆ. ಮಕರಂದದಿಂದ ನಿಬಿಡವಾಗಿದೆ. ಪದ್ಮ ಕನ್ನೈದೆಲೆ ಮುಂತಾದವುಗಳಿಂದ ಕೂಡಿದೆ. ಚಕ್ರವಾಕವೇ ಮುಂತಾದ ನೀರ್ವಕ್ಕಿಗಳಿಂದ ಧ್ವನಿತವಾಗಿದೆ. ಅಲೆಗಳಿಂದ ಮನೋಹರವಾಗಿ ಆ ನೀರು ಶೋಭಿಸುತ್ತದೆ.

೭೭. ಅದರ ಎರಡು ದಡಗಳೂ ಸ್ವರ್ಣದಿಂದ ನಿರ್ಮಿತವಾಗಿ ರಮ್ಯವಾಗಿದೆ. ಅದು ಸ್ಪರ್ಶವರಾಟಕವಾದುದರಿಂದ ಗಂಗೆಗಿಂತಲೂ ಕೋಟಿಪಾಲು ಹೆಚ್ಚು ಗುಣವುಳ್ಳದ್ದು.

ಕರ್ಣಿಕಾಯಾಂ ಕೋಟಿಗುಣೋ ಯತ್ರ ಕ್ರೀಡಾರತೋಹರಿಃ ।
ಕಾಳಿಂದೀಕರ್ಣಿಕಾಂ ಕೃಷ್ಣಮಭಿನ್ನಮೇಕವಿಗ್ರಹಂ ॥ ೭೮ ॥

॥ ಪಾರ್ವತ್ಯುವಾಚ ॥

ಗೋವಿಂದಸ್ಯ ಕಿಮಾಶ್ಚರ್ಯಂ ಸೌಂದರ್ಯಾಕೃತಿವಿಗ್ರಹ ।
ತದಹಂ ಶ್ರೋತುಮಿಚ್ಛಾಮಿ ಕಥಯಸ್ವ ದಯಾನಿಧೇ ॥ ೭೯ ॥

॥ ಈಶ್ವರ ಉವಾಚ ॥

ಮಧ್ಯೇ ವೃಂದಾವನೇ ರಮ್ಯೇ ಮಂಜುಮಂಜೀರಶೋಭಿತೇ ।
ಯೋಜನಾಶ್ರಿತತದ್ವೃಕ್ಷೇ ಶಾಖಾಪಲ್ಲವಮಂಡಿತೇ ॥ ೮೦ ॥

ತನ್ಮಧ್ಯೇ ಮಂಜುಭವನೇ ಯೋಗಪೀಠಂ ಸಮುಜ್ವಲಂ ।
ತದಷ್ಟಕೋಣನಿರ್ಮಾಣಂ ನಾನಾದೀಪ್ತಮನೋಹರಂ ॥ ೮೧ ॥

ತಸ್ಯೋಪರಿ ಚ ಮಾಣಿಕ್ಯ ರತ್ನಸಿಂಹಾಸನಂ ಶುಭಂ ।
ತಸ್ಮಿನ್ನಷ್ಟದಳಂ ಪದ್ಮಂ ಕರ್ಣಿಕಾಯಾಂ ಸುಖಾಶ್ರಯಂ ॥ ೮೨ ॥

---

೭೮. ಆ ಕರ್ಣಿಕೆಯಲ್ಲಿ ಹರಿಯು ಆಟವಾಡಿದುದರಿಂದ ಗಂಗೆಗಿಂತಲೂ, ಕೋಟಿಪಾಲು ಹೆಚ್ಚು ಗುಣವುಳ್ಳುದು. ಕಾಳಿಂದಿಯು ಕರ್ಣಿಕೆಯೂ ಕೃಷ್ಣನೂ ಬೇರೆಯಾದವರಲ್ಲ. ಒಂದೇ ವಿಗ್ರಹವೆಂದು ತಿಳಿ.

೭೯. ಪಾರ್ವತಿಯು ಹೇಳಿದಳು—ಎಲೈ ಮನೋಹರನಾದ ಶಿವನೇ, ಅಲ್ಲಿ ಗೋವಿಂದನು ಮಾಡಿದ ಆಶ್ಚರ್ಯವೇನು? ತಿಳಿಸು. ಕೇಳಲು ಇಚ್ಛಿಸುತ್ತೇನೆ.

೮೦-೮೧. ಈಶ್ವರನು ಹೇಳಿದನು – ಆ ವೃಂದಾವನವು ಮಧ್ಯದಲ್ಲಿರುವುದೆಂದು ಹೇಳಿದೆನಷ್ಟೆ. ಅದು ಬಹು ಮನೋಹರವಾದುದು. ಅದು ಒಂದು ಯೋಜನದ ಅಗಲಕ್ಕೆ ಶಾಖೆಗಳಿಂದ ಕೂಡಿ ಹರಡಿಕೊಂಡಿದೆ. ಅದರ ಮಧ್ಯದಲ್ಲಿ ಒಂದು ಯೋಗ ಪೀಠವಿದೆ. ಅದು ಎಂಟು ಕೋಣಗಳಿಂದ ಮಾಡಲ್ಪಟ್ಟಿದೆ. ಮನೋಹರವಾಗಿದೆ.

೮೨. ಅದರ ಮೇಲೆ ಮಾಣಿಕ್ಯದಿಂದಲೂ, ರತ್ನದಿಂದಲೂ, ಕೂಡಿದ ಸಿಂಹಾಸನವಿದೆ. ಅದರಲ್ಲಿಯೂ ಅಷ್ಟದಳಪದ್ಮವಿದ್ದು ಅದರಲ್ಲಿ ಒಂದು ಪುಷ್ಪಕೋಶವಿದೆ.

ಗೋವಿಂದಸ್ಯ ಪರಂ ಸ್ಥಾನಂ ಕಿಮಸ್ಯ ಮಹಿಮೋಚ್ಯತೇ ।
ಶ್ರೀಮದ್ಗೋವಿಂದಮತ್ರಸ್ಥಂ ವೈಷ್ಣವಾವೃಂದಸೇವಿತಂ ॥ ೮೩ ॥

ದಿವ್ಯವ್ರಜವಯೋರೂಪಂ ಕೃಷ್ಣಂ ವೃಂದಾವನೇಶ್ವರಂ ।
ವ್ರಜೇಂದ್ರಂ ಸಂತತೈಶ್ವರ್ಯಂ ವ್ರಜಬಾಲೈಕವಲ್ಲಭಂ ॥ ೮೪ ॥

ಯೌವನೋದ್ಭಿನ್ನಕೈಶೋರಂ ವಯಸಾದ್ಭುತವಿಗ್ರಹಂ ।
ಅನಾದಿಮಾದಿಂ ಸರ್ವೇಷಾಂ ನಂದಗೋಪಪ್ರಿಯಾತ್ಮಜಂ ॥ ೮೫ ॥

ಶ್ರುತಿಮೃಗ್ಯಮಜಂ ನಿತ್ಯಂ ಗೋಪೀಜನಮನೋಹರಂ ।
ಪರಂ ಧಾಮ ಪರಂ ರೂಪಂ ದ್ವಿಭುಜಂ ಗೋಕುಲೇಶ್ವರಂ ॥ ೮೬ ॥

ವಲ್ಲವೀನಂದನಂ ಧ್ಯಾಯೇನ್ನಿರ್ಗುಣಸ್ಯೈಕಕಾರಣಂ ।
ಶ್ರೀಮಂತಂ ನವಂ ಸ್ವಚ್ಛಂ ಶ್ಯಾಮಧಾಮಮನೋಹರಂ ॥ ೮೭ ॥

ನವೀನನೀರದಶ್ರೇಣೀಸುಸ್ನಿಗ್ಧಮಂಜುಕುಂಡಲಂ ।
ಫುಲ್ಲೇಂದೀವರಸತ್ಕಾಂತಿಸುಖಸ್ಪರ್ಶಂ ಸುಖಾವಹಂ ॥ ೮೮ ॥

---

೮೩. ಇದು ಗೋವಿಂದನ ಸ್ಥಾನವು. ಬಹು ಮಹಿಮೆಯುಳ್ಳದು. ವೈಷ್ಣವರ ಗುಂಪಿನಿಂದ ಸೇವಿತನಾಗಿ ಗೋವಿಂದನು ಅಲ್ಲಿದ್ದಾನೆ.

೮೪-೮೭. ಗೋಪಾಲ ಹುಡುಗರಲ್ಲಿ ಚೆನ್ನಾಗಿರುವ ವಯಸ್ಸು ರೂಪಗಳುಳ್ಳ, ಬೃಂದಾವನಕ್ಕೆ ಒಡೆಯನಾದ, ಗೋಪಾಲರಿಗೆ ಒಡೆಯನಾದ, ಐಶ್ವರ್ಯವಂತನಾದ, ಎಲ್ಲರಿಗೂ ಪ್ರಿಯನಾದ, ಯೌವನವು ಆಗತಾನೆ ಕಾಣುತ್ತಿರುವ ವಯಸ್ಸುಳ್ಳ, ಅದ್ಭುತವಾದ ಆಕಾರವುಳ್ಳ, ಅನಾದಿಯಾದ, ಎಲ್ಲರಿಗೂ ಆದಿಯಾದ, ಗೋಪನಿಗೆ ಪ್ರೀತಿಯ ಮಗನಾದ, ಶ್ರುತಿಗೂ ಸಿಕ್ಕದ, ಅಜನೂ, ನಿತ್ಯನೂ ಆದ, ಗೊಪಿಜನರಿಗೆ ಮನೋಹರನಾದ, ಉತ್ಕೃಷ್ಟವಾದ ತೇಜಸ್ಸುಳ್ಳ, ಉತ್ಕೃಷ್ಟವಾದ ರೂಪವುಳ್ಳ, ಗೋಕುಲೇಶ್ವರನಾದ, ಗೋಪಿಕಂದನಾದ, ನಿರ್ಗುಣನಾದ, ಏಕಕಾರಣನಾದ, ಶ್ರೀಮಂತನಾದ, ಸ್ವಚ್ಛನಾದ, ಶಾಮನೂ ಮನೋಹರನೂ ಆದ, ಆ ಗೋಪಾಲಸ್ವಾಮಿಯನ್ನು ಧ್ಯಾನಮಾಡಬೇಕು.

೮೮-೮೯. ಹೊಸಮೋಡದ ಗುಂಪಿನಂತೆ ಮನೋಹರನಾದ, ಕುಂಡಲವನ್ನು ಹಾಕಿಕೊಂಡಿರುವ, ಅರಳಿರುವ ಇಂದೀವರದಂತೆ ಮೃದುವಾಗಿರುವ, ಸುಖಸ್ಪರ್ಶವುಳ್ಳ

ದಳಿತಾಂಜನಕುಂಜಾಭಚಿಕ್ಕಣಂ ಶ್ಯಾಮಮೋಹನಂ ।
ಸುಸ್ನಿಗ್ಧನೀಲಕುಟಿಲಾಶೇಷಸೌರಭಕುಂತಲಂ ॥ ೮೯ ॥

ತದೂರ್ಧ್ವಂ ದಕ್ಷಿಣೇ ಭಾಲೇ ಶ್ಯಾಮಚೂಡಾಮನೋಹರಂ ।
ನಾನಾವರ್ಣೋಜ್ವಲಂ ರಾಜಚ್ಛಿಖಂಡಿದಳಮಂಡಿತಂ ॥ ೯೦ ॥

ಮಂದಾರ ಮಂಜುಗೋಪುಚ್ಛ ಚೂಡಂ ಚಾರು ವಿಭೂಷಿತಂ ।
ಕ್ವಚಿದ್ಬರ್ಹದಳಶ್ರೇಣಿಮುಕುಟೇನಾಭಿಮಂಡಿತಂ ॥ ೯೧ ॥

ಅನೇಕಮಣಿಮಾಣಿಕ್ಯ ಕಿರೀಟಂಭೂಷಣಂ ಕ್ವಚಿತ್ ।
ಲೋಲಾಲಕವೃತಂ ರಾಜತ್ಕೋಟೀಂದುಸದೃಶಾನನಂ ॥ ೯೨ ॥

ಕಸ್ತೂರೀ ತಿಲಕಭ್ರಾಜನ್ಮಂಜುಗೋರೋಚನಾನ್ವಿತಂ ।
ನೀಲೇಂದೀವರಸುಸ್ನಿಗ್ಧಂ ಸುದೀರ್ಘದಳಲೋಚನಂ ॥ ೯೩ ॥

ಅನ್ಯತ್ಯದ್ಭ್ರೂಲತಾಶ್ಲೇಷಸ್ಮಿತಂ ಸಾಚಿನಿರೀಕ್ಷಣಂ ।
ಸುಚಾರುಭೂತಸೌಂದರ್ಯ ನಾಸಾಗ್ರಾತಿಮನೋಹರಂ ॥ ೯೪ ॥

---

ಕಪ್ಪುಕಲ್ಲನ್ನು ಒಡೆದರೆ ಒಳಗಿರುವಂತೆ ಪ್ರಕಾಶನಾದ ಮತ್ತು ಮನೋಹರನಾದ ಮೃದುವಾದ ವಕ್ರವಕ್ರವಾದ, ಕಪ್ಪಾದ ತಲೆಗೂದಲುಳ್ಳ, ಸ್ವಾಮಿಯನ್ನು ಧ್ಯಾನ ಮಾಡಬೇಕು.

೯೦–೯೧. ಹಣೆಯ ಬಲಭಾಗದಲ್ಲಿ ಕಪ್ಪಗಿರುವ ತುರಾಯಿಯಿಂದ ಮನೋಹರವಾದ, ನಾನಾ ಬಣ್ಣವುಳ್ಳ, ನವಿಲುಗರಿಯಿಂದ ಅಲಂಕೃತನಾದ, ಮಂದಾರಮರದ ಹೂಗೊಂಚಲಿನಿಂಡ ಶೋಭಿತವಾದ, ಅಲ್ಲಲ್ಲೇ ನವಿಲುಗರಿಯ ದಳಗಳುಳ್ಳ, ರೇಷ್ಮೆಯ ಬಟ್ಟೆಯಿಂದ ಶೋಭಿತವಾದ, ಸ್ವಾಮಿಯನ್ನು ಧ್ಯಾನಮಾಡಬೇಕು.

೯೨–೯೩. ಅನೇಕವಾದ ಮಣಿಗಳಿಂದ ಕೂಡಿದ ಕಿರೀಟವೂ, ಭೂಷಣವೂ ಉಳ್ಳ, ನೇತಾಡುತ್ತಿರುವ ಮುಂಗುರುಳುಗಳುಳ್ಳ, ಕೋಟಿಚಂದ್ರರಂತೆ ಬೆಳಗುವ ಮುಖವುಳ್ಳ, ಕಸ್ತೂರಿಯ ತಿಲಕವುಳ್ಳ, ಮನೋಹರವಾದ ಗೋರೋಚನವನ್ನು ಹಾಕಿಕೊಂಡಿರುವ, ನೀಲವಾದ ಇಂದೀವರದಂತೆ ಮನೋಹರನಾದ ಉದ್ದವಾದ ಕಣ್ಣುಗಳುಳ್ಳ ಸ್ವಾಮಿಯನ್ನು ಧ್ಯಾನಮಾಡಬೇಕು.

೯೪-೯೫. ಹುಬ್ಬನ್ನು ಕುಣಿಸುತ್ತ ತಗ್ಗಿನ ದೃಷ್ಟಿಯಿಂದ ನೋಡುತ್ತಿರುವ ನೋಟವುಳ್ಳ, ಮನೋಹರವಾದ ಮೂಗಿನ ತುದಿಯುಳ್ಳ, ನಾನಾಬಣ್ಣಗಳಿಂದ ಶೋಭಿ

**ನಾನಾವರ್ಣೋಲ್ಲಸತ್ಸ್ವರ್ಣಮಕರಾಕೃತಿಕುಂಡಲಂ ।**
**ತದ್ರಶ್ಮಿಮಂಜುಸದ್ಗಂಡಮುಕುರಾಭಸಮುದ್ಯುತಿಂ ॥ ೯೫ ॥**

**ಕರ್ಣೋತ್ಪಲಸುಮಂದಾರ ಮಕರೋತ್ತಂಸಭೂಷಿತಂ ।**
**ಶ್ರೀವತ್ಸಕೌಸ್ತುಭೋರಸ್ಕಂ ಮುಕ್ತಾಹಾರಸ್ಫುರದ್ಗಳಂ ॥ ೯೬ ॥**

**ವಿಲಸದ್ದಿವ್ಯಮಾಣಿಕ್ಯಮಂಜುಕಾಂಚನಮಿಶ್ರಿತಂ ।**
**ಕರಕಂಕಣಕೇಯೂರ ಕಿಂಕಿಣೀತಟಿಶೋಭಿತಂ ॥ ೯೭ ॥**

**ಮಂಜುಮಂಜೀರಸೌಂದರ್ಯಶ್ರೀಮದಂಘ್ರಿವಿರಾಜಿತಂ ।**
**ಕರ್ಪೂರಾಗರುಕಸ್ತೂರೀ ವಿಲಸಚ್ಚಂದನಾದಿಕಂ ॥ ೯೮ ॥**

**ಗೋರೋಚನಾದಿಸಂಮಿಶ್ರ ದಿವ್ಯಾಂಗರಾಗಚಿತ್ರಿತಂ ।**
**ಸ್ನಿಗ್ಧಪೀತಪಟೀರಾಜತ್ಪ್ರಪದಾಂದೋಳಿತಾಂಜನಂ ॥ ೯೯ ॥**

**ಗಂಭೀರನಾಭಿಕಮಲಂ ರೋಮರಾಜೀನತಸ್ರಜಂ ॥ ೧೦೦ ॥**

**ಸುವೃತ್ತಜಾನುಯುಗಳಂ ಪಾದಪದ್ಮಮನೋಹರಂ ॥ ೧೦೧ ॥**

---

ಸುವ ಮೊಸಳೆಯ ಆಕಾರದ ಕರ್ಣಾಭರಣವುಳ್ಳ, ಆ ಆಭರಣದ ಕಾಂತಿಯಿಂದ ಕನ್ನಡಿಯಂತೆ ಪ್ರಕಾಶಿಸುವ ಕಪೋಲಗಳುಳ್ಳ, ಸ್ವಾಮಿಯನ್ನು ಧ್ಯಾನ ಮಾಡಬೇಕು.

೯೬–೯೭. ಮಂದಾರಪುಷ್ಪವನ್ನು ಕಿವಿಯಮೇಲೆ ಇಟ್ಟುಕೊಂಡಿರುವ, ಶ್ರೀವತ್ಸವೆಂಬ ಮಚ್ಚೆಯಿಂದಲೂ, ಕೌಸ್ತುಭಮಣಿಯಿಂದಲೂ, ಪ್ರಕಾಶಿತವಾದ ಎದೆಯುಳ್ಳ ಮುಕ್ತಾಹಾರವನ್ನು ಕತ್ತಿಗೆ ಹಾಕಿಕೊಂಡಿರುವ, ದಿವ್ಯವಾದ ಮಾಣಿಕ್ಯ ಸ್ವರ್ಣಗಳಿಂದ ಕೂಡಿದ ಕೈಬಳೆ, ಭುಜಕೀರ್ತಿ, ಕಾಲುಕಡಗಗಳುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

೯೮–೯೯. ಮನೋಹರವಾಗಿ ಧ್ವನಿ ಮಾಡುತ್ತಿರುವ, ಕಾಲುಕಡಗದ ಧ್ವನಿಯಿಂದ ಕೂಡಿರುವ ಕಾಲುಗಳುಳ್ಳ, ಕರ್ಪೂರ, ಅಗರು, ಕಸ್ತೂರಿ, ಚಂದನಗಳಿಂದ ಪೂಸಲ್ಪಟ್ಟ ದೇಹವುಳ್ಳ, ಗೋರೋಚನದಿಂದ ಕೂಡಿದ ದಿವ್ಯವಾದ ಅಂಗರಾಗವುಳ್ಳ ಮೃದುವಾಗಿಯೂ ಬೆಳ್ಳಗೂ ಇರುವ ಬಟ್ಟೆಯನ್ನು ಕಾಲಿನ ತುದಿಯುವರೆಗೂ ಉಟ್ಟಿರುವ ಸ್ವಾಮಿಯನ್ನು ಧ್ಯಾನಮಾಡಬೇಕು.

೧೦೦–೧೦೨. ಆಳವಾಗಿರುವ ಹೊಕ್ಕುಳುಳ್ಳ, ರೋಮಗಳ ಸಾಲಿನಿಂದ ಕೂಡಿರುವ ಹೊಟ್ಟೆಯುಳ್ಳ, ಮಂಡಿಗಳು ದುಂಡಗಿರುವ, ಧ್ವಜ, ವಜ್ರ, ಅಂಕುಶ, ಕಮಲ

ಧ್ವಜವಜ್ರಾಂಕುಶಾಂಭೋಜಕರಾಂಘ್ರಿತಳಶೋಭಿತಂ ।
ನಖೇಂದುಕಿರಣಶ್ರೇಣೀ ಪೂರ್ಣಂಬ್ರಹ್ಮೈಕಕಾರಣಂ ॥ ೧೦೨ ॥

ಕೇಚಿದ್ವದಂತಿ ತಸ್ಯಾಂಶಂ ಬ್ರಹ್ಮಚಿದ್ರೂಪಮವ್ಯಯಂ ।
ತದ್ದಶಾಂಶಂ ಮಹಾವಿಷ್ಣುಂ ಪ್ರವದಂತಿ ಮನೀಷಣಃ ॥ ೧೦೩ ॥

ಯೋಗೀಂದ್ರೈಸ್ಸಕಲಾದ್ಯೈಶ್ಚ ತದೇವ ಹೃದಿ ಚಿಂತ್ಯತೇ ।
ತ್ರಿಭಂಗಂಲಲಿತಾಶೇಷ ನಿರ್ಮಾಣಾಸಾರನಿರ್ಮಿತಂ ॥ ೧೦೪ ॥

ತಿರ್ಯಗ್ಗ್ರೀವಜಿತಾನಂತಕೋಟಿಕಂದರ್ಪಸುಂದರಂ ।
ವಾಮಾಂಸಾರ್ಪಿತಸದ್ಗಂಡಂ ಸ್ಫುರತ್ಕಾಂಚನಕುಂಡಲಂ ॥ ೧೦೫ ॥

ಸಾಪಾಂಗೇಕ್ಷಣಸಸ್ಮೇರಕೋಟಿಕಂದರ್ಪಸುಂದರಂ ।
ಕುಂಚಿತಾಧರವಿನ್ಯಸ್ತ ವಂಶೀಮಂಜುಕಲಸ್ವನೈಃ ॥ ೧೦೬ ॥

ಜಗತ್ತ್ರಯಂ ಮೋಹಯಂತಂ ಮಗ್ನಂ ಪ್ರೇಮಸುಧಾರ್ಣವೇ ॥ ೧೦೭ ॥

---

ಗಳಿಂದ ಕೂಡಿದ ಪಾದಪದ್ಮವುಳ್ಳ, ಪ್ರಕಾಶಮಾನವಾದ ಉಗುರುಗಳುಳ್ಳ, ಪೂರ್ಣ ಬ್ರಹ್ಮನಾದ, ಜಗತ್ತಿಗೆ ಏಕಕಾರಣನಾದ ಸ್ವಾಮಿಯನ್ನು ಧ್ಯಾನಿಸಬೇಕು.

೧೦೩. ಕೆಲವರು ಅವನ ಅಂಶವೇ ಚಿದ್ರೂಪನಾದ ಬ್ರಹ್ಮನೆಂದೂ, ಅದರ ಹತ್ತನೆಯ ಅಂಶವನ್ನು ಮಹಾವಿಷ್ಣುವೆಂದೂ ಹೇಳುತ್ತಾರೆ.

೧೦೪. ಯೋಗಿಗಳೆಲ್ಲರೂ ಇದನ್ನು ಚಿಂತಿಸುತ್ತಾರೆ. ಮತ್ತು ಆ ಸ್ವಾಮಿಯು ಮೂರು ರೀತಿಯಲ್ಲಿ ಡೊಂಕು ಬಂದಿರುವಂತೆ ನಿಂತಿದ್ದಾನೆ. ಉತ್ತಮ ವಸ್ತುಗಳ ಸಾರವನ್ನು ತೆಗೆದು ನಿರ್ಮಿಸಿದಂತಿದ್ದಾನೆ.

೧೦೫. ಕೆಳಮುಖವಾಗಿರುವ ಕತ್ತಿನಿಂದ ಕೂಡಿ ಅನೇಕ ಮನ್ಮಥರಂತೆ ಸುಂದರನಾದ, ಬಲಗಡೆ ಭುಜದಮೇಲೆ ಇಟ್ಟಿರುವ ಕಪೋಲವುಳ್ಳ, ಕಾಂಚನದಕುಂಡಲ ವನ್ನು ಹಾಕಿಕೊಂಡಿರುವ ಸ್ವಾಮಿಯನ್ನು ಧ್ಯಾನಮಾಡಬೇಕು.

೧೦೬. ಕಡೆಗಣ್ಣಿನ ನೋಟದಿಂದ ಮನೋಹರನಾದ ಕೋಟಿ ಮನ್ಮಥರಂತೆ ಸುಂದರನಾದ ಸ್ವಲ್ಪ ವಕ್ರವಾದ ತುಟಿಯಲ್ಲಿ ಕೊಳಲನ್ನಿಟ್ಟು ಅದನ್ನು ಧ್ವನಿಮಾಡು ತ್ತಿರುವ ಸ್ವಾಮಿಯನ್ನು ಧ್ಯಾನಮಾಡಬೇಕು.

೧೦೭. ಮೂರುಲೋಕವನ್ನು ಮೋಹಿಸುವಂತೆ ಮಾಡುತ್ತ ಪ್ರೇಮಸಾಗರ ದಲ್ಲಿ ಮುಳುಗಿರುವ ಸ್ವಾಮಿಯನ್ನು ಧ್ಯಾನಮಾಡಬೇಕು.

॥ ಪಾರ್ವತ್ಯುವಾಚ ॥

ಪರಮಂ ಕಾರಣಂ ಕೃಷ್ಣಂ ಗೋವಿಂದಾಖ್ಯಂ ಮಹತ್ಪದಂ ।
ವೃಂದಾವನೇಶ್ವರಂ ನಿತ್ಯಂ ನಿರ್ಗುಣಸ್ಯೈಕಕಾರಣಂ ॥ ೧೦೮ ॥

ತತ್ತದ್ರಹಸ್ಯಮಾಹಾತ್ಮ್ಯಂ ಕಿಮೈಶ್ವರ್ಯಂ ಚ ಸುಂದರಂ ।
ತದ್ಬ್ರೂಹಿ ದೇವ ದೇವೇಶ ಶ್ರೋತುಮಿಚ್ಛಾಮ್ಯಹಂ ಪ್ರಭೋ ॥ ೧೦೯ ॥

॥ ಈಶ್ವರ ಉವಾಚ ॥

ಯದಂಘ್ರಿನಖಚಂದ್ರಾಂಶು ಮಹಿಮಾಂಶೋ ನ ವಿದ್ಯತೇ ।
ತನ್ಮಾಹಾತ್ಮ್ಯಂ ಕಿಯದ್ದೇವಿ ಪ್ರೋಚ್ಯತೇ ತ್ವಂ ಮುದಾ ಶೃಣು ॥ ೧೧೦ ॥

ಅನಂತಕೋಟಿಬ್ರಹ್ಮಾಂಡೇ ಅನಂತತ್ರಿಗುಣೋಚ್ಛ್ರಯೇ ।
ತತ್ಕಾಲಕೋಟಿಕೋಟ್ಯಂಶಾ ಬ್ರಹ್ಮವಿಷ್ಣುಮಹೇಶ್ವರಾಃ ॥ ೧೧೧ ॥

ಸೃಷ್ಟಿಸ್ಥಿತ್ಯಾದಿನಾ ಯುಕ್ತಾಃ ತಿಷ್ಠಂತಿ ತಸ್ಯ ವೈಭವಾಃ ।
ತದ್ರೂಪಕೋಟಿಕೋಟ್ಯಂಶಾಃ ಕಲಾಃ ಕಂದರ್ಪವಿಗ್ರಹಾಃ ॥ ೧೧೨ ॥

---

೧೦೮. ಪಾರ್ವತಿಯು ಹೇಳಿದಳು --ಆ ಕೃಷ್ಣನು ಮುಖ್ಯ ಕಾರಣನು. ಆ ಗೋವಿಂದನೆಂಬ ಸ್ಥಾನವು ಬಹು ದೊಡ್ಡದು. ಆ ಬೃಂದಾವನಕ್ಕೆ ಒಡೆಯನಾದ ಆ ಸ್ವಾಮಿಯು ನಿರ್ಗುಣನು. ಪ್ರಪಂಚಕ್ಕೆಲ್ಲಾ ಮುಖ್ಯ ಕಾರಣನು.

೧೦೯. ಆದ್ದರಿಂದ ಅದರ ಮಹಿಮೆ, ಅದರ ಐಶ್ವರ್ಯ, ಅದರ ಸೌಂದರ್ಯಗಳೇನು? ಅದನ್ನು ಹೇಳು, ಕೇಳಬೇಕೆಂಬ ಇಚ್ಛೆಯು ಬಹುವಾಗಿದೆ.

೧೧೦. ಈಶ್ವರನು ಹೇಳಿದನು—ಆ ಸ್ವಾಮಿಯ ನಖಚಂದ್ರನ ಕಿರಣಗಳ ಮಹಿಮೆಗೆ ಕೊನೆಮೊದಲೇ ಇಲ್ಲ. ಅದರ ಮಹಿಮೆಯು ಎಷ್ಟು ಹೆಚ್ಚಿನದು. ಹೇಳುತ್ತೇನೆ. ಕೇಳು.

೧೧೧. ಅನಂತಕೋಟಿ ಬ್ರಹ್ಮಾಂಡದಲ್ಲಿ, ಅನಂತಕೋಟಿ ತ್ರಿಗುಣಗಳಲ್ಲಿ, ಆ ಸ್ವಾಮಿಯ ಕೋಟಿಯಂಶದಲ್ಲಿ ಕೋಟಿಯ ಒಂದಂಶವಾಗಿ ಆ ಬಹ್ಮವಿಷ್ಣುಶಿವರುಗಳಿರುವರು.

೧೧೨. ಆ ಸ್ವಾಮಿಯ ಕೋಟಿ ಅಂಶದ ಒಂದಂಶದಲ್ಲ ಪುನಃ ಕೋಟಿಮಾಡಿ ಅದರ ಒಂದಂಶವಾದ ಕಂದರ್ಪನಂತೆ ರಮ್ಯವಾದ ಬ್ರಹ್ಮ ವಿಷ್ಣು ಶಿವರು ಸೃಷ್ಟಿ, ಸ್ಥಿತಿ, ಲಯಗಳೆಂಬ ಮಹತ್ತರವಾದ ವೈಭವದಿಂದ ಕೂಡಿರುವಾಗ ಆ ಸ್ವಾಮಿಯ ವಿಷಯದಲ್ಲಿ ಹೇಳತಕ್ಕದ್ದೇನಿದೆ.

ಜಗನ್ಮೋಹಂ ಪ್ರಕುರ್ವಂತಿ ತದಂಡಾಂತರಸಂಸ್ಥಿತಾಃ ।
ತದ್ದೇಹವಿಲಸತ್ಕಾಂತಿಕೋಟಿಕೋಟ್ಯಂಶಕೋ ವಿಭುಃ ॥ ೧೧೩ ॥

ತತ್ಪ್ರಕಾಶಸ್ಯ ಕೋಟ್ಯಂಶರಶ್ಮಯೋ ರವಿವಿಗ್ರಹಾಃ ।
ತಸ್ಯ ಸ್ವದೇಹಕಿರಣೈಃ ಪರಾನಂದರಸಾಮೃತೈಃ ॥ ೧೧೪ ॥

ಪರಮಾನೋದಚಿದ್ರೂಪೈರ್ನಿರ್ಗುಣಸ್ಯೈಕಕಾರಣೈಃ ।
ತದಂಶಕೋಟಿಕೋಟ್ಯಂಶಾ ಜೀವಂತಿ ಕಿರಣಾತ್ಮಕಾಃ ॥ ೧೧೫ ॥

ತದಂಘ್ರಿಪಂಕಜದ್ವಂದ್ವನಖಚಂದ್ರಮಣಿಪ್ರಭಾಃ ।
ಆಹುಃ ಪೂರ್ಣಬ್ರಹ್ಮಣೋಽಪಿ ಕಾರಣಂ ವೇದದುರ್ಗಮಂ ॥ ೧೧೬ ॥

ತದಂಶಸೌರಭಾನಂತ ಕೋಟ್ಯಂಶೋ ವಿಶ್ವಮೋಹನಃ ।
ತತ್ಸ್ಪರ್ಶಪುಷ್ಪಗಂಧಾದಿ ನಾನಾಸೌರಭಸಂಭವಃ ॥ ೧೧೭ ॥

---

೧೧೩. ಆ ಕೋಟಿಕೋಟಿಯಲ್ಲಿ ಒಂದುಪಾಲಾದ ಅವರು ಪ್ರಕಾಶಿಸುತ್ತಾ, ಅವನ ಅಂಡದಲ್ಲಿದ್ದುಕೊಂಡು ಜಗತ್ತಿಗೆ ಮೋಹವನ್ನು ಮಾಡುತ್ತಿದ್ದಾರೆ.

೧೧೪. ಪರಮಾನಂದವನ್ನುಂಟುಮಾಡುವ ಆ ಸ್ವಾಮಿಯು ದೇಹದ ಕಿರಣಗಳ ಪ್ರಕಾಶದ ಕೋಟ್ಯಂಶದಲ್ಲಿ ಒಂದಂಶವು ರವಿಯು ವಿಗ್ರಹಗಳು.

೧೧೫. ಪರಮನೂ, ಚಿದ್ರೂಪನೂ, ಆದಿಕಾರಣನೂ, ನಿರ್ಗುಣನೂ, ಏಕ ಕಾರಣನೂ ಆದ ಆ ಸ್ವಾಮಿಯ ಕೋಟಿಯಲ್ಲಿ ಒಂದು ಭಾಗದ ಕೋಟಿಯ ಅಂಶ ಗಳೊಂದರಿಂದ ಅವರು ಕಿರಣವುಳ್ಳವರಾಗಿದ್ದಾರೆ.

೧೧೬. ಆ ಸ್ವಾಮಿಯು ಪಾದಕಮಲಗಳ ಉಗುರೆಂಬ ಚಂದ್ರನ ಕಾಂತಿಗಳು ವೇದಗಳಿಗೂ ತಿಳಿಯಲಸಾಧ್ಯವು. ಆ ಪೂರ್ಣಬ್ರಹ್ಮನಿಗೂ ಅವೇ ಕಾರಣಗಳೆಂದು ಹೇಳುತ್ತಾರೆ.

೧೧೭. ಆ ಸ್ವಾಮಿಯು ಸ್ಪರ್ಶವೆಂಬ ಗಂಧವೂ, ಮೂಗಿನಿಂದ ಬರುವ ಸುವಾ ಸನೆಯೂ, ಯಾವುವುಂಟೋ, ಇವುಗಳ ಕೋಟಿಯಂಶವ ಒಂದು ಭಾಗವ ಕೋಟಿ ಯಂಶವೂ ಈ ಪ್ರಪಂಚವನ್ನೇ ಮೋಹಿಸುವಂತೆ ಮಾಡುತ್ತಿದೆ.

ತತ್ಪ್ರಿಯಾ ಪ್ರಕೃತಿಸ್ತ್ವಾದ್ಯಾ ರಾಧಿಕಾ ಕೃಷ್ಣವಲ್ಲಭಾ ।
ತತ್ಕಲಾಕೋಟಿಕೋಟ್ಯಂಶಾ ದುರ್ಗಾದ್ಯಾಸ್ತ್ರಿಗುಣಾತ್ಮಿಕಾಃ ।
ತಸ್ಯಾಂಘ್ರಿರಜಸಸ್ಪರ್ಶಾತ್ಕೋಟಿವಿಷ್ಣುಃ ಪ್ರಜಾಯತೇ ॥ ೧೧೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶ್ರೀಕೃಷ್ಣಚರಿತೇ
ವೃಂದಾವನಮಾಹಾತ್ಮ್ಯೇ ಏಕೋನಸಪ್ತತಿತಮೋಽಧ್ಯಾಯಃ

---

೧೧೮. ಆ ಕೃಷ್ಣನ ಪ್ರಿಯೆಯು ಆದಿಪ್ರಕೃತಿಯು. ಅವಳೇ ಕೃಷ್ಣವಲ್ಲಭಳಾದ ರಾಧಿಕೆಯು. ದುರ್ಗೆಯೇ ಮುಂತಾದ ತ್ರಿಗುಣಗಳಿಂದ ಕೂಡಿದ ಇತರ ದೇವತೆಗಳು, ಆ ರಾಧೆಯ ಹದಿನಾರರಲ್ಲಿ ಒಂದಂಶದ ಕೋಟಿಪಾಲಿನ ಒಂದುಪಾಲಿನ ಕೋಟಿಯ ಒಂದಂಶಗಳು. ಆ ರಾಧಿಕೆಯ ಪಾದದ ಧೂಳಿಸ್ಪರ್ಶದಿಂದ ಕೋಟಿ ವಿಷ್ಣುಗಳು ಹುಟ್ಟುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶ್ರೀಕೃಷ್ಣಚರಿತ್ರೆಯ ವೃಂದಾವನ ಮಾಹಾತ್ಮೆಯಲ್ಲಿ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಸಪ್ತತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ಯದ್ವಾ ಕಾರಣಮೇತಸ್ಯ ಯೇ ವಾ ಪಾರಿಷದಾಃ ಪ್ರಭೋ ।
ತದಹಂ ಶ್ರೋತುಮಿಚ್ಛಾಮಿ ಕಥಯಸ್ವ ದಯಾನಿಧೇ ॥ ೧ ॥

॥ ಈಶ್ವರ ಉವಾಚ ॥

ರಾಧಯಾ ಸಹ ಗೋವಿಂದಂ ಸ್ವರ್ಣಸಿಂಹಾಸನೇ ಸ್ಥಿತಂ ।
ಪೂರ್ವೋಕ್ತರೂಪಲಾವಣ್ಯಂ ದಿವ್ಯಭೂಷಾಂಬರಸ್ರಜಂ ॥ ೨ ॥

ತ್ರಿಭಂಗಮಂಜುಸುಸ್ನಿಗ್ಧಂ ಗೋಪೀಲೋಚನತಾರಕಂ ।
ತದ್ಬಾಹ್ಯೇ ಯೋಗಪೀಠೇ ಚ ಸ್ವರ್ಣಸಿಂಹಾಸನಾವೃತೇ ॥ ೩ ॥

---

## ಎಪ್ಪತ್ತನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು—ಇದರ ಕಾರಣವನ್ನು ಏನೆಂದು ಹೇಳುತ್ತಾರೆ? ಈ ಕೃಷ್ಣನ ಸುತ್ತುಮುತ್ತಲಿನ ಪರಿವಾರಗಳಾವುವು? ಇದನ್ನು ಕೇಳಬೇಕೆಂದಿದ್ದೇನೆ. ಕೃಪೆಮಾಡಿ ಹೇಳು.

೨-೪. ಈಶ್ವರನು ಹೇಳಿದನು—ಹಿಂದೆ ಹೇಳಿದ ರೂಪುಲಾವಣ್ಯಗಳುಳ್ಳ, ದಿವ್ಯಭೂಷಣಧಾರಿಯಾದ, ಮನೋಹರನಾದ, ಗೋಪಿಯ ಕಣ್ಣುಗೊಂಬೆಯಾದ, ಆ ಸ್ವಾಮಿಯನ್ನು ಸ್ವರ್ಣಸಿಂಹಾಸನದಲ್ಲಿ ರಾಧೆಯೊಡನೆ ಕುಳಿತಿರುವಂತೆ ಧ್ಯಾನಮಾಡ ಬೇಕು. ಆ ಸ್ವರ್ಣಪೀಠದ ಹೊರಗೆ ಯೋಗಪೀಠದಲ್ಲಿ ಲಲಿತೆಯೇ ಮೊದಲಾದ

ಪ್ರತ್ಯಂಗರಭಸಾವೇಶಾಃ ಪ್ರಧಾನಾಃ ಕೃಷ್ಣವಲ್ಲಭಾಃ ।
ಲಲಿತಾದ್ಯಾಃ ಪ್ರಕೃತ್ಯಂಶಾಃ ಮೂಲಪ್ರಕೃತಿರಾಧಿಕಾ ॥ ೪ ॥

ಸಮ್ಮುಖೇ ಲಲಿತಾದೇವೀ ಶ್ಯಾಮಲಾ ವಾಯುಕೋಣಕೇ ।
ಉತ್ತರೇ ಶ್ರೀಮತೀ ಧನ್ಯಾ ಐಶಾನ್ಯಾಂ ಶ್ರೀಹರಿಪ್ರಿಯಾ ॥ ೫ ॥

ವಿಶಾಖಾ ಚ ತಥಾ ಪೂರ್ವೇ ಶೈವ್ಯಾ ಚಾಗ್ನೌ ತತಃ ಪರಂ ।
ಪದ್ಮಾ ಚ ದಕ್ಷಿಣೇ ಪಶ್ಚಾನ್ನೈಋತೇ ಕ್ರಮಶಸ್ಸ್ಥಿತಾಃ ॥ ೬ ॥

ಯೋಗಪೀಠೇ ಕೇಶರಾಗ್ರೇ ಚಾರುಚಂದ್ರಾವತೀ ಪ್ರಿಯಾ ।
ಅಷ್ಟೌ ಪ್ರಕೃತಯಃ ಪುಣ್ಯಾಃ ಪ್ರಧಾನಾಃ ಕೃಷ್ಣವಲ್ಲಭಾಃ ॥ ೭ ॥

ಪ್ರಧಾನಪ್ರಕೃತಿಸ್ತ್ವಾದ್ಯಾ ರಾಧಾ ಚಂದ್ರಾವತೀ ಸಮಾ ।
ಚಂದ್ರಾವಳೀ ಚಿತ್ರರೇಖಾ ಚಂದ್ರಾ ಮದನಸುಂದರೀ ॥ ೮ ॥

ಪ್ರಿಯಾ ಚ ಶ್ರೀ ಮಧುಮತೀ ಚಂದ್ರರೇಖಾ ಹರಿಪ್ರಿಯಾ ।
ಷೋಡಶಾದ್ಯಾಃ ಪ್ರಕೃತಯಃ ಪ್ರಧಾನಾಃ ಕೃಷ್ಣವಲ್ಲಭಾಃ ॥ ೯ ॥

---

ಕೃಷ್ಣವಲ್ಲಭೆಯರು ಅವನ ಪ್ರತಿಯಂಗದಲ್ಲಿಯೂ ಪ್ರೀತಿಯುಳ್ಳವರಾಗಿರುವರು. ಅವರನ್ನು ಧ್ಯಾನಿಸಬೇಕು. ಇವರಿಗೆ ಮೂಲಪ್ರಕೃತಿಯೇ ರಾಧಿಕೆಯು.

೫-೬. ಎದುರಿಗೆ ಲಲಿತಾದೇವಿಯು, ವಾಯುವ್ಯದಿಕ್ಕಿನಲ್ಲಿ ಶ್ಯಾಮಲೆಯು, ಉತ್ತರದಲ್ಲಿ ಶ್ರೀಮತಿಯು, ಈಶಾನ್ಯದಲ್ಲಿ ಹರಿಪ್ರಿಯೆಯು, ಪೂರ್ವದಲ್ಲಿ ವಿಶಾಖೆಯು, ಆಗ್ನೇಯದಲ್ಲಿ ಶೈವಿಯು, ದಕ್ಷಿಣದಲ್ಲಿ ಪದ್ಮೆಯು, ನೈಋತ್ಯದಲ್ಲಿಯೂ ಪದ್ಮೆಯು. ಈ ರೀತಿ ಪೀಠದ ಹೊರಗಿರುತ್ತಾರೆ.

೭. ಯೋಗಪೀಠವಾದ ಆ ಕೇಸರದ ತುದಿಯಲ್ಲಿ ಚಂದ್ರಾವತಿಯು ಇರುವಳು. ಈ ರೀತಿ ಎಂಟು ಜನ ಪ್ರಕೃತಿಯರು. ಪುಣ್ಯವಂತರಾದವರು. ಪ್ರಧಾನರು. ಕೃಷ್ಣನಿಗೆ ವಲ್ಲಭೆಯರು.

೮-೯. ಪ್ರಧಾನಪ್ರಕೃತಿಯೇ ಮೊದಲನೆಯದು. ರಾಧೆಯೂ ಚಂದ್ರಾವತಿಯೂ, ಸಮರು. ಚಂದ್ರಾವಳಿ, ಚಿತ್ರರೇಖೆ, ಚಂದ್ರೆ, ಮದನಸುಂದರಿ, ಶ್ರೀ, ಮಧುಮತೀ, ಚಂದ್ರರೇಖೆ, ಹರಿಪ್ರಿಯೆ ಇವರೇ ಆದಿಯಾದ ಹದಿನಾರು ಜನ ಪ್ರಕೃತಿಗಳು ಕೃಷ್ಣನ ವಲ್ಲಭೆಯರು.

ವೃಂದಾವನೇಶ್ವರೀ ರಾಧಾ ತಥಾ ಚಂದ್ರಾವಳೀ ಪ್ರಿಯಾ ।
ಅಭಿನ್ನಗುಣಲಾವಣ್ಯಸೌಂದರ್ಯಾಶ್ಚರ್ಯಲೋಚನಾಃ ॥ ೧೦ ॥

ಮನೋಹರಾ ಮುಗ್ಧವೇಷಾಃ ಕಿಶೋರೀವಯಸೋಜ್ವಲಾಃ ।
ಅಗ್ರೇಸರಾಸ್ತಥಾ ಚಾನ್ಯಾ ಗೋಪಕನ್ಯಾ ಸ್ಸಹಸ್ರಶಃ ॥ ೧೧ ॥

ಶುದ್ಧಕಾಂಚನಪುಂಜಾಭಾಃ ಸುಪ್ರಸನ್ನಾಸ್ಸುಲೋಚನಾಃ ।
ತದ್ರೂಪಹೃದಯಾರೂಢಾಸ್ತದಾಶ್ಲೇಷಸಮುತ್ಸುಕಾಃ ॥ ೧೨ ॥

ಶ್ಯಾಮಾಮೃತರಸೇ ಮಗ್ನಾಃ ಸ್ಫುರತ್ತದ್ಭಾವಮಾನಸಾಃ ।
ನೇತ್ರೋತ್ಪಲಾರ್ಚಿತೇಃ ಕೃಷ್ಣಪಾದಾಬ್ಜೇಽರ್ಪಿತಚೇತಸಃ ॥ ೧೩ ॥

ಶ್ರುತಿಕನ್ಯಾಸ್ತತೋ ದಕ್ಷೇ ಸಹಸ್ರಾಯುತಸಂಯುತಾಃ ।
ಜಗನ್ಮುಗ್ಧೀಕೃತಾಕಾರಾ ಹೃದ್ವರ್ತಿ ಕೃಷ್ಣಲಾಲಸಾಃ ॥ ೧೪ ॥

ನಾನಾಸತ್ವಸ್ವರಾಲಾಪ ಮುಗ್ಧೀಕೃತಜಗತ್ತ್ರಯಾಃ ।
ತನ್ನಿಗೂಢರಹಸ್ಯಾನಿ ಗಾಯನ್ತ್ಯಃ ಪ್ರೇಮವಿಹ್ವಲಾಃ ॥ ೧೫ ॥

---

೧೦. ವೃಂದಾವನಕ್ಕೆ ಒಡೆಯಳಾದ ರಾಧೆಯೂ, ಚಂದ್ರಾವಳಿಯೂ ಒಂದೇ ರೀತಿಯಾದ ಗುಣ, ಲಾವಣ್ಯ, ಸೌಂದರ್ಯ ನೇತ್ರದೃಷ್ಟಿಗಳುಳ್ಳವರು.

೧೧. ಇವರಿಬ್ಬರೂ ಮನೋಹರರು. ಸುಂದರವಾದ ವೇಷವುಳ್ಳವರು. ಒಳ್ಳೆಯ ವಯಸ್ಸುಳ್ಳ ಹುಡುಗಿಯರು. ಎಲ್ಲರಿಗೂ ಯಜಮಾನಿಯರು. ಮುಂದಾಳುಗಳು. ಇನ್ನೂ ಅನೇಕ ಜನ ಗೋಪಕನ್ಯೆಯರುಂಟು.

೧೨-೧೩. ಸ್ವರ್ಣದ ಕಾಂತಿಯುಳ್ಳವರು, ಪ್ರಸನ್ನರು, ಒಳ್ಳೆಯ ಕಣ್ಣುಳ್ಳವರು, ಆ ಕೃಷ್ಣನ ರೂಪವನ್ನೇ ಹೃದಯದಲ್ಲಿಟ್ಟುಕೊಂಡಿರುವರು. ಆ ಕೃಷ್ಣನ ಆಶ್ಲೇಷದಲ್ಲಿ ಆಸಕ್ತರು. ನೂತನ ವಯಸ್ಸಿನವರು. ಅಮೃತರಸದಲ್ಲಿ ಮುಳುಗಿದವರು. ಆ ಕೃಷ್ಣಭಾವವೇ ಮನದಲ್ಲುಳ್ಳವರು. ಕಡೆಗಣ್ಣಿನಿಂದ ಕೃಷ್ಣನನ್ನು ನೋಡುತ್ತಿರುವವರು. ಕೃಷ್ಣನ ಪಾದದಲ್ಲಿ ಆಸಕ್ತರಾದವರು.

೧೪. ಅವನ ಬಲಪಾರ್ಶ್ವದಲ್ಲಿ ಶ್ರುತಿಗಳೇ ಕನ್ಯೆಯರಾಗಿ ಹುಟ್ಟಿದ್ದಾರೆ ಅವರು ಹನ್ನೊಂದು ಸಾವಿರ ಜನರು ಜಗತ್ತನ್ನೇ ಮೋಹಗೊಳಿಸುವ ಆಕಾರವುಳ್ಳವರು. ಮನಸ್ಸಿನಲ್ಲಿಯೂ ಕೃಷ್ಣನಲ್ಲಿಯೇ ಆಸಕ್ತಿಯುಳ್ಳವರು.

೧೫. ನಾನಾಬಗೆಯಾದ ಸ್ವರಗಳಿಂದ ಜಗತ್ತನ್ನೇ ಮೋಹಗೊಳಿಸುವ ಆ ಸ್ವಾಮಿಯಲ್ಲಿ ಅಡಗಿರುವ ಗುಟ್ಟುಗಳನ್ನು ಪ್ರೇಮದಿಂದ ಗಾನಮಾಡುತ್ತಿರುತ್ತಾರೆ.

ದೇವಕನ್ಯಾಸ್ತತಸ್ಸನ್ತ್ಯೇ ದಿವ್ಯವೇಷಾರಸೋಜ್ಜ್ವಲಾಃ ।
ನಾನಾವೈದಗ್ಧ್ಯನಿಪುಣಾ ದಿವ್ಯಭಾವಭರಾನ್ವಿತಾಃ ॥ ೧೬ ॥

ಸೌಂದರ್ಯಾತಿಶಯಾಢ್ಯಾಶ್ಚ ಕಟಾಕ್ಷಾತಿಮನೋಹರಾಃ ।
ನಿರ್ಲಜ್ಜಾಸ್ತತ್ರಗೋವಿಂದೇ ತದಂಗಸ್ಪರ್ಶನೋತ್ಸುಕಾಃ ॥ ೧೭ ॥

ತದ್ಭಾವಮುಗ್ಧಮನಸಃ ಸ್ಮಿತಸಾಚಿನಿರೀಕ್ಷಣಾಃ ।
ಮಂದಿರಸ್ಯ ತತೋ ಬಾಹ್ಯೇ ಪ್ರಿಯಯಾ ವಿಶದಾವೃತೇ ॥ ೧೮ ॥

ಸಮಾನವೇಷವಯಸಃ ಸಮಾನಬಲಪೌರುಷಾಃ ।
ಸಮಾನಗುಣಕರ್ಮಾಣಃ ಸಮಾನಾಭರಣಾಃ ಪ್ರಿಯಾಃ ॥ ೧೯ ॥

ಸಮಾನಸ್ವರಸಂಗೀತ ವೇಣುವಾದನತತ್ಪರಾಃ ।
ಶ್ರೀದಾಮಾ ಪಶ್ಚಿಮದ್ವಾರೇ ವಸುದಾಮಾ ತಥೋತ್ತರೇ ॥ ೨೦ ॥

ಸುದಾಮಾ ಚ ತಥಾಪೂರ್ವೇ ಕಿಂಕಿಣೀಚಾಪಿ ದಕ್ಷಿಣೇ ।
ತದ್ಬಾಹ್ಯೇ ಸ್ವರ್ಣಪೀಠೇ ಚ ಸುವರ್ಣಮಂದಿರಾವೃತೇ ॥ ೨೧ ॥

---

೧೬-೧೭. ಎಡದಲ್ಲಿ ದೇವಕನ್ಯೆಯರಿದ್ದುಕೊಂಡಿರುತ್ತಾರೆ. ಅವರು ದಿವ್ಯ ವೇಷಗಳನ್ನುಳ್ಳವರು. ಜಾಣೆಯರು. ದಿವ್ಯವಾದ ಅಭಿಪ್ರಾಯವುಳ್ಳವರು. ಸುಂದರಿಯರು. ಕಡೆಗಣ್ಣನೋಟದಿಂದ ಮನೋಹರರು. ಗೋವಿಂದನಲ್ಲಿ ಲಜ್ಜೆಯನ್ನು ಬಿಟ್ಟು ಅವನ ಸ್ಪರ್ಶಹೊಂದುವುದರಲ್ಲಿ ಆಸಕ್ತರಾಗಿದ್ದಾರೆ.

೧೮. ಆ ಸ್ವಾಮಿಯ ಭಾವದಲ್ಲಿಯೇ ಕೂಡಿದ ಮನಸ್ಸುಳ್ಳವರು ನಗುತ್ತ ವಕ್ರವಾಗಿ ಕಡೆಗಣ್ಣಿನಿಂದ ನೋಡುತ್ತಿರುತ್ತಾರೆ.

೧೯. ಆ ಮನೆಯ ಹೊರಗೆ ಪ್ರಿಯರಾದವರೂ, ಒಂದೇರೀತಿಯಾದವೇಷ, ವಯಸ್ಸು ಬಲ ಪೌರುಷಗಳುಳ್ಳವರೂ, ಒಂದೇ ರೀತಿಯಾದ ಗುಣಕರ್ಮಗಳುಳ್ಳವರೂ, ಒಂದೇಬಗೆಯಾದ ಆಭರಣಗಳುಳ್ಳವರೂ ಒಂದೇರೀತಿಯಾಗಿ ಸ್ವರಹಾಕಿಕೊಂಡು ಕೊಳಲನ್ನು ಬಾರಿಸುತ್ತಿರುವವರೂ ಇದ್ದಾರೆ.

೨೦. ಪಶ್ಚಿಮದ್ವಾರದಲ್ಲಿ ಶ್ರೀದಾಮೆಯೂ, ಉತ್ತರದ್ವಾರದಲ್ಲಿ ವಸುದಾಮೆಯೂ, ಪೂರ್ವದ್ವಾರದಲ್ಲಿ ಸುದಾಮೆಯೂ, ದಕ್ಷಿಣದ್ವಾರದಲ್ಲಿ ಕಿಂಕಿಣಿಯೂ ಇದ್ದಾರೆ.

೨೧-೨೪. ಅದರ ಹೊರಗಿರುವ ಸ್ವರ್ಣಪೀಠದಲ್ಲಿ ಚಿನ್ನದಮನೆಗಳಲ್ಲಿ ಚಿನ್ನದ ಜಗುಲಿಯಲ್ಲಿ ಚಿನ್ನದ ಆಭರಣಗಳುಳ್ಳ ಚಿಕ್ಕ ಚಿಕ್ಕ ಕೃಷ್ಣರಂತಿರುವ ಅನೇಕ

**ಸ್ವರ್ಣವೇದ್ಯಂತರಸ್ಥೇತು ಸ್ವರ್ಣಾಭರಣಭೂಷಿತೇ ।**
**ಸ್ತ್ರೋಕಕೃಷ್ಣಾಂಶುಭದ್ರಾದ್ಯೈರ್ಗೋಪಾಲೈರಯುತಾಯುತೈಃ ॥ ೨೨ ॥**

**ಶೃಂಗವೀಣಾವೇಣುವೇತ್ರ ವಯೋವೇಷಾಕೃತಿಸ್ವರೈಃ ।**
**ತದ್ಗುಣಧ್ಯಾನಸಂಯುಕ್ತೈ ರ್ಗಾಯದ್ಭಿರಸವಿಹ್ವಲೈಃ ॥ ೨೩ ॥**

**ಚಿತ್ರಾರ್ಪಿತೈಶ್ಚಿತ್ರರೂಪೈಃ ಸದಾನಂದಾಂಶುವರ್ಷಿಭಿಃ ।**
**ಪುಲಕಾಕುಲಸರ್ವಾಂಗೈರ್ಯೋಗೀಂದ್ರೈರಿವ ವಿಸ್ಮಿತೈಃ ॥ ೨೪ ॥**

**ಕ್ಷರತ್ಪಯೋಭಿರ್ಗೋವೃಂದೈಃ ಅಸಂಖ್ಯಾತೈರುಪಾವೃತಂ ।**
**ತದ್ಬಾಹ್ಯೇ ಸ್ವರ್ಣಪ್ರಾಚೀರೇ ಕೋಟಿಸೂರ್ಯಸಮುಜ್ವಲೇ ॥ ೨೫ ॥**

**ಚತುರ್ದಿಕ್ಷು ಮಹೋದ್ಯಾನಮಂಜುಸೌರಭಮೋಹಿತೇ ।**
**ಪಶ್ಚಿಮೇ ಸಮ್ಮುಖೇ ಶ್ರೀಮತ್ಪಾರಿಜಾತದ್ರುಮಾಶ್ರಯೇ ॥ ೨೬ ॥**

**ತತ್ರಾಧಸ್ತು ಸ್ವರ್ಣಪೀಠೇ ಸ್ವರ್ಣಮಂದಿರಮಂಡಿತೇ ।**
**ತನ್ಮಧ್ಯೇ ಮಣಿಮಾಣಿಕ್ಯ ದಿವ್ಯಸಿಂಹಾಸನೋಜ್ವಲೇ ॥ ೨೭ ॥**

**ತತ್ರೋಪರಿ ಪರಾನಂದಂ ವಾಸುದೇವಂ ಜಗತ್ಪ್ರಭುಂ ।**
**ತ್ರಿಗುಣಾತೀತಚಿದ್ರೂಪಂ ಸರ್ವಕಾರಣಕಾರಣಂ ॥ ೨೮ ॥**

---

ಸಾವಿರ ಗೋಪಾಲರು ಕೊಂಬು, ವೀಣೆ, ವೇಣು, ಬೆತ್ತ ಇವನ್ನು ಹಿಡಿದು ಒಂದೇರೀತಿ ವಯಸ್ಸು ವೇಷಗಳುಳ್ಳವರಾಗಿ ಆ ಕೃಷ್ಣನ ಗುಣದ ಧ್ಯಾನದಿಂದಲೇ ಕೂಡಿ ರಸವ ತ್ತಾಗಿ ಹಾಡುತ್ತ ಚಿತ್ರದಲ್ಲಿ ಬರೆದರುವಂತಿದ್ದು ಆನಂದಾಶ್ರುವನ್ನು ಸುರಿಸುತ್ತ ಮೈಪು ಲಕವನ್ನು ಹೊಂದಿ ಯೋಗೀಂದ್ರರಂತೆ ಹಾಲನ್ನು ಸುರಿಸುತ್ತಿರುವ ಗೋವಿನ ಗುಂಪು ಗಳಿಂದ ಕೂಡಿಕೊಂಡಿರುತ್ತಾರೆ

೨೫-೨೭. ಅದರ ಹೊರಗೆ ಚಿನ್ನದ ಕೋಟೆಯು ಸ್ವರ್ಣನಿಂದ ಕೋಟಿ ಸೂರ್ಯರಂತೆ ಜ್ವಲಿತವಾಗಿದೆ. ನಾಲ್ಕು ದಿಕ್ಕುಗಳಲ್ಲಿಯೂ ಮಹೋದ್ಯಾನಗಳಿದ್ದು ಮನೋಹರವಾದ ವಾಸನೆಯಿಂದ ಕೂಡಿದೆ. ಅದರ ಪಶ್ಚಿಮದಲ್ಲಿ ಪಾರಿಜಾತದ ವೃಕ್ಷ ವಿದೆ. ಆ ಮರದ ಕೆಳಗೆ ಸ್ವರ್ಣಪೀಠದಲ್ಲಿ ಸ್ವರ್ಣದಮನೆಯಿದೆ. ಅದರಲ್ಲಿ ದಿವ್ಯ ವಾದ ಸಿಂಹಾಸನವಿದೆ. ಅದರಲ್ಲಿ ವಾಸುದೇವನಿರುವನು.

೨೮-೩೧. ಅವನು ಸತ್ವರಜಸ್ತಮೋಗುಣಗಳಿಗೆ ಅತೀತನು. ಸರ್ವ ಕಾರಣಕ್ಕೂ ಕಾರಣನು. ಇಂದ್ರನೀಲದಬಣ್ಣವುಳ್ಳವನು. ನೀಳವಾಗಿ ಗುಂಗುರಾ

ಇಂದ್ರನೀಲಘನಶ್ಯಾಮಂ ನೀಲಕುಂಚಿತಕುಂತಳಂ ।
ಪದ್ಮಪತ್ರ ವಿಶಾಲಾಕ್ಷಂ ಮಕರಾಕೃತಿಕುಂಡಲಂ ॥ ೨೯ ॥

ಚತುರ್ಭುಜಂತು ಚಕ್ರಾಸಿಗದಾಶಂಖಾಂಬುಜಾಯುಧಂ ।
ಆದ್ಯನ್ತರಹಿತಂ ನಿತ್ಯಂ ಪ್ರಧಾನಂ ಪುರುಷೋತ್ತಮಂ ॥ ೩೦ ॥

ಜ್ಯೋತೀರೂಪಂ ಮಹದ್ಧಾಮ ಪುರಾಣಂ ವನಮಾಲಿನಂ ।
ಪೀತಾಂಬರಧರಂ ಸ್ನಿಗ್ಧಂ ದಿವ್ಯಭೂಷಣಭೂಷಿತಂ ॥ ೩೧ ॥

ದಿವ್ಯಾನುಲೇಪನಂ ರಾಜಚ್ಚಿತ್ರಿತಾಂಗಮನೋಹರಂ ।
ರುಕ್ಮಿಣೀ ಸತ್ಯಭಾಮಾ ಚ ನಾಗ್ನಜಿತೀ ಸುಲಕ್ಷಣಾ ॥ ೩೨ ॥

ಮಿತ್ರವಿಂದಾನುವಿಂದಾ ಚ ಸುನಂದಾ ಜಾಂಬವತೀಪ್ರಿಯಾ ।
ಸುಶೀಲಾಚಾಷ್ಟಮಹಿಳಾ ವಾಸುದೇವಪ್ರಿಯಾಸ್ತತಃ ॥ ೩೩ ॥

ಉಜ್ಜಿತ್ಯ ಭೃಜಿತ್ಯೋಃ ಪಾರಿಷದಾ ವೃತ್ತಯೋರ್ಭಕ್ತಿತತ್ಪರಾಃ ।
ಉತ್ತರೇ ಸುಮಹೋದ್ಯಾನೇ ಹರಿಚಂದನಸಂಶ್ರಯೇ ॥ ೩೪ ॥

---

ಗಿರುವ ಮುಂಗುರುಳುಳ್ಳವನು. ಪದ್ಮದಂತೆ ಕಣ್ಣುಳ್ಳವನು. ಮೊಸಳೆಯಂತೆ ಇರುವ ಕುಂಡಲಧಾರಿಯು. ನಾಲ್ಕು ತೋಳುಳ್ಳವನು. ಶಂಖ, ಚಕ್ರ, ಗದಾ ಪದ್ಮಗಳಿಂದ ಕೂಡಿದವನು. ಆದ್ಯನ್ತರಹಿತನು. ಪುರುಷೋತ್ತಮನು. ಜ್ಯೋತಿಸ್ವರೂಪನು. ಪುರಾತನನು. ವನಮಾಲೆಯನ್ನು ಹಾಕಿಕೊಂಡಿರುವವನು. ಪೀತಾಂಬರವನ್ನುಟ್ಟವನು. ದಿವ್ಯಭೂಷಣಗಳಿಂದ ಭೂಷಿತನು ದಿವ್ಯವಾದ ಗಂಧವನ್ನು ಹಾಕಿಕೊಂಡಿರುವವನು. ಮನೋಹರವಾದ ಅವಯವಗಳುಳ್ಳ ಸ್ವಾಮಿಯಿರುವನು.

೩೨-೩೩. ರುಕ್ಮಿಣಿ, ಸತ್ಯಭಾಮೆ, ಸುಲಕ್ಷಣಾ, ಮಿತ್ರವಿಂದಾ, ಅನುವಿಂದಾ, ಸುನಂದಾ, ಜಾಂಬವತಿ, ಸುಶೀಲಾ. ಈ ಎಂಟು ಜನ ಹೆಂಡರಿಂದ ಕೂಡಿದ್ದಾನೆ. ಇವರು ವಾಸುದೇವನಿಗೆ ಪ್ರಿಯರು.

೩೪. ಉತ್ತರದ ಹರಿಚಂದನದ ಉದ್ಯಾನದಲ್ಲಿ ಭಕ್ತಿತತ್ಪರರಾದ ಉಜ್ಜಿತ್ಯ ಭೃಜಿತ್ಯರೆಂಬ ಪಾರಿಷದರಿದ್ದಾರೆ.

ತತ್ರಾಧಸ್ತು ಸ್ವರ್ಣಪೀಠೇ ಮಣಿಮಂಟಪಮಂಡಿತೇ ।
ತನ್ಮಧ್ಯೇಹೇಮನಿರ್ಮಾಣ ದಳೇ ಸಿಂಹಾಸನೋಜ್ವಲೇ ॥ ೩೫ ॥

ತತ್ರೈವ ಸಹ ರೇವತ್ಯಾ ಸಂಕರ್ಷಣಹಲಾಯುಧಂ ।
ಈಶ್ವರಸ್ಯ ಪ್ರಿಯಾನಂತಮಭಿನ್ನಗುಣರೂಪಿಣಂ ॥ ೩೬ ॥

ಶುದ್ಧಸ್ಫಟಿಕಸಂಕಾಶಂ ರಕ್ತಾಂಬುಜದಳೇಕ್ಷಣಂ ।
ನೀಲಪಟ್ಟಧರಂ ಸ್ನಿಗ್ಧಂ ದಿವ್ಯಭೂಷಾಸ್ರಗಂಬರಂ ॥ ೩೭ ॥

ಮಧುಪಾನೇ ಸದಾಸಕ್ತಂ ಮಧುಘೂರ್ಣಿತಲೋಚನಂ ।
ಪ್ರವೀರದಕ್ಷಿಣೇ ಭಾಗೇ ಮಂಜುನಾಭ್ಯಂತರಸ್ಥಿತೇ ॥ ೩೮ ॥

ಸಂತಾನವೃಕ್ಷಮೂಲೇ ತು ಮಣಿಮಂದಿರಮಂಡಿತಂ ।
ತನ್ಮಧ್ಯೇ ಮಣಿಮಾಣಿಕ್ಯ ದಿವ್ಯಸಿಂಹಾಸನೋಜ್ವಲೇ ॥ ೩೯ ॥

ಪ್ರದ್ಯುಮ್ನಂ ಚ ರತೀದೇವಂ ತತ್ರೋಪರಿಸುಖಸ್ಥಿತಂ ।
ಜಗನ್ಮೋಹನಸೌಂದರ್ಯ ಸಾರಶ್ರೇಣೀ ರಸಾತ್ಮಕಂ ॥ ೪೦ ॥

ಅಸಿತಾಂಭೋಜಪುಂಜಾಭಮರವಿಂದದಳೇಕ್ಷಣಂ ।
ದಿವ್ಯಾಲಂಕಾರಭೂಷಾಭಿರ್ದಿವ್ಯಗಂಧಾನುಲೇಪನಂ ॥ ೪೧ ॥

---

೩೫-೩೭. ಆ ಹರಿಚಂದನ ವೃಕ್ಷದ ಕೆಳಗೆ ಸ್ವರ್ಣಸಿಂಹಾಸನವಿದೆ. ಆ ಜಾಗದಲ್ಲಿ ರೇವತಿಯಿಂದ ಕೂಡಿದ ಬಲರಾಮನಿರುವನು. ಈಶ್ವರನಿಗೆ ಪ್ರಿಯನು. ಅನಂತವಾದ ಯೋಗ್ಯವಾದ ಗುಣವುಳ್ಳವನು. ಶುದ್ಧವಾದ ಸ್ಫಟಿಕದಂಥ ಪ್ರಕಾಶವುಳ್ಳವನು. ದಿವ್ಯಭೂಷಣವುಳ್ಳವನು. ಮಧುಪಾನದಲ್ಲಿ ಆಸಕ್ತನಾಗಿ ಕಣ್ಣನ್ನು ತಿರುಗಿಸುತ್ತಿರುವನು. ಇವನನ್ನು ಧ್ಯಾನಿಸಬೇಕು.

೩೮-೪೧. ಆ ಪ್ರವೀರದ ದಕ್ಷಣದಲ್ಲಿ ಸಂತಾನವೆಂಬ ಮರದ ಬುಡದಲ್ಲಿ ಮಣಿಮಂದಿರವಿದೆ. ಅದರ ಮಧ್ಯದಲ್ಲಿ ಮಾಣಿಕ್ಯದ ದಿವ್ಯಸಿಂಹಾಸನದಲ್ಲಿ ರತಿದೇವಿಯಿಂದ ಕೂಡಿದ ಪ್ರದ್ಯುಮ್ನನನ್ನು ಧ್ಯಾನಿಸಬೇಕು. ಅವನು ಜಗತ್ತೇ ಮೋಹಿಸುವಂತಿರುವ ಶರೀರವುಳ್ಳವನು. ಕಮಲದಂತೆ ಕಣ್ಣುಳ್ಳವನು, ದಿವ್ಯವಾದ ಅಲಂಕಾರವುಳ್ಳವನು. ದಿವ್ಯ ಗಂಧವನ್ನು ಪೂಸಿಕೊಂಡಿರುವನು. ಜಗತ್ತನ್ನೇ ಮುಗ್ಧವನ್ನಾಗಿ ಮಾಡುವ ಸೌಂದರ್ಯವುಳ್ಳ ಶರೀರವುಳ್ಳವನು.

ಜಗನ್ಮುಗ್ಧೀಕೃತಾಶೇಷ ಸೌಂದರ್ಯಾಶ್ಚರ್ಯವಿಗ್ರಹಂ ।
ಪೂರ್ವೋದ್ಯಾನೇ ಮಹಾರಮ್ಯೇ ಸುರದ್ರುಮಸಮಾಶ್ರಯೇ ॥ ೪೨ ॥

ತತ್ರಾಧಸ್ತು ಸ್ವರ್ಣಪೀಠೇ ಹೇಮಮಂಡಪಮಂಡಿತೇ ।
ತಸ್ಯ ಮಧ್ಯಸ್ಥಿತೇ ರಾಜದ್ದಿವ್ಯಸಿಂಹಾಸನೋಜ್ವಲೇ ॥ ೪೩ ॥

ದಿವ್ಯೋಷಯಾ ಸಮಂ ಶ್ರೀಮದನಿರುದ್ಧಂ ಜಗತ್ಪತಿಂ ।
ಸದಾನಂದಘನಶ್ಯಾಮಂ ಸುಸ್ನಿಗ್ಧಂ ನೀಲಕುಂತಳಂ ॥ ೪೪ ॥

ಸುಭ್ರೂನ್ನತಲತಾಭಂಗಂ ಸುಕಪೋಲಂ ಸುನಾಸಿಕಂ ।
ಸುಗ್ರೀವಂ ಸುಂದರಂ ವಕ್ಷೋಮನೋಹರಮನೋಹರಂ ॥ ೪೫ ॥

ಕಿರೀಟಿನಂ ಕುಂಡಲಿನಂ ಕಂಠಭೂಷಾವಿಭೂಷಿತಂ ।
ಮಂಜುಮಂಜೀರಮಾಧುರ್ಯಾಶ್ಚರ್ಯ ಸೌಂದರ್ಯವಿಗ್ರಹಂ ॥ ೪೬ ॥

ಪ್ರಿಯಭೃತ್ಯಗಣಾರಾಧ್ಯಂ ಯತ್ರಸಂಗೀತಕಪ್ರಿಯಂ ।
ಪೂರ್ಣಬ್ರಹ್ಮಸದಾನಂದಂ ಶುದ್ಧಸತ್ವಸ್ವರೂಪಿಣಂ ॥ ೪೭ ॥

ತಸ್ಯೋರ್ಧ್ವಂ ಚಾಂತರಿಕ್ಷೇ ಚ ವಿಷ್ಣುಂ ಸರ್ವೇಶ್ವರೇಶ್ವರಂ ।
ಅನಾದಿಮಾದ್ಯಂ ಚಿದ್ರೂಪಂ ಚಿದಾನಂದಂ ಪರಂ ವಿಭುಂ ॥ ೪೮ ॥

---

೪೨-೪೭. ಪೂರ್ವೋದ್ಯಾನದಲ್ಲಿ ಕಲ್ಪವೃಕ್ಷದ ಕೆಳಗೆ ಸ್ವರ್ಣಪೀಠದಲ್ಲಿ ಸ್ವರ್ಣ ಮಂಟಪದ ಮಧ್ಯದಲ್ಲಿ ಉಷೆಯಿಂದ ಕೂಡಿದ ಅನಿರುದ್ಧನನ್ನು ಧ್ಯಾನಿಸಬೇಕು. ಅವನು ಘನಶ್ಯಾಮನು, ಮನೋಹರನು, ನೀಲಬಣ್ಣದ ಕೂದಲುಳ್ಳವನು. ಕೊಂಚ ಮೇಲ ಕ್ಕೆದ್ದಿರುವ ಹುಬ್ಬುಳ್ಳವನು, ಕಪೋಲವೂ,ಮೂಗೂ ಚೆನ್ನಾಗಿರುವವನು. ಕತ್ತಿಗೆಯು ಮನೋಹರವಾಗಿದೆ. ಮನೋಹರಕ್ಕೆಲ್ಲಾ ಮನೋಹರವಾಗಿರುವವನು, ಕಿರೀಟ, ಕುಂಡಲ, ಕತ್ತಿನ ಹಾರಗಳುಳ್ಳವನು. ಮಧುರವಾದ, ಸುಂದರವಾದ ದೇಹವುಳ್ಳವನು. ಭೃತ್ಯರಿಂದ ಆರಾಧ್ಯನು. ಸಂಗೀತ ಪ್ರಿಯನು, ಪೂರ್ಣಬ್ರಹ್ಮನಿಂದ ಕೂಡಿರುವ ವನು. ಸದಾನಂದನು. ಶುದ್ಧಸತ್ವವುಳ್ಳವನು.

೪೮-೫೦. ಅದರ ಮೇಲುಗಡೆಯಲ್ಲಿ ಸರ್ವೇಶ್ವರನಾದ ವಿಷ್ಣುವಿದ್ದಾನೆ. ಅವ ನನ್ನು ಧ್ಯಾನಿಸಬೇಕು. ಆ ವಿಷ್ಣುವು ಆದ್ಯಂತರಹಿತನು. ಚಿದ್ರೂಪನು. ಚಿದಾನಂದನು

ತ್ರಿಗುಣಾತೀತಮವ್ಯಕ್ತಂ ನಿತ್ಯಮಕ್ಷಯಮವ್ಯಯಂ ।
ಸುಮೇಘಪುಂಜಮಾಧುರ್ಯಂ ಸೌಂದರ್ಯಶ್ಯಾಮವಿಗ್ರಹಂ ॥ ೪೯ ॥

ನೀಲಕುಂಚಿತಸುಸ್ನಿಗ್ಧಕೇಶಪಾಶಾತಿಸುಂದರಂ ।
ಅರವಿಂದದಳಸ್ನಿಗ್ಧ ಸುದೀರ್ಘಂ ಚಾರುಲೋಚನಂ ॥ ೫೦ ॥

ಕಿರೀಟಕುಂಡಲೋದ್ಗಂಡಂ ಶುದ್ಧಸತ್ವಾತ್ಮಭಿರ್ವೃತಂ ।
ಆತ್ಮಾರಾಮೈಶ್ಚ ಚಿದ್ರೂಪೈಃ ತನ್ಮೂರ್ತಿಧ್ಯಾನತತ್ಪರೈಃ ॥ ೫೧ ॥

ಹೃದಯಾರೂಢತದ್ಧ್ಯಾನೈಃ ನಾಸಾಗ್ರನ್ಯಸ್ತಲೋಚನೈಃ ।
ಕ್ರಿಯತೇ ಹೈತುಕೀ ಮೂರ್ತಿಃ ಹೃದ್ವರ್ತಿಕಾಯಭಾಷಿತೈಃ ॥ ೫೨ ॥

ತತ್ಸವ್ಯೇಯಕ್ಷಗಂಧರ್ವಸಿದ್ಧವಿದ್ಯಾಧರಾದಿಭಿಃ ।
ಸುಕಾಂತೈರಪ್ಸರಸ್ಸಂಘೈಃ ನೃತ್ಯಸಂಗೀತತತ್ಪರೈಃ ॥ ೫೩ ॥

ತದಂಗಭಜನಂ ಕಾಮಂ ವಾಂಛದ್ಭಿಃ ಕೃಷ್ಣಲಾಲಸೈಃ ।
ತದಗ್ರೇ ವೈಷ್ಣವೈಸ್ಸರ್ವೈಶ್ಚಾನ್ತರಿಕ್ಷೇ ಸುಖಾಸನೇ ॥ ೫೪ ॥

---

ವಿಭುವು ಸತ್ವ ರಜಸ್ತಮೋಗುಣಗಳಿಗೆ ಅತೀತನು. ಅವ್ಯಕ್ತನು. ನಿತ್ಯನು. ನಾಶ ರಹಿತನು. ಅಕ್ಷಯನು ಮೇಘಗಳ ಗುಂಪಿನಂತೆ ಬಣ್ಣವುಳ್ಳವನು. ನೀಲವಾಗಿ ತಿರೆತಿರೆಯಾಗಿರುವ ಕೂದಲುಳ್ಳವನು. ಕಮಲದಂತೆ ಕಣ್ಣುಳ್ಳವನು. ಕಿರೀಟದಿಂದಲೂ ಕುಂಡಲದಿಂದಲೂ ಪ್ರಕಾಶಿಸುವ ಕಪೋಲವುಳ್ಳವನು. ಶುದ್ಧಸತ್ವರಿಂದ ಸೇವಿತನು.

೫೧–೫೨. ಆತ್ಮನನ್ನು ತಿಳಿದು ರಮಿಸತಕ್ಕ, ಚಿದ್ರೂಪವಾದ ಆ ಮೂರ್ತಿಯನ್ನೇ ಧ್ಯಾನಮಾಡುವ, ಮತ್ತು ಹೃದಯದಲ್ಲಿರುವ ಸ್ವಾಮಿಯನ್ನು ಧ್ಯಾನಮಾಡುತ್ತಾ, ಮೂಗಿನ ತುದಿಯಲ್ಲಿ ನೆಟ್ಟ ಕಣ್ಣುಳ್ಳ ಯೋಗಿಗಳಿಂದ, ಮನಸ್ಸು ಮಾತುಗಳಿಂದ ಆ ಸ್ವಾಮಿಯು ಕಾರಣಭೂತನಾಗಿ ತಿಳಿಯಲ್ಪಡುತ್ತಾನೆ.

೫೩–೫೬ ಆದರ ಎಡಗಡೆ ಸಿದ್ಧವಿದ್ಯಾಧರರಿಂದಲೂ, ಸುಂದರಿಯರಾದ ಅಪ್ಸರಸ್ತ್ರೀಯರ ನೃತ್ಯಸಂಗೀತಗಳಿಂದಲೂ, ಆ ಸ್ವಾಮಿಯ ಅಂಗವನ್ನು ಸೇವಿಸುವ ಆಶೆಯುಳ್ಳ ಕೃಷ್ಣನ ಮನುಷ್ಯರಿಂದಲೂ, ಮುಂದುಗಡೆಯಲ್ಲಿ ಪ್ರಹ್ಲಾದ, ನಾರದ, ಸೇನಾನಿ, ಶುಕ ಮೊದಲಾದ ವೈಷ್ಣವರಿಂದಲೂ, ಭಾವತತ್ಪರರಾದ, ಒಳಗೂ ಹೊರಗೂ

ಪ್ರಹ್ಲಾದನಾರದಾದ್ಯೈಶ್ಚ ಕುಮಾರಶುಕವೈಷ್ಣವೈಃ ।
ಜನಕಾದ್ಯೈರ್ಲಸದ್ಭಾವೈಃ ಹೃದ್ಬಾಹ್ಯಸ್ಫೂರ್ತಿತತ್ಪರೈಃ ॥ ೫೫ ॥

ಪುಲಕಾಕುಲಸರ್ವಾಂಗೈಃ ಸ್ಫುರತ್ಪ್ರೇಮರಸಾಕುಲೈಃ ।
ರಹಸ್ಯಾಮೃತಸಂಸಿಕ್ತೈಃ ಅರ್ಥಯುಗ್ಮಾಕ್ಷರೋಮನುಃ ॥ ೫೬ ॥

ಮಂತ್ರಚೂಡಾಮಣಿಃ ಪ್ರೋಕ್ತಃ ಸರ್ವಮಂತ್ರೈಕಕಾರಣಂ ।
ಸರ್ವದೇವಸ್ಯ ಮಂತ್ರಾಣಾಂ ಕೈಶೋರಮ್ಮಂತ್ರಹೇತುಕಂ ॥ ೫೭ ॥

ಸರ್ವಕೈಶೋರಮಂತ್ರಾಣಾಂ ಹೇತುಶ್ಚೂಡಾಮಣಿರ್ಮನುಃ ।
ಜಪಂ ಕುರ್ವಂತಿ ಮನಸಾ ಪೂರ್ಣಪ್ರೇಮಸುಖಾಶ್ರಯಾಃ ॥ ೫೮ ॥

ವಾಂಛಂತಿ ತತ್ಪದಾಂಭೋಜೇ ನಿಶ್ಚಲಂ ಪ್ರೇಮಸಾಧನಂ ।
ತದ್ಬಾಹ್ಯೇ ಸ್ಫಟಿಕಾದ್ಯುಚ್ಚ ಪ್ರಾಚೀರೇ ಸುಮನೋಹರೇ ॥ ೫೯ ॥

ಕುಂಕುಮೈಸ್ಸಿತರಕ್ತಾದ್ಯೈಃ ಚತುರ್ದಿಕ್ಷು ಸಮುಜ್ವಲೈಃ ।
ಶುಕ್ಲಂ ಚತುರ್ಭುಜಂ ವಿಷ್ಣುಂ ಪಶ್ಚಿಮೇ ದ್ವಾರಪಾಲಕಂ ॥ ೬೦ ॥

---

ಸ್ವಾಮಿಯನ್ನೇ ತಿಳಿಯಬಲ್ಲ ಜನಕಾದಿಗಳಿಂದಲೂ, ರೋಮಾಂಚಿತವಾದ ಅಂಗಗಳುಳ್ಳವರಾಗಿ ಪ್ರೇಮರಸವು ಉಕ್ಕುತ್ತಿರುವವರಾಗಿಯೂ, ರಹಸ್ಯದಲ್ಲಿ ಅಮೃತದಿಂದ ತೋಯ್ದವರಾಗಿಯೂ, ಇರುವ ಭಕ್ತರಿಂದ ಓಂಕಾರ ರೂಪದಲ್ಲಿ ಧ್ಯಾನವಮಾಡಲ್ಪಡುತ್ತಿದ್ದಾನೆ.

೫೭. ಸರ್ವಮಂತ್ರಗಳಿಗೂ ಮುಖ್ಯವಾದುದು ಮಂತ್ರಚೂಡಾಮಣಿಯು. ಸ್ವಾಮಿಯಾದ ವಿಷ್ಣುವಿನ ಮಂತ್ರಗಳಿಗೆಲ್ಲಾ ಕೈಶೋರಮಂತ್ರವೇ(ಬಾಲಕೃಷ್ಣಮಂತ್ರ) ಮುಖ್ಯವಾದುದು. ಎಲ್ಲದಕ್ಕೂ ಕಾರಣವಾದುದು.

೫೮. ಎಲ್ಲಾ ಕೈಶೋರಮಂತ್ರಗಳಿಗೂ (ಬಾಲಗೋಪಾಲಮಂತ್ರಗಳಿಗೂ) ಚೂಡಾಮಣಿಮಂತ್ರವೇ ಕಾರಣವು (ಮುಖ್ಯವು).

೫೯. ಪೂರ್ಣಪ್ರೇಮಸುಖವನ್ನು ಹೊಂದಿದವರು ಮನಸ್ಸಿನಲ್ಲಿಯೇ ಜಪವನ್ನು ಮಾಡುತ್ತಾರೆ. ಆ ಸ್ವಾಮಿಯ ಪಾದಗಳಲ್ಲಿ ನಿಶ್ಚಲವಾದ ಪ್ರೇಮವನ್ನೂ ಸಹ ಅಪೇಕ್ಷಿಸುತ್ತಾರೆ.

೬೦-೬೩. ಆ ಮಂಟಪದ ಹೊರಗೆ ಸ್ಫಟಿಕ ಶಿಲೆಯಿಂದ ಕುಂಕುಮವನ್ನು ಬಳಿದು ನಾಲ್ಕುಕಡೆಗಳಲ್ಲೂ ಪ್ರಕಾಶವಾಗಿರುವ ಸ್ಥಳದಲ್ಲಿ ಬೆಳ್ಳಗಿರುವ ಚತುರ್ಭುಜನಾದ

ಶಂಖಚಕ್ರಗದಾಪದ್ಮಕಿರೀಟಾದಿವಿಭೂಷಿತಂ ।
ರಕ್ತಂ ಚತುರ್ಭುಜಂ ಪದ್ಮಶಂಖಚಕ್ರಗದಾಯುಧಂ ॥ ೬೧ ॥

ಕಿರೀಟಕುಂಡಲೋದ್ದೀಪ್ತಂ ದ್ವಾರಪಾಲಕಮುತ್ತರೇ ।
ಗೌರಂ ಚತುರ್ಭುಜಂ ವಿಷ್ಣುಂ ಶಂಖಚಕ್ರಗದಾಂಬುಜಂ । ॥ ೬೨ ॥

ಕಿರೀಟಕುಂಡಲಾದ್ಯೈಶ್ಚ ಶೋಭಿತಂ ವನಮಾಲಿನಂ ।
ಪೂರ್ವದ್ವಾರೇ ದ್ವಾರಪಾಲಂ ಗೌರಂ ವಿಷ್ಣುಪ್ರಕೀರ್ತಿತಂ ॥ ೬೩ ॥

ಕೃಷ್ಣವರ್ಣಂ ಚತುರ್ಬಾಹುಂ ಶಂಖಚಕ್ರಾದಿಭೂಷಣಂ ।
ದಕ್ಷಿಣದ್ವಾರಪಾಲಂ ತು ಶ್ರೀ ವಿಷ್ಣುಂ ಕೃಷ್ಣವರ್ಣಕಂ ॥ ೬೪ ॥

ಶ್ರೀ ಕೃಷ್ಣಚರಿತಂ ಹ್ಯೇತದ್ಯಃ ಪಠೇತ್ಪ್ರಯತಶ್ಶುಚಿಃ ।
ಶೃಣುಯಾದ್ವಾಪಿ ಯೋ ಭಕ್ತ್ಯಾ ಗೋವಿಂದೇ ಲಭತೇ ಗತಿಂ ॥ ೬೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶ್ರೀಕೃಷ್ಣಚರಿತೇ ಸಪ್ತತಿತಮೋಽಧ್ಯಾಯಃ

---

ವಿಷ್ಣುವನ್ನು ಪಶ್ಚಿಮದ್ವಾರಪಾಲಕನನ್ನಾಗಿಯೂ, ಶಂಖ, ಚಕ್ರ, ಗದಾ, ಪದ್ಮ, ಕಿರೀಟಗಳುಳ್ಳ, ಕೆಂಪಗಿರುವ ಬಣ್ಣವುಳ್ಳವನಾದ, ಕಿರೀಟ, ಚತುರ್ಭುಜಗಳಿಂದ ಕೂಡಿದ, ಸ್ವಾಮಿಯನ್ನು ಉತ್ತರದ್ವಾರಪಾಲಕನನ್ನಾಗಿಯೂ ಧ್ಯಾನಿಸಬೇಕು. ಹಳದಿ ಬಣ್ಣನಾಗಿ ಚತುರ್ಭುಜವುಳ್ಳ ಶಂಖಚಕ್ರಗಳುಳ್ಳ ಕಿರೀಟ ಕುಂಡಲಗಳುಳ್ಳ ವನಮಾಲಿಯನ್ನು ಪೂರ್ವದ್ವಾರದಲ್ಲಿಯೂ ಧ್ಯಾನಿಸಬೇಕು.

೬೪. ಕಪ್ಪಗಿರುವ ಚತುರ್ಬಾಹುವುಳ್ಳ ಶಂಖಚಕ್ರಾದಿಗಳುಳ್ಳ ಸ್ವಾಮಿಯನ್ನು ದಕ್ಷಿಣದ್ವಾರದಲ್ಲಿಯೂ ಧ್ಯಾನಿಸಬೇಕು.

೬೫. ಈ ಶ್ರೀಕೃಷ್ಣನ ಚರಿತ್ರೆಯನ್ನು ಓದಿದವನೂ, ಕೇಳಿದವನೂ ಗೋವಿಂದನಲ್ಲಿ ಐಕ್ಯವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶ್ರೀಕೃಷ್ಣಚರಿತ್ರೆಯ ಎಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಏಕಸಪ್ತತಿತಮೋಽಧ್ಯಾಯಃ ॥



॥ ಶ್ರೀದೇವ್ಯುವಾಚ ॥

ಭಗವನ್ಸರ್ವಭೂತೇಶ ಸರ್ವಾತ್ಮನ್ಸರ್ವಸಂಭವ ।
ದೇವದೇವ ಮಹಾದೇವ ಸರ್ವಜ್ಞ ಕರುಣಾಕರ ॥ ೧ ॥

ತ್ವಯಾನುಕಂಪಿತೈವಾಹಂ ಭೂಯೋಽಸ್ಮ್ಯಾಹಾನುಕಂಪಯಾ।
ತ್ರೈಲೋಕ್ಯಮೋಹನಾ ಮಂತ್ರಾಃ ತ್ವಯಾ ಮೇ ಕಥಿತಾಃ ಪ್ರಭೋ ॥ ೨ ॥

ತೇನ ದೇವೇನ ಗೋಪೀಭಿಃ ಮಹಾಮೋಹನರೂಪಿಣಾ ।
ಕೇನ ಕೇನ ವಿಶೇಷೇಣ ಚಿಕ್ರೀಡೇ ತದ್ವದಸ್ವ ಮೇ ॥ ೩ ॥

॥ ಮಹಾದೇವ ಉವಾಚ ॥

ಏಕದಾ ವಾದಯನ್ವೀಣಾಂ ನಾರದೋ ಮುನಿಪುಂಗವಃ ।
ಕೃಷ್ಣಾವತಾರಮಾಜ್ಞಾಯ ಪ್ರಯಯೌ ನಂದಗೋಕುಲಂ ॥ ೪ ॥

---

### ॥ ಎಪ್ಪತ್ತೊಂದನೆಯ ಅಧ್ಯಾಯವು ॥

೧–೨. ಶ್ರೀದೇವಿಯು ಎಲೈ ಭಗವಂತನೇ ! ಸರ್ವಭೂತಗಳಿಗೆ ಒಡೆಯನೂ, ಸರ್ವಸಂಭವನೂ ಕರುಣಾಕರನೂ ಸರ್ವಜ್ಞನೂ ಆದ ಸ್ವಾಮಿಯೇ! ನೀನು ದಯೆಯನ್ನು ತೋರಿಸಿದೆ, ದಯವಿಟ್ಟು ತ್ರೈಲೋಕ್ಯವನ್ನು ಮೋಹಿಸುವ ಮಂತ್ರಗಳನ್ನೂ ಹೇಳಿದೆ.

೩. ಮಹಾಮೋಹರೂಪಿಯಾದ ಆ ಸ್ವಾಮಿಯು ಯಾವ ಯಾವ ವಿಶೇಷದಿಂದ ಎಲ್ಲೆಲ್ಲಿ ಹೇಗೆ ಕ್ರೀಡಿಸಿದನು ? ಅದನ್ನು ಹೇಳು.

೪. ಮಹಾದೇವನು ಹೇಳಿದನು—ಕೃಷ್ಣಾವತಾರವನ್ನು ತಿಳಿದು ಒಂದುಸಾರಿ ನಾರದನು ವೀಣೆಯನ್ನು ಬಾರಿಸುತ್ತಾ ನಂದಗೋಕುಲಕ್ಕೆ ಹೋದನು.

ಗತ್ವಾ ತತ್ರ ಮಹಾಯೋಗಮಾಯೇಶಂ ವಿಭುಮಚ್ಯುತಂ ।
ಬಾಲ್ಯನಾಟ್ಯಧರಂ ದೇವಂ ದದೃಶೇ ನಂದವೇಶ್ಮನಿ ॥ ೫ ॥

ಸುಕೋಮಲಪಟಾಸ್ತೀರ್ಣಹೇಮಪರ್ಯಂಕಕೋಪರಿ ।
ಶಯಾನಂ ಗೋಪಕನ್ಯಾಭಿಃ ಪ್ರೇಕ್ಷ್ಯಮಾಣಂ ಪರಾ ಮುದಾ ॥ ೬ ॥

ಅತೀವ ಸುಕುಮಾರಾಂಗಂ ಮುಗ್ಧಂ ಮುಗ್ಧವಿಲೋಚನಂ ।
ವಿಸ್ರಸ್ತನೀಲಕುಟಿಲಕುಂತಳಾವಿಲಮಂಡಲಂ ॥ ೭ ॥

ಕಿಂಚಿತ್ಸ್ಮಿತಾಂಕುರವ್ಯಂಜದೇಕದ್ವಿರದಕುಟ್ಮಲಂ ।
ಸ್ವಪ್ರಭಾಭಿರ್ಭಾಸಯನ್ತಂ ಸಮಸ್ತಭುವನೋದರಂ ॥ ೮ ॥

ದಿಗ್ವಾಸಸಂ ಸಮಾಲೋಕ್ಯ ಸೋತಿಹರ್ಷಮವಾಪ ಹ ।
ಸಂಭಾಷ್ಯ ಗೋಪತಿಂ ನಂದಮಾಹ ಸರ್ವಂ ಪ್ರಭುಪ್ರಿಯಃ ॥ ೯ ॥

ನಾರಾಯಣಪರಾಣಾಂ ತು ಜೀವನಾದ್ಯತಿದುರ್ಲಭಂ ।
ಅಸ್ಯ ಪ್ರಭಾವಮತುಲಂ ನ ಜಾನಂತೀಹ ಕೇಚನ ॥ ೧೦ ॥

---

೫. ಅಲ್ಲಿಗೆ ಹೋಗಿ ಆ ಮಹಾಯೋಗಿಯಾದ ಸ್ವಾಮಿಯನ್ನು ನಂದನಮನೆಯಲ್ಲಿ ಬಾಲನಾಟ್ಯದಲ್ಲಿರುವುದನ್ನು ಕಂಡನು.

೬. ಮನೋಹರವಾದ ಬಟ್ಟೆಯನ್ನು ಹಾಸಿರುವ ಚಿನ್ನದ ಮಂಚದಮೇಲೆ ಮಲಗಿರುವುದನ್ನೂ ಅವನನ್ನು ಗೋಪಕನ್ಯೆಯರು ಪ್ರೇಮದಿಂದ ನೋಡುತ್ತಿರುವುದನ್ನೂ ಕಂಡನು.

೭-೯. ಬಹಳ ಚೆನ್ನಾಗಿರುವ ಅವಯವಗಳುಳ್ಳ,ಅರ್ಧ ಅರಳಿದ ಕಣ್ಣುಗಳುಳ್ಳ ಸ್ವಲ್ಪ ಕೆದರಿಕೊಂಡಿರುವ ವಕ್ರವಾದ ಕಪ್ಪಾದ ಗುಂಗುರು ಕೂದಲುಳ್ಳ, ಮುಗುಳುನಗೆಯಿಂದ ಕೂಡಿದ ಒಂದೆರಡು ಹಲ್ಲುಗಳಿರುವ ಮುಖವುಳ್ಳ, ತನ್ನ ಕಾಂತಿಯಿಂದ ಆ ಮನೆಯೆಲ್ಲವನ್ನೂ ಪ್ರಕಾಶಿಸುತ್ತಿರುವ, ಬೆತ್ತಲೆಯಾಗಿರುವ, ಆ ಕೃಷ್ಣಸ್ವಾಮಿಯನ್ನು ನೋಡಿ ನಾರದನು ಬಹು ಸಂತೋಷಗೊಂಡನು. ಆಗ ಅಲ್ಲಿಗೆ ಒಡೆಯನಾದ ನಂದಗೋಪನನ್ನು ಮಾತಾಡಿಸುತ್ತಾ ಎಲ್ಲವನ್ನೂ ಹೇಳಿದನು

೧೦. ನಾರಾಯಣನಲ್ಲಿ ಮನಸ್ಸಿಟ್ಟಿರುವವರಿಗೆ ಜೀವ ಧರಿಸುವುದೇ ಕಷ್ಟವಾಗಿದೆ. ಈ ಮಗುವಿನ ಪ್ರಭಾವವನ್ನು ಇಲ್ಲಿರುವ ಅನೇಕ ಜನರು ತಿಳಿದಿಲ್ಲ.

ಭವಬ್ರಹ್ಮಾದಯೋಽಪ್ಯಸ್ಮಿನ್ರತಿಂ ವಾಂಛಂತಿ ಶಾಶ್ವತೀಂ ।
ಚರಿತಂ ಚಾಸ್ಯ ಬಾಲಸ್ಯ ಸರ್ವೇಷಾಮೇವ ಹರ್ಷಣಂ ॥ ೧೧ ॥

ಮುದಾ ಗಾಯಂತಿ ಶೃಣ್ವಂತಿ ತ್ವಭಿನಂದಂತಿ ತಾದೃಶಾಃ ।
ಅಸ್ಮಿಂಸ್ತವ ಸುತೇಽಚಿಂತ್ಯಪ್ರಭಾವೇ ಸ್ನಿಗ್ಧಮಾನಸಾಃ ॥ ೧೨ ॥

ತರಿಷ್ಯಂತಿ ನ ತೇಷಾಂ ವೈ ಭವಬಾಧಾ ಭವಿಷ್ಯತಿ ।
ಮುಂಚೇಹ ಪರಲೋಕಾಶಾಃ ಸರ್ವಾ ವಲ್ಲವಸತ್ತಮ ॥ ೧೩ ॥

ಏಕಾಂತೇನೈಕಭಾವೇನ ಬಾಲೇಽಸ್ಮಿನ್ಪ್ರೀತಿಮಾಚರ ।
ಇತ್ಯುಕ್ತ್ವಾ ನಂದಭವನಾನ್ನಿಷ್ಕ್ರಾಂತೋ ಮುನಿಪುಂಗವಃ ॥ ೧೪ ॥

ತೇನಾರ್ಚಿತೋ ವಿಷ್ಣುಬುದ್ಧ್ಯಾ ಪ್ರಣಮ್ಯ ಚ ವಿಸರ್ಜಿತಃ ।
ಅಥಾಸೌ ಚಿಂತಯಾಮಾಸ ಮಹಾಭಾಗವತೋ ಮುನಿಃ ॥ ೧೫ ॥

---

೧೧. ಶಿವ ಬ್ರಹ್ಮಾದಿಗಳೂ ಕೂಡ ಈ ಮಗುವಿನಲ್ಲಿ ಶಾಶ್ವತವಾದ ಸುಖವನ್ನು ಅಪೇಕ್ಷಿಸುತ್ತಾರೆ. ಈ ಮಗುವಿನ ಚರಿತ್ರೆಯು ಎಲ್ಲರಿಗೂ ಸಂತೋಷವನ್ನುಂಟುಮಾಡುತ್ತದೆ.

೧೨. ಆ ಬ್ರಹ್ಮನಂತಹವರು ಸಂತೋಷದಿಂದ ಈ ಮಗುವನ್ನು ಕುರಿತು ಗಾನ ಮಾಡುತ್ತಾರೆ ಅವನ ಗಾನವನ್ನು ಕೇಳುತ್ತಾರೆ. ಸಂತೋಷಪಡುತ್ತಾರೆ. ಈ ನಿನ್ನ ಮಗನು ಅಚಿಂತ್ಯ ಪ್ರಭಾವನು. ಇವನನ್ನು ಸ್ನೇಹದ ಮನಸ್ಸುಳ್ಳವರಾಗಿ ಹೊಗಳುತ್ತಾರೆ.

೧೩. ಹಾಗೆ ಹೊಗಳುವವರು ಸಂಸಾರದ ಬಾಧೆಯನ್ನು ದಾಟುತ್ತಾರೆ. ಎಲೈ ಗೊಲ್ಲರೊಡೆಯನೇ! ನೀನು ಈ ಮಗುವಿರುವಲ್ಲಿ ಬೇರೆ ವಿಧವಾದ ಪರಲೋಕದ ಆಶೆಗಳನ್ನು ಬಿಟ್ಟುಬಿಡು.

೧೪. ಏಕಭಾವದಿಂದಲೂ ಏಕಾಂತವಾಗಿಯೂ ಈ ಮಗುವಿನಲ್ಲಿ ಪ್ರೀತಿಯನ್ನಿಡು. ಹೀಗೆಂದು ಹೇಳಿ ನಂದನ ಮನೆಯಿಂದ ಆ ನಾರದರು ಹೊರಟುಹೋದರು.

೧೫. ಆಗ ಆ ಗೋಪನೂ ಕೂಡ ನಾರದನನ್ನು ವಿಷ್ಣುಬುದ್ಧಿಯಿಂದ ಅರ್ಚಿಸಿ ನಮಸ್ಕರಿಸಿದನು. ಮುನಿಯು ಹೊರಟು ಈ ರೀತಿ ಯೋಚಿಸಿದನು.

ಅಸ್ಯಕಾನ್ತಾ ಭಗವತೀ ಲಕ್ಷ್ಮೀರ್ನಾರಾಯಣೇ ಹರೌ ।
ವಿಧಾಯ ಗೋಪಿಕಾರೂಪಂ ಕ್ರೀಡಾರ್ಥಂ ಶಾರ್ಙ್ಗಧನ್ವನಃ ॥ ೧೬ ॥

ಅವಶ್ಯಮವತೀರ್ಣಾ ಸಾ ಭವಿಷ್ಯತಿ ನ ಸಂಶಯಃ ।
ತಾಮಹಂ ವಿಚಿನೋಮ್ಯದ್ಯ ಗೇಹೇ ಗೇಹೇ ವ್ರಜೌಕಸಾಂ ॥ ೧೭ ॥

ವಿಮೃಶ್ಯೈವಂ ಮುನಿವರೋ ಗೇಹಾನಿ ವ್ರಜವಾಸಿನಾಂ ।
ಪ್ರವಿವೇಶಾತಿಥಿರ್ಭೂತ್ವಾ ವಿಷ್ಣುಬುದ್ಧ್ಯಾ ಸುಪೂಜಿತಃ ॥ ೧೮ ॥

ಸರ್ವೇಷಾಂ ವಲ್ಲವಾದೀನಾಂ ರತಿಂ ನಂದಸುತೇ ಪರಾಂ ।
ದೃಷ್ಟ್ವಾ ಮುನಿವರಸ್ಸರ್ವಾನ್ಮನಸಾ ಪ್ರಣನಾಮ ಹ ॥ ೧೯ ॥

ಗೋಪಾನಾಂ ಚ ಗೃಹೇ ಬಾಲಾಂ ದದರ್ಶ ಶ್ವೇತರೂಪಿಣೀಂ ।
ಸ ದೃಷ್ಟ್ವಾ ತರ್ಕಯಾಮಾಸ ರಮಾ ಏಷಾ ನ ಸಂಶಯಃ ॥ ೨೦ ॥

ಪ್ರವಿವೇಶ ತತೋ ಧೀಮಾನ್ನಂದಸಖ್ಯುರ್ಮಹಾತ್ಮನಃ ।
ಕಸ್ಯ ಚಿದ್ಗೋಪವರ್ಯಸ್ಯ ಭಾನುನಾಮ್ನೋ ಗೃಹಂ ಮಹತ್ ॥ ೨೧ ॥

---

೧೬-೧೭. ಈ ನಾರಾಯಣನ ಹೆಂಡತಿಯಾದ ಲಕ್ಷ್ಮಿಯು ಗಂಡನನ್ನು ಕ್ರೀಡಿಸಲು ಗೋಪಿಕಾರೂಪವನ್ನು ಹೊಂದಿ ಖಂಡಿತವಾಗಿಯೂ ಅವತರಿಸಿರಲೇಬೇಕು ಆದ್ದರಿಂದ ಈ ಗೊಲ್ಲರ ಮನೆಮನೆಗೂ ಹೋಗಿ ಆಕೆಯನ್ನು ಹುಡುಕುತ್ತೇನೆ.

೧೮. ಹೀಗೆಂದು ತಿಳಿದು ಅಲ್ಲಿದ್ದವರೆಲ್ಲರೂ ಈತನನ್ನು ವಿಷ್ಣು ಬುದ್ಧಿಯಿಂದಲೇ ಪೂಜಿಸಿದರು.

೧೯. ಎಲ್ಲರೂ ಕೂಡ ನಂದನ ಮಗನಲ್ಲಿ ಪ್ರೀತಿ ಯಿಟ್ಟಿರುವುದನ್ನು ನೋಡಿ ಅವರೆಲ್ಲರನ್ನೂ ಮನಸ್ಸಿನಿಂದಲೇ ನಮಸ್ಕರಿಸಿದನು.

೨೦. ಎಲ್ಲಾ ಕಡೆಯಲ್ಲೂ ಸುತ್ತಿ ಒಂದು ಜಾಗದಲ್ಲಿ ಬೆಳ್ಳಗಿರುವ ಒಂದು ಹುಡುಗಿಯನ್ನು ನೋಡಿ ಈಕೆಯೇ ಲಕ್ಷ್ಮಿಯಿರಬಹುದೆಂದುಕೊಂಡನು.

೨೧-೨೨. ಆಗ ನಂದನ ಸ್ನೇಹಿತನಾದ ಭಾನುವೆಂಬುವನೊಬ್ಬನ ಮನೆಗೆ ಹೋದನು. ಅವನ ಮನೆಗೆ ಹೋಗಲು ಆ ಭಾನುವು ವಿಧಿವತ್ತಾಗಿ ನಾರದನ್ನು ಪೂಜಿಸಿದನು.

ಅರ್ಚಿತೋ ವಿಧಿವತ್ತೇನ ಸೋಽಪ್ಯಪೃಚ್ಛನ್ಮಹಾಮುನಾಃ ।
ಸಾಧೋ ತ್ವಮಸಿ ವಿಖ್ಯಾತೋ ಧರ್ಮನಿಷ್ಠತಯಾ ಭುವಿ ॥ ೨೨ ॥

ತವಾಽಹಂ ಧನಧಾನ್ಯಾದಿಸಮೃದ್ಧಿಂ ಸಂವಿಭಾವಯೇ ।
ಕಚ್ಚಿತ್ತೇ ಯೋಗ್ಯಪುತ್ರೋಽಸ್ತಿ ಕನ್ಯಾ ವಾ ಶುಭಲಕ್ಷಣಾ ॥ ೨೩ ॥

ಯತಸ್ತೇ ಕೀರ್ತಿರಖಿಲಂ ಲೋಕಂ ವ್ಯಾಪ್ಯ ಭವಿಷ್ಯತಿ ।
ಇತ್ಯುಕ್ತೋ ಮುನಿವರ್ಯೇಣ ಭಾನುರಾನೀಯ ಪುತ್ರಕಂ ॥ ೨೪ ॥

ಮಹಾತೇಜಸ್ವಿನಂ ದೃಷ್ಟ್ವಂ ನಾರದಾಯಾಭ್ಯವಾದಯತ್ ।
ದೃಷ್ಟ್ವಾ ಮುನಿವರಸ್ತಂ ತು ರೂಪೇಣಾಪ್ರತಿಮಂ ಭುವಿ ॥ ೨೫ ॥

ಪದ್ಮಪತ್ರವಿಶಾಲಾಕ್ಷಂ ಸುಗ್ರೀವಂ ಸುಂದರಭ್ರುವಂ ।
ಚಾರುದಂತಂ ಚಾರುಕರ್ಣಂ ಸರ್ವಾವಯವಸುಂದರಂ ॥ ೨೬ ॥

ತಂ ಸಮಾಶ್ಲಿಷ್ಯ ಬಾಹುಭ್ಯಾಂ ಸ್ನೇಹಾಶ್ರೂಣಿ ವಿಮುಚ್ಯ ಚ ।
ತತಸ್ಸ ಗದ್ಗದಂ ಪ್ರಾಹ ಪ್ರಣಯೇನ ಮಹಾಮುನಿಃ ॥ ೨೭ ॥

---

ಆಗ ನಾರದನು ಇಂತೆಂದನು. ಎಲೈ ಸಾಧುವೇ ನೀನು ಧರ್ಮದರೀತಿಯಿಂದ ಲೋಕದಲ್ಲಿ ಪ್ರಸಿದ್ಧನಾಗಿದ್ದೀಯೆ.

೨೩. ನಿನಗೆ ಧನಧಾನ್ಯಗಳಿಗೆ ಕೊರತೆಯಿಲ್ಲವೆಂದು ನನಗೆ ತೋರುತ್ತದೆ. ನಿನಗೆ ಯೋಗ್ಯನಾದ ಮಗನಾಗಲೀ ಸುಂದರಿಯಾದ ಮಗಳಾಗಲೀ ಇದ್ದಾರೆಯೇ ? ಏಕೆಂದರೆ ನಿನ್ನ ಕೀರ್ತಿಯು ಬಹುವಾಗಿ ಲೋಕವನ್ನು ವ್ಯಾಪಿಸಬೇಕು.

೨೪ ನಾರದನು ಇಂತೆನ್ನಲು ಭಾನುವು ಜಂಬಗಾರನಾದ ಒಬ್ಬ ಮಗನನ್ನು ಕರೆತಂದು ನಾರದನಿಗೆ ನಮಸ್ಕಾರ ಮಾಡಿಸಿದನು.

೨೫-೨೬. ರೂಪವಂತನೂ, ಪದ್ಮಪತ್ರದಂತೆ ವಿಶಾಲವಾದ ಕಣ್ಣುಳ್ಳವನೂ ಕತ್ತು ಕಣ್ಣುಗಳು ಚೆನ್ನಾಗಿಯೂ ಹಲ್ಲು ಕಿವಿಗಳು ಸೊಗಸಾಗಿಯೂ ಇರುವ ಆ ಮಗುವನ್ನು ನೋಡಿದನು

೨೭. ಆ ಮಗುವನ್ನು ನಾರದನು ಆಲಂಗಿಸಿಕೊಂಡು ಸ್ನೇಹದಿಂದ ಕಣ್ಣೀರು ಸುರಿಸಿ ಆಮೇಲೆ ಗದ್ಗದ ಧ್ವನಿಯಿಂದ ಹೇಳಿದನು.

ನಾರದ ಉವಾಚ

ಅಯಂ ಶಿಶುಸ್ತೇ ಭವಿತಾ ಸುಸಖಾ ರಾಮಕೃಷ್ಣಯೋಃ ।
ವಿಹರಿಷ್ಯತಿ ತಾಭ್ಯಾಂ ಚ ರಾತ್ರಿಂದಿವಮತಂದ್ರಿತಃ ॥ ೨೮ ॥

ತತ ಆಭಾಷ್ಯ ತಂ ಗೋಪಪ್ರವರಂ ಮುನಿಪುಂಗವಃ ।
ಯದಾ ಗನ್ತುಂ ಮನಶ್ಚಕ್ರೇ ತತ್ರೈವಂ ಭಾನುರಬ್ರವೀತ್ ॥ ೨೯ ॥

॥ ಭಾನುರುವಾಚ ॥

ಏಕಾಸ್ತಿ ಪುತ್ರಿಕಾ ದೇವ ದೇವಪತ್ನ್ಯುಪಮಾ ಮಮ ।
ಕನೀಯಸೀ ಶಿಶೋರಸ್ಯ ಜಡಾಂಧಬಧಿರಾಕೃತಿಃ ॥ ೩೦ ॥

ಉತ್ಸಾಹಾದ್ವೃದ್ಧಯೇ ಯಾಚೇ ತ್ವಾಂ ವರಂ ಭಗವತ್ತಮಂ ।
ಪ್ರಸನ್ನದೃಷ್ಟಿಮಾತ್ರೇಣ ಸುಸ್ಥಿರಾಂ ಕುರು ಬಾಲಿಕಾಂ ॥ ೩೧ ॥

ಶ್ರುತ್ವೈವಂ ನಾರದೋ ವಾಕ್ಯಂ ಕೌತುಕಾಕೃಷ್ಟಮಾನಸಃ ।
ಅಥ ಪ್ರವಿಶ್ಯ ಭವನಂ ಲುಠಂತೀಂ ಭೂತಲೇ ಸುತಾಂ ॥ ೩೨ ॥

---

೨೮. ನಾರದನು ಹೇಳಿದನು— ಈ ನಿನ್ನ ಮಗನು ರಾಮಕೃಷ್ಣರಿಗೆ ಸ್ನೇಹಿತನಾಗುತ್ತಾನೆ. ಹಗಲೂ ರಾತ್ರಿಯೂ ಅವರೊಡನೆಯೇ ವಿಹರಿಸುತ್ತಾನೆ.

೨೯. ನಾರದನು ಹೋಗುತ್ತೇನೆಂದು ಹೊರಟಾಗ ಭಾನುವು ಪುನಃ ಇಂತೆಂದನು.

೩೦ ಭಾನುವು ಹೇಳಿದನು— ಸ್ವಾಮಿ ದೇವತಾಸ್ತ್ರೀಯಂತೆ ಇರುವ ಒಬ್ಬ ಮಗಳಿದ್ದಾಳೆ. ಅವಳು ಈ ಹುಡುಗನ ತಂಗಿಯು ಜಡಳು, ಕಿವುಡಿಯೂ, ಮೂಗಿಯೂ ಆಗಿದ್ದಾಳೆ.

೩೧. ಮನಸ್ಸಿನಲ್ಲಿ ಒಂದು ವಿಧವಾದ ಸಂತೋಷವುಂಟಾಗಲು ತಮ್ಮನ್ನು ಕೇಳಿಕೊಳ್ಳುತ್ತೇನೆ. ಅನುಗ್ರಹಮಾಡಿ ಆಕೆಯ ಬುದ್ಧಿಯನ್ನು ಸರಿಯಾಗಿ ಮಾಡಿ ಕೊಡಿ, ಎಂದನು.

೩೨-೩೩. ನಾರದನು ಈ ಮಾತನ್ನು ಕೇಳಿ ಆಶ್ಚರ್ಯಗೊಂಡನು. ಅನಂತರ ಮನೆಗೆ ಹೋಗಿ ನೆಲದಮೇಲೆ ಬಿದ್ದು ಹೊರಳಾಡುತ್ತಿರುವ ಆ ಹುಡುಗಿಯನ್ನೆತ್ತಿ

ಉತ್ಥಾಪ್ಯಾಂಕೇ ನಿಧಾಯಾತಿಸ್ನೇಹವಿಹ್ವಲಮಾನಸಃ ।
ಭಾನುರಪ್ಯಾಯಯೌ ಭಕ್ತಿನಮ್ರೋ ಮುನಿವರಾನ್ತಿಕಂ ॥ ೩೩ ॥

ಅಥ ಭಾಗವತಶ್ರೇಷ್ಠಃ ಕೃಷ್ಣಸ್ಯಾತಿಪ್ರಿಯೋ ಮುನಿಃ ।
ದೃಷ್ಟ್ವಾ ತಸ್ಯಾಃ ಪರಂ ರೂಪಮದೃಷ್ಟಾಶ್ರುತಮದ್ಭುತಂ ॥ ೩೪ ॥

ಅಭೂತ್ಪೂರ್ವಸಮಂ ಮುಗ್ಧೋ ಹರಿಪ್ರೇಮಾ ಮಹಾಮುನಿಃ ।
ವಿಗಾಹ್ಯ ಪರಮಾನಂದಸಿಂಧುಮೇಕರಸಾಯನಂ ॥ ೩೫ ॥

ಮುಹೂರ್ತದ್ವಿತಯಂ ತತ್ರ ಮುನಿರಾಸೀಚ್ಛಿಲೋಪಮಃ ।
ಮುನೀಂದ್ರಃ ಪ್ರತಿಬುದ್ಧಸ್ತು ಶನೈರುನ್ಮೀಲ್ಯ ಲೋಚನೇ ॥ ೩೬ ॥

ಮಹಾವಿಸ್ಮಯಮಾಪನ್ನಸ್ತೂಷ್ಣೀಮೇವ ಸ್ಥಿತೋಭವತ್ ।
ಅನ್ತರ್ಹೃದಿ ಮಹಾಬುದ್ಧಿರೇವಮೇವಂ ವ್ಯಚಿಂತಯತ್ ॥ ೩೭ ॥

ಭ್ರಾನ್ತಂ ಸರ್ವೇಷು ಲೋಕೇಷು ಮಯಾ ಸ್ವಚ್ಛನ್ದ ಚಾರಿಣಾ ।
ಅಸ್ಯಾ ರೂಪೇಣ ಸದೃಶೀ ದೃಷ್ಟಾ ನೈವ ಚ ಕುತ್ರಚಿತ್ ॥ ೩೮ ॥

---

ಕೊಂಡು ತೊಡೆಯ ಮೇಲಿಟ್ಟುಕೊಂಡನು. ಭಾನುವೂ ಕೂಡ ಭಕ್ತಿಯಿಂದ ಹತ್ತಿರಕ್ಕೆ ಬಂದನು

೩೪. ಹರಿಯಲ್ಲಿ ಪ್ರೀತಿಯುಳ್ಳ ಆ ಋಷಿಯಾದ ನಾರದನು ಆ ಮಗುವಿನ ಉತ್ತಮವಾದ ರೂಪವನ್ನು ನೋಡಿ ಈ ರೂಪವು ಅದೃಷ್ಟವೂ ಅಶ್ರುತಪೂರ್ವವೂ ಎಂದುಕೊಂಡನು.

೩೫. ಹರಿಯಲ್ಲಿ ಪ್ರೀತಿಯುಳ್ಳ ಆ ಋಷಿಯು ಮೊದಲಿನಂತೆ ಕಳವಳಪಟ್ಟು ಆನಂದಾಬ್ಧಿಯಲ್ಲಿ ಮುಳುಗಿದನು.

೩೬. ಆ ನಾರದನು ಒಂದೆರಡು ಮುಹೂರ್ತಗಳವರೆಗೆ ಕಲ್ಲಿನಂತೆ ಸ್ತಬ್ಧನಾಗಿ ಬಿಟ್ಟನು. ಅನಂತರ ಎಚ್ಚೆತ್ತು ಕಣ್ಣುಗಳನ್ನು ಮೆಲ್ಲಗೆ ಬಿಟ್ಟನು.

೩೭. ಒಳಗೆ ಆಶ್ಚರ್ಯಪಟ್ಟು ಮೇಲೆ ಸುಮ್ಮನಿದ್ದನು. ಮಹಾಬುದ್ಧಿಯುಳ್ಳ ಈ ಋಷಿಯು ಮನಸ್ಸಿನಲ್ಲಿಯೇ ಈ ರೀತಿ ಯೋಚಿಸಿದನು.

೩೮. ಸ್ವಚ್ಛಂದಚಾರಿಯಾದ ನಾನು ಎಲ್ಲೆಡೆಯಲ್ಲೂ ಸುತ್ತಿದೆನು. ಈಕೆಯ ರೂಪಕ್ಕೆ ಸಮವಾದ ರೂಪವನ್ನು ಎಲ್ಲಿಲ್ಲೂ ನೋಡಲೇ ಇಲ್ಲ.

ಬ್ರಹ್ಮಲೋಕೇ ರುದ್ರಲೋಕ ಇಂದ್ರಲೋಕೇ ಚ ಮೇ ಗತಿಃ ।
ನ ಕೋಽಪಿ ಶೋಭಾ ಕೋಟ್ಯಂಶಃ ಕುತ್ರಾಪ್ಯಸ್ಯಾ ವಿಲೋಕಿತಃ ॥ ೩೯ ॥

ಮಹಾಮಾಯಾ ಭಗವತೀ ದೃಷ್ಟಾ ಶೈಲೇಂದ್ರನಂದಿನೀ ।
ಯಸ್ಯಾ ರೂಪೇಣ ಸಕಲಂ ಮುಹ್ಯತೇ ಸ ಚರಾಚರಂ ॥ ४೦ ॥

ಸಾಪ್ಯಸ್ಯಾಃ ಸುಕುಮಾರಾಂಗಿ ಲಕ್ಷ್ಮೀಂ ನಾಪ್ನೋತಿ ಕರ್ಹಿಚಿತ್ ।
ಲಕ್ಷ್ಮೀಸ್ಸರಸ್ವತೀಕಾನ್ತಿವಿದ್ಯಾದ್ಯಾಶ್ಚ ವರಸ್ತ್ರಿಯಃ ॥ ४೧ ॥

ಛಾಯಾಮಪಿ ಸ್ಪೃಶಂತ್ಯಶ್ಚ ಕದಾಚಿನ್ನೈವ ದೃಶ್ಯತ್ಯೈತೇ ।
ವಿಷ್ಣೋರ್ಯನ್ಮೋಹನಂ ರೂಪಂ ಹರೋ ಯೇನ ವಿಮೋಹಿತಃ ॥ ४೨ ॥

ಮಯಾ ದೃಷ್ಟಂ ಚ ತದಪಿ ಕುತೋಽಸ್ಯಾಸ್ಸದೃಶಂ ಭವೇತ್ ।
ತತೋಽಸ್ಯಾಸ್ತತ್ವಮಾಜ್ಞಾತುಂ ನ ಮೇ ಶಕ್ತಿಃ ಕಥಂಚನ ॥ ४೩ ॥

ಅನ್ಯೇ ಚಾಪಿ ನ ಜಾನಂತಿ ಪ್ರಾಯೇಣೈನಾಂ ಹರೇಃ ಪ್ರಿಯಾಂ ।
ಅಸ್ಯಾಸ್ಸಂದರ್ಶನಾದೇವ ಗೋವಿಂದ ಚರಣಾಂಬುಜೇ ॥ ४४ ॥

---

೩೯. ಬ್ರಹ್ಮ, ಇಂದ್ರ, ರುದ್ರಲೋಕಗಳಿಗೆಲ್ಲಾ ಹೋಗಿದ್ದೇನೆ. ಈಕೆಯ ರೂಪಿನಲ್ಲಿ ಕೋಟ್ಯಂಶದ ಒಂದಂಶವನ್ನೂ ಯಾರಲ್ಲಿಯೂ ನೋಡಲಿಲ್ಲ

४೦. ಚರಾಚರಗಳು ಮೋಹಗೊಳ್ಳುವ ಮಹಾಮಾಯಳಾದ ಪಾರ್ವತಿಯನ್ನು ನೋಡಿದ್ದೇನೆ.

४೧–४೩. ಆ ಗೌರಿಯೂ ಕೂಡ ಈ ಲಕ್ಷ್ಮಿಯ ರೂಪವನ್ನು ಹೊಂದ ಲಾರಳು. ಲಕ್ಷ್ಮಿ, ಸರಸ್ವತಿ, ಕಾನ್ತಿ, ಇವರೇ ಮುಂತಾದ ಉತ್ತಮ ಸ್ತ್ರೀಯರ ಈಕೆಯ ಕಾಂತಿಯ ನೆರಳನ್ನೂ ಮುಟ್ಟಲಾರರು. ವಿಷ್ಣುವು ಮೋಹಸಿರೂಪವನ್ನೂ ತಾಳಿದುದನ್ನು ನೋಡಿದೆನು. ಹರನು ಅದನ್ನು ಮೋಹಿಸಿದುದನ್ನೂ ನೋಡಿದೆನು. ಆದರೆ ಈ ರೂಪಕ್ಕೆ ಅದೂ ಸಮವಾಗಲಾರದು. ಆದ್ದರಿಂದ ಈಕೆಯ ತತ್ವವನ್ನು ತಿಳಿಯಲು ನನಗೆ ಶಕ್ತಿಯಿಲ್ಲವಲ್ಲ.

४४ ४೫. ಮಿಕ್ಕವರೂ ಕೂಡ ಈ ಹರಿಯ ಪ್ರಿಯಳನ್ನು ತಿಳಿಯಲಾರರು. ಈಕೆಯನ್ನು ನೋಡಿದೊಡನೆಯೇ ಗೋವಿಂದನ ಪಾದಗಳಲ್ಲುಂಟಾದ ಪ್ರೀತಿಯುಂಟಾ

ಯಾ ಪ್ರೇಮಮೂರ್ಧ್ನಿರಭೂತ್ಸಾನೋ ಭೂತಪೂರ್ವಾ ನ ಕರ್ಹಿಚಿತ್ ।
ಏಕಾಂತೇ ನೌಮಿ ಭವತೀಂ ದರ್ಶಯಿತ್ವಾತಿವೈಭವಂ ॥ ೪೫ ॥

ಕೃಷ್ಣಸ್ಯ ಸಂಭವತ್ಯಸ್ಯಾ ರೂಪಂ ಪರಮತುಷ್ಟಯೇ ।
ವಿಮೃಶ್ಯೈವಂ ಮುನಿರ್ಗೋಪಪ್ರವರಂ ಪ್ರೇಷ್ಯ ಕುತ್ರಚಿತ್ ॥ ೪೬ ॥

ನಿಭೃತೇ ಪರಿತುಷ್ಟಾವ ಬಾಲಿಕಾಂ ದಿವ್ಯರೂಪಿಣೀಂ ।
ಅಪಿದೇವಿ ಮಹಾಯೋಗೇ ಮಾಯೇಶ್ವರಿ ಮಹಾಪ್ರಭೇ ॥ ೪೭ ॥

ಮಹಾಮೋಹನದಿವ್ಯಾಂಗಿ ಮಹಾಮಾಧುರ್ಯವರ್ಷಿಣಿ ।
ಮಹಾದ್ಭುತರಸಾನಂದ ಶಿಥಿಲೀಕೃತಮಾನಸೇ ॥ ೪೮ ॥

ಮಹಾಭಾಗ್ಯೇನ ಕೇನಾಪಿ ಗತಾಸಿ ಮಮ ದೃಕ್ಪಥಂ ।
ನಿತ್ಯಮನ್ತಸ್ಸುಖಾದೃಷ್ಟಿಸ್ತವ ದೇವೀ ವಿಭಾವ್ಯತೇ ॥ ೪೯ ॥

ಅನ್ತರೇವ ಮಹಾನಂದ ಪರಿತೃಪ್ತೈವ ಲಕ್ಷ್ಯಸೇ ।
ಪ್ರಸನ್ನಂ ಮಧುರಂ ಸೌಮ್ಯಮಿದಂ ತೇ ಮುಖಮಂಡಲಂ ॥ ೫೦ ॥

---

ಯಿತು. ಇಂತಹ ಭಕ್ತಿಯು ನನಗೆ ಯಾವಾಗಲೂ ಆಗಿರಲಿಲ್ಲ. ಮನಸ್ಸಿನಲ್ಲೇ ಹೊಗಳಿ ಈಕೆಯನ್ನು ನಮಸ್ಕರಿಸುತ್ತೇನೆ.

೪೬–೫೦. ಈ ರೂಪವು ಕೃಷ್ಣನಿಗೆ ಸಂತೋಷವನ್ನುಂಟುಮಾಡುತ್ತದೆ. ಈ ರೀತಿ ಯೋಚಿಸಿ ಆ ಭಾನುಗೋಪನನ್ನು ಎಲ್ಲಿಗೋ ಕಳುಹಿಸಿ ಏಕಾಂತದಲ್ಲಿ ಆ ಹುಡುಗಿಯನ್ನು ಸ್ತೋತ್ರಮಾಡಿದನು. ಮಹಾಯೋಗವುಳ್ಳ, ಮಾಯೆಗಳಿಗೆ ಒಡೆಯಳಾದ, ಮಹಾಕಾಂತಿಯುಳ್ಳ, ಮಹಾಸುಂದರಿಯಾದ, ಮಾಧುರ್ಯವನ್ನು ಸುರಿಸುವ ಮಾತುಳ್ಳ, ಅದ್ಭುತವಾದ ರಸವುಳ್ಳ, ಆನಂದದಲ್ಲಿಯೂ ತೊಡಗದ ಮನಸ್ಸುಳ್ಳ, ಎಲೈ ಲಕ್ಷ್ಮಿಯೇ ನಾನು ಮಾಡಿದ ಮಹಾಭಾಗ್ಯದಿಂದ ನಿನ್ನ ದರ್ಶನವನ್ನು ಮಾಡಿದೆನು ಎಲೈ ದೇವಿಯೇ ಅಂತಸ್ಸುಖದಲ್ಲೇ ನಿನ್ನ ದೃಷ್ಟಿಯಿರುವಂತೆ ಕಾಣುತ್ತದೆ. ನಿನಗೆ ಅಂತರಂಗದಲ್ಲಿಯೇ ತೃಪ್ತಿಯಿರುವಂತೆ ಕಾಣುತ್ತದೆ. ನಿನ್ನ ಮುಖವು ಮಧುರವಾಗಿಯೂ ಸೌಮ್ಯವಾಗಿಯೂ ಕಾಣುತ್ತದೆ.

ವ್ಯನಕ್ತಿ ಪರಮಾಶ್ಚರ್ಯಂ ಕಮಪ್ಯಂತಸ್ಸುಖೋದಯಂ ।
ರಜಸ್ಸಂಬಂಧಕಲಿಕಾ ಶಕ್ತಿಸ್ತುತ್ವಾತಿಶೋಭಸೇ ॥ ೫೧ ॥

ಸೃಷ್ಟಿಸ್ಥಿತಿಸಮಾಹಾರರೂಪಿಣೀ ತ್ವಮಧಿಷ್ಠಿತಾ ।
ತತ್ವಂ ವಿಶುದ್ಧಸತ್ವಾ ಸುಶಕ್ತಿರ್ವಿದ್ಯಾತ್ಮಿಕಾ ಪರಾ ॥ ೫೨ ॥

ಪರಸಾನಂದಸಂದೋಹಂ ದಧತೀ ವೈಷ್ಣವಂ ಪರಂ ।
ಕಲಯಾಶ್ಚರ್ಯವಿಭವೇ ಬ್ರಹ್ಮರುದ್ರಾದಿ ದುರ್ಗಮೇ ॥ ೫೩ ॥

ಯೋಗೀಂದ್ರಾಣಾಂ ಧ್ಯಾನಪಥಂ ನ ತ್ವಂಸ್ಪೃಶಸಿ ಕರ್ಹಿಚಿತ್ ।
ಇಚ್ಛಾಶಕ್ತಿಜ್ಞಾನಶಕ್ತಿಃ ಕ್ರಿಯಾಶಕ್ತಿಸ್ತವೇಶಿತುಃ ॥ ೫೪ ॥

ತವಾಂಶಮಾತ್ರಮಿತ್ಯೇವಂ ಮನೀಷಾ ಮೇ ಪ್ರವರ್ತತೇ ।
ಮಯಾ ವಿಭೂತಯೋ ಚಿಂತಾಸ್ತನ್ಮಾಯಾರ್ಭಕಮಾಯಿನಃ ॥ ೫೫ ॥

ಪರೇಶಸ್ಯ ಮಹಾವಿಷ್ಣೋಃ ತಾಸ್ಸರ್ವಾಸ್ತೇಕಲಾಃ ಕಲಾ ।
ಆನಂದರೂಪಿಣೀ ಶಕ್ತಿಸ್ತ್ವಮೀಶ್ವರೀ ನ ಸಂಶಯಃ ॥ ೫೬ ॥

---

೫೧. ಅಂತಃಸುಖವುಂಟಾಗಿ ಯಾವುದೋ ಪರಮಾಶ್ಚರ್ಯವನ್ನುಂಟುಮಾಡು ತ್ತಲಿದೆ. ರಜೋಗುಣದ ಸಂಬಂಧವುಳ್ಳ ಆ ಚೂರುಗಳು ನಿನ್ನಲ್ಲಿ ಸ್ವಲ್ಪ ಸ್ವಲ್ಪ ಕಾಣುತ್ತಿವೆ.

೫೨. ಪ್ರಪಂಚವನ್ನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವವಳೇ ನೀನು. ಆ ನೀನು ಶುದ್ಧಸತ್ವರೂಪಳು. ಶಕ್ತಿ ಮತ್ತು ವಿದ್ಯೆಯ ಸ್ವರೂಪಳು.

೫೩. ನೀನು ವೈಷ್ಣವ ಪರಮಾನಂದವನ್ನು ಹೊಂದಿದ್ದೀಯೆ. ಬ್ರಹ್ಮರುದ್ರರಿಗೂ ತಿಳಿಯಲಸಾಧ್ಯವಾದ ವಿದ್ಯೆಗಳನ್ನು ಧರಿಸಿದ್ದೀಯೆ.

೫೪. ಯೋಗೀಂದ್ರರ ಧ್ಯಾನಕ್ಕೂ ನೀನು ಸಿಕ್ಕುವುದಿಲ್ಲ. ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಸ್ವರೂಪಿಣಿಯಾಗಿದ್ದೀಯೆ.

೫೫. ನಿನ್ನ ರೀತಿಗಳು ನನಗೆ ತಿಳಿಯುವುದಿಲ್ಲ. ಆ ಮಾಯಾ ಮಗುವಾಗಿರುವ ವಿಷ್ಣುವಿನ ಅಂಶಕ್ಕೋಸ್ಕರ ಈ ರೀತಿಯ ಅಂಶವೆಂದು ನನಗೆ ಕಾಣುತ್ತದೆ.

೫೬. ಪರಮಾತ್ಮನಾದ ಆ ವಿಷ್ಣುವಿನ ಕಲೆಗಳು ಇಲ್ಲಿರತಕ್ಕವುಗಳೆಂದು ಕಾಣುತ್ತದೆ. ಆ ವಿಷ್ಣುವಿಗೆ ನೀನು ಆನಂದರೂಪಶಕ್ತಿಯೆಂದೂ ತಿಳಿಯುತ್ತದೆ.

ತ್ವಯಾ ಚ ಕ್ರೀಡತೇ ಕೃಷ್ಣೋ ನೂನಂ ವೃಂದಾವನೇ ವನೇ ।
ಕೌಮಾರೇಣೈವರೂಪೇಣ ತ್ವಂ ವಿಶ್ವಸ್ಯ ಚ ಮೋಹಿನೀ ॥ ೫೭ ॥

ತಾರುಣ್ಯವಯಸಾ ಸ್ಪೃಷ್ಟಂ ಕೀದೃಕ್ತೇ ರೂಪಮದ್ಭುತಂ ।
ಕೀದೃಶಂ ತವ ಲಾವಣ್ಯಂ ಲೀಲಾಹಾಸೇಕ್ಷಣಾನ್ವಿತಂ ॥ ೫೮ ॥

ಹರಿವ್ಯಾಮೋಹನಪಲೋಭೇನ ಪರಾಶ್ಚರ್ಯಮಯಂ ಭವೇತ್ ।
ದ್ರಷ್ಟುಂ ತದಹಮಿಚ್ಛಾಮಿ ರೂಪಂ ತೇ ಹರಿವಲ್ಲಭಂ ॥ ೫೯ ॥

ಯೇನ ನಂದಸುತಃ ಕೃಷ್ಣೋ ಮೋಹಂ ಸಮುಪಯಾಸ್ಯತೇ ।
ಇದಾನೀಂ ಮಮ ಕಾರುಣ್ಯಾನ್ನಿಜರೂಪಂ ಮಹೇಶ್ವರಿ ॥ ೬೦ ॥

ಪ್ರಣತಾಯ ಪ್ರಸನ್ನಾಯ ಪ್ರಕಾಶಯಿತುಮರ್ಹಸಿ ।
ಇತ್ಯುಕ್ತ್ವಾ ಮುನಿವರ್ಯೇಣ ತದನುವ್ರತಚೇತಸಾ ॥ ೬೧ ॥

ಮಹಾಮಹೇಶ್ವರೀಂ ನತ್ವಾ ಮಹಾನಂದಮಯೀಂ ಪರಾಂ ।
ಮಹಾಪ್ರೇಮಭರೋತ್ಕಂಠಾವ್ಯಾಕುಲಾಂಗೀಂ ಶುಭೇಕ್ಷಣಾಂ ॥ ೬೨ ॥

---

೫೭. ವೃಂದಾವನ ವನದಲ್ಲಿ ಕೃಷ್ಣನು ನಿನ್ನೊಡನೆ ಕ್ರೀಡಿಸುತ್ತಾನೆ. ಚಿಕ್ಕ ವಯಸ್ಸಿನ ರೂಪದಲ್ಲಿಯೇ ನೀನು ಲೋಕವನ್ನೇ ಮೋಹಿಸುವಂತೆ ಮಾಡುತ್ತಿದ್ದೀಯೆ.

೫೮. ತಾರುಣ್ಯವು ಬಂದಮೇಲೆ ನಿನ್ನ ಸೌಂದರ್ಯವು ಎಷ್ಟು ಅದ್ಭುತವಾಗುತ್ತದೆ! ಆಗ ಲೀಲಾಹಾಸದಿಂದ ಕೂಡಿದ ನಿನ್ನ ಲಾವಣ್ಯವು ಹೇಗಿರುತ್ತದೆ!

೫೯. ನೀನು ಹರಿಯನ್ನು ರೂಪದಿಂದ ಮೋಹಿಸಿದಾಗ ಹರಿಯನ್ನೂ ಮನುಷ್ಯನೆಂದು ತಿಳಿದು ಇತರರು ಆಶ್ಚರ್ಯಪಡುತ್ತಾರೆ. ಆಗಿನ ಹರಿಗೆ ಪ್ರೀತಿಪಾತ್ರವಾದ ನಿನ್ನ ಆ ಸೌಂದರ್ಯವನ್ನೂ ನಾನು ನೋಡಲು ಬಹಳ ಇಚ್ಛಿಸುತ್ತೇನೆ.

೬೦ ೬೬. ಯಾವ ರೂಪಿನಿಂದ ನಂದಸುತನಾದ ಕೃಷ್ಣನು ಮೋಹಗೊಳ್ಳುವನೋ ಆ ರೂಪವನ್ನು ಈಗ ಕೃಪೆಯಿಂದ ನಮಸ್ಕರಿಸುತ್ತಿರುವ ಭಕ್ತನಾದ ನನಗೆ ತೋರಿಸು. ಇಂತೆಂದು ಹೇಳಿ ಆಕೆಯಲ್ಲಿ ಭಕ್ತಿಪೂರ್ವಕವಾದ ಮನಸ್ಸುಳ್ಳವನಾಗಿ ಮಹಾ ಮಾಹೇಶ್ವರಿಯೂ, ಆನಂದಮಯಿಯೂ ಆದ ಆಕೆಯನ್ನು ನಮಿಸಿ ಪ್ರೇಮದಿಂದ ಕೂಡಿರುವ ಆಕೆಯನ್ನು ನೋಡುತ್ತಾ ಗೋವಿಂದನನ್ನು ಹೀಗೆ ವರ್ಣಿಸುತ್ತಿದ್ದನು. ಕೃಷ್ಣನೇ! ಮನೋಹಾರಿಯೇ! ನಿನಗೆ ಜಯವಾಗಲಿ. ವೃಂದಾವನದಲ್ಲಿ

ಈಕ್ಷಮಾಣೇನ ಗೋವಿಂದಮೇವಂ ವರ್ಣಯತಾ ಸ್ಥಿತಂ ।
ಜಯಕೃಷ್ಣ ಮನೋಹಾರಿನ್ಜಯ ವೃಂದಾವನಪ್ರಿಯ ॥ ೬೩ ॥

ಜಯ ಭ್ರೂಭಂಗಲಲಿತ ಜಯ ವೇಣುರವಾಕುಲ ।
ಜಯ ಬರ್ಹಕೃತೋತ್ತಂಸ ಜಯ ಗೋಪೀವಿಮೋಹನ ॥ ೬೪ ॥

ಜಯ ಕುಂಕುಮಲಿಪ್ತಾಂಗ ಜಯ ರತ್ನವಿಭೂಷಣ ।
ಕದಾಹಂ ತ್ವತ್ಪ್ರಸಾದೇನ ತ್ವನಯಾ ದಿವ್ಯರೂಪಯಾ ॥ ೬೫ ॥

ಸಹಿತಂ ನವತಾರುಣ್ಯಮನೋಹರವಪುಶ್ರಿಯಾ ।
ವಿಲೋಕಯಿಷ್ಯೇ ಕೈಶೋರ ಮೋಹನ ತ್ವಾಂ ಜಗತ್ಪತೇ ॥ ೬೬ ॥

ಏವಂ ಕೀರ್ತಯತಸ್ತಸ್ಯ ತತ್ಕ್ಷಣಾದೇವ ಸಾ ಪುನಃ ।
ಬಭೂವ ದಧತೀ ದಿವ್ಯಂ ರೂಪಮತ್ಯಂತಮೋಹನಂ ॥ ೬೭ ॥

ಚತುರ್ದಶಾಬ್ದವಯಸಾ ಲಲಿತಾ ಲಲಿತಂ ಪರಂ ।
ಸಮಾನವಯಸಶ್ಚಾನ್ಯಾ ಸ್ತದೈವ ವ್ರಜಬಾಲಿಕಾಃ ॥ ೬೮ ॥

---

ಪ್ರಿಯನೇ! ನಿನಗೆ ಜಯವಾಗಲಿ. ಹುಬ್ಬನ್ನು ಸೊಟ್ಟುಮಾಡಿಕೊಂಡಿರುವುದರಿಂದ ಮನೋಹರವಾದ ರೂಪವುಳ್ಳವನೇ ಜಯವಾಗಲಿ. ವೇಣುವಾದನ ಮಾಡುವವನೇ · ನಿನಗೆ ಜಯವಾಗಲಿ. ಗೋಪಿಯರಿಗೆ ಮೋಹನನೇ! ನಿನಗೆ ಜಯವಾಗಲಿ. ಕುಂಕುಮ ಲಿಪ್ತಾಂಗನೇ! ನಿನಗೆ ಶುಭವಾಗಲಿ. ರತ್ನವಿಭೂಷಣನೇ! ನಿನಗೆ ಜಯವಾಗಲಿ. ನವ ತಾರುಣ್ಯವತಿಯಾದ ಈಕೆಯೊಡನೆ ನೀನಿರುವುದನ್ನು ನಿನ್ನ ಅನುಗ್ರಹದಿಂದ ಯಾವಾಗ ನೋಡುವೆನೋ ಕಾಣೆನಲ್ಲಾ!

೬೭. ಹೀಗೆ ನಾರದನು ಹೊಗಳುತ್ತಿರಲು ಆಕ್ಷಣವೇ ಆಕೆಯು ಉತ್ತಮವಾದ ಸೌಂದರ್ಯರೂಪವನ್ನು ಧರಿಸಿದಳು.

೬೮-೬೯. ಆಕೆಯು ಹದಿನಾಲ್ಕುವರ್ಷವಯಸ್ಸುಳ್ಳ ಆಕಾರದಿಂದ ಸುಂದರವಾದ ಮೃದುವಾದ ರೂಪವನ್ನು ಹೊಂದಿದಳು. ಆ ಒಡನೆಯೇ ಗೋಕುಲದ ಬಾಲೆಯರು

ಆಗತ್ಯ ವೇಷ್ಟಯಾಮಾಸುಃ ದಿವ್ಯಭೂಷಾಂಬರಸ್ರಜಃ ।
ಮುನೀಂದ್ರಸ್ತುತಿನಿಶ್ಚೇಷ್ಟೋ ಬಭೂವಾಶ್ಚರ್ಯಮೋಹಿತಃ ॥ ೬೯ ॥

ಬಾಲಾಸ್ತಾಸ್ತು ವಯಸ್ಯಾಯಾಶ್ಚರಣಾಂಬುಕಣೈರ್ಮುನಿಂ ।
ನಿಷಿಚ್ಯ ಬೋಧಯಾಮಾಸುಃ ಊಚುಶ್ಚ ಕೃಪಯಾನ್ವಿತಾಃ ॥ ೭೦ ॥

॥ ಬಾಲಾ ಊಚುಃ ॥

ಮುನಿವರ್ಯ ಮಹಾಭಾಗ ಮಹಾಯೋಗೀಶ್ವರೇಶ್ವರ ।
ತ್ವಯ್ಯೈವ ಪರಯಾ ಭಕ್ತ್ಯಾ ಭಗವಾನ್ ಹರೀಶ್ವರಃ ॥ ೭೧ ॥

ಸೂನಮಾರಾಧಿತೋ ದೇವೋ ಭಕ್ತಾನಾಂ ಕಾಮಪೂರಕಃ ।
ಯದಿಯಂ ಬ್ರಹ್ಮರುದ್ರಾದ್ಯೈಃ ದೇವೈಸ್ಸಿದ್ಧಮುನೀಶ್ವರೈಃ ॥ ೭೨ ॥

ಮಹಾಭಾಗವತೈಶ್ಚಾನ್ಯೈಃ ದುರ್ದರ್ಶಾ ದುರ್ಗಮಾಪಿ ಚ ।
ಅತ್ಯದ್ಭುತವಯೋರೂಪ ಮೋಹಿನೀ ಹರಿವಲ್ಲಭಾ ॥ ೭೩ ॥

ಕೇನಾಪ್ಯಚಿಂತ್ಯಭಾವೇನ ತವ ದೃಷ್ಟಿಪಥಂ ಗತಾ ।
ಉತ್ತಿಷ್ಠೋತ್ತಿಷ್ಠ ವಿಪ್ರರ್ಷೇ ಧೈರ್ಯಮಾಲಂಬ್ಯ ಸತ್ವರಂ ॥ ೭೪ ॥

---

ಒಂದು ಆಕೆಯನ್ನು ಸುತ್ತುವರಿದರು. ಮುನೀಂದ್ರನು ಸ್ತುತಿಮಾಡಲಾರದವನಾಗಿ ಭ್ರಾಂತನಾಗಿ ಸುಮ್ಮನಾದನು.

೭೦ ಆ ಬಾಲೆಯರು ಆ ಲಕ್ಷ್ಮಿಯ ಪಾದವನ್ನು ತೊಳೆದ ನೀರಿನ ಹನಿಗಳನ್ನು ಆ ಮುನಿಯ ಮೇಲೆರಚಿ ಜ್ಞಾನಬರುವಂತೆ ಮಾಡಿ ಇಂತೆಂದರು.

೭೧-೭೪. ಬಾಲೆಯರು ಹೇಳಿದರು—ಮುನಿಶ್ರೇಷ್ಠನೇ! ಮಹಾ ಯೋಗೀಶ್ವರನೇ! ನಿನ್ನ ಉತ್ತಮವಾದ ಭಕ್ತಿಯಿಂದ ಹರಿಯು ಆರಾಧಿಸಲ್ಪಟ್ಟು ಇರುವನು! ನಿಶ್ಚಯವು. ಬ್ರಹ್ಮ ರುದ್ರರುಗಳಿಗೂ, ದೇವತೆಗಳಿಗೂ, ಮುನಿಗಳಿಗೂ, ಮಹಾ ಭಾಗವತರಿಗೂ, ನೋಡುವುದಕ್ಕೆ ಅಸಾಧ್ಯಳು. ಸಿಕ್ಕತಕ್ಕವಳಲ್ಲ. ಈ ಅದ್ಭುತವಾದ ವಯಸ್ಸು ರೂಪಗಳುಳ್ಳ ಹರಿವಲ್ಲಭೆಯು ಯಾವುದೋ ಒಂದು ಪುಣ್ಯ ವಿಶೇಷದಿಂದ ನಿನ್ನ ಕಣ್ಣಿಗೆ ಬಿದ್ದಿರುವಳು. ಎಲೈ ದೇವಋಷಿಯೇ ಧೈರ್ಯವನ್ನು ತಂದುಕೊಂಡು ಬೇಗನೆ ಏಳು.

ಏನಾಂ ಪ್ರದಕ್ಷಿಣೀಕೃತ್ಯ ನಮಸ್ಕುರು ಪುನಃ ಪುನಃ ।
ಕಿಂ ನ ಪಶ್ಯಸಿ ಚಾರ್ವಂಗೀಮತ್ಯಂತವ್ಯಾಕುಲಾಮಿವ ॥ ೭೫ ॥

ಅಸ್ಮಿನ್ನೇವ ಕ್ಷಣೇ ನೂನಮನ್ತರ್ಧಾನಂ ಗಮಿಷ್ಯತಿ ।
ನಾನಯಾ ಸಹ ಸಲ್ಲಾಪಃ ಕಥಂಚಿತ್ತೇ ಭವಿಷ್ಯತಿ ॥ ೭೬ ॥

ದರ್ಶನಂ ಚ ಪುನರ್ನಾಸ್ಯಾಃ ಪ್ರಾಪ್ಸ್ಯಸಿ ಬ್ರಹ್ಮಸತ್ತಮ ।
ಕಿಂತು ವೃಂದಾವನೇ ವಾಪಿ ಭಾತ್ಯಶೋಕಲತಾ ಶುಭಾ ॥ ೭೭ ॥

ಸರ್ವಕಾಲೇಪಿ ಪುಷ್ಪಾಢ್ಯಾ ಸರ್ವದಿಗ್ವ್ಯಾಪಿಸೌರಭಾ ।
ಗೋವರ್ಧನಾದದೂರೇಣ ಕುಸುಮಾಖ್ಯಸರಿತ್ತಟೇ ॥ ೭೮ ॥

ತನ್ಮೂಲೇ ಹ್ಯರ್ಧರಾತ್ರೇ ತು ದ್ರಕ್ಷ್ಯಸ್ಯಸ್ಮಾನಶೇಷತಃ ।
ಶ್ರುತ್ವೈವಂ ವಚನಂ ತಾಸಾಂ ಸ್ನೇಹವಿಹ್ವಲಚೇತಸಾಂ ॥ ೭೯ ॥

ಯಾವತ್ಪ್ರದಕ್ಷಿಣೀಕೃತ್ಯ ಪ್ರಣಮೇದ್ದಂಡವನ್ಮುನಿಃ ।
ಮುಹೂರ್ತದ್ವಿತಯಂ ಬಾಲಾಂ ನಾನಾನಿರ್ಮಾಣಶೋಭನಾಂ ॥ ೮೦ ॥

---

೭೫. ಈಕೆಯನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸು, ಏಳು, ನೀನು ಬಿದ್ದಿರುವುದನ್ನು ನೋಡಿ ವ್ಯಾಕುಲಗೊಂಡಿದ್ದಾಳೆ. ಈಕೆಯು ದರ್ಶನವನ್ನೇಕೆ ಮಾಡುವುದಿಲ್ಲ?

೭೬. ಈಕೆಯು ಈಗಲೇ ಅಂತರ್ಧಾನಳಾಗುತ್ತಾಳೆ. ಅನಂತರ ಇವಳೊಡನೆ ಮಾತನಾಡಲಾಗುವುದೇ ಇಲ್ಲ.

೭೭-೭೮ ಈಕೆಯ ದರ್ಶನವು ಮತ್ತೆ ನಿನಗಾಗುವುದಿಲ್ಲ. ಆದರೆ ಬೃಂದಾವನದಲ್ಲಿ ಒಂದು ಅಶೋಕಮರವಿದೆ. ಅದರಲ್ಲಿ ಯಾವಾಗಲೂ ಹೂವಿರುತ್ತದೆ. ಆ ಹೂವಿನ ವಾಸನೆಯು ಎಲ್ಲಾ ಕಡೆಯಲ್ಲೂ ವ್ಯಾಪಿಸಿಕೊಂಡಿರುತ್ತದೆ. ಅದು ಗೋವರ್ಧನ ಪರ್ವತಕ್ಕೆ ಸಮೀಪದಲ್ಲಿ ಕುಸುಮವೆಂಬ ನದಿಯ ದಡದಲ್ಲಿದೆ. ಅದರ ಬುಡದಲ್ಲಿ ಅರ್ಧರಾತ್ರಿಯಲ್ಲಿ ನಮ್ಮೆಲ್ಲರನ್ನೂ ನೋಡಬಹುದು,

೭೯-೮೦. ಸ್ನೇಹದಿಂದ ಕೂಡಿದ ಮನಸ್ಸುಳ್ಳ ಅವರ ಮಾತನ್ನು ಕೇಳಿ ಆ ಲಕ್ಷ್ಮಿಯನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಒಂದೆರಡು ಮುಹೂರ್ತವಾಗಲು ಅಷ್ಟರೊಳಗೆ ಮುನಿಯು ಭಾನುವನ್ನು ಕರೆದು ಇಂತೆಂದನು

ಆಹೂಯ ಭಾನುಂ ಪ್ರೋವಾಚ ನಾರದಃ ಸರ್ವಶೋಭನಾಂ ।
ಏವಂಸ್ವಭಾವಾ ಬಾಲೇಯಂ ನ ಸಾಧ್ಯಾ ದೈವತೈರಪಿ ॥ ೮೧ ॥

ಕಿಂತು ಯದ್ಗೃಹಮೇತಸ್ಯಾಃ ಪದಚಿಹ್ನವಿಭೂಷಿತಂ ।
ತತ್ರ ನಾರಾಯಣೋ ದೇವಃ ಸರ್ವದೇವಗಣೈಸ್ಸಹ ॥ ೮೨ ॥

ಲಕ್ಷ್ಮೀಶ್ಚ ವಸತೇ ನಿತ್ಯಂ ಸರ್ವಾಭಿಶ್ಚೈವ ಸಿದ್ಧಿಭಿಃ ।
ಅಸ್ಯೈ ಏನಾಂ ವರಾರೋಹಾಂ ಸರ್ವಭೂಷಣಭೂಷಣಾಂ ॥ ೮೩ ॥

ದೇವೀಮಿವ ಪರಾಂ ಗೇಹೇ ರಕ್ಷ ಯತ್ನೇನ ಸತ್ತಮ ।
ಇತ್ಯುಕ್ತ್ವಾ ಮನಸೈವೈನಾಂ ಮಹಾಭಾಗವತೋತ್ತಮಃ ॥ ೮೪ ॥

ತದ್ರೂಪಮೇವ ಸಂಸ್ಮೃತ್ಯ ಪ್ರವಿಷ್ಟೋ ಗಹನಂ ವನಂ ।
ಅಶೋಕಲತಿಕಾಮೂಲಮಾಸಾದ್ಯ ಮುನಿಪುಂಗವಃ ॥ ೮೫ ॥

ಪ್ರತೀಕ್ಷಮಾಣೋ ದೇವೀಂ ತಾಂ ತತ್ರೈವಾಗಮನೇನ ಹಿ ।
ಸ್ಥಿತೋತ್ರ ಪ್ರೇಮವಿಕಲ ಶ್ಚಿಂತಯನ್ಕೃಷ್ಣವಲ್ಲಭಾಂ ॥ ೮೬ ॥

ಅಥ ಮಧ್ಯನಿಶಾಭಾಗೇ ಯುವತ್ಯಃ ಪರಮಾದ್ಭುತಾಃ ।
ಪೂರ್ವದೃಷ್ಟಾಸ್ತಥಾನ್ಯಾಶ್ಚ ವಿಚಿತ್ರಾಭರಣಸ್ರಜಃ ॥ ೮೭ ॥

---

೮೧-೮೨. ಈ ಹುಡುಗಿಯು ಹೀಗಿರುವವಳೇನೆ. ದೇವತೆಗಳಿಂದಲೂ ಸರಿಮಾಡಲು ಸಾಧ್ಯವಿಲ್ಲ. ಆದರೆ ಈಕೆಯ ಹೆಜ್ಜೆಯಿಂದ ಪವಿತ್ರವಾದ ಈ ಮನೆಯಲ್ಲಿ ನಾರಾಯಣನು ಸರ್ವದೇವತೆಗಳೊಡನೆಯೂ ಇರುವನು. ಲಕ್ಷ್ಮಿಯು ಸರ್ವಸಿದ್ಧಿಗಳೊಡನೆಯೂ ಇರುತ್ತಾಳೆ.

೮೩. ಈ ಉತ್ತಮವಾದ ಹುಡುಗಿಯನ್ನು ದೇವರಂತೆ ಮನೆಯಲ್ಲಿ ಸರ್ವಪ್ರಯತ್ನಗಳಿಂದಲೂ ಕಾಪಾಡು.

೮೪-೮೬. ಹೀಗೆಂದುಹೇಳಿ ಆ ಭಾಗವತನಾದ ನಾರದನು ಆವಳ ರೂಪವನ್ನೇ ಸ್ಮರಿಸುತ್ತಾ ಆ ಕಾಡಿಗೆ ಹೋದನು. ಅಲ್ಲಿ ಆ ಅಶೋಕಮರವನ್ನು ಹೊಂದಿ ಇವರ ಆಗಮನವನ್ನೇ ನಿರೀಕ್ಷಿಸುತ್ತಾ ಆ ವಿಷ್ಣುವಲ್ಲಭೆಯನ್ನೇ ಸ್ಮರಿಸುತ್ತಾ ಇದ್ದನು

೮೭. ಆನಂತರ ಮಧ್ಯರಾತ್ರಿಯಲ್ಲಿ ಹಿಂದೆ ನೋಡಿದವರೂ ಇನ್ನೂ ಕೆಲವರೂ ಅದ್ಭುತ ರೂಪವುಳ್ಳ ಯುವತಿಯರು ಆಭರಣ ಮಾಲೆಗಳನ್ನು ಹಾಕಿಕೊಂಡು ಬಂದರು.

ದೃಷ್ಟ್ವಾ ಮನಸಿ ಸಂಭ್ರಾಂತೋ ದಂಡವತ್ಪತಿತೋ ಭುವಿ ।
ಪರಿವಾರ್ಯ ಮುನಿಂ ಸರ್ವಾಸ್ತಾಸ್ತಾಃ ಪ್ರವಿವಿಶುಶ್ಶುಭಾಃ ॥ ೮೮ ॥

ಪ್ರಷ್ಟುಕಾಮೋಽಪಿ ಸಮುನಿಃ ಕಿಂಚಿತ್ತಾಸ್ವಭಿಮತಂ ಪ್ರಿಯಂ ।
ನಾಶಕತ್ಪ್ರೇಮಲಾವಣ್ಯ ಪ್ರಿಯಭಾಷಾಪ್ರಧರ್ಷಿತಃ ॥ ೮೯ ॥

ಅಥಾಗತಾ ಮುನಿಶ್ರೇಷ್ಠಂ ಕೃತಾಂಜಲಿಮಿವ ಸ್ಥಿತಂ ।
ಭಕ್ತಿಭಾರಾನತಗ್ರೀವಂ ಸವಿಸ್ಮಯಂ ಸಸಂಭ್ರಮಂ ॥ ೯೦ ॥

ಸುವಿನೀತತಮಂ ಪ್ರಾಹ ತತ್ರೈವ ಕರುಣಾನ್ವಿತಾ ।
ಅಶೋಕಮಾಲಿನೀ ನಾಮ್ನಾ ಅಶೋಕವನದೇವತಾ ॥ ೯೧ ॥

॥ ಅಶೋಕಮಾಲಿನ್ಯುವಾಚ ॥

ಅಶೋಕಕಲಿಕಾಯಾಂ ತು ವಸಾಮ್ಯಸ್ಯಾಂ ಮಹಾಮುನೇ ।
ರಕ್ತಾಂಬರಧರಾ ನಿತ್ಯಂ ರಕ್ತಮಾಲ್ಯಾನುಲೇಪನಾ ॥ ೯೨ ॥

ರಕ್ತಸಿಂಧೂರಕಲಿಕಾ ರಕ್ತೋತ್ಪಲವತಂಸಿನೀ ।
ರಕ್ತಮಾಣಿಕ್ಯಕೇಯೂರ ಮುಕುಟಾದಿ ವಿಭೂಷಿತಾ ॥ ೯೩ ॥

---

೮೮. ಅವರೆಲ್ಲರನ್ನೂ ನೋಡಿ ದಿಗ್ಭ್ರಮೆ ಹೊಂದಿ ಸಂತೋಷದಿಂದ ದಂಡ ನಮಸ್ಕಾರವನ್ನು ಮಾಡಿದನು. ಅವರೆಲ್ಲರೂ ಇವನನ್ನು ಸುತ್ತಿಕೊಂಡು ನಿಂತರು.

೮೯. ತನ್ನ ಇಷ್ಟವನ್ನು ಕೇಳಬೇಕೆಂದು ಋಷಿಗೆ ಮನಸ್ಸಿದ್ದರೂ ಅವರ ಪ್ರೇಮ ಸೌಂದರ್ಯ ಪ್ರೀತಿಯ ಮಾತು ಇವುಗಳಿಂದ ಮುಗ್ಧನಾಗಿ ಕೇಳಲಾರದೆ ಹೋದನು.

೯೦-೯೧ ಕೈಮುಗಿದುಕೊಂಡು ನಮ್ರತೆಯಿಂದ ಬಗ್ಗಿ ಆಶ್ಚರ್ಯ ತ್ವರೆಗಳಿಂದ ಕೂಡಿದ ಆ ಋಷಿಯನ್ನು ಬಂದ ಆ ಹೆಂಗಸರಲ್ಲಿ ಒಬ್ಬಳಾದ ಅಶೋಕವನ ದೇವತೆ ಯಾದ ಅಶೋಕ ಮಾಲಿನಿಯು ಕೃಪೆಯಿಂದ ಇಂತೆಂದಳು.

೯೨-೯೩. ಅಶೋಕ ಮಾಲಿನಿಯು ಹೇಳಿದಳು—ಎಲೈ ಋಷಿಯೇ ಅಶೋಕ ಗಳ ಮೊಗ್ಗಿನೊಳಗೆ ವಾಸವಾಗಿದ್ದೇನೆ. ಕೆಂಪು ಪಟ್ಟೆಯನ್ನುಡುತ್ತೇನೆ. ಕೆಂಪುಹೂವನ್ನೇ ಮುಡಿಯುತ್ತೇನೆ. ಕೆಂಪು ಗಂಧ ಮುಂತಾದುವನ್ನೇ ಪೂಸಿಕೊಳ್ಳುತ್ತೇನೆ ಕೆಂಪಾಗಿ ರುವ ಕೇಯೂರ ಕಿರೀಟವನ್ನು ಧರಿಸುತ್ತೇನೆ. ಎಂದಳು.

ಏಕದಾ ಪ್ರಿಯಯಾ ಸಾರ್ಧಂ ವಿಹರಂತ್ಯೋ ಮಧೂತ್ಸವೇ ।
ತತ್ರೈವ ಮಿಳಿತಾ ಗೋಪಬಾಲಿಕಾಶ್ಚಿತ್ರವಾಸಸಃ ॥ ೯೪ ॥

ಅಹಂ ಚಾಶೋಕಮಾಲಾಭಿಃ ಗೋಪವೇಷಧರಂ ಹರಿಂ ।
ರಮಾರೂಪಾಶ್ಚ ತಾಸ್ಸರ್ವಾ ಭಕ್ತ್ಯಾ ಸಮ್ಯಗಪೂಜಯಂ ॥ ೯೫ ॥

ತತಃ ಪ್ರಭೃತಿ ಚೈತಾಸಾಂ ಮಧ್ಯೇ ತಿಷ್ಠಾಮಿ ಸರ್ವದಾ ।
ಭೂಷಾಭಿರ್ವಿವಿಧಾಭಿಶ್ಚ ತೋಷಯಿತ್ವಾ ರಮಾಪತಿಂ ॥ ೯೬ ॥

ಪರಾಪರಮಹಂ ಸರ್ವಂ ವಿಜಾನಾಮೀಹ ಸರ್ವತಃ ।
ಗೋಗೋಪಗೋಪಿಕಾದೀನಾಂ ರಹಸ್ಯಂ ಚಾಪಿ ವೇದ್ಮ್ಯಹಂ ॥ ೯೭ ॥

ತವ ಜಿಜ್ಞಾಸಿತಂ ಚಾಪಿ ಹೃದಿ ಪ್ರತಿ ವಿಭಾಷಿತಂ ।
ತಾಂ ದೇವೀಮದ್ಭುತಾಕಾರಾಮದ್ಭುತಾನಂದದಾಯಿನೀಂ ॥ ೯೮ ॥

ಹರೇಃ ಪ್ರಿಯಾಂ ಹಿರಣ್ಯಾಭಾಂ ಹೀರಕೋಜ್ಜ್ವಲಮುದ್ರಿಕಾಂ ।
ಕಥಂ ಪಶ್ಯಾಮಿ ಲೋಲಾಕ್ಷೀಂ ಕಥಂ ವಾ ತತ್ಪದಾಂಬುಜಂ ॥ ೯೯ ॥

---

೯೪. ಒಂದು ಸಾರಿ ಸಖಿಯೊಡನೆ ವಸಂತಮಾಸದಲ್ಲಿ ಆಟವಾಡುತ್ತ ಬರಲು ಗೋಪಕನ್ಯೆಯರು ಬಗೆಬಗೆಯ ಬಟ್ಟೆಗಳನ್ನು ಹಾಕಿಕೊಂಡಿರುವುದನ್ನು ಕಂಡು ಅವರೊಡನೆ ಸೇರಿದೆನು.

೯೫. ನಾನು ಹರಿಯನ್ನು ರಮಾರೂಪರಾದ ಆ ಗೋಪಿಯರನ್ನೂ ಅಶೋಕ ಮಾಲೆಯಿಂದ ಪೂಜಿಸಿದೆನು.

೯೬-೯೭. ಅದು ಮೊದಲು ಈ ಗೋಪಿಯರ ಮಧ್ಯದಲ್ಲಿಯೇ ಇದ್ದೇನೆ. ಅನೇಕ ವಿಧಗಳಿಂದ ವಿಷ್ಣುವನ್ನು ಸಂತೋಷ ಪಡಿಸಿದೆನು ಆದ್ದರಿಂದ ಭೂತ ಭವಿಷ್ಯದ್ವರ್ತಮಾನಗಳನ್ನೂ ಈ ಗೋಪಗೋಪಿಯರಗೋವುಗಳ ರಹಸ್ಯವನ್ನೂ ಬಲ್ಲೆನು.

೯೮-೧೦೦. ನೀನು ಮನಸ್ಸಿನಲ್ಲಿ ಯೋಚಿಸುತ್ತಿರುವುದೆಲ್ಲವನ್ನೂ ಬಲ್ಲೆನು. ಅದ್ಭುತವಾದ ಆಕಾರವುಳ್ಳ ಉತ್ತಮೋತ್ತಮ ಆನಂದವನ್ನು ಕೊಡುವ ಹರಿಗೆ ಪ್ರೀತಿಪಾತ್ರಳಾದ ಆ ಚಂಚಲಾಕ್ಷಿಯನ್ನೂ ಆಕೆಯ ಪಾದಾಂಬುಜವನ್ನೂ ಹೇಗೆ ನೋಡಲಿ?

ಆರಾಧ್ಯತೇಽತಿಭಕ್ತ್ಯೇತಿ ತ್ವಯಾ ಬ್ರಹ್ಮನ್ವಿಮರ್ಶಿತಂ ।
ತತ್ರ ತೇ ಕಥಯಿಷ್ಯಾಮಿ ವೃತ್ತಾನ್ತಂ ಸುಮಹಾತ್ಮನಾಂ ॥ ೧೦೦ ॥

ಮಾನಸೇ ಸರಸಿ ಸ್ಥಿತ್ವಾ ತಪಸ್ತೀವ್ರಮುಪೇಯುಷಾಂ ।
ಜಪತಾಂ ಸಿದ್ಧಿಮಂತ್ರಾಂಶ್ಚ ಧ್ಯಾಯತಾಂ ಹರಿಮೀಶ್ವರಂ ॥ ೧೦೧ ॥

ಮುನೀನಾಂ ಕಾಂಕ್ಷತಾಂ ನಿತ್ಯಂ ತಸ್ಯಾ ಏವ ಪದಾಂಬುಜಂ ।
ಏಕಸಪ್ತತಿಸಾಹಸ್ರ ಸಂಖ್ಯಾತಾನಾಂ ಮಹೌಜಸಾಂ ।
ತತ್ತೇಽಹಂ ಕಥಯಾಮ್ಯದ್ಯ ತದ್ರಹಸ್ಯಂ ಪರಂ ವನೇ ॥ ೧೦೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶ್ರೀ ರಾಧಾಕೃಷ್ಣ
ಮಾಹಾತ್ಮ್ಯಕಥನಂನಾಮ ಏಕಸಪ್ತತಿತಮೋಽಧ್ಯಾಯಃ

---

ಭಕ್ತಿಯಿಂದ ಹೇಗೆ ಆರಾಧಿಸಲಿ ? ಎಂದು ವಿಮರ್ಶಿಸುತಿದ್ದುದನ್ನೂ ಬಲ್ಲೆನು. ಅದರ ವಿಷಯದಲ್ಲಿ ನಿನಗೆ ಮಹಾತ್ಮರ ಒಂದು ವೃತ್ತಾಂತವನ್ನು ಹೇಳುತ್ತೇನೆ. ಕೇಳು.

೧೦೧-೧೦೨. ಮಾನಸ ಸರೋವರದಲ್ಲಿದ್ದುಕೊಂಡು ಉಗ್ರವಾದ ತಪಸ್ಸನ್ನು ಮಾಡುತ್ತಿರುವ ಸಿದ್ಧಿ ಮಂತ್ರವನ್ನು ಜಪಿಸುತ್ತ ಈಶ್ವರನಾದ ಹರಿಯನ್ನು ಧ್ಯಾನಮಾಡುತ್ತ ಆ ರಮಾದೇವಿಯ ಪಾದಾಂಬುಜ ದರ್ಶನವನ್ನು ಅಪೇಕ್ಷಿಸುತ್ತ ಎಪ್ಪತ್ತೊಂದು ಸಾವಿರ ಮುನಿಗಳಿರುವರು. ಅವರ ಕಥೆಯನ್ನೂ ಅವರ ರಹಸ್ಯವನ್ನೂ ನಾನು ನಿನಗೆ ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶ್ರೀ ರಾಧಾಕೃಷ್ಣರ ಮಹಾತ್ಮ್ಯ
ಕಥನವೆಂಬ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ದ್ವಿಸಪ್ತತಿತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

ತವೇಕಾಗ್ರಮನಾ ಭೂತ್ವಾ ಶೃಣು ದೇವಿ ವರಾನನೇ ।
ಆಸೀದುಗ್ರತಪಾ ನಾಮ ಮುನಿರೇಕೋ ದೃಢವ್ರತಃ ॥ ೧ ॥

ಸಾಗ್ನಿಕೋಽಹ್ಯಗ್ನಿಭಕ್ಷಶ್ಚ ಚಚಾರಾತ್ಯದ್ಭುತಂ ತಪಃ ।
ಜಜಾಪ ಪರಮಂ ಜಾಪ್ಯಂ ಮಂತ್ರಂ ಪಂಚದಶಾಕ್ಷರಂ ॥ ೨ ॥

ಕಾಮಮಂತ್ರೇಣ ಪುಟಿತಂ ಕಾಮಂ ಕಾಮವರಪ್ರದಾತ್ ।
ಕೃಷ್ಣಾಯೇತಿ ಪದಂ ಸ್ವಾಹಾ ಸಹಿತಂ ಸಿದ್ಧಿದಂ ಪರಂ ॥ ೩ ॥

---

## ಎಪ್ಪತ್ತೆರಡನೆಯ ಅಧ್ಯಾಯವು

೧. ಈಶ್ವರನು ಹೇಳಿದನು— ಎಲೈ ಪಾರ್ವತಿಯೇ ಒಂದೇ ಮನಸ್ಸಿನಿಂದ ಕೇಳು. ಉಗ್ರತಪನೆಂಬೊಬ್ಬ ಋಷಿಯಿದ್ದನು.

೨. ಅಗ್ನಿಯನ್ನಿಟ್ಟುಕೊಂಡು ಹೋಮ ಮಾಡುತ್ತಾ ಅಗ್ನಿ ಭಕ್ಷಕನಾಗಿ ಅದ್ಭುತವಾದ ತಪಸ್ಸನ್ನು ಮಾಡುತ್ತಿದ್ದನು. ಉತ್ತಮವಾದ ಮಂತ್ರಗಳನ್ನು ಜಪಿಸುತ್ತ ಪಂಚದಶಾಕ್ಷರಿಯನ್ನೂ ಜಪಿಸಿದನು.

೩. ಕಾಮ ಮಂತ್ರದಿಂದ ಪುಟೀಕರಣವುಳ್ಳ ಇಷ್ಟವಾದ ವರವನ್ನು ಕೊಡುವುದರಿಂದ ಕಾಮನಾದ 'ಕೃಷ್ಣಾಯಸ್ವಾಹಾ' ಎಂಬ ಸಿದ್ಧಿ ಮಂತ್ರವನ್ನು ಜಪಿಸಿದನು.

**ದಧ್ಯೌ ಚ ಶ್ಯಾಮಲಂ ಕೃಷ್ಣಂ ರಾಸೋನ್ಮತ್ತಂ ವರೋತ್ಸುಕಂ ।**
**ಪೀತಪಟ್ಟಧರಂ ವೇಣುಂ ಕರೇಣಾಧರಮರ್ಪಿತಂ ॥ ೪ ॥**

**ನವಯೌವನಸಂಪನ್ನಾಂ ಕರ್ಷನ್ತಂ ಪಾಣಿನಾ ಪ್ರಿಯಾಂ ।**
**ಏವಂ ಧ್ಯಾನಪರಃ ಕಲ್ಪಶತಾಂತೇ ದೇಹಮುತ್ಸೃಜತ್ ॥ ೫ ॥**

**ಸುನಂದನಾಮ ಗೋಪಸ್ಯ ಕನ್ಯಾಭೂತ್ಸಮಹಾಮುನಿಃ ।**
**ಸುನಂದೇತಿ ಸಮಾಖ್ಯಾತಾ ಯಾ ವೀಣಾಂ ಬಿಭ್ರತೀ ಕರೇ ॥ ೬ ॥**

**ಮುನಿರನ್ಯಸ್ಸತ್ಯತಪಾ ಇತಿ ಖ್ಯಾತೋ ಮಹಾವ್ರತಃ ।**
**ಸ ಶುಷ್ಕಪತ್ರಭುಕ್ತೋಯೇ ಪ್ರಜಜಾಪ ಪರಂ ಮನುಂ ॥ ೭ ॥**

**ರತ್ಯಂತಂ ಕಾಮಬೀಜೇನ ಪುಟಪಂಚದಶಾಕ್ಷರಂ ।**
**ಸ ಪ್ರದಧ್ಯೌ ಮುನಿವರಶ್ಚಿತ್ರವೇಷಧರಂ ಹರಿಂ ॥ ೮ ॥**

**ಧೃತ್ವಾ ರಮಾಯಾದೋರ್ವಲ್ಲೀದ್ವಿತಯಂ ಕಂಕಣೋಜ್ವಲಂ ।**
**ನೃತ್ಯಂತಂ ತನ್ಮುದಂ ತಂ ಚ ಸಂಶ್ಲಿಷ್ಯಂತಂ ಮುಹುರ್ಮುಹುಃ ॥ ೯ ॥**

---

೪-೫. ಶ್ಯಾಮಲವರ್ಣವುಳ್ಳ ರಾಸಕ್ರೀಡೆಯಲ್ಲಿ ಮತ್ತನಾದ ವರವನ್ನು ಕೊಡತಕ್ಕ ಬಿಳೀರೇಷ್ಮೆ ಬಟ್ಟೆಯನ್ನುಟ್ಟ ಕೊಳಲೂದುತ್ತಿರುವ ನವಯೌವನದಿಂದ ಕೂಡಿದ ಪ್ರಿಯಳನ್ನು ಎಳೆಯುತ್ತಿರುವ ಕೃಷ್ಣನನ್ನು ಧ್ಯಾನಮಾಡಿದನು. ಹೀಗೆ ನೂರುಕಲ್ಪಗಳವರೆಗೂ ಧ್ಯಾನಮಾಡಿ ಸತ್ತನು.

೬ ಆ ಮುನಿಯು ಸುನಂದನೆಂಬ ಗೋಪನಿಗೆ ಮಗನಾಗಿ ಹುಟ್ಟಿದನು. ಆ ಕೈಯಲ್ಲಿ ವೀಣೆ ಹಿಡಿದಿರುವವಳೇ ಸುನಂದೆಯು.

೭-೮. ಇನ್ನೊಬ್ಬ ಮುನಿಯು ಸತ್ಯತಪನೆಂಬುವನು. ಮಹಾವ್ರತಿಯಾಗಿದ್ದನು ಅವನು ತರಗೆಲೆಯನ್ನು ತಿನ್ನುತ್ತಾ ನೀರಿನಲ್ಲಿ ನಿಂತು ರತ್ಯಂತವುಳ್ಳ ಕಾಮಬೀಜದಿಂದ ಪುಟಿತವಾದ ಪಂಚದಶಾಕ್ಷರಿಯನ್ನು ಜಪಿಸುತ್ತಾ ಚಿತ್ರ ವೇಷಧರನಾದ ಹರಿಯನ್ನು ಧ್ಯಾನ ಮಾಡಿದನು.

೯-೧೨. ರಮೆಯ ಭುಜಗಳನ್ನು ಹಿಡಿದು ಕುಣಿಯುತ್ತಾ ಪದೇಪದೇ ಆಲಂಗಿಸುತ್ತಾ ಆನಂದದಿಂದ ಒಳಗೆ ನಗುತ್ತಿರುವ ಕೊಳಲನ್ನು ಹಿಡಿದಿರುವ ಮಂಡಿಯು

ಹಸನ್ತಮುಚ್ಚೈರಾನಂದತರಂಗಂ ಜಠರಾಂಬರೇ ।
ದಧಾನಂ ವೇಣುಮಾಜಾನುವೈಜಯನ್ತ್ಯಾ ವಿರಾಜಿತಂ ॥ ೧೦ ॥

ಸ್ವೇದಾಂಭಃ ಕಣಸಂಸಿಕ್ತಲಲಾಟವನಿತಾನನಂ ।
ತ್ಯಕ್ತ್ವಾ ತ್ಯಕ್ತ್ವಾ ಸ ವೈದೇಹಂ ತಪಸಾ ಚ ಮಹಾಮುನಿಃ ॥ ೧೧ ॥

ದಶಕಲ್ಪಾಂತರೇ ಚಾಯಂ ಜಾತೋನಂದವನಾದಿಹ ।
ಸುಭದ್ರನಾಮ್ನೋ ಗೋಪಸ್ಯ ಕನ್ಯಾ ಭದ್ರೇತಿ ವಿಶ್ರುತಾ ॥ ೧೨ ॥

ಯಸ್ಯಾಃ ಪೃಷ್ಠತಲೇ ದಿವ್ಯಂ ವ್ಯಜನಂ ಪರಿದೃಶ್ಯತೇ ।
ಹರಿಧಾಮಾಭಿಧಾನಸ್ತು ಕಶ್ಚಿದಾಸೀನ್ಮಹಾಮುನಿಃ ॥ ೧೩ ॥

ಸೋತಪ್ಯತ ತಪಃ ಕೃಚ್ಛ್ರಂ ನಿತ್ಯಂ ತ್ಯಕ್ತ್ವೈವ ಭೋಜನಂ ।
ಆಶು ಸಿದ್ಧಿಕರಂ ಮಂತ್ರಂ ವಿಂಶತ್ಯರ್ಣಂ ಪ್ರಜಪ್ತವಾನ್ ॥ ೧೪ ॥

ಅನಂತರಂ ಕಾಮಬೀಜಾದಧ್ಯಾರೂಢಂ ತು ದೈವತಂ ।
ಮಾಯಾತತ್ಪುರತೋ ವ್ಯೋಮ ಹಂಸಾಸೃಗ್ದ್ಯುತಿಚಂದ್ರಿಕಂ ॥ ೧೫ ॥

---

ಪರಿಗೂ ಮಾಲೆಯನ್ನು ಹಾಕಿರುವ ಬೆವರಿನ ಹನಿಗಳು ಹೆಂಗಸಿನ ಹಣೆಯಲ್ಲಿ ಸಾಲಾಗಿರುವಾಗ ಅವಳನ್ನು ಹಿಡಿದ ಕೃಷ್ಣನನ್ನು ಧ್ಯಾನಮಾಡಿದನು. ಹೀಗೆ ಅನೇಕ ಜನ್ಮಗಳನು ತಾಳಿ ಕೊನೆಗೆ ಹತ್ತು ಕಲ್ಪಗಳು ಕಳೆದ ಮೇಲೆ ಮೃತಿಯನ್ನೈದಿ ಈ ನಂದನ ವನದಲ್ಲಿ ಸುಭದ್ರನೆಂಬ ಹೆಸರಿನ ಗೋಪನ ಹೊಟ್ಟೆಯಲ್ಲಿ ಹುಟ್ಟಿ ಭದ್ರಳೆಂಬುದಾಗಿ ಹೆಸರನ್ನು ಹೊಂದಿದ್ದಾನೆ.

೧೩. ಆ ಹುಡುಗಿಯ ಪೃಷ್ಠದಮೇಲೆ ಉತ್ತಮವಾದ ವ್ಯಜನಚಿಹ್ನೆಯಿದೆ. ಹರಿಧಾಮನೆಂಬ ಮತ್ತೊಬ್ಬ ಮುನಿಯಿದ್ದನು.

೧೪ ಆತನು ದಿನವೂ ಊಟಮಾಡದೇನೆ ತಪಸ್ಸು ಮಾಡಿದನು. ಮತ್ತು ಜಾಗ್ರತೆ ಸಿದ್ಧಿಯನ್ನು ಹೊಂದುವ ಇಪ್ಪತ್ತು ವರ್ಣದ ಮಂತ್ರವನ್ನು ಜಪಿಸಿದನು.

೧೫-೨೧. ಅನಂತರ ಕಾಮ ಬೀಜವನ್ನು ಹೊಂದಿರುವ ದೈವತವುಳ್ಳ ಮಾಯಾಪುರ, ವ್ಯೋಮ, ಹಂಸ, ಅಸೃಕ್, ದ್ಯುತಿ, ಚಂದ್ರಿಕೆಗಳಿಂದ ಕೂಡಿದ್ದು ಆಮೇಲೆ ದಶಾ

ತತೋ ದಶಾಕ್ಷರಂ ಪಶ್ಚಾನ್ನಮೋಯುಕ್ತಂ ಸ್ಮರಾದಿಕಂ ।
ದಧ್ಯೌ ವೃಂದಾವನೇ ರಮ್ಯೇ ಮಾಧವೀ ಮಂಟಪೇ ಪ್ರಭುಂ ॥ ೧೬ ॥

ಉತ್ತಾನ ಶಾಯಿನಂ ಚಾರು ಪಲ್ಲವಾಸ್ತರಣೋಪರಿ ।
ಕದಾಚಿದತಿಕಾಮಾರ್ತವಲ್ಲವ್ಯಾ ರಕ್ತನೇತ್ರಯಾ ॥ ೧೭ ॥

ವಕ್ಷೋಜಯುಗಮಾಚ್ಛಾದ್ಯ ವಿಪುಲೋರಸ್ಥಳಂ ಮುಹುಃ ।
ಸಂಚುಂಬ್ಯಮಾನಂ ಗಂಡಾಂತಃ ತಪ್ಯಮಾನ ರದಚ್ಛದಂ ॥ ೧೮ ॥

ಕಲಯಂತಂ ಪ್ರಿಯಾಂ ದೋರ್ಭ್ಯಾಂ ಸಹಾಸಂ ಸಮುದಾಪ್ಲುತಂ ।
ಸಮುನಿಶ್ಚ ಬಹೂನ್ದೇಹಾನ್ತ್ಯಕ್ತ್ವಾ ಕಲ್ಪತ್ರಯಾನ್ತರೇ ॥ ೧೯ ॥

ಸಾರಂಗನಾಮ್ನೋ ಗೋಪಸ್ಯ ಕನ್ಯಾಭೂಚ್ಛುಭಲಕ್ಷಣಾ ।
ರಂಗವೇಣೀತಿ ವಿಖ್ಯಾತಾ ನಿಪುಣಾ ಚಿತ್ರಕರ್ಮಣಿ ॥ ೨೦ ॥

ಯಸ್ಯಾ ದಂತೇಷು ದೃಶ್ಯಂತೇ ಚಿತ್ರಿತಾಃ ಶೋಣಬಿಂದವಃ ।
ಬ್ರಹ್ಮವಾದೀ ಮುನಿಃ ಕಶ್ಚಿಜ್ಜಾಬಾಲಿರಿತಿ ವಿಶ್ರುತಃ ॥ ೨೧ ॥

ಸ ತಪಸ್ಸು ರತೋ ಯೋಗೀ ವಿಚರನ್ಪೃಥಿವೀಮಿಮಾಂ ।
ಸ ಏಕಸ್ಮಿನ್ಮಹಾರಣ್ಯೇ ಯೋಜನಾಯತವಿಸ್ತೃತೇ ॥ ೨೨ ॥

---

ಕ್ಷರಗಳುಳ್ಳ ಕೊನೆಯಲ್ಲಿ ನಮ ಎಂಬುದೂ ಆದಿಯಲ್ಲಿ ಸ್ಮರನುಳ್ಳದ್ದೂ ಆದ ಮಂತ್ರವನ್ನು ಜಪಿಸುತ್ತ ರಮ್ಯವಾದ ವೃಂದಾವನದಲ್ಲಿ ಮಾಧವೀ ಮಂಟಪದಲ್ಲಿ ಚಿಗುರಿನ ಹಾಸಿಗೆಯ ಮೇಲೆ ಅಂಗತರನಾಗಿ ಮಲಗಿ ಒಂದೊಂದುಸಾರಿ ಅತಿಕಾಮಿಯಾಗಿ ಕಣ್ಣು ಕೆಂಪುಮಾಡಿಕೊಂಡಿರುವ ಗೋಪಸ್ತ್ರೀಯು ಸ್ತನಗಳನ್ನು ಅವನಮೇಲೆ ಹೇರಿ ಅಗಲವಾದ ಎದೆಯನ್ನು ಮುಚ್ಚಿದ ಆ ಪ್ರಿಯನನ್ನು ಎರಡು ಕೈಯಲ್ಲೂ ಹಿಡಿದು ಅಪ್ಲುತವಾಗಿ ಹಾಸ್ಯಮಾಡುತ್ತಲಿರುವ ಸ್ವಾಮಿಯನ್ನು ಧ್ಯಾನಿಸುತ್ತಿದ್ದನು. ಆ ಋಷಿಯು ಮೂರು ಕಲ್ಪಗಳಿಂದ ಬಹು ದೇಹಗಳನ್ನು ಬಿಟ್ಟು ಸಾರಂಗನೆಂಬ ಗೋಪನಿಗೆ ಮಗಳಾಗಿ ಹುಟ್ಟಿ ರಂಗವೇಣಿ ಎಂದು ಹೆಸರುಳ್ಳವನಾಗಿದ್ದಾನೆ. ಅವಳು ಚಿತ್ರಕರ್ಮದಲ್ಲಿ ನಿಪುಣಳು. ಅವಳ ಹಲ್ಲುಗಳಲ್ಲಿ ರಕ್ತಬಿಂದುಗಳು ಚಿತ್ರಿತವಾಗಿ ಕಾಣುತ್ತವೆ. ಬ್ರಹ್ಮವಾದಿಯಾದ ಜಾಬಾಲಿಯೆಂಬ ಋಷಿಯಿದ್ದನು.

೨೨-೨೩. ಆ ತಪಸ್ವಿಯಾದ ಯೋಗಿಯು ಭೂಮಿಯನ್ನೆಲ್ಲಾ ಸುತ್ತುತ್ತಿದ್ದನು ಅವನು ಒಂದು ಯೋಜನದಗಲವಿರುವ ಒಂದು ಅರಣ್ಯದಲ್ಲಿ ಎಲ್ಲಾ ಕಡೆಗೂ ಫಟಿ

ಽಪಶ್ಯೃಚ್ಛಯಾ ಗತೋಽಪಶ್ಯದೇಕಾಂ ವಾಪೀಂ ಸುಶೋಭನಾಂ ।
ಸರ್ವತಸ್ಸ್ಫಟಿಕಾಬಂಧತಟಾಂ ಸ್ವಾದುಜಲಾನ್ವಿತಾಂ ॥ ೨೩ ॥

ವಿಕಾಸಿ ಕಮಲಾಮೋದವಾಯುನಾ ಪರಿಶೀಲಿತಾಂ ।
ತಸ್ಯಾಃ ಪಶ್ಚಿಮದಿಗ್ಭಾಗೇ ಮೂಲೇ ವಟಮಹೀರುಹೇ ॥ ೨೪ ॥

ಅಪಶ್ಯತ್ತಾಪಸೀಂ ಕಾಂಚಿತ್ಕುರ್ವತೀಂ ದಾರುಣಂ ತಪಃ ।
ತಾರುಣ್ಯವಯಸಾ ಯುಕ್ತಾಂ ರೂಪೇಣಾತಿಮನೋಹರಾಂ ॥ ೨೫ ॥

ಚಂದ್ರಾಂಶುಸದೃಶಾಭಾಸಾಂ ಸರ್ವಾವಯವಶೋಭನಾಂ ।
ಕೃತ್ವಾ ಕಟಿತಟೇ ವಾಮಪಾಣಿಂ ದಕ್ಷಿಣಹಸ್ತತಃ ॥ ೨೬ ॥

ಜ್ಞಾನಮುದ್ರಾಂ ಚ ಬಿಭ್ರಾಣಾಂ ಅನಿಮೇಷಿತಲೋಚನಾಂ ।
ತ್ಯಕ್ತ್ವಾಽಽಹಾರಂ ವಿಹಾರಂ ಚ ಸುನಿಶ್ಚಲತಯಾ ಸ್ಥಿತಾಂ ॥ ೨೭ ॥

ಜಿಜ್ಞಾಸುಸ್ತಾಂ ಮುನಿವರಃ ತಸ್ಥೌ ತತ್ರ ಶತಂ ಸಮಾಃ ।
ತದಂತೇ ತಾಂ ಸಮುತ್ಥಾಪ್ಯ ಚಲಿತಾಂ ವಿನಯಾನ್ಮುನಿಃ ॥ ೨೮ ॥

ಅಪೃಚ್ಛತ್ಕಾತ್ವಮಾಶ್ಚರ್ಯರೂಪೇ ಕಿಂ ವಾ ಚರಿಷ್ಯಸಿ ।
ಯದಿ ಯೋಗ್ಯಂ ಭವೇತ್ತರ್ಹಿ ಕೃಪಯಾ ವಕ್ತುಮರ್ಹಸಿ ॥ ೨೯ ॥

---

ಕದ ಕಲ್ಲುಕಟ್ಟಿರುವ ಸಿಹಿನೀರುಳ್ಳ ಕಮಲದಿಂದ ಸುವಾಸಿತವಾದ ಒಂದು ಕೊಳವನ್ನು ಆಕಸ್ಮಾತ್ತಾಗಿ ನೋಡಿದನು.

೨೪-೨೭ ಆ ಕೊಳದ ಪಶ್ಚಿಮ ದಿಗ್ಭಾಗದಲ್ಲಿ ಒಂದು ಆಲದ ಮರದ ಬುಡದಲ್ಲಿ ಉಗ್ರವಾದ ತಪಸ್ಸನ್ನು ಮಾಡುವ ಒಬ್ಬ ತಾಪಸಿಯನ್ನು ನೋಡಿದನು. ಆಕೆಯು ತರುಣವಯಸ್ಸಿನವಳು. ಅತಿ ಸುಂದರಿಯು ಚಂದ್ರನಂತೆ ಬೆಳ್ಳಗಿದ್ದು ಪ್ರತಿ ಅವಯವವೂ ಮನೋಹರವಾಗಿದ್ದವು. ನಡುವಿನ ಮೇಲೆ ಎಡಗೈಯ್ಯನ್ನಿಟ್ಟುಕೊಂಡು ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿರುವಳು. ಕಣ್ಣು ತೆರದುಕೊಂಡೇ ಇರುವಳು. ಆಹಾರ ವಿಹಾರಗಳನ್ನು ಬಿಟ್ಟುಬಿಟ್ಟು ನಿಶ್ಚಲಳಾಗಿರುವಳು

೨೮-೨೯. ಅದನ್ನು ತಿಳಿಯಬೇಕೆಂದು ಆ ಋಷಿಯು ಅಲ್ಲಿ ನೂರುವರ್ಷಗಳಿದ್ದನು. ಆ ತಪಸ್ಸು ಮುಗಿಯಲು ಚಲಿಸಿದ ಆಕೆಯನ್ನು ಕುರಿತು ಆ ಋಷಿಯು ವಿನಯದಿಂದ ಎಲೈ ಆಶ್ಚರ್ಯರೂಪಳೇ ! ಏನು ಮಾಡುತ್ತಿದ್ದಿ ? ಹೇಳುವುದಕ್ಕೆ ಯೋಗ್ಯವಾಗಿದ್ದರೆ ದಯವಿಟ್ಟು ಹೇಳು. ಎಂದು ಕೇಳಿದನು.

ಅಥಾಬ್ರವೀಚ್ಛನೈರ್ಬಾಲಾ ತಪಸಾಽತೀವ ಕರ್ಶಿತಾ ।
ಬ್ರಹ್ಮವಿದ್ಯಾಹಮತುಲಾ ಯೋಗೀಂದ್ರೈರ್ಯಾಚ ಮೃಗ್ಯತೇ ॥ ೩೦ ॥

ಸಾಹಂ ಹರಿಪದಾಂಭೋಜಕಾಮ್ಯಯಾ ಸುಚಿರಂ ತಪಃ ।
ಚರಾಮ್ಯಸ್ಮಿನ್ವನೇ ಘೋರೇ ಧ್ಯಾಯನ್ತೀ ಪುರುಷೋತ್ತಮಂ ॥ ೩೧ ॥

ಬ್ರಹ್ಮಾನಂದೇನ ಪೂರ್ಣಾಹಂ ತೇನಾನಂದೇನ ತೃಪ್ತಧೀಃ ।
ತಥಾಪಿ ಶೂನ್ಯಮಾತ್ಮಾನಂ ಮನ್ಯೇ ಕೃಷ್ಣರತಿಂ ವಿನಾ ॥ ೩೨ ॥

ಇದಾನೀಮತಿನಿರ್ವಿಣ್ಣಾ ದೇಹಸ್ಯಾಸ್ಯ ವಿಸರ್ಜನಂ ।
ಕರ್ತುಮಿಚ್ಛಾಮಿ ಪುಣ್ಯಾಯಾಂ ವಾಪಿಕಾಯಾಮಿಹೈವ ತು ॥ ೩೩ ॥

ತಚ್ಛ್ರುತ್ವಾ ವಚನಂ ತಸ್ಯಾ ಮುನಿರತ್ಯಂತವಿಸ್ಮಿತಃ ।
ಪತಿತ್ವಾ ಚರಣೇ ತಸ್ಯಾಃ ಕೃಷ್ಣೋಪಾಸಾವಿಧಿಂ ಶುಭಂ ॥ ೩೪ ॥

ಪಪ್ರಚ್ಛ ಪರಮಪ್ರೀತಸ್ತ್ಯಕ್ತ್ವಾಽಧ್ಯಾತ್ಮವಿರೋಚನಂ ।
ತಯೋಕ್ತಮಂತ್ರಮಾಜ್ಞಾಯ ಜಗಾಮ ಮಾನಸಂ ಸರಃ ॥ ೩೫ ॥

---

೩೦. ಆಮೇಲೆ ತಪಸ್ಸಿನಿಂದ ಕೃಶಳಾಗಿದ್ದ ಆ ಹುಡುಗಿಯು ಯೋಗೀಂದ್ರರು ಯಾವುದನ್ನು ಸದಾ ಹುಡುಕುತ್ತಾರೋ ಅಂತಹ ಉತ್ತಮವಾದ ಬ್ರಹ್ಮವಿದ್ಯೆಯೇ ನಾನು.

೩೧. ನಾನು ಹರಿಯ ಪಾದಕಮಲಗಳನ್ನು ಹೊಂದಬೇಕೆಂದು ಬಹುದಿನ ದಿಂದ ಈ ಘೋರಾರಣ್ಯದಲ್ಲಿ ಪುರುಷೋತ್ತಮನನ್ನು ಧ್ಯಾನಿಸುತ್ತಾ ತಪಸ್ಸು ಮಾಡುತ್ತಿದ್ದೇನೆ.

೩೨. ಬ್ರಹ್ಮಾನಂದದಿಂದ ಪೂರ್ಣಳಾಗಿದ್ದೇನೆ. ಆ ಆನಂದದಿಂದ ತೃಪ್ತಿ ಹೊಂದಿದ್ದೇನೆ. ಆದರೂ ಕೂಡ ಕೃಷ್ಣನ ಸಹವಾಸವಿಲ್ಲದ್ದರಿಂದ ನನ್ನ ಆತ್ಮವು ಶೂನ್ಯವಾಗಿದೆ.

೩೩. ಈಗ ಬಹು ದುಃಖಗೊಂಡು ಈ ದೇಹವನ್ನು ಈ ಭಾವಿಯಲ್ಲಿ ಕೆಡಗಿ ಬಿಟ್ಟು ಬಿಡಬೇಕೆಂದಿದ್ದೇನೆ.

೩೪-೩೫. ಈ ಮಾತನ್ನು ಕೇಳಿ ಋಷಿಯು ಆಶ್ಚರ್ಯಪಟ್ಟು ಆಕೆಯ ಪಾದ ಗಳಿಗೆ ಬಿದ್ದು ಕೃಷ್ಣೋಪಾಸನೆಯ ವಿಧಿಯನ್ನು ಕೇಳಿ ತಿಳಿದುಕೊಂಡು ಅಧ್ಯಾತ್ಮನ ರುಚಿಯನ್ನು ಹೊಂದಿ ಅವಳು ಹೇಳಿದ ಮಂತ್ರವನ್ನು ತಿಳಿದುಕೊಂಡು ಜಪಿಸಲು ಮಾನಸ ಸರೋವರಕ್ಕೆ ಹೋದನು.

ತತೋತಿದುಶ್ಚರಂ ಚಕ್ರೇ ತಪ್ರೋ ವಿಸ್ಮಯಕಾರಕಂ ।
ಏಕಪಾದಸ್ಥಿತಸ್ಸೂರ್ಯಂ ನಿರ್ನಿಮೇಷಂ ವಿಲೋಕಯನ್ ॥ ೩೬ ॥

ಮಂತ್ರಂ ಜಜಾಪ ಪರಮಂ ಪಂಚವಿಂಶತಿವರ್ಣಕಂ ।
ದಧ್ಯೌ ಪರಮಭಾವೇನ ಕೃಷ್ಣಮಾನಂದರೂಪಿಣಂ ॥ ೩೭ ॥

ಚರಂತಂ ವ್ರಜತೀರ್ಥೇಷು ವಿಚಿತ್ರಗತಿಲೀಲಯಾ ।
ಲಲಿತೈಃ ಪಾದವಿನ್ಯಾಸೈಃ ಕ್ವಣಯಂತಂ ಚ ನೂಪುರಂ ॥ ೩೮ ॥

ಚಿತ್ರಕಂದರ್ಪಚೇಷ್ಟಾಭಿಃ ಸಸ್ಮಿತಾಪಾಂಗವೀಕ್ಷಿತೈಃ ।
ಸಮ್ಮೋಹಿನ್ಯಾಖ್ಯಯಾ ವಂಶ್ಯಾ ಪಂಚಮ್ಯಾರುಣಚಿತ್ರಯಾ ॥ ೩೯ ॥

ಬಿಂಬೋಷ್ಠಪುಟಚುಂಬಿನ್ಯಾ ಕಲಾಲಾಪೈರ್ಮನೋಜ್ಞಯಾ ।
ಹರಂತಂ ವ್ರಜರಾಮಾಣಾಂ ಮನಾಂಸಿ ಚ ವಪೂಂಷಿ ಚ ॥ ೪೦ ॥

ಶ್ಲಥನ್ನೀವಿಭಿರಾಗತ್ಯ ಸಹಸಾಲಿಂಗಿತಾಂಗಕಂ ।
ದಿವ್ಯಮಾಲಾಂಬರಧರಂ ದಿವ್ಯಗಂಧಾನುಲೇಪನಂ ॥ ೪೧ ॥

---

೩೬-೩೭. ಅನಂತರ ಒಂದು ಕಾಲಿನಲ್ಲಿ ನಿಂತು ಕಣ್ಣು ಮುಚ್ಚದೆ ಸೂರ್ಯನನ್ನು ನೋಡುತ್ತ ಪಂಚವಿಂಶತಿ ವರ್ಣಗಳಿಂದ ಕೂಡಿದ ಮಂತ್ರವನ್ನು ಜಪಿಸುತ್ತಾ ಕ್ರೂರವಾದ ತಪಸ್ಸನ್ನು ಮಾಡಿದನು. ಆಗ ಆನಂದರೂಪಿಯಾದ ಕೃಷ್ಣನನ್ನು ಧ್ಯಾನಮಾಡಿದನು

೩೮-೪೧. ವಿಚಿತ್ರವಾದ ನಡಗೆಯಿಂದ ಗೋಕುಲದಲ್ಲಿ ಸಂಚರಿಸುತ್ತಾ ಲಲಿತವಾದ ಹೆಜ್ಜೆಯನ್ನಿಡುವುದರಿಂದ ಕಾಲು ಬಳೆಯನ್ನು ಸದ್ದುಮಾಡುತ್ತಾ ನಾನಾ ಬಗೆಯಾದ ಮನ್ಮಥಚೇಷ್ಟೆಗಳಿಂದ ಕಡೆಗಣ್ಣ ನೋಟದಿಂದ ನೋಡುತ್ತ ಸಂಮೋಹಿನಿಯೆಂಬ ಕೊಳಲಲ್ಲಿ ಪಂಚಮಧ್ವನಿಯನ್ನು ತುಟಿಯಿಂದ ಬಾರಿಸುತ್ತಾ ಆ ಗೋಕುಲದವರ ಮನಸ್ಸನ್ನೂ ದೇಹವನ್ನೂ ಅಪಹರಿಸುತ್ತಿರುವ ಸಡಿಲವಾದ ಸೀರೆಯ ಗಂಟುಳ್ಳ ಹಂಗಸರಿಂದ ಆಲಂಗಿಸಲ್ಪಡುತ್ತ ದಿವ್ಯ ಮಾಲೆಯನ್ನು ಧರಿಸಿಕೊಂಡು ದಿವ್ಯ ಗಂಧವನ್ನು ಪೂಸಿಕೊಂಡು ಶ್ಯಾಮಲಾಂಗನಾಗಿ ಕಾಂತಿಯಿಂದ ಕೂಡಿ ಮೂರು ಲೋಕವನ್ನೂ ಮೋಹಿಸುತ್ತಿರುವ ಆ ಕೃಷ್ಣನನ್ನು ಧ್ಯಾನಿಸಿದನು!

ಶ್ಯಾಮಲಾಂಗಂ ಪ್ರಪೂರ್ಣಂ ತಂ ಮೋಹಯನ್ತಂ ಜಗತ್ರಯಂ ।
ಸ ಏವಂ ಬಹುದೇಹೇನ ಸಮುಪಾಸ್ಯ ಜಗತ್ಪತಿಂ ॥ ೪೨ ॥

ನವಕಲ್ಪಾಂತರೇ ಜಾತಾ ಗೋಕುಲೇ ದಿವ್ಯರೂಪಿಣೀ ।
ಕನ್ಯಾ ಪ್ರಚಂಡನಾಮ್ನಸ್ತು ಗೋಪಸ್ಯಾತಿಯಶಸ್ವಿನೀ ॥ ೪೩ ॥

ಚಿತ್ರಗಂಧೇತಿ ವಿಖ್ಯಾತಾ ಸುಕುಮಾರೀ ಶುಭಾನನಾ ।
ನಿಜಾಂಗಗಂಧೈರ್ವಿವಿಧೈಃ ಮೋದಯಂತೀ ದಿಶೋ ದಶ ॥ ೪೪ ॥

ತಾಮೇನಾಂ ಪಶ್ಯ ಕಲ್ಯಾಣೀಂ ವೃಂದಶೋ ಮಧುಪಾಯಿನೀಂ ।
ಅಂಗೇಷು ಸ್ವಪತಿಂ ಕೃತ್ವಾ ರಸಾವೇಶಸಮಾಕುಲಾಂ ॥ ೪೫ ॥

ಅಸ್ಯಾಃ ಸ್ತನಪರಿಷ್ವಂಗಹಾರೈಸ್ಸರ್ವೇ ವಿಹನ್ಯತೇ ।
ವಕ್ಷಸ್ಥಲಾತ್ಪ್ರಚ್ಯವದ್ಭಿಃ ಚಿತ್ರಗಂಧಾದಿಸೌರಭೈಃ ॥ ೪೬ ॥

ಅಪರೇ ಮುನಿವತ್ಯಾಸ್ತು ಸತತಂ ಪ್ರೊತಮಾನಸಾಃ ।
ವಾಯುಭಕ್ಷಾಸ್ತಪಸ್ತೇಪುರ್ಜಪನ್ತಃ ಪರಮಂ ಮನುಂ ॥ ೪೭ ॥

---

೪೨. ಅವನು ಹೀಗೆ ಬಹುದೇಹಗಳಲ್ಲಿ ಸ್ವಾಮಿಯನ್ನು ಧ್ಯಾನಮಾಡಿ ಒಂಭತ್ತು ಕಲ್ಪಗಳಾದ ಮೇಲೆ ಗೋಕುಲದಲ್ಲಿ ದಿವ್ಯ ಸುಂದರಿಯಾಗಿ ಹುಟ್ಟಿದನು

೪೩-೪೪. ಪ್ರಚಂಡನಾಮನೆಂಬ ಗೋಪನಿಗೆ ಮಗಳಾಗಿ ಚಿತ್ರಗಂಧಿ ಎಂಬ ಹೆಸರನ್ನು ಪಡೆದಿರುವಳು. ಅವಳ ಮೈ ಸುವಾಸನೆಯಾಗಿ ಹತ್ತುದಿಕ್ಕುಗಳಲ್ಲಿಯೂ ಹರಡುತ್ತಿದೆ.

೪೫. ಆಕೆಯನ್ನು ನೋಡು. ಗುಂಪುಗುಂಪಿನಲ್ಲಿದ್ದುಕೊಂಡು ಮಧುಪಾನಮಾಡುತ್ತಾಳೆ. ಅಲ್ಲದೆ ಅಂಗದಲ್ಲಿ ಗಂಡನಿರುವಾಗಲೇ ರಸಾವೇಶದಿಂದ ಮಧುಪಾನ ಮಾಡುವಳು.

೪೬. ಇವಳು ಹಾಕಿಕೊಂಡಿರುವ ಹಾರಗಳು ಸ್ತನಗಳನ್ನು ಮುಟ್ಟುತ್ತಾ ಮೈಯ ಸೌಗಂಧ್ಯವನ್ನು ಎಲ್ಲಾ ಕಡೆಗೂ ಎರಚುತ್ತಾ ಹಾರಾಡುತ್ತಿವೆ

೪೭. ಅಲ್ಲಿದ್ದ ಮತ್ತೆ ಕೆಲವರು ವಾಯುಭಕ್ಷಕರಾಗಿ ಮಂತ್ರವನ್ನು ಜಪಿಸುತ್ತಾ ತಪಸ್ಸನ್ನು ಮಾಡಿದರು.

ಸ್ಮರಃ ಕೃಷ್ಣಾಯ ಕಾಮಾರ್ತಿಕೇಲಾದಿವ್ರತಶಾಲಿನೇ ।
ಆಗ್ನೇಯೀ ಸಹಿತಂ ಕೃತ್ವಾ ಮಂತ್ರಂ ಪಂಚದಶಾಕ್ಷರಂ ॥ ೪೮ ॥

ಧ್ಯಾಯನ್ನಿವರಾಃ ಕೃಷ್ಣಮೂರ್ತಿಂ ದಿವ್ಯವಿಭೂಷಣಾಂ ।
ದಿವ್ಯಚಿತ್ರದುಕೂಲೇನ ಪೂರ್ಣಪೀನಕಟಿಸ್ಥಳಾಂ ॥ ೪೯ ॥

ಮಯೂರಪಿಚ್ಛಕೈಃ ಕ್ಲೃಪ್ತ ಚೂಡಾಮುಜ್ವಲಕುಂಡಲಾಂ ।
ಸವ್ಯಜಂಘಾಂತ ಆದಾಯ ದಕ್ಷಿಣಂ ಚರಣಾಂಬುಜಂ ॥ ೫೦ ॥

ಭ್ರಮಂತೀಂ ಸಂಪುಟೀಕೃತ್ಯ ಚಾರುಹಸ್ತಾಂಬುಜದ್ವಯಂ ।
ಕಕ್ಷಾದೇಶವಿನಿಕ್ಷಿಪ್ತ ವೇಣುಂ ಪರಿಚಲತ್ಪುಟೀಂ ॥ ೫೧ ॥

ಆನಂದಯಂತೀಂ ಗೋಪೀನಾಂ ನಯನಾನಿ ಮನಾಂಸಿ ಚ ।
ಪರಮಾಶ್ಚರ್ಯರೂಪೇಣ ಪ್ರತಿಷ್ಠಾಂ ರಣಮಂಟಪೇ ॥ ೫೨ ॥

ಪ್ರಸೂನವರ್ಷೈರ್ಗೋಪೀಭಿಃ ಪೂಜ್ಯಮಾನಾಂ ಚ ಸರ್ವತಃ ।
ಅಥ ಕಲ್ಪಾಂತರೇ ದೇಹಂ ತ್ಯಕ್ತ್ವಾ ಜಾತಾ ಇಹಾಽಧುನಾ ॥ ೫೩ ॥

ಯಾಸಾಂ ಕರ್ಣೇಷು ದೃಶ್ಯಂತೇ ತಾಟಂಕಾ ರತ್ನನಿರ್ಮಿತಾಃ ।
ರತ್ನಮಾಲ್ಯಾನಿ ಕಂಠೇಷು ರತ್ನಪುಷ್ಪಾಣಿ ವೇಣಿಷು ॥ ೫೪ ॥

---

೪೮-೫೩. ಕಾಮನ ಕಲೆಯೇ ವ್ಯಾಪಾರವಾಗಿ ಉಳ್ಳ ಕೃಷ್ಣನನ್ನು ಈ ರೀತಿ ಧ್ಯಾನಿಸಿದರು. ಅಗ್ನ್ಯಕ್ಷರದಿಂದ ಕೂಡಿದ ಪಂಚದಶಾಕ್ಷರ ಮಂತ್ರವನ್ನು ಜಪಿಸಿದರು. ದಿವ್ಯವಾದ ಅಲಂಕಾರವುಳ್ಳ, ದಿವ್ಯವಾದ ಚಿತ್ರವಾದ ರೇಷ್ಮೆದುಕೂಲದಿಂದ ದಪ್ಪವಾದ ಪಿರ್ರೆಗಳನ್ನು ಧರಿಸಿ, ಬಲಗಾಲನ್ನು ಎಡಗಾಲಿನ ಒಳಗಿನಿಂದ ಡೊಂಕಾಗಿ ತೆಗೆದು ನಿಂತಿರುವ ಎರಡು ಕೈಗಳನ್ನು ಸಂಪುಟದಂತೆ ಮಾಡಿಕೊಂಡು ಕೊಳಲನ್ನು ಕಂಕುಳಲ್ಲಿಟ್ಟುಕೊಂಡು ಗೋಪಿಯರ ಕಣ್ಣನ್ನೂ ಮನಸ್ಸನ್ನೂ ಆನಂದಪಡಿಸುತ್ತಿರುವ ರಂಗಮಂಟಪದಲ್ಲಿ ಆಶ್ಚರ್ಯರೂಪದಿಂದ ಇರುತ್ತಾ ಗೋಪಿಯರಿಂದ ಹೂವಿನಿಂದ ಪೂಜೆ ಮಾಡಿಸಿಕೊಳ್ಳುತ್ತಿರುವ ಸ್ವಾಮಿಯಾದ ಶ್ರೀಕೃಷ್ಣನನ್ನು ಧ್ಯಾನಮಾಡಿದರು.

೫೪. ಅವರು ಕಿವಿಯಲ್ಲಿ ರತ್ನದ ಓಲೆಗಳನ್ನು ಹಾಕಿಕೊಂಡಿರುತ್ತಾರೆ. ಕತ್ತಿನಲ್ಲಿ ರತ್ನಮಾಲೆಗಳನ್ನೂ ಜಡೆಯಲ್ಲಿ ರತ್ನಪುಷ್ಪಗಳನ್ನೂ ಹಾಕಿಕೊಂಡಿರುತ್ತಾರೆ.

ಮುನಿಶ್ಶುಚಿಶ್ರವಾ ನಾಮ ಸುವರ್ಣೋ ನಾಮ ಚಾಪರಃ ।
ಕುಶಧ್ವಜಸ್ಯ ಬ್ರಹ್ಮರ್ಷೇಃ ಪುತ್ರೌ ತೇ ವೇದಪಾರಗೌ ॥ ೫೫ ॥

ಊರ್ಧ್ವಪಾದೌ ತಪೋ ಘೋರಂ ತೇಪತುಸ್ತ್ರ್ಯಕ್ಷರಂ ಮನುಂ ।
ಹ್ರೀಂ ಹಂಸಇತಿ ಕೃತ್ವೈವ ಜಪಂತೌ ಯತಮಾನಸೌ ॥ ೫೬ ॥

ಧ್ಯಾಯಂತೌ ಗೋಕುಲೇ ಕೃಷ್ಣಂ ಬಾಲಕಂ ದಶವಾರ್ಷಿಕಂ ।
ಕಂದರ್ಪಸಮರೂಪೇಣ ತಾರುಣ್ಯಲಲಿತೇನ ಚ ॥ ೫೭ ॥

ಪಶ್ಯನ್ತೀವ್ರಜಬಾಲಾಕ್ಷೀರ್ಮೋಹಯನ್ತಂ ಅನಾರತಂ ।
ತೌ ಕಲ್ಪಾಂತೇ ತನುಂ ತ್ಯಕ್ತ್ವಾ ಲಬ್ಧವಂತೌ ಜನುರ್ವ್ರಜೇ ॥ ೫೮ ॥

ಸುವೀರನಾಮಗೋಪಸ್ಯ ಸುತೇ ಪರಮಶೋಭನೇ ।
ಯಯೋರ್ಹಸ್ತೇ ಪ್ರದೃಶ್ಯೇತೇ ಸಾರಿಕೇ ಶುಭರಾವಿಣೀ ॥ ೫೯ ॥

ಜಟಿಲೋ ಜಂಘಪೂತಶ್ಚ ಘೃತಾಶೀ ಕರ್ಬುರೇವ ಚ ।
ಚತ್ವಾರೋ ಮುನಯೋ ಧನ್ಯಾ ಇಹಾಮುತ್ರ ಚ ನಿಸ್ಪೃಹಾಃ ॥ ೬೦ ॥

ಕೇವಲೇನೈಕಭಾವೇನ ಪ್ರಸನ್ನಾ ವಲ್ಲವೀಪತಿಂ ।
ತೇಪುಸ್ತೇ ಸಲಿಲೇ ಮಗ್ನಾ ಜಪನ್ತೋ ಮನುಮುತ್ತಮಂ ॥ ೬೧ ॥

---

೫೫–೫೮. ಶುಚಿಶ್ರವ, ಸುವರ್ಣ ಎಂಬ ವೇದಪಾರಗರು, ಬ್ರಹ್ಮರ್ಷಿಯಾದ ಕುಶಧ್ವಜನ ಮಕ್ಕಳು. ಕಾಲುಗಳನ್ನು ಮೇಲಕ್ಕೆ ಮಾಡಿಕೊಂಡು ಹ್ರೀಂ ಹಂಸ ಎಂಬ ಮೂರಕ್ಷರದ ಮಂತ್ರವನ್ನು ಜಪಿಸುತ್ತ ತಪಿಸಿದರು ಹತ್ತುವರ್ಷದ ಬಾಲಕನಾದ ತಾರುಣ್ಯದಿಂದ ಕಂದರ್ಪನಂತಿರುವ ಗೋಕುಲದ ಹುಡುಗಿಯರ ಮುಖ ತುಟಿಗಳನ್ನು ನೋಡುತ್ತಿರುವ ಎಲ್ಲರನ್ನೂ ಮೋಹಿಸುತ್ತಿರುವ ಸ್ವಾಮಿಯಾದ ಕೃಷ್ಣನನ್ನು ಧ್ಯಾನಿಸಿದರು. ಅವರು ಕಲ್ಪಾಂತದಲ್ಲಿ ದೇಹವನ್ನು ಬಿಟ್ಟು ಗೋಕುಲದಲ್ಲಿ ಹುಟ್ಟಿದರು.

೫೯. ಅವರು ಸುವೀರನೆಂಬ ಗೋಪನಿಗೆ ಮಕ್ಕಳಾಗಿ ಹುಟ್ಟಿದರು. ಅವರ ಕೈಯಲ್ಲಿ ಯಾವಾಗಲೂ ಶುಭವಾದ ಮಾತನ್ನಾಡುವ ಸಾರಿಕಾಪಕ್ಷಿಗಳಿರುತ್ತವೆ.

೬೦. ಜಟಿಲ, ಜಂಘಪೂತ, ಘೃತಾಶೀ, ಕರ್ಬುರ ಎಂಬ ನಾಲ್ವರು ಋಷಿಗಳು ಧನ್ಯರು. ಇವರು ಇಹಪರಗಳಲ್ಲಿ ನಿಸ್ಪೃಹರು.

೬೧. ಇವರು ಏಕಾಗ್ರತೆಯಿಂದ ಸ್ವಾಮಿಯನ್ನು ಶರಣುಹೊಂದಿ ನೀರಿನಲ್ಲಿ ಮುಳುಗಿ ಜಪಮಾಡುತ್ತಾ ತಪಸ್ಸುಮಾಡಿದರು.

ರಮಾತ್ರಯೇಣ ಪುಟಿತಂ ಸ್ಮರಾದ್ಯಂತದಶಾಕ್ಷರಂ ।
ದಧ್ಯುಶ್ಚ ಗಾಢಭಾವೇನ ವಲ್ಲವೀಭಿರ್ವನೇವನೇ ॥ ೬೨ ॥

ಭ್ರಮನ್ತಂ ನೃತ್ಯಗೀತಾದ್ಯೈರ್ಮಾನಯನ್ತಂ ಮನೋಹರಂ ।
ಚಂದನಾಲಿಪ್ತಸರ್ವಾಂಗಂ ಜಪಾಪುಷ್ಪಾವತಂಸಕಂ ॥ ೬೩ ॥

ಕಲ್ಹಾರಮಾಲಯಾವೀತಂ ನೀಲಪೀತಪಟಾವೃತಂ ।
ಕಲ್ಪತ್ರಯಾಂತೇ ಜಾತಾಸ್ತೇ ಗೋಕುಲೇ ಶುಭಲಕ್ಷಣಾಃ ॥ ೬೪ ॥

ಇಮಾಸ್ತಾ ಪುರತೋ ರಮ್ಯಾಃ ಉಪವಿಷ್ಟಾ ನತಭ್ರುವಃ ।
ಯಾಸಾಂ ಭರ್ಮಭೃತಾನ್ಯೇವ ವಲಯಾನಿ ಪ್ರಕೋಷ್ಠಕೇ ॥ ೬೫ ॥

ವಿಚಿತ್ರಾಣಿ ಚ ರತ್ನಾದ್ಯೈಃ ದಿವ್ಯಮುಕ್ತಾಫಲಾದಿಭಿಃ ।
ಮುನಿರ್ದೀರ್ಘತಪಾ ನಾಮ ವ್ಯಾಸೋಭೂತ್ಪೂರ್ವಕಲ್ಪಕೇ ॥ ೬೬ ॥

ತತ್ಪುತ್ರಃ ಶುಕ ಇತ್ಯೇವ ಖ್ಯಾತೋ ಮುನಿವರಸ್ಸುಧೀಃ ।
ಸೋಪಿ ಬಾಲೋ ಮಹಾಪ್ರಾಜ್ಞಃ ಸದೈವಾನುಸ್ಮರನ್ಪದಂ ॥ ೬೭ ॥

---

೬೨. ರಮಾತ್ರಯದಿಂದ ಕೂಡಿದ ಸ್ಮರಾಕ್ಷರವೇ ಮೊದಲು ಕೊನೆಯಲ್ಲುಳ್ಳ ದಶಾಕ್ಷರ ಮಂತ್ರವನ್ನು ಜಪಿಸುತ್ತಿದ್ದರು.

೬೩. ಗೋಪಸ್ತ್ರೀಯರಿಂದ ಕೂಡಿ ಕಾಡುಗಳಲ್ಲೆಲ್ಲಾ ಅಲೆಯುತ್ತಿರುವ ನೃತ್ಯ ಗೀತಗಳಿಂದ ಅವರನ್ನು ಗೌರವಿಸುತ್ತಾ ಸಂತೋಷಪಡಿಸುತ್ತಿರುವ ಚಂದನವನ್ನು ಪೂಸಿ ಕೊಂಡಿರುವ ದಾಸವಾಳದ ಹೂವನ್ನು ಮುಡಿದಿರುವ ಕಲ್ಹಾರದ ಮಾಲೆಯನ್ನು ಹಾಕಿ ಕೊಂಡಿರುವ ನೀಲಿ ಬಿಳುಪುಗಳುಳ್ಳ ಬಟ್ಟೆಯನ್ನುಟ್ಟಿರುವ ಸ್ವಾಮಿಯನ್ನು ಧ್ಯಾನಿಸಿದರು.

೬೪–೬೫. ಮೂರು ಕಲ್ಪಗಳಾದ ಮೇಲೆ ಅವರು ಗೋಕುಲದಲ್ಲಿ ಶುಭಲಕ್ಷಣ ವುಳ್ಳವರಾಗಿ ಹುಟ್ಟಿದರು. ಇವರು ರಮ್ಯರಾಗಿ ಹುಬ್ಬನ್ನು ಸೊಟ್ಟುಮಾಡಿಕೊಂಡು ಕುಳಿತಿರುತ್ತಿದ್ದರು ಇವರು ವಿಚಿತ್ರವಾದ ರತ್ನ ಮುತ್ತುಗಳಿಂದ ಕೂಡಿದ ಬಳೆಗಳನ್ನು ಮೊಳಕೈವರೆಗೂ ಹಾಕಿಕೊಂಡಿದ್ದರು.

೬೬. ಪೂರ್ವಕಲ್ಪದಲ್ಲಿ ದೀರ್ಘತಪನೆಂಬೊಬ್ಬ ವ್ಯಾಸನಿದ್ದನು. ಅವನ ಮಗನು ಶುಕನೆಂಬೊಬ್ಬನೂ ಇದ್ದನು.

೬೭. ಅವನು ಹುಡುಗನಾಗಿದ್ದಾಗಲೇ ಸ್ವಾಮಿಯ ಚರಣಗಳನ್ನು ಧ್ಯಾನಿಸುತ್ತಾ ತಾಯಿತಂದೆಗಳನ್ನು ಬಿಟ್ಟು ಕೃಷ್ಣನನ್ನು ಧ್ಯಾನಮಾಡಲು ಕಾಡಿಗೆ ಹೋದನು.

ವಿಹಾಯ ಪಿತೃಮಾತ್ರಾದಿ ಕೃಷ್ಣಂ ಧ್ಯಾತ್ವಾ ವನಂಗತಃ ।
ಸರ್ವತ್ರ ಮಾನಸೈರ್ದಿವ್ಯೈಃ ಉಪಚಾರೈರಹರ್ನಿಶಂ ॥ ೬೮ ॥

ಅನಾಹಾರೋಽರ್ಚಯದ್ವಿಷ್ಣುಂ ಗೋಪರೂಪಿಣಮೀಶ್ವರಂ ।
ರಮಯಾ ಪುಟಿತಂ ಮಂತ್ರಂ ಜಪನ್ನಷ್ಟಾದಶಾಕ್ಷರಂ ॥ ೬೯ ॥

ದಧ್ಯೌ ಪರಮಭಾವೇನ ಹರಿಂ ಹೈಮತರೋರಧಃ ।
ಹೈಮಮಂಟಪಿಕಾಯಾಂ ಚ ಹೇಮಸಿಂಹಾಸನೋಪರಿ ॥ ೭೦ ॥

ಆಸೀನಂ ಹೇಮಹಸ್ತ್ರಾಸ್ತ್ರೈಃ ದಧಾನಂ ಹೇಮವಂಶಿಕಾಂ ।
ದಕ್ಷಿಣೇನ ಭ್ರಾಮಯನ್ತಂ ಪಾಣಿನಾ ಹೇಮಪಂಕಜಂ ॥ ೭೧ ॥

ಹೇಮದ್ರವೇಣ ಪ್ರಿಯಯಾ ಪರಿಕ್ಲೃಪ್ತಾಂಗಚಿತ್ರಕಂ ।
ಹಸನ್ತಮತಿಹರ್ಷೇಣ ಪಶ್ಯಂತಂ ಚ ನಿಜಾಶ್ರಯಂ ॥ ೭೨ ॥

ಹರ್ಷಾಶ್ರುಪೂರ್ಣಃ ಪುಲಕಾನ್ವಿತಾಂಗಃ
ಪ್ರಸೀದನಾಥೇತಿ ವದನ್ನಥೋಚ್ಚೈಃ ।
ದಂಡಪ್ರಣಾಮಾಯ ಪಪಾತ ಭೂಮೌ
ಸಂವೇಪಮಾನಸ್ತ್ರಿಜಗದ್ವಿಧಾತುಃ ॥ ೭೩ ॥

---

೬೮. ಆ ಋಷಿಯು ಮಾನಸಪೂಜೆಯಿಂದ ಹಗಲೂ ರಾತ್ರಿಯೂ ಗೋಪ ರೂಪಿಯಾದ ಕೃಷ್ಣನನ್ನು ಧ್ಯಾನಿಸುತ್ತ ಆಹಾರವನ್ನು ತ್ಯಜಿಸಿದನು.

೬೯-೭೨. ರಮೆಯಿಂದ ಸೇರಿಕೊಂಡಿರುವ ಅಷ್ಟಾದಶಾಕ್ಷರೀ ಮಂತ್ರವನ್ನು ಜಪಿಸಿದನು. ಚಿನ್ನದ ಮರದ ಕೆಳಗೆ ಚಿನ್ನದ ಮಂಟಪದಲ್ಲಿ ಚಿನ್ನದ ಸಿಂಹಾಸನದಲ್ಲಿ ಕುಳಿತು ಚಿನ್ನದ ವಸ್ತ್ರಗಳಿಂದಲಂಕೃತನಾಗಿ ಚಿನ್ನದ ಕೊಳಲನ್ನು ಧರಿಸಿ ಬಲಗೈಯಲ್ಲಿ ಚಿನ್ನದ ಕಮಲವನ್ನು ತಿರುಗಿಸುತ್ತಲಿರುವ ಹೆಂಡತಿಯಿಂದ ಚಿನ್ನದ ಪುಡಿಯಿಂದ ಅಂಗರಾಗವನ್ನು ಹಚ್ಚಿಸಿಕೊಂಡಿರುವ ಸಂತೋಷದಿಂದ ನಗುತ್ತಿರುವ ತನ್ನ ಸ್ಥಾನವನ್ನು ನೋಡಿಕೊಳ್ಳುತ್ತಲಿರುವ ಕೃಷ್ಣನನ್ನು ಧ್ಯಾನಿಸಿದನು.

೭೩. ಹರ್ಷದಿಂದ ಕಣ್ಣೀರು ಸುರಿಸುತ್ತಾ ರೋಮಾಂಚಿತನಾಗಿ ಸ್ವಾಮಿ! ಪ್ರಸನ್ನನಾಗು. ಎಂದು ಗಟ್ಟಿಯಾಗಿ ಕೂಗುತ್ತ ಮೂರುಲೋಕದ ಕರ್ತನಾದ ಸ್ವಾಮಿಯ ಪಾದಗಳಲ್ಲಿ ದಂಡಪ್ರಣಾಮ ಮಾಡುತ್ತಾ ನಮಸ್ಕರಿಸಿದನು.

ತಂ ಭಕ್ತಿಕಾಮಂ ಪತಿತಂ ಧರಣ್ಯಾಂ
ಮಾಯಾಸುತೋऽಸ್ಮೀತಿ ವದಂಸ್ತಮುಚ್ಚೈಃ ।
ಉತ್ಥಾಪಯಾಮಾಸ ಭುಜೌ ಗೃಹೀತ್ವಾ
ಪಸ್ಪರ್ಶಹರ್ಷೋऽಪಚಿತೇಕ್ಷಣೇನ ॥ ೭೪ ॥

ಉವಾಚ ಚ ಪ್ರಿಯಾರೂಪಂ ಲಬ್ಧವಂತಂ ಶುಕಂ ಹರಿಃ ।
ತ್ವಂ ಮೇ ಪ್ರಿಯತಮಾ ಭದ್ರೇ ಸದಾ ತಿಷ್ಠ ಮಮಾಂತಿಕೇ ॥ ೭೫ ॥

ಮದ್ರೂಪಂ ಚಿಂತಯಂತೀ ಚ ಪ್ರೇಮಾಸ್ಪದಮುಪಾಗತಾ ।
ದ್ವೇ ಚ ಮುಖ್ಯತಮೇ ಗೋಪ್ಯೌ ಸಮಾನವಯಸೀ ಶುಭೇ ॥ ೭೬ ॥

ಏಕವ್ರತೇ ಏಕನಿಷ್ಠೇ ಏಕನಕ್ಷತ್ರಮಾಲಿನೀ ।
ತಪ್ತಜಾಂಬೂನದಪ್ರಖ್ಯಾ ತತ್ರೈಕಾನ್ಯಾ ತಟಿತ್ಪ್ರಭಾ ॥ ೭೭ ॥

ಏಕಾ ನಿದ್ರಾಯಮಾಣಾಕ್ಷೀ ಪರಾ ಸೌಮ್ಯಾಯತೇಕ್ಷಣಾ ।
ಸೋऽರ್ಚಯತ್ಪರಯಾ ಭಕ್ತ್ಯಾ ತೇ ಹರೇಃ ಸವ್ಯದಕ್ಷಿಣೇ ॥ ೭೮ ॥

---

೭೪. ಭಕ್ತಿಯಿಂದ ಭೂಮಿಯಲ್ಲಿ ಬಿದ್ದಿರುವ ಅವನನ್ನು ನಾನು ಮಾಯೆಯಿಂದ ಮಗುವಾಗಿದ್ದೇನೆಂದು ಘಟ್ಟಿಯಾಗಿ ಹೇಳುತ್ತಾ ಹರ್ಷದ ನೋಟದಿಂದ ನೋಡುತ್ತಾ ಭುಜಗಳನ್ನು ಹಿಡಿದು ಆ ಕೃಷ್ಣನು ಆತನನ್ನು ಎತ್ತಿದನು.

೭೫. ತನ್ನ ಪ್ರಿಯೆಯ ರೂಪವನ್ನು ಹೊಂದಿರುವ ಆ ಶುಕನನ್ನು ಕುರಿತು ಎಲೈ ! ನೀನು ನನಗೆ ಅತ್ಯಂತ ಪ್ರಿಯಳು. ಸಮೀಪದಲ್ಲಿಯೇ ಯಾವಾಗಲೂ ಇರು. ಎಂದು ಹರಿಯು ಹೇಳಿದನು.

೭೬-೭೮. ನೀನು ನನ್ನ ರೂಪವನ್ನೇ ಚಿಂತಿಸುತ್ತಿದ್ದುದರಿಂದ ಪ್ರೀತಿಪಾತ್ರಳಾದೆ ಸಮಾನ ವಯಸ್ಕರಾದ ಇಬ್ಬರು ಗೋಪಿಯರು ನನಗೆ ಪ್ರಿಯತಮರು. ಅವರಿಬ್ಬರೂ ಏಕವ್ರತವುಳ್ಳವರು. ಒಬ್ಬನಲ್ಲಿಯೇ ಆಸಕ್ತಿಯುಳ್ಳವರು, ಏಕನಕ್ಷತ್ರದವರು. ಒಂದೇ ಹೆಸರುಳ್ಳವರು. ಒಬ್ಬಳು ಚಿನ್ನದ ಬಣ್ಣವುಳ್ಳವಳು. ಮತ್ತೊಬ್ಬಳು ಮಿಂಚಿನ ಬಣ್ಣವುಳ್ಳವಳು. ಒಬ್ಬಳು ನಿದ್ರೆಮಾಡುವಂತಿರುವ ಕಣ್ಣುಳ್ಳವಳು. ಮತ್ತೊಬ್ಬಳು ಸೌಮ್ಯವಾದ ಕಣ್ಣುಳ್ಳವಳು. ಒಬ್ಬನು ಪೂರ್ವದಲ್ಲಿ ಭಕ್ತಿಯಿಂದ ಹರಿಯ ಎರಡು

ಸ ಕಲ್ಪಾಂತೇ ತನುಂ ತ್ಯಕ್ತ್ವಾ ಗೋಕುಲೇಭೂನ್ಮಹಾತ್ಮನಃ ।
ಉಪನಂದಸ್ಯ ದುಹಿತಾ ನೀಲೋತ್ಪಲದಳಚ್ಛವಿಃ ॥ ೭೯ ॥

ಸೋಽಯಂ ಶ್ರೀಕೃಷ್ಣವನಿತಾ ಪೀತಶಾಟೀಪರಿಚ್ಛದಾ ।
ರಕ್ತಚೋಳಿಕಯಾ ಪೂರ್ಣಶಾತಕುಂಭಘಟಸ್ತನೀ । ॥ ೮೦ ॥

ದಧಾರ ರಕ್ತಸಿಂಧೂರಂ ಸರ್ವಾಂಗಸ್ಯಾವಗುಂಠಿನೀ ।
ಸ್ವರ್ಣಕುಂಡಲವಿಭ್ರಾಜದ್ಗಂಡದೇಶಾ ಸುಶೋಭನಾ ॥ ೮೧ ॥

ಸ್ವರ್ಣಪಂಕಜಮಾಲಾಢ್ಯಾ ಕುಂಕುಮಾಲಿಪ್ತಸುಸ್ತನೀ ।
ಯಸ್ಯಾ ಹಸ್ತೇ ಚರ್ವಣೀಯಂ ದೃಶ್ಯತೇ ಹರಿಣಾರ್ಪಿತಂ ॥ ೮೨ ॥

ವೇಣುವಾದ್ಯಾತಿನಿಪುಣಾ ಕೇಶವಸ್ಯಾತಿತೋಷಿಣೀ ।
ಕೃಷ್ಣೇನ ಪರಿತುಷ್ಟೇನ ಕದಾಚಿದ್ಗಾನಕರ್ಮಣಿ ॥ ೮೩ ॥

ವಿನ್ಯಸ್ತಾ ಕಂಬುಕಂಠೇಽಸ್ಯಾ ಭಾತಿಗುಂಜಾವಳಿಶ್ಶುಭಾ ।
ಪರೋಕ್ಷೇ ಚಾಪಿ ಕೃಷ್ಣಸ್ಯ ಕೃಷ್ಣಕಾಂತಾ ಸ್ಮರಾರ್ದಿತಾ ॥ ೮೪ ॥

---

ಪಾದಗಳನ್ನೂ ಪೂಜಿಸಿದನು. ಅವನು ಕಲ್ಪಾಂತದಲ್ಲಿ ಸತ್ತು ಮಹಾತ್ಮನಾದ ಉಪ ನಂದನ ಮಗಳಾಗಿ ಹುಟ್ಟಿದನು. ಅವಳು ನೀಲೋತ್ಪಲದ ಕಾಂತಿಯುಳ್ಳವಳು.

೮೦-೮೧. ಈಕೆಯು ಕೃಷ್ಣನ ಹೆಂಡತಿಯು. ಹಳದಿಯ ಒಟ್ಟೆಯನ್ನು ಉಟ್ಟಿದ್ದಾಳೆ. ಕೆಂಪು ರವಿಕೆಯನ್ನು ತೊಟ್ಟಿದ್ದಾಳೆ. ಚಿನ್ನದ ಕೊಡದಂತಿರುವ ಸ್ತನ ಗಳನ್ನು ಹೊಂದಿದ್ದಾಳೆ. ಸರ್ವಾಂಗಕ್ಕೂ ಚಂದ್ರವನ್ನು ಬಳಿದುಕೊಂಡಿದ್ದಾಳೆ. ಚಿನ್ನದ ಓಲೆಗಳಿಂದ ಗಲ್ಲವು ಪ್ರಕಾಶಿಸುತ್ತದೆ.

೮೨. ಚಿನ್ನದ ಕಮಲಮಾಲೆಯನ್ನು ಹಾಕಿಕೊಂಡಿದ್ದಾಳೆ. ಸ್ತನಗಳಿಗೆ ಕುಂಕುಮ ಕೇಸರಿಯನ್ನು ಬಳಿದುಕೊಂಡಿದ್ದಾಳೆ. ಹರಿಯು ಕೊಟ್ಟಿರುವ ವೀಳೆಯ ವನ್ನು ಕೈಲಿ ಹಿಡಿದಿದ್ದಾಳೆ.

೮೩-೮೪. ಕೊಳಲು ವಾದ್ಯದಲ್ಲಿ ನಿಪುಣಳು. ಕೇಶವನಿಗೆ ಸಂತೋಷವನ್ನುಂ ಟುಮಾಡತಕ್ಕವಳು. ಗಾನದಿಂದ ಸಂತುಷ್ಟನಾದ ಕೃಷ್ಣನು ಗುಲಗಂಜಿಹಾರವನ್ನು ಇವಳ ಕೊರಳಿಗೆ ಒಂದುಸಾರಿ ಕೊಟ್ಟಿದ್ದಾನೆ. ಅದು ಪ್ರಕಾಶಿಸುತ್ತದೆ. ಕೃಷ್ಣನಿಲ್ಲ

ಸಖೀಭಿರ್ವಾದಯಂತೀಭಿಃ ಗಾಯಂತೀ ಸುಸ್ವರಂ ಪರಂ ।
ನರ್ತಯೇತ್ಪ್ರಿಯವೇಷೇಣ ವೇಷಯಿತ್ವಾ ವಧೂಮಿಮಾಂ ॥ ೮೫ ॥

ವಾರಂ ವಾರಂ ಚ ಗೋವಿಂದಭಾವೇನಾಲಿಂಗ್ಯ ಚುಂಬತಿ ।
ಪ್ರಿಯಾಸೌ ಸರ್ವಗೋಪೀನಾಂ ಕೃಷ್ಣಸ್ಯಾತ್ಯತಿವಲ್ಲಭಾ ॥ ೮೬ ॥

ಶ್ವೇತಕೇತೋಸ್ಸುತಃ ಕಶ್ಚಿದ್ವೇದವೇದಾಂಗಪಾರಗಃ ।
ಸರ್ವಮೇವ ಪರಿತ್ಯಜ್ಯ ಪ್ರಚಂಡಸ್ತಪ ಆಸ್ಥಿತಃ ॥ ೮೭ ॥

ಮುರಾರಿಸೇವಿತಪದಾಂ ಸುಧಾಮಧುರವಾದಿನೀಂ ।
ಗೋವಿಂದಸ್ಯ ಪ್ರಿಯಾಂ ಶಕ್ತಿಂ ಬ್ರಹ್ಮರುದ್ರಾದಿದುರ್ಗಮಾಂ ॥ ೮೮ ॥

ಭಜನ್ತೀಮೇಕಭಾವೇನ ಶ್ರಿಯಮೇವ ಮನೋಹರಾಂ ।
ಧ್ಯಾಯನ್ಜಜಾಪ ಸತತಂ ಮಂತ್ರಮೇಕಾದಶಾಕ್ಷರಂ ॥ ೮೯ ॥

ಹಸಿತಂ ಸಕಲಂ ಕೃತ್ವಾ ಬತಮಾಯೇಷು ಯೋಜಯೇತ್ ।
ಕಾಂತ್ಯಾದಿಭಿರ್ಗಸಂತೀಭಿರ್ಗಾಸಯತ್ಯನಿಭಾಜಗತ್ ॥ ೯೦ ॥

---

ದಿರುವಾಗ ಸ್ಮರಾರ್ದಿತಳಾಗಲು ಸಖಿಯರು ವಾದ್ಯವನ್ನು ಬಾರಿಸುತ್ತಿರುವಾಗ ಈಕೆಗೆ ಗಂಡನವೇಷವನ್ನು ಹಾಕಿ ಕುಣಿಸುವರು.

೮೬-೮೯. ಗೋವಿಂದನೆಂಬ ಭಾವದಿಂದ ಪದೇಪದೇ ಆಲಿಂಗಿಸುತ್ತಾ ಚುಂಬಿಸುತ್ತಾಳೆ. ಈಕೆಯು ಸರ್ವಗೋಪಿಯರಿಗೂ ಪ್ರಿಯಳು. ಕೃಷ್ಣನಿಗೆ ಬಹು ಪ್ರಿಯಳು. ಶ್ವೇತಕೇತುವಿನ ಮಗನೊಬ್ಬನು ವೇದ ವೇದಾಂಗ ವಿದ್ವಾಂಸನು. ಎಲ್ಲವನ್ನೂ ಪರಿತ್ಯಾಗಮಾಡಿ ಉಗ್ರವಾದ ತಪಸ್ಸನ್ನು ಆಚರಿಸಿದನು. ಮುರಾರಿಯ ಪಾದಗಳನ್ನು ಸೇವಿಸುತ್ತಿರುವ ಮಧುರವಾಗಿ ಮಾತನಾಡುತ್ತಿರುವ ಬ್ರಹ್ಮರುದ್ರರಿಗೂ ತಿಳಿಯಲಸದಳವಾದ ಗೋವಿಂದನ ಪ್ರಿಯಳಾದ ಶಕ್ತಿಯಾದ ಮನೋಹರಳಾದ ಲಕ್ಷ್ಮಿಯನ್ನು ಧ್ಯಾನ ಮಾಡುತ್ತಾ ಏಕಾದಶಾಕ್ಷರೀ ಮಂತ್ರವನ್ನು ಜಪಿಸಿದನು.

೯೦. ಹಸಿತವನ್ನು ಮಾಯೆಯೊಡನೆ ಸೇರಿಸಿ ಕಾಂತಿ ಪಸಂತಿಗಳಿಂದ ಕೂಡಿಸಿ ಒಂದು ಮಾಡಬೇಕು.

ವಸಂತೇ ಮಮತೇಕ್ಕೇವಂ ಮಂತ್ರಾರ್ಥಂ ಚಿಂತಯೇತ್ಸದಾ ।
ಸೋಪಿ ಕಲ್ಪದ್ವಯೇನೈವ ಸಿದ್ಧೋತ್ರಜನಿಮಾಪ್ತವಾನ್ ॥ ೯೧ ॥

ಸೇಯಂ ಭಾಲಾವನೇಃ ಪುತ್ರೀ ಕೃಶಾಂಗೀ ಕುಡ್ಮಲಸ್ತನೀ ।
ಮುಕ್ತಾವಳಿಲಸತ್ಕಂಠೀ ಶುದ್ಧಕೌಶೇಶವಾಸಿನೀ ॥ ೯೨ ॥

ಮುಕ್ತಾಚ್ಛುರಿತಮಂಜೀರಕಂಕಣಾಂಗದಮುದ್ರಿಕಾಂ ।
ಬಿಭ್ರತೀ ಕುಟ್ಮಲೇ ದಿವ್ಯೇ ಅಮೃತಸ್ರಾವಿಣೀ ಶುಭೇ ॥ ೯೩ ॥

ವೃತಕಸ್ತೂರಿಕಾ ವೇಣೀ ಮಧ್ಯೇ ಸಿಂಧೂರಬಿಂದುಕಂ ।
ದಧಾನಾ ಚಿತ್ರಕಂ ಭಾಲೇ ಸಾರ್ಧಂ ಚಂದನಚಿತ್ರಕೈಃ ॥ ೯೪ ॥

ಯಾಸೌ ಚ ದೃಶ್ಯತೇ ಶಾಂತಾ ಜಪಂತೀ ಪರಮಂ ಪರಂ ।
ಆಸೀಚ್ಚಂದ್ರಪ್ರಭೋ ನಾಮ ರಾಜರ್ಷಿಃ ಪ್ರಿಯದರ್ಶನಃ ॥ ೯೫ ॥

ತಸ್ಯ ಕೃಷ್ಣಪ್ರಸಾದೇನ ಪುತ್ರೋಭೂನ್ಮಧುರಾಕೃತಿಃ ।
ಚಿತ್ರಧ್ವಜ ಇತಿಖ್ಯಾತಃ ಕೌಮಾರಾವಧಿ ವೈಷ್ಣವಃ ॥ ೯೬ ॥

---

೯೧ ವಸಂತದಲ್ಲಿ ಈ ಮಂತ್ರಾರ್ಥವನ್ನು ಚಿಂತಿಸಬೇಕು. ಅವನು ಎರಡು ಕಲ್ಪ ಹೀಗೆ ಮಾಡಿ ಈ ವೃಂದಾವನದಲ್ಲಿ ಹುಟ್ಟಿರುತ್ತಾನೆ.

೯೨-೯೪. ಅವಳೇ ಈ ಭೂಮಿಯ ಮಗಳು. ಕೃಶಾಂಗಿಯು. ಮಗ್ಗಿನಂತಿರುವ ಸ್ತನಗಳುಳ್ಳವಳು. ಮುತ್ತಿನಿಂದ ಕೂಡಿದ ಕಂಠಿಯನ್ನು ಧರಿಸಿದ್ದಾಳೆ. ಬಿಳಿಯ ರೇಷ್ಮೆಬಟ್ಟೆಯನ್ನು ಹಾಕಿಕೊಂಡಿದ್ದಾಳೆ. ಮುತ್ತನ್ನು ಜೋಡಿಸಿರುವ ಒಡ್ಯಾಣವನ್ನೂ, ಕೈಬಳೆಯನ್ನೂ ಹಾಕಿಕೊಂಡಿದ್ದಾಳೆ. ಅಮೃತವನ್ನು ಸುರಿಸುವ ಎರಡು ಮಗ್ಗುಗಳನ್ನು ಹೊಂದಿದ್ದಾಳೆ. ಜಡೆಗೆ ಕಸ್ತೂರಿಯನ್ನು ಸುತ್ತಲೂ ತೊಡೆದುಕೊಂಡು ಮಧ್ಯದಲ್ಲಿ ಚಂದ್ರದ ಬಿಂದುವನ್ನಿಟ್ಟಿದ್ದಾಳೆ. ಚಂದನದ ಚಿತ್ರಗಳಿಂದಲೂ ಪುಂಡ್ರದಿಂದಲೂ ಹಣೆಯನ್ನು ಅಲಂಕರಿಸಿಕೊಂಡಿದ್ದಾಳೆ.

೯೫. ಇಲ್ಲಿ ಕಾಣುತ್ತಿರುವವಳು ಶಾಂತಳು. ಇವಳು ಪರಮ ಮಂತ್ರವನ್ನು ಜಪಿಸಿದಳು. ಚಂದ್ರಪ್ರಭನೆಂಬ ಒಬ್ಬ ರಾಜರ್ಷಿಯಿದ್ದನು.

೯೬. ಅವನಿಗೆ ಕೃಷ್ಣನ ಅನುಗ್ರಹದಿಂದ ಒಬ್ಬ ಸುಂದರನಾದ ಮಗನು ಹುಟ್ಟಿದನು. ಅವನ ಹೆಸರು ಚಿತ್ರಧ್ವಜನು. ಅವನು ವೈಷ್ಣವನು.

ಸ ರಾಜಾ ಸ್ವಸುತಂ ಸೌಮ್ಯಂ ಸುಸ್ಥಿರಂ ದ್ವಾದಶಾಬ್ದಿಕಂ ।
ಆದೀಕ್ಷಯದ್ದ್ವಿಜಾನ್ಮಂತ್ರಂ ಪರಮಷ್ಟಾದಶಾಕ್ಷರಂ

ಅಭಿಷಿಚ್ಯಮಾನಶ್ಚಿಶುಃ ಮಂತ್ರಾಮೃತಮಯೈರ್ಜಲೈಃ ।
ತತ್ಕ್ಷಣೇ ಭೂಪತಿಂ ಪ್ರೇಮ್ಣಾ ನತ್ವೋದಶ್ರುಪ್ರಕಲ್ಪಿತಃ ॥ ೯೮ ॥

ತಸ್ಮಿನ್ದಿನೇ ಸ ವೈ ಬಾಲಃ ಶುಚಿವಸ್ತ್ರಧರಶ್ಶುಚಿಃ ।
ಹಾರನೂಪುರಸೂತ್ರಾದ್ಯೈರ್ಗ್ರೈವೇಯಾಂಗದಕಂಕಣೈಃ ॥ ೯೯ ॥

ವಿಭೂಷಿತೋ ಹರೇರ್ಭಕ್ತಿಮುಪಸ್ಪೃಶ್ಯಾಮಲಾಶಯಃ ।
ವಿಷ್ಣೋರಾಯತನಂ ಗತ್ವಾ ಸ್ಥಿತ್ವೈಕಾಕೀ ವ್ಯಚಿಂತಯತ್ ॥ ೧೦೦ ॥

ಕಥಂ ಭಜಾಮಿ ತಂ ಕೃಷ್ಣಂ ಮೋಹನಂ ಗೋಪಯೋಷಿತಾಂ ।
ವಿಕ್ರೀಡನ್ತಂ ಸದಾ ತಾಭಿಃ ಕಾಲಿಂದೀಪುಲಿನೇ ವನೇ ॥ ೧೦೧ ॥

ಇತ್ಥಮತ್ಯಾಕುಲಮತಿಶ್ಚಿಂತಯನ್ನೇವ ಬಾಲಕಃ ।
ಅವಾಪ ಪರಮಾಂ ವಿದ್ಯಾಂ ಸ್ವಪ್ನಂ ಚ ಸಮುಪಶ್ಯತ ॥ ೧೦೨ ॥

---

೯೭. ಆ ರಾಜನು ಹನ್ನೆರಡು ವರ್ಷದ ತನ್ನ ಮಗನಿಗೆ ಅವನ ದಡ್ಡತನ ಹೋಗಲು ಅಷ್ಟಾದಶಾಕ್ಷರಿಯನ್ನುಪದೇಶಿಸಿದನು.

೯೮. ಆ ಮಂತ್ರದ ನೀರನ್ನು ಆ ಮಗುವಿನ ಮೇಲೆ ಚೆಲ್ಲಲು ಆ ಒಡನೆಯೇ ಆ ರಾಜನನ್ನು ಪ್ರೀತಿಯಿಂದ ನಮಸ್ಕರಿಸಿ ಕಣ್ಣೀರುಬಿಟ್ಟನು.

೯೯-೧೦೦. ಆ ದಿನವೇ ಆ ಹುಡುಗನು ಶುಚಿಯಾದ ಬಟ್ಟೆಯನ್ನುಟ್ಟು ಹಾರ, ನೂಪುರ, ಸೂತ್ರ, ಕತ್ತಿನೊಡವೆ ಬಳೆ ಮುಂತಾದುವುಗಳನ್ನು ಹಾಕಿಕೊಂಡು ಹರಿಯಲ್ಲಿ ಭಕ್ತಿಯನ್ನು ಹೊಂದಿ ಶುದ್ಧಮನಸ್ಸುಳ್ಳವನಾಗಿ ವಿಷ್ಣುವಿನ ದೇವಸ್ಥಾನವನ್ನು ಹೊಂದಿ ಒಬ್ಬಂಟಿಗನಾಗಿ ಯೋಚಿಸಿದನು.

೧೦೧. ಗೋಪಸ್ತ್ರೀಯರಿಗೆ ಮೋಹಕನಾದ ಕಾಳಿಂದಿಯ ಮರಳಿನಲ್ಲಿ ಆ ಗೋಪಸ್ತ್ರೀಯರೊಡನೆ ಆಡುತ್ತಿರುವ ಆ ಕೃಷ್ಣನನ್ನು ಹೇಗೆ ಭಜಿಸಲಿ ?

೧೦೨. ಇಂತು ದುಃಖಗೊಂಡು ಚಿಂತಿಸುತ್ತಿರುವಾಗಲೇ ಉತ್ತಮವಾದ ವಿದ್ಯೆಯನ್ನು ಹೊಂದಿದನು. ಒಂದು ಸ್ವಪ್ನವನ್ನೂ ಸಹ ನೋಡಿದನು.

ತಸ್ಮಿನ್ನಾಯತನೇ ಆಸೀತ್ಕೃಷ್ಣಪ್ರತಿಕೃತಿಶ್ಶುಭಾ ।
ಶಿಲಾಮಯೀ ಸ್ವರ್ಣಪೀಠೇ ಸರ್ವಲಕ್ಷಣಲಕ್ಷಿತಾ ॥ ೧೦೩ ॥

ಸಾಭೂದಿಂದೀವರಶ್ಯಾಮಾ ಸ್ನಿಗ್ಧಾ ಲಾವಣ್ಯಶಾಲಿನೀ ।
ತ್ರಿಭಂಗಲಲಿತಾಕಾರಾ ಶಿಖಂಡಿಪಿಚ್ಛಭೂಷಣಾ ॥ ೧೦೪ ॥

ಕೂಜಯಂತೀ ಮುದಾ ವೇಣುಂ ಕಾಂಚನೀಮಧರೇರ್ಪಿತಾಂ ।
ದಕ್ಷಸವ್ಯಗತಾಭ್ಯಾಂ ಚ ಸುಂದರೀಭ್ಯಾಂ ನಿಷೇವಿತಾ ॥ ೧೦೫ ॥

ವರ್ಧಯಂತೀ ತಯೋಃ ಕಾಮಂ ಚುಂಬನಾಶ್ಲೇಷಣಾದಿಭಿಃ ।
ದೃಷ್ಟ್ವಾ ಚಿತ್ರಧ್ವಜಃ ಕೃಷ್ಣಂ ತಾದೃಗ್ವೇಷವಿಲಾಸಿನಂ ॥ ೧೦೬ ॥

ಅವನಮ್ಯ ಶಿರಸ್ತಸ್ಮೈ ಪುರೋ ಲಜ್ಜಿತಮಾನಸಃ ।
ಅಥೋವಾಚ ಹರಿರ್ದಕ್ಷಪಾರ್ಶ್ವಗಾಂ ಪ್ರೇಯಸೀಂ ಹಸನ್ ॥ ॥ ೧೦೭ ॥

ಸಲಜ್ಜಾಂ ಪರಮುಂಚ್ಯೈನಂ ಸ್ವಶರೀರಾಂಶತಾಂ ಗತಂ ।
ನಿರ್ಮಾಯಾತ್ಮಸಮಂ ದಿವ್ಯಂ ಯುವತೀರೂಪಮದ್ಭುತಂ ॥ ೧೦೮ ॥

---

೧೦೩. ಆ ದೇವಸ್ಥಾನದಲ್ಲಿ ಚಿನ್ನದ ಪೀಠದಲ್ಲಿ ಒಳ್ಳೆಯ ಲಕ್ಷಣಗಳಿಂದ ಕೂಡಿದ ಒಂದು ಕಲ್ಲಿನ ಕೃಷ್ಣಪ್ರತಿಮೆಯನ್ನು ನೋಡಿದನು. (ಪ್ರತಿಮೆ ಇತ್ತು)

೧೦೪-೧೦೭ ಆ ಪ್ರತಿಮೆಯು ಇಂದೀವರದಂತೆ ಶ್ಯಾಮವರ್ಣವಾಗಿಯೂ, ಮನೋಹರ ಲಾವಣ್ಯದಿಂದ ಕೂಡಿಯೂ, ತ್ರಿಭಂಗದಿಂದ ಕೂಡಿಯೂ, ನವಿಲುಗರಿಯನ್ನು ತಲೆಯಲ್ಲಿ ಸಿಕ್ಕಿಸಿಕೊಂಡೂ, ಚಿನ್ನದ ಕೊಳಲನ್ನು ತುಟಿಯಲ್ಲಿಟ್ಟುಕೊಂಡು ಊದುತ್ತಲೂ, ಎಡಬಲಭಾಗಗಳಲ್ಲಿ ಇಬ್ಬರು ಸುಂದರಿಯರಿಂದ ಕೂಡಿಯೂ, ಚುಂಬನ, ಆಶ್ಲೇಷಣಗಳಿಂದ ಅವರ ಕಾಮವನ್ನು ಹೆಚ್ಚಿಸುತ್ತಲೂ ಇತ್ತು. ಚಿತ್ರಧ್ವಜನು ಆ ಸ್ವಾಮಿಯನ್ನು ಆ ವೇಷದಲ್ಲಿರುವುದನ್ನು ನೋಡಿ, ಅವನೆದುರಿಗೆ ತಲೆಯನ್ನು ತಗ್ಗಿಸಿಕೊಂಡು ನಾಚಿಕೆಯಿಂದಿದ್ದನು. ಆಗ ಹರಿಯು ಬಲದಲ್ಲಿರುವ ಹೆಂಡತಿಗೆ ನಗುತ್ತ ಹೇಳಿದನು.

೧೦೮ ೧೦೯. ಲಜ್ಜೆಯಿಂದ ಕೂಡಿದ ನಿನ್ನ ಶರೀರದ ಅಂಶವಾಗಿರುವ ಇವನನ್ನು ನಿನ್ನಂತಿರುವ ಸುಂದರವಾದ ಹೆಂಗಸಿನ ರೂಪವನ್ನು ಹೊಂದಿಸಿ ನಿನ್ನ

ಚಿಂತಯಸ್ವ ಶರೀರೇಣ ಹ್ಯಭೇದಂ ಮೃಗಲೋಚನೇ ।
ಅಥೋ ತ್ವದಂಗ ತೇಜೋಭಿಃ ಸ್ಪೃಷ್ಟಸ್ತ್ವದ್ರೂಪಮಾಪ್ಸ್ಯತಿ ॥ ೧೦೯ ॥

ತತಸ್ಸಾ ಪದ್ಮಪತ್ರಾಕ್ಷೀ ಗತ್ವಾ ಚಿತ್ರಧ್ವಜಾನ್ತಿಕಂ ।
ನಿಜಾಂಗಕೈಸ್ತದಂಗಾನಾಮಭೇದಂ ಧ್ಯಾಯತೀ ಸ್ಥಿತಾ ॥ ೧೧೦ ॥

ತಥಾಸ್ಯಾಸ್ತ್ವಂಗತೇಜಾಂಸಿ ತದಂಗಂ ಪರ್ಯಪೂರಯನ್ ।
ಸ್ತನಯೋರ್ಜ್ಯೋತಿಷಾಜಾತೌ ಪೀನೌ ಚಾರುಪಯೋಧರೌ ॥ ೧೧೧ ॥

ನಿತಂಬಜ್ಯೋತಿಷಾ ಜಾತಂ ಶ್ರೋಣಿ ಬಿಂಬಂ ಮನೋಹರಂ ।
ಕುಂತಲಜ್ಯೋತಿಷಾ ಕೇಶಪಾಶೋಽಭೂತ್ಕರಯೋಃ ಕರೌ ॥ ೧೧೨ ॥

ಸರ್ವಮೇವಂ ಸುಸಂಪನ್ನಂ ಭೂಷಾವಾಸಃ ಸ್ರಗಾದಿಕಂ ।
ಕಲಾಸು ಕುಶಲಾ ಜಾತಾ ಸೌರಭೇಣಾಂತರಾತ್ಮನಿ ॥ ೧೧೩ ॥

ದೀಪಾದ್ದೀಪಮಿವಾಲೋಕ್ಯ ಸುಭಗಾಂ ಭುವಿ ಕನ್ಯಕಾಂ ।
ಚಿತ್ರ ಧ್ವಜಾಂ ತ್ರಪಾಂ ಭಂಗೀಂ ಸ್ಥಿತಶೋಭಾಂ ಮನೋಹರಾಂ ॥ ೧೧೪ ॥

---

ಶರೀರದೊಡನೆ ಅಭೇದವನ್ನು ಮಾಡಿಕೊಂಡು ಚಿಂತಿಸು. ಆಮೇಲೆ ನೀನು ಮುಟ್ಟಿದರೆ ನಿನ್ನ ರೂಪವನ್ನೇ ಹೊಂದುತ್ತಾನೆ.

೧೧೦. ಆಮೇಲೆ ಆಕೆಯು ಈ ಚಿತ್ರಧ್ವಜನಲ್ಲಿಗೆ ಬಂದು ತನ್ನ ಅಂಗಗಳೊಡನೆ ಅವನ ಅಂಗಗಳ ಅಭೇದವನ್ನು ಧ್ಯಾನಿಸುತ್ತ ನಿಂತಳು.

೧೧೧-೧೧೬. ಇವಳ ಅವಯವಗಳು ಅವನ ಅವಯವಗಳನ್ನು ಸೇರಿ ಪೂರ್ಣ ಮಾಡಿದುವು. ಸ್ತನಗಳ ಜ್ಯೋತಿಸ್ಸಿನಿಂದ ಸ್ತನಗಳೂ, ನಡುವಿನ ತೇಜಸ್ಸಿನಿಂದ ನಡುವೂ, ಕೂದಲಿನ ಜ್ಯೋತಿಸ್ಸಿನಿಂದ ಕೇಶಪಾಶವೂ, ಕೈಗಳಿಂದ ಕೈಗಳೂ ಈ ರೀತಿಯಾಗಿ ಒಡವೆ ಮಾಲೆಗಳೂ ಉಂಟಾದುವು. ಕಲೆಗಳಲ್ಲಿ ಕುಶಲಳೂ ಆದಳು. ಸೌರಭದಿಂದ ಸೌರಭವೂ ಬಂದಿತು. ದೀಪದಿಂದ ದೀಪವು ಹುಟ್ಟುವಂತೆ ತನ್ನಂತೆಯೇ ಆದುದನ್ನು ನೋಡಿದಳು. ಆಗ ನಾಚಿಕೆಯಿಂದ ತಗ್ಗಿರುವ ಚಿತ್ರಧ್ವಜೆಯನ್ನು ನೋಡಿ ಪ್ರೇಮದಿಂದ ಕೈಯಲ್ಲಿ ಹಿಡಿದುಕೊಂಡು ಆಕೆಯು ಚಿತ್ರಧ್ವಜೆಯನ್ನು ಎಳೆದಳು

ಪ್ರೇಮ್ಣಾ ಗೃಹೀತ್ವಾ ಕರಯೋಃ ಸಾ ತಾಮುಪಹರನ್ಮುದಾ ।
ಗೋವಿಂದವಾಮಪಾರ್ಶ್ವಸ್ಥಾಂ ಪ್ರೇಯಸೀಂ ಪರಿರಭ್ಯ ಚ　॥ ೧೧೫ ॥

ಉವಾಚ ತವ ದಾಸೀಯಂ ನಾಮ ಚಾಸ್ಯಾಶ್ಚ ಕಾರಯ ।
ಸೇವಾಂ ಚಾಸ್ಯೈ ವದ ಪ್ರೀತ್ಯಾ ಯಥಾಭಿರುಚಿ ತಾಂ ಪ್ರಿಯಾಂ　॥ ೧೧೬ ॥

ಅಥ ಚಿತ್ರಕಲೇತ್ಯೇತತ್ತನ್ನಾಮಾಸ್ಮಾತ್ಮಮತೇನ ಸಾ ।
ಚಕಾರ ಚಾಹ ಸೇವಾರ್ಥಂ ಧೃತ್ವಾ ಚಾಪಿ ವಿಪಂಚಿಕಾಂ　॥ ೧೧೭ ॥

ಸದಾ ತ್ವಂ ನಿಕಟೇ ತಿಷ್ಠ ಗಾಯಸ್ವ ವಿವಿಧೈಸ್ವರೈಃ ।
ಗುಣಾನ್ಮತ್ಪ್ರಾಣನಾಥಸ್ಯ ತವಾಯಂ ವಿಹಿತೋ ವಿಧಿಃ　॥ ೧೧೮ ॥

ಅಥ ಚಿತ್ರಕಳಾತ್ವಾಜ್ಞಾಂ ಗೃಹೀತ್ವಾನಮ್ಯ ಮಾಧವಂ ।
ತತ್ಪ್ರೇಯಸ್ಯಾಶ್ಚ ಚರಣಂ ಗೃಹೀತ್ವಾ ಪಾದಯೋ ರಜಃ　॥ ೧೧೯ ॥

ಜಗೌ ಸುಮಧುರಂ ಗೀತಂ ತಯೋರಾನಂದಕಾರಣಂ ।
ಅಥ ಪ್ರೀತ್ಯೋಪಗೂಢಾ ಸಾ ಕೃಷ್ಣೇನಾನಂದಮೂರ್ತಿನಾ　॥ ೧೨೦ ॥

ಯಾವತ್ಸುಖಾಂಬುಧೌ ಪೂರ್ಣಾ ತಾವದೇವಾಪ್ರಬುಧ್ಯತ ।
ಚಿತ್ರಧ್ವಜೋ ಮಹಾಪ್ರೇಮವಿಕಲಃ ಸಂಸ್ಮರನ್ಪರಂ　॥ ೧೨೧ ॥

---

ಗೋವಿಂದನ ಎಡಪಾರ್ಶ್ವದಲ್ಲಿರುವ ಹೆಂಡತಿಯನ್ನು ಅಪ್ಪಿಕೊಂಡಳು. ಈಕೆಯು ನಿನ್ನ ದಾಸಿಯು. ನಾಮಕರಣ ಮಾಡು. ಇವಳಿಂದ ಸೇವೆ ತೆಗೆದುಕೋ. ಏನು ಮಾಡಬೇಕೆಂಬುದನ್ನು ಹೇಳು.

೧೧೭-೧೧೮. ಅವಳಿಗೆ ಚಿತ್ರಕಲೆಯೆಂದು ಹೆಸರಿಟ್ಟಳು. ಮತ್ತು ಆಕೆಗೆ ಯಾವಾಗಲೂ ವೀಣೆಯನ್ನು ಹಿಡಿದು ತನ್ನ ಬಳಿಯಲ್ಲೇ ಇದ್ದುಕೊಂಡು ತನ್ನ ಗಂಡನ ಗುಣಗಳನ್ನು ಗಾನಮಾಡುವುದು ನಿನ್ನ ಕರ್ತವ್ಯವೆಂದು ಅಪ್ಪಣೆಮಾಡಿದಳು.

೧೧೯-೧೨೧ ಅನಂತರ ಚಿತ್ರಕಳೆಯು ಅವಳ ಅಪ್ಪಣೆಯಂತೆ ಮಾಧವನಿಗೆ ನಮಸ್ಕರಿಸಿ ಪಾದಧೂಳನ್ನು ತಲೆಯಲ್ಲಿ ಧರಿಸಿ ಅವರಿಬ್ಬರಿಗೂ ಆನಂದಕರವಾದ ಅವಳ ಗಂಡನ ಗುಣಗಳನ್ನು ಹಾಡಿದಳು ಅನಂತರ ಆನಂದಪಟ್ಟ ಕೃಷ್ಣನು ಆಲಿಂಗಿಸಿಕೊಳ್ಳಲು ಸುಖಾಂಬುಧಿಯಲ್ಲಿ ಮಗ್ನಳಾಗಿರುವಾಗಲೇ ಎಚ್ಚರವಾಯಿತು. ಚಿತ್ರಧ್ವಜನು ಮಹಾಪ್ರೇಮದಿಂದ ಅದನ್ನು ಸ್ಮರಿಸುತ್ತಾ ಆ ಪರಮಾನಂದವನ್ನು ಮರೆಯದೇ

ತನೋಇವ ಪರಮಾನಂದಂ ಮುಕ್ತಿಕಂಠೋ ರುರೋದ ಹ ।
ತಪಾತಭ್ಯೈರುಪನ್ನೇಽಪ ಮುಕ್ತಾಹಾರ ವಿಹಾರಕಂ ॥ ೧೨೨ ॥

ಅಭಾಷಿತೋಽಪಿ ಪಿತ್ರಾದ್ಯೈರ್ನೈವ ವಕ್ತ್ಯುತ್ತರಂ ಕ್ವಚಿತ್ ।
ಮಾಸಮಾತ್ರಂ ಗೃಹೇ ಸ್ಥಿತ್ವಾ ನಿಶೀಥೇ ಕೃಷ್ಣಸಂಶ್ರಯಃ ॥ ೧೨೩ ॥

ನಿರ್ಗತ್ಯಾರಣ್ಯಮಾಚರತ್ತಪೋ ವೈ ಮುನಿದುಷ್ಕರಂ ।
ಕಲ್ಪಾಂತೇ ದೇಹ ಮುತ್ಸೃಜ್ಯ ತಪಸೈವ ಮಹಾಮುನಿಃ ॥ ೧೨೪ ॥

ವೀರಗುಪ್ತಾಭಿಧಾನಸ್ಯ ಗೋಪಸ್ಯ ದುಹಿತಾ ಶುಭಾ ।
ಜಾತಾ ಚಿತ್ರಕಲೇತ್ಯೇವ ಯಸ್ಯಾಸ್ಸ್ಕಂಧೇ ಮನೋಹರಾ ॥ ೧೨೫ ॥

ವಿಪಂಚೀ ದೃಶ್ಯತೇ ನಿತ್ಯಂ ಸಪ್ತಸ್ವರವಿಭೂಷಿತಾ ।
ಉಪತಿಷ್ಠತಿ ವೈ ವಾಮೇ ರತ್ನಭೃಂಗಾರಮುತ್ತಮಂ ॥ ೧೨೬ ॥

ದಧಾನಾ ದಕ್ಷಿಣೇ ಹಸ್ತೇ ಸಾ ವೈ ರತ್ನಪತದ್ಗ್ರಹಂ ।
ಅಯಮಾಸೀತ್ಪುರಾ ಸರ್ವತಾಪಸೈರಭಿವಂದಿತಃ ॥ ೧೨೭ ॥

ಮುನಿಃ ಪುಣ್ಯಶ್ರವಾ ನಾಮ ಕಶ್ಯಪಸ್ಸರ್ವಧರ್ಮವಿತ್ ।
ಪಿತಾ ತಸ್ಯಾಭವಚ್ಛೈವಃ ಶತರುದ್ರೀಯಮಂತ್ರಕೃತ್ ॥ ೧೨೮ ॥

---

ಅಳುತ್ತಿದ್ದನು. ಅದು ಮೊದಲು ಆಹಾರ ವ್ಯವಹಾರ ಆಟಪಾಟಗಳನ್ನು ಬಿಟ್ಟು ಅಳುತ್ತಲೇ ಇದ್ದಾನೆ. ತಾಯಿತಂದೆಗಳು ಮಾತನಾಡಿಸಿದರೂ, ಯಾವಾಗಲೂ ಬದಲು ಹೇಳುವುದೇ ಇಲ್ಲ ಹೀಗೆ ಒಂದು ತಿಂಗಳು ಮನೆಯಲ್ಲಿದ್ದು ಒಂದುದಿನ ಅರ್ಧರಾತ್ರಿಯಲ್ಲಿ ಹೊರಟು ಕಾಡಿಗೆ ಹೋಗಿ ಮುನಿಜನಗಳಿಗಸಾಧ್ಯವಾದ ತಪಸ್ಸನ್ನು ಮಾಡಿದನು. ಆ ಮುನಿಯು ಕಲ್ಪಾಂತರದಲ್ಲಿ ತಪಸ್ಸಿನಿಂದಲೇ ದೇಹವನ್ನು ಬಿಟ್ಟು ವೀರಗುಪ್ತನೆಂಬ ಗೋಪನ ಮಗಳಾಗಿ ಹುಟ್ಟಿದನು. ಅವಳಿಗೆ ಚಿತ್ರಕಳೆಯೆಂದು ಹೆಸರಾಯಿತು. ಅವಳ ಕತ್ತಿನಮೇಲೆ ಯಾವಾಗಲೂ ವೀಣೆಯಿದ್ದೇಯಿರುವುದು. ಎಡದ ಕೈಯಲ್ಲಿ ರತ್ನದ ಕಮಂಡಲವನ್ನೂ, ಬಲಗೈಯಲ್ಲಿ ಹಾರತಕ್ಕ ರತ್ನದ ಪಕ್ಷಿಯನ್ನೂ ಇವಳು ಹಿಡಿದಿದ್ದಾಳೆ. ಇವನು ಪೂರ್ವದಲ್ಲಿ ಸರ್ವತಾಪಸರಿಂದಲೂ ನಮಸ್ಕರಿಸಲ್ಪಟ್ಟವನು. ಇವನ ಹೆಸರು ಪುಣ್ಯಶ್ರವನೆಂದು. ಇವನ ತಂದೆಯು ಕಶ್ಯಪನು.

ಪ್ರಸ್ತುವನ್ದೇವದೇವೇಶಂ ವಿಶ್ವೇಶಂ ಭಕ್ತವತ್ಸಲಂ ।
ತಸ್ಯ ಪ್ರಸನ್ನೋ ಭಗವಾನ್ಪಾರ್ವತ್ಯಾ ಸಹ ಶಂಕರಃ ॥ ೧೨೯ ॥

ಚತುರ್ದಶ್ಯಾಮರ್ಧರಾತ್ರೇ ಪ್ರತ್ಯಕ್ಷಃ ಪ್ರದದೌ ವರಂ ।
ತ್ವತ್ಪುತ್ರೋ ಭವಿತಾ ಕೃಷ್ಣೇ ಭಕ್ತಿಮಾನ್ಬಾಲ ಏವ ಹಿ ॥ ೧೩೦ ॥

ಉಪನೀಯಾಷ್ಟಮೇ ವರ್ಷೇ ತಸ್ಮೈ ಸಿದ್ಧಮನುಸ್ತ್ವಯಂ ।
ಉಪದಿಷ್ಟ್ವೈಕವಿಂಶತ್ಯಾ ಯೋ ಮಯಾ ತೇ ನಿಗದ್ಯತೇ ॥ ೧೩೧ ॥

ವಿದ್ಯಾಗೋಪಾಲ ನಾಮಾಯಂ ಮಂತ್ರೋ ವಾಕ್ಸಿದ್ಧಿದಾಯಕಃ ।
ಏತತ್ಸಾಧಕಜಿಹ್ವಾಗ್ರೇ ಲೀಲಾಚರಿತಮದ್ಭುತಂ ॥ ೧೩೨ ॥

ಅನಂತಮೂರ್ತಿರಾಯಾತಿ ಸ್ವಯಮೇವ ವರಪ್ರದಃ ।
ಕಾಮಮಾಯಾರಮಾಕಂಠಸೇಂದ್ರಾ ದಾಮೋದರೋಜ್ವಲಾಃ ॥ ೧೩೩ ॥

ಮಧ್ಯೇ ದಶಾಕ್ಷರಂ ಪ್ರೋಚ್ಯ ಪುನಸ್ತಾ ಏವ ನಿರ್ದಿಶೇತ್ ।
ದಶಾಕ್ಷರೋಕ್ತಋಷ್ಯಾದಿ ಧ್ಯಾನಂ ಚಾಸ್ಯಬ್ರವೀಮ್ಯಹಂ ॥ ೧೩೪ ॥

---

ಪರಮಶೈವನು. ಶತರುದ್ರೀಯದಿಂದ ಸ್ವಾಮಿಯಾದ ವಿಶ್ವೇಶ್ವರನನ್ನು ಸ್ತುತಿಸುತ್ತಾ ಇರಲು ಆ ಸ್ವಾಮಿಯು ಪಾರ್ವತಿಯೊಡನೆ ಪ್ರಸನ್ನನಾಗಿ ಬಂದನು.

೧೩೦. ಚತುರ್ದಶಿಯ ದಿನ ಅರ್ಧರಾತ್ರಿಯಲ್ಲಿ ಪ್ರತ್ಯಕ್ಷನಾಗಿ ನಿನ್ನ ಮಗನ ಕೃಷ್ಣನಲ್ಲಿ ಭಕ್ತಿಯುಳ್ಳವನಾಗುತ್ತಾನೆಂದು ವರವನ್ನು ಕೊಟ್ಟನು.

೧೩೧-೧೩೪. ಎಂಟನೆಯ ವರ್ಷದಲ್ಲಿ ಉಪನಯನಮಾಡಿ ಸಿದ್ಧಿಮಂತ್ರಗಳೆರಡನ್ನೂ ಹೇಳಿದನು. ಒಂದು ಇಪ್ಪತ್ತೊಂದು ಅಕ್ಷರಗಳುಳ್ಳ ವಿದ್ಯಾಗೋಪಾಲ ಮಂತ್ರವು. ಅದು ವಾಕ್ಸಿದ್ಧಿಯನ್ನು ಕೊಡಬಲ್ಲುದು. ಇದನ್ನು ಸಾಧಿಸುವವನ ಚರಿತ್ರೆಯು ಅದ್ಭುತವಾದುದು. ಅವನಿಗೆ ವರ ಕೊಡಲು ಅನೇಕ ಮೂರ್ತಿಗಳು ತಾವಾಗಿಯೇ ಬರುತ್ತಾರೆ. ಕಾಮ, ಮಾಯಾ, ರಮಾ, ಇಂದ್ರ, ದಾಮೋದರ ಇವುಗಳನ್ನು ಆದಿಯಲ್ಲಿ ಸೇರಿಸಿಕೊಂಡು ಅನಂತರ ದಶಾಕ್ಷರಮಂತ್ರವನ್ನು ಹೇಳಿ ಆಮೇಲೆ ಹಿಂದಿನ ಕಾಮಾದಿಗಳನ್ನು ಮುಂದೆಯೂ ಸೇರಿಸಿ ಮುಗಿಸಬೇಕು. ದಶಾಕ್ಷರಕ್ಕೆ ಋಷ್ಯಾದಿಧ್ಯಾನವನ್ನು ಹೇಳುತ್ತೇನೆ.

ಪೂರ್ಣಾಮೃತನಿಧೇರ್ಮಧ್ಯೇ ದ್ವೀಪಂ ಜ್ಯೋತಿರ್ಮಯಂ ಸ್ಮರೇತ್ ।
ಕಾಲಿಂದ್ಯಾ ವೇಷ್ಟಿತಂ ತತ್ರ ಧ್ಯಾಯೇದ್ವೃಂದಾವನಂ ವನಂ ॥ ೧೩೫ ॥

ಸರ್ವರ್ತುಕುಸುಮಸ್ರಾವಿ ದ್ರುಮವಲ್ಲೀಭಿರಾವೃತಂ ।
ನೃತ್ಯನ್ಮತ್ತಶಿಖಿಸ್ವಾನಂ ಗಾಯತ್ಕೋಕಿಲಷಟ್ಪದಂ ॥ ೧೩೬ ॥

ತಸ್ಯ ಮಧ್ಯೇ ವಸತ್ಯೇಕಃ ಪಾರಿಜಾತತರುರ್ಮಹಾನ್ ।
ಶಾಖೋಪಶಾಖವಿಸ್ತಾರೈಃ ಶತಯೋಜನಮುಚ್ಛ್ರಿತಃ ॥ ೧೩೭ ॥

ತಲೇ ತಸ್ಯಾಥ ವಿಮಲೇ ಪರಿತೋ ಧೇನುಮಂಡಲಂ ।
ತದನ್ತರ್ಮಂಡಲಂ ಗೋಪಬಾಲಾನಾಂ ವೇಣುಶೃಂಗಿಣಾಂ ॥ ೧೩೮ ॥

ತದಂತರೇ ತು ರುಚಿರಂ ಮಂಡಲಂ ವ್ರಜಸುಭ್ರುವಾಂ ।
ನಾನೋಪಾಯನಪಾಣೀನಾಂ ಮದವಿಹ್ವಲಚೇತಸಾಂ ॥ ೧೩೯ ॥

---

೧೩೫. ಪೂರ್ಣವಾದ ಅಮೃತಸಾಗರ ಮಧ್ಯೆ ಜ್ಯೋತಿರ್ಮಯವಾದ ದ್ವೀಪವನ್ನು ಸ್ಮರಿಸಬೇಕು. ಅಲ್ಲಿ ಕಾಳಿಂದೀನದಿಯಿಂದ ಸುತ್ತುವರಿಯಲ್ಪಟ್ಟ ವೃಂದಾವನವನ್ನು ಧ್ಯಾನಿಸಬೇಕು

೧೩೬. ಸರ್ವಋತುಗಳಲ್ಲಿಯೂ ಕುಸುಮವುಳ್ಳ ಹಂಬುಗಳಿಂದ ಕೂಡಿವ ಕುಣಿಯುತ್ತಿರುವ ನವಿಲಿನ ಧ್ವನಿಯುಳ್ಳ ಕೋಗಿಲೆಗಳು ದುಂಬಿಗಳು ಕೂಗುತ್ತಿರುವ ಬೃಂದಾವನವನ್ನು ಧ್ಯಾನಿಸಬೇಕು.

೧೩೭. ಅದರ ಮಧ್ಯದಲ್ಲಿ ಒಂದು ಪಾರಿಜಾತ ಮರವಿದೆ. ಅದು ಶಾಖೋಪಶಾಖೆಗಳಿಂದ ವಿಸ್ತಾರವಾಗಿ ನೂರುಯೋಜನ ಎತ್ತರವಿದೆ.

೧೩೮. ಅದರ ಕೆಳಗೆ ಹಸುಗಳ ಗುಂಪನ್ನು ಧ್ಯಾನ ಮಾಡಬೇಕು. ಅದರೊಳಗೆ ವೇಣುಶೃಂಗಗಳನ್ನು ಧರಿಸಿರುವ ಗೋಪಬಾಲಕರನ್ನು ಸ್ಮರಿಸಬೇಕು.

೧೩೯-೧೪೪. ಅದರ ಮಧ್ಯದಲ್ಲಿ ಗೋಪಸ್ತ್ರೀಯರ ಗುಂಪನ್ನು ಧ್ಯಾನಿಸಬೇಕು. ಆ ಧ್ಯಾನಿಸುವ ಗೋಪಸ್ತ್ರೀಯರು ಅನೇಕಬಗೆ ನಜರನ್ನು ಕೈಲಿಟ್ಟುಕೊಂಡಿರಬೇಕು ಮದದಿಂದ ಸ್ವಾಧೀನವಿಲ್ಲದ ಮನಸ್ಸುಳ್ಳವರಾಗಿರಬೇಕು. ಕೈ ಮುಗಿದುಕೊಂಡಿರ

**ಕೃತಾಂಜಲಿಪುಟಾನಾಂ ಚ ಮಂಡಲಂ ಶುಕ್ಲವಾಸಸಾಂ ।**
**ಶುಕ್ಲಾಭರಣಭೂಷಾಣಾಂ ಪ್ರೇಮವಿಹ್ವಲಿತಾತ್ಮನಾಂ ॥ ೧೪೦ ॥**

**ಚಿಂತಯೇಚ್ಛ್ರುತಿಕನ್ಯಾನಾಂ ಗೃಹ್ಣತೀನಾಂ ವಚಃ ಪ್ರಿಯಂ ।**
**ರತ್ನವೇದ್ಯಾಂ ತತೋಧ್ಯಾಯೇದ್ದುಕೂಲಾವರಣಂ ಹರಿಂ । ॥ ೧೪೧ ॥**

**ಊರೌ ಶಯಾನಂ ರಾಧಾಯಾಃ ಕದಳೀಕಾಂಡಕೋಪರಿ ।**
**ತದ್ವಕ್ತ್ರಂ ಚಂದ್ರಸುಸ್ಮೇರಂ ವೀಕ್ಷ್ಯಮಾಣಂ ಮನೋಹರಂ ॥ ೧೪೨ ॥**

**ಕಿಂಚಿತ್ಕುಂಚಿತವಾಮಾಂಘ್ರಿರ್ವೇಣುಯುಕ್ತೇನ ಪಾಣಿನಾ ।**
**ವಾಮೇನಾಲಿಂಗ್ಯ ದಯಿತಾಂ ದಕ್ಷಿಣಂ ಚುಬುಕಂ ಸ್ಪೃಶನ್ ॥ ೧೪೩ ॥**

**ಮಹಾ ಮಾರಕತಾಭಾಸಂ ಮೌಕ್ತಿಕಚ್ಛಾಯಮೇವ ಚ ।**
**ಪುಂಡರೀಕವಿಶಾಲಾಕ್ಷಂ ಪೀತನಿರ್ಮಲವಾಸಸಂ ॥ ೧೪೪ ॥**

**ಬರ್ಹಭಾರಲಸಚ್ಛೀರ್ಷಂ ಮುಕ್ತಾಹಾರಮನೋಹರಂ ।**
**ಗಂಡಪ್ರಾಂತಲಸಚ್ಚಾರು ಮಕರಾಕೃತಿಕುಂಡಲಂ ॥ ೧೪೫ ॥**

---

ಬೇಕು. ಬಿಳಿಯಬಟ್ಟೆಯನ್ನು ಹಾಕಿಕೊಂಡಿರಬೇಕು. ಬಿಳಿಯ ಆಭರಣಗಳಿಂದ ಕೂಡಿರಬೇಕು. ಪ್ರೇಮದಿಂದ ಪೂರ್ಣವಾದ ಮನಸ್ಸುಳ್ಳವರಾಗಿರಬೇಕು. ಈ ರೀತಿಯಾಗಿ ವೇದದ ಮಾತುಗಳನ್ನು ಅನುಸರಿಸುವ ಸ್ತ್ರೀಯರನ್ನು ಧ್ಯಾನಿಸಬೇಕು. ಅನಂತರ ಆ ರತ್ನವೇದಿಕೆಯಲ್ಲಿ ದುಕೂಲವನ್ನುಟ್ಟ ಹರಿಯನ್ನು ಧ್ಯಾನಿಸಬೇಕು. ಆ ಕೃಷ್ಣನು ಈರೀತಿಯಿರಬೇಕು. ರಾಧೆಯ ಬಾಳೆಯಮರದಂತಿರುವ ತೊಡೆಯಮೇಲೆ ಮಲಗಿರಬೇಕು. ಆ ರಾಧೆಯ ಮನೋಹರವಾದ ಮುಖವನ್ನು ನೋಡುತ್ತಿರಬೇಕು. ಎಡಗಾಲನ್ನು ಸ್ವಲ್ಪ ಎಳೆದುಕೊಂಡು ಬಗ್ಗಿಸಿಕೊಂಡಿರಬೇಕು ಕೈಯಲ್ಲಿ ಕೊಳಲಿರಬೇಕು. ಎಡಗಡೆಯಿಂದ ಆ ರಾಧೆಯನ್ನು ಆಲಂಗಿಸಿಕೊಂಡು ಬಲಗಡೆಯ ಕಪೋಲವನ್ನು ಮುಟ್ಟಿಕೊಂಡಿರಬೇಕು. ಮರಕತಮಣಿಯ ವರ್ಣದಂತೆ ವರ್ಣವಿರಬೇಕು. ಮುತ್ತಿನ ಛಾಯೆಯಂತೆ ಛಾಯೆಯಿರಬೇಕು. ಪುಂಡರೀಕದಂತೆ ವಿಶಾಲವಾದ ಕಣ್ಣಿರಬೇಕು. ಹೊಂಬಣ್ಣದ ನಿರ್ಮಲವಾದ ಬಟ್ಟೆಯನ್ನುಟ್ಟಿರಬೇಕು.

೧೪೫-೧೪೭. ನವಿಲುಗರಿಯ ಸಮೂಹದಿಂದ ಪ್ರಕಾಶಿಸುವ ತಲೆಯುಳ್ಳವನಾಗಿರಬೇಕು. ಮುತ್ತಿನಹಾರವನ್ನು ಹಾಕಿಕೊಂಡಿರಬೇಕು. ಕಪೋಲದಲ್ಲಿ ಪ್ರಕಾಶಿಸುವಂತೆ ಮೊಸಳೆಯ ಆಕಾರದ ಕರ್ಣಕುಂಡಲಗಳನ್ನು ಹಾಕಿಕೊಂಡಿರಬೇಕು.

ಆಪಾದತುಳಸೀಮಾಲಂ ಕಂಕಣಾಂಗದಭೂಷಣಂ ।
ನೂಪುರೈರ್ಮುದ್ರಿಕಾಭಿಶ್ಚ ಕಾಂಚ್ಯಾ ಚ ಪರಿಮಂಡಿತಂ ॥ ೧೪೬ ॥

ಸುಕುಮಾರತನುಂ ಧ್ಯಾಯೇತ್ಕಿಶೋರವಯಸಾನ್ವಿತಂ ।
ಪೂಜಾ ದಶಾಕ್ಷರೋಕ್ತ್ಯೈವ ವೇದಲಕ್ಷಂ ಪುರಸ್ಕ್ರಿಯಾ ॥ ೧೪೭ ॥

ಇತ್ಯುಕ್ತ್ವಾಂತರ್ದಧೇ ದೇವೋ ದೇವೀಚ ಗಿರಿಜಾ ಸತೀ ।
ಮುನಿರಾಗತ್ಯ ಪುತ್ರಾಯ ತಥೈವೋಪದಿದೇಶ ಹ ॥ ೧೪೮ ॥

ಪುಣ್ಯಶ್ರವಾಸ್ತು ತನ್ಮಂತ್ರ ಗ್ರಹಣಾದೇವ ಕೇಶವಂ ।
ವರ್ಣಯಾಮಾಸ ವಿವಿಧೈರ್ಜಿತ್ವಾ ಸರ್ವಾನ್ಮುನೀನ್ಸ್ವಯಂ ॥ ೧೪೯ ॥

ರೂಪಲಾವಣ್ಯವೈದಗ್ಧ್ಯ ಸೌಂದರ್ಯಾಶ್ಚರ್ಯಲಕ್ಷಣಂ ।
ತದಾ ಹೃಷ್ಟಮನಾ ಬಾಲೋ ನಿರ್ಗತ್ಯ ಸ್ವಗೃಹಾತ್ತತಃ ॥ ೧೫೦ ॥

ವಾಯುಭಕ್ಷಸ್ತಪಸ್ತೇಪೇ ಕಲ್ಪಾನಾಮಯುತತ್ರಯಂ ।
ತದಂತೇ ಗೋಕುಲೇ ಜಾತಾ ನಂದಭ್ರಾತುರ್ಗೃಹೇ ಸ್ವಯಂ ॥ ೧೫೧ ॥

---

ಕಾಲುಬಳೆಯಿಂದಲೂ, ಉಂಗುರದಿಂದಲೂ, ಒಡ್ಯಾಣದಿಂದಲೂ ಕೂಡಿರಬೇಕು. ಬಾಲ್ಯ ಯೌವನಗಳ ಮಧ್ಯದ ವಯಸ್ಸಾಗಿರಬೇಕು. ಇಂತಹ ಮನೋಹರ ಶರೀರವುಳ್ಳವನನ್ನು ಧ್ಯಾನಿಸಬೇಕು. ದಶಾಕ್ಷರೀಮಂತ್ರದಿಂದಲೇ ಪೂಜೆ ಮಾಡಬೇಕು. ನಾಲ್ಕುಲಕ್ಷಬಾರಿ ಪುನಶ್ಚರಣೆಮಾಡಬೇಕು.

೧೪೮. ಹೀಗೆಂದು ಹೇಳಿ ಪಾರ್ವತೀಪರಮೇಶ್ವರರು ಅಂತರ್ಧಾನರಾದರು. ಆ ಋಷಿಯೂ ಬಂದು ಹಾಗೆಯೇ ಮಗನಿಗೆ ಉಪದೇಶಮಾಡಿದನು.

೧೪೯. ಪುಣ್ಯಶ್ರವನು ಆ ಮಂತ್ರಗ್ರಹಣದಿಂದಲೇ ಕೇಶವನನ್ನು ಸ್ತುತಿಸಿದನು. ತಾನೇನೇ ಎಲ್ಲಾ ಋಷಿಗಳನ್ನೂ ಜಯಿಸಿದನು.

೧೫೦–೧೫೧. ರೂಪು, ಲಾವಣ್ಯ, ಪಾಂಡಿತ್ಯ, ಆಶ್ಚರ್ಯ ಲಕ್ಷಣಗಳುಳ್ಳ ಸ್ವಾಮಿಯನ್ನು ವರ್ಣಿಸಿದನು ಆಗ ಸಂತೋಷಗೊಂಡು ಆ ಹುಡುಗನು ಮನೆಯಿಂದ ಹೊರಟು ಕಾಡಿಗೆ ಹೋಗಿ ವಾಯುಭಕ್ಷಕನಾಗಿ ಮೂರುಕಲ್ಪಗಳವರೆಗೂ, ತಪಸ್ಸನ್ನು ಮಾಡಿದನು. ಆಮೇಲೆ ಗೋಕುಲದಲ್ಲಿ ನಂದನ ತಮ್ಮನ ಮನೆಯಲ್ಲಿ ಹುಟ್ಟಿದನು.

**ಲವಂಗಾ ಇತಿ ತನ್ನಾಮ ಕೃಷ್ಣೇಂಗಿತನಿರೀಕ್ಷಣಾ ।**
**ಯಸ್ಯಾ ಹಸ್ತೇ ಪ್ರದೃಶ್ಯೇತ ಮುಖಮಾರ್ಜನಯಂತ್ರಕಂ ।**
**ಇತಿ ತೇ ಕಥಿತಾಃ ಕಾಶ್ಚಿತ್ಪ್ರಧಾನಾಃ ಕೃಷ್ಣವಲ್ಲಭಾಃ** ॥ ೧೫೨ ॥

**ಹರಿವಿವಿಧರಸಾದ್ಯೈರ್ಯುಕ್ತಮಧ್ಯಾಯಮೇತ ।**
**ಧ್ವಜವರತನಯಾಭಿಶ್ಚಾರುಹಾಸೇಕ್ಷಣಾಭಿಃ ।**
**ಪಠತಿ ಯ ಇಹ ಭಕ್ತ್ಯಾ ಪಾಠಯೇದ್ವಾ ಮನುಷ್ಯೋ ।**
**ವ್ರಜತಿ ಭಗವತಃ ಶ್ರೀ ವಾಸುದೇವಸ್ಯ ಧಾಮ** ॥ ೧೫೩ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶ್ರೀಕೃಷ್ಣಮಹಾತ್ಮ್ಯೇ**
**ದ್ವಿಸಪ್ತತಿತಮೋಽಧ್ಯಾಯಃ**

---

೧೫೨. ಇವಳ ಹೆಸರು ಲವಂಗೆಯೆಂದು. ಕೃಷ್ಣನ ಮನೋಭಿಪ್ರಾಯವನ್ನೇ ನಿರೀಕ್ಷಿಸುತ್ತಿರುವಳು. ಈಕೆಯ ಕೈಯಲ್ಲಿ ಯಾವಾಗಲೂ ಕೃಷ್ಣನು ಮುಖ ತೊಳೆಯುವ ಯಂತ್ರವಿದ್ದೇ ಇರುತ್ತದೆ.

೧೫೩. ಹರಿಯು ನಾನಾಬಗೆಯಾದ ರಸಗಳಿಂದಲೂ, ಗೋಪಿಯರ ಸೌಂದರ್ಯದಿಂದಲೂ, ಈ ಅಧ್ಯಾಯವು ಕೂಡಿದೆ. ಇದನ್ನು ಯಾವನು ಭಕ್ತಿಯಿಂದ ಓದುತ್ತಾನೆಯೋ, ಅಥವಾ ಓದಿಸುತ್ತಾನೆಯೋ ಅವನು ವಾಸುದೇವನ ಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶ್ರೀಕೃಷ್ಣಮಹಿಮೆಯಲ್ಲಿ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ತ್ರಿಸಪ್ತತಿತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

ಯತ್ತ್ವಯಾ ಪೃಷ್ಟಮಾಶ್ಚರ್ಯಂ ತನ್ಮಯಾ ಭಾಷಿತಂ ಕ್ರಮಾತ್ ।
ಯತ್ರ ಮುಹ್ಯಂತಿ ಬ್ರಹ್ಮಾದ್ಯಾ ಸ್ತತ್ರ ಕೋ ವಾ ನ ಮುಹ್ಯತಿ ॥ ೧ ॥

ತಥಾಪಿ ತೇ ಪ್ರವಕ್ಷ್ಯಾಮಿ ಯದುಕ್ತಂ ಪರಮರ್ಷಿಣಾ ।
ಮಹಾರಾಜ್ಞೋಽಂಬರೀಷಾಯ ವಿಷ್ಣುಭಕ್ತ್ಯಾನ್ವಿತಾಯ ಚ ॥ ೨ ॥

ಬದರ್ಯಾಶ್ರಮಮಾಸಾದ್ಯ ಸಮಾಸೀನಂ ಜಿತೇಂದ್ರಿಯಂ ।
ರಾಜಾ ಪ್ರಣಮ್ಯ ತುಷ್ಟಾವ ವಿಷ್ಣುಧರ್ಮವಿವಿತ್ಸಯಾ ॥ ೩ ॥

---

## ಎಪ್ಪತ್ತಮೂರನೆಯ ಅಧ್ಯಾಯವು

೧. ಈಶ್ವರನು ಹೇಳಿದನು-ನೀನು ಕೇಳಿದ ಆಶ್ಚರ್ಯ ಸಂಗತಿಗಳನ್ನು ಹೇಳಿದನು. ಯಾವ ವಿಷಯದಲ್ಲಿ ಬ್ರಹ್ಮಾದಿಗಳೂ ತಿಳುವಳಿಕೆಯನ್ನು ಹೊಂದಲಾರರೋ ಅದರಲ್ಲಿ ಎಲ್ಲರೂ ಮೂಢರಾಗುತ್ತಾರೆ.

೨-೩. ಪರಮರ್ಷಿಯಾದ ವ್ಯಾಸನು ವಿಷ್ಣುಭಕ್ತಿಯುತನಾದ ಅಂಬರೀಷನಿಗೆ ಹೇಳಿರುವುದನ್ನು ನಿನಗೆ ಹೇಳುತ್ತೇನೆ. ಅಂಬರೀಷನು ಬದರ್ಯಾಶ್ರಮಕ್ಕೆ ಹೋಗಿ ಜಿತೇಂದ್ರಿಯನಾಗಿ ಕುಳಿತಿರುವ ವ್ಯಾಸ ಋಷಿಯನ್ನು ನಮಸ್ಕರಿಸಿ ಧರ್ಮವನ್ನು ತಿಳಿಯಬೇಕೆಂಬ ಇಚ್ಛೆಯಿಂದ ಕೇಳಿದನು.

ವೇದವ್ಯಾಸಂ ಮಹಾಭಾಗಂ ಸರ್ವಜ್ಞಂ ಪುರುಷೋತ್ತಮಂ ।
ಮಾಂ ತ್ವಂ ಸಂಸಾರದುಷ್ಪಾರೇ ಪರಿತ್ರಾತುಮಿಹಾರ್ಹಸಿ ॥ ೪ ॥

ವಿಷಯೇಭ್ಯೋ ವಿವಿಕ್ತೋಸ್ಮಿ ನಮಸ್ತೇಭ್ಯೋ ನಮೋಖಿಲಂ ।
ಯತ್ತತ್ಪದಮನುದ್ವಿಗ್ನಂ ಸಚ್ಚಿದಾನಂದ ವಿಗ್ರಹಂ ॥ ೫ ॥

ಪರಂಬ್ರಹ್ಮಪರಾಕಾಶಮನಾಕಾಶಮನಾಮಯಂ ।
ಯತ್ಸಾಕ್ಷಾತ್ಕೃತ್ಯ ಮುನಯೋ ಭವಾಂಭೋಧಿಂ ತರಂತಿ ಹಿ ॥ ೬ ॥

॥ ವೇದವ್ಯಾಸ ಉವಾಚ ॥

ಅತಿಗೋಪ್ಯಂ ತ್ವಯಾ ಪೃಷ್ಟಂ ಯನ್ಮಯಾ ನ ಶುಕಂ ಪ್ರತಿ ।
ಗದಿತಂ ಸ್ವಸುಖಂ ಕಿಂತು। ತ್ವಾಂ ವಕ್ಷ್ಯಾಮಿ ಹರಿಪ್ರಿಯ ॥ ೭ ॥

ಆಸೀದಿದಂ ಪರಂ ವಿಶ್ವಂ ಯದ್ರೂಪಂ ಯತ್ಪ್ರತಿಷ್ಠಿತಂ ।
ಅವ್ಯಾಕೃತಮವ್ಯಯಿತಂ ತದೀಶ್ವರಮಯಂ ಶೃಣು ॥ ೮ ॥

---

೪. ಪುರುಷೋತ್ತಮನಾದ ಸರ್ವಜ್ಞನಾದ ಆ ವೇದವ್ಯಾಸನನ್ನು ಕುರಿತು ಅಗಾಧವಾದ ಸಂಸಾರವಲ್ಲಿ ಬಿದ್ದಿರುವ ನನ್ನನ್ನು ನೀನು ಕಾಪಾಡಲು ಸಮರ್ಥನಿದ್ದೀಯೆ.

೫-೬. ನಾನು ವಿಷಯ ಸುಖದಿಂದ ಬೇಸರಪಟ್ಟಿದ್ದೇನೆ. ಅವರಿಗೆಲ್ಲಾ ನಮಸ್ಕಾರವು. ಆ ವಿಷಯ ಸುಖಕ್ಕೂ ನಮಸ್ಕಾರವು. ಯಾವ ಸ್ವಾಮಿಯ ಸ್ಥಳವು ಮನಸ್ಸಿಗೆ ಉಬ್ಬರ ಪೀಡೆಗಳನ್ನು ಕೊಡುವುದಿಲ್ಲವೋ ಸತ್ ಚಿತ್ ಆನಂದ ರೂಪವೋ ಉತ್ತಮವಾದುದೋ ಅವಕಾಶವಿದ್ದರೂ ಇಲ್ಲದಂತಿರುವುದೋ, ರೋಗರಹಿತವೋ, ಯಾವುದನ್ನು ಸಾಕ್ಷಾತ್ಕಾರಹೊಂದಿ ಋಷಿಗಳು ಸಂಸಾರ ಸಾಗರವನ್ನು ದಾಟುತ್ತಾರೆಯೋ ಅದರಲ್ಲಿ ನನ್ನ ಮನಸ್ಸು ಅಡಗಿದೆ. ಆ ಗತಿಯನ್ನು ಹೇಗೆ ಹೊಂದಲಿ ?

೭. ವೇದವ್ಯಾಸನು ಹೇಳಿದನು– ಅತಿ ಗೋಪ್ಯವಾದ ಅಂಶವನ್ನು ನೀನು ಕೇಳಿದೆ. ನಾನು ಶುಕನಿಗೂ ಹೇಳಲಿಲ್ಲ. ನೀನು ಹರಿಪ್ರಿಯನಾದುದರಿಂದ ನಿನಗೆ ಆ ಸ್ವಸುಖವನ್ನು ಹೇಳುತ್ತೇನೆ.

೮. ಈ ಪ್ರಪಂಚವು ಯಾವನ ರೂಪವಾಗಿ ಯಾವನಿಂದ ಪ್ರತಿಷ್ಠಿತವಾಯಿತೋ ಅಂತಹ ವಿಕಾರರಹಿತನಾದ ನಾಶರಹಿತನಾದ ಈಶ್ವರನನ್ನು ಹೇಳುತ್ತೇನೆ. ಕೇಳು.

ಮಯಾ ಕೃತಂ ತಪಃ ಪೂರ್ವಂ ಬಹುವರ್ಷಸಹಸ್ರಕಂ ।
ಫಲಮೂಲಪಲಾಶಾಂಬುವಾಯ್ವಾಹಾರನಿಷೇವಿಣಾ ॥ ೯ ॥

ತತೋ ಮಾಮಾಹ ಭಗವಾನ್ಸ್ವಧ್ಯಾನನಿರತಂ ಹರಿಃ ।
ಕಸ್ಮಿನ್ನರ್ಥೇ ಚಿಕೀರ್ಷಾ ತೇ ವಿವಿತ್ಸಾ ವಾ ಮಹಾಮತೇ ॥ ೧೦ ॥

ಪ್ರಸನ್ನೋಽಸ್ಮಿ ವೃಣುಷ್ವ ತ್ವಂ ವರಂ ಚ ವರದರ್ಷಭಾತ್ ।
ಮದ್ದರ್ಶನಾಂತಸ್ಸಂಸಾರ ಇತಿ ಸತ್ಯಂ ಬ್ರವೀಮಿ ತೇ ॥ ೧೧ ॥

ತತೋಽಹಮಬ್ರುವಂ ಕೃಷ್ಣಂ ಪುಲಕೋತ್ಫುಲ್ಲವಿಗ್ರಹಃ ।
ತ್ವಾಮಹಂ ದ್ರಷ್ಟುಮಿಚ್ಛಾಮಿ ಚಕ್ಷುರ್ಭ್ಯಾಂ ಮಧುಸೂದನ ॥ ೧೨ ॥

ಯತ್ತತ್ಸತ್ಯಂ ಪರಂಬ್ರಹ್ಮ ಜಗಜ್ಜ್ಯೋತಿರ್ಜಗತ್ಪತಿಃ ।
ವದಂತಿ ವೇದಶಿರಸಃ ಚಾಕ್ಷುಷಂ ನಾಥಮೇಽದ್ಭುತಂ ॥ ೧೩ ॥

॥ ಶ್ರೀ ಭಗವಾನುವಾಚ ॥

ಬ್ರಹ್ಮಣೈವಂ ಪುರಾಪೃಷ್ಟಃ ಪ್ರಾರ್ಥಿತಶ್ಚ ಯಥಾ ಪುರಾ ।
ಯದವೋಚಮಹಂ ತಸ್ಮೈ ತತ್ತುಭ್ಯಮಪಿ ಕಥ್ಯತೇ ॥ ೧೪ ॥

---

೯. ಹಣ್ಣು, ಗೆಡ್ಡೆ, ಗೆಣಸು, ನೀರು ವಾಯುಗಳನ್ನು ಸೇವಿಸುತ್ತಾ ಪೂರ್ವದಲ್ಲಿ ಬಹು ವರ್ಷ ತಪಸ್ಸನ್ನು ಮಾಡಿದೆನು.

೧೦-೧೧. ಆಗ ಹರಿಯು ತನ್ನ ಧ್ಯಾನದಲ್ಲಿ ನಿರತನಾದ ನನ್ನನ್ನು ಕುರಿತು ಇಂತೆಂದನು. ನಿನಗೇನುಬೇಕು ? ಯಾವ ವಿಷಯವನ್ನು ತಿಳಿಯಬೇಕೆಂದಿದ್ದೀಯೆ ನಾನು ವರ ಕೊಡುತ್ತೇನೆ. ನಿನ್ನ ವಿಷಯದಲ್ಲಿ ಪ್ರಸನ್ನನಾಗಿದ್ದೇನೆ. ವರವನ್ನು ಕೇಳಿಕೋ. ನನ್ನನ್ನು ನೋಡುವವರೆಗೂ ಸಂಸಾರವಿರುತ್ತದೆ. ಆಮೇಲೆ ಅವನಿಗೆ ಅದು ನಾಶವಾಗುತ್ತದೆ. ಇದು ಸತ್ಯವೆಂದು ತಿಳಿ.

೧೨-೧೩. ಕಣ್ಣನ್ನು ಅರಳಿಸಿಕೊಂಡು ನಾನು ಕೃಷ್ಣನಿಗಿಂತೆಂದನು. ಎಲೈ ಮಧುಸೂದನನೇ ಯಾವುದು ಸತ್ಯವೋ ಯಾವುದು ಪರಬ್ರಹ್ಮವೋ ಜಗತ್ತಿಗೆಲ್ಲಾ ಜ್ಯೋತಿಸ್ವರೂಪವಾದುದೋ ಜಗತ್ಪತಿ ಯಾವನೋ ಉಪನಿಷತ್ತುಗಳಿಗೆ ಯಾವನು ಕಣ್ಣೋ ಅಂತಹ ಅದ್ಭುತವಾದ ನಿನ್ನನ್ನು ಈ ಕಣ್ಣುಗಳಿಂದ ನೋಡಲಿಚ್ಛಿಸುತ್ತೇನೆ.

೧೪. ಶ್ರೀ ಭಗವಂತನು ಹೇಳಿದನು– ನಾನು ಬ್ರಹ್ಮನಿಂದ ಹೀಗೆ ಕೇಳಲ್ಪಟ್ಟವನಾಗಿ ಏನನ್ನು ಪ್ರಾರ್ಥಿಸಿಕೊಂಡೆನೋ ಅದರಂತೆ ಅವನು ಹೇಳಿದುದನ್ನು ನಿನಗೆ ಹೇಳುತ್ತೇನೆ.

ಮಾಮೇಕಂ ಪ್ರಕೃತಿಂ ಪ್ರಾಹುಃ ಪುರುಷಂ ಚ ತಥೇಶ್ವರಂ ।
ಧರ್ಮಮೇಕೇ ಧನಂಜೈಕೇ ಮೋಕ್ಷಮೇಕೇಽ ಕುತೋಭಯಂ ॥ ೧೫ ॥

ಶೂನ್ಯಮೇಕೇ ಭಾವಮೇಕೇ ಶಿವಮೇಕೇ ಸದಾಶಿವಂ ।
ಅಪರೇ ವೇದಶಿರಸಿ ಸ್ಥಿತಮೇಕಂ ಸನಾತನಂ ॥ ೧೬ ॥

ಸದ್ಭಾವಂ ವಿಕ್ರಿಯಾಹೀನಂ ಸಚ್ಚಿದಾನಂದ ವಿಗ್ರಹಂ ।
ಪಶ್ಯಾದ್ಯ ದರ್ಶಯಿಷ್ಯಾಮಿ ಸ್ವರೂಪಂ ವೇದಗೋಪಿತಂ ॥ ೧೭ ॥

ತತೋ ಪಶ್ಯಮಹಂ ಭೂಪ ಬಾಲಂ ಬಾಲಾಂಬುದಪ್ರಭಂ ।
ಗೋಪಕನ್ಯಾವೃತಂ ಗೋಪಂ ಹಸಂತಂ ಗೋಪಬಾಲಕೈಃ ॥ ೧೮ ॥

ಕದಂಬಮೂಲ ಆಸೀನಂ ಪೀತವಾಸಸಮದ್ಭುತಂ ।
ವನಂ ವೃಂದಾವನಂ ನಾಮ ನವಪಲ್ಲವಮಂಡಿತಂ ॥ ೧೯ ॥

ಕೋಕಿಲಭ್ರಮರಾರಾವಂ ಮನೋಭವಮನೋಹರಂ ।
ನದೀಮಪಶ್ಯಂ ಕಾಳಿಂದೀಮಿಂದೀವರದಳಪ್ರಭಾಂ ॥ ೨೦ ॥

---

೧೫. ನನ್ನನ್ನು ಕೆಲವರು ಪ್ರಕೃತಿಯೆಂದೂ ಕೆಲವರು ಪುರುಷನೆಂದೂ ಕೆಲವರು ಈಶ್ವರನೆಂದೂ ಧರ್ಮವೆಂದೂ ಧನವೆಂದೂ ಮೋಕ್ಷವೆಂದೂ ಭಯವಿಲ್ಲದವನೆಂದೂ ಹೇಳುತ್ತಾರೆ.

೧೬.೧೭. ಕೆಲವರು ಶೂನ್ಯನೆಂದೂ ಕೆಲವರು ಭಾವಸ್ವರೂಪನೆಂದೂ ಕೆಲವರು ಶಿವನೆಂದೂ ಮತ್ತೆ ಕೆಲವರು ಸದಾಶಿವನೆಂದೂ ಇನ್ನೂ ಕೆಲವರು ಉಪನಿಷತ್ತಿನಲ್ಲಿ ನಿಂತಿರುವವನೆಂದೂ ಸನಾತನನೆಂದೂ ಕೆಲವರು ಕಾಣುವ ಪದಾರ್ಥವೆಂದೂ ಮತ್ತೆ ಕೆಲವರು ಕ್ರಿಯಾರಹಿತನೆಂದೂ ಸಚ್ಚಿದಾನಂದ ಸ್ವರೂಪನೆಂದೂ ಹೇಳುತ್ತಾರೆ. ಈಗ ನೋಡು. ವೇದದಲ್ಲಿ ಗುಟ್ಟಾಗಿ ಹೇಳಿರುವಂತೆ ನಾನು ನನ್ನ ಸ್ವರೂಪವನ್ನು ತೋರಿಸುತ್ತೇನೆ.

೧೮-೧೯. ಎಲೈ ದೊರೆಯೇ ಅನಂತರ ನಾನು ಮಗುವಾದ ಕಾಲಮೇಘದಂತೆ ಕಾಂತಿಯುಳ್ಳ ಗೋಪಕನ್ಯೆಯರಿಂದ ಕೂಡಿದ ಗೋಪ ಬಾಲಕರ ಕೂಡ ನಗುತ್ತಿರುವ ಹೊಂಬಣ್ಣದ ಬಟ್ಟೆಯನ್ನುಟ್ಟ ಕದಮ್ಬಮರದ ಬುಡದಲ್ಲಿ ಕುಳಿತಿರುವ ಸ್ವಾಮಿಯನ್ನು ನೋಡಿದೆನು.

೨೦. ಇಂದೀವರದಂತೆ ಕಪ್ಪುಳ್ಳ ಕಾಳಿಂದೀನದಿಯನ್ನೂ ನೋಡಿದೆನು.

ಗೋವರ್ಧನಂ ತಥಾಪಶ್ಯಂ ಕೃಷ್ಣ ರಾಮಕರೋದ್ಧೃತಂ ।
ಮಹೇಂದ್ರದರ್ಪನಾಶಾಯ ಗೋಗೋಪಾಲಸುಖಾವಹಂ ॥ ೨೧ ॥

ಗೋಪಾಲಮಬಲಾಸಂಗಮುದಿತಂ ವೇಣುವಾದಿನಂ ।
ದೃಷ್ಟ್ವಾತಿಹೃಷ್ಟೋಹ್ಯಭವಂ ಸರ್ವಭೂಷಣಭೂಷಣಂ ॥ ೨೨ ॥

ತತೋ ಮಾಮಾಹ ಭಗವಾನ್ವೃಂದಾವನಚರಸ್ಸ್ವಯಂ ।
ಯದಿದಂ ಮೇ ತ್ವಯಾ ದೃಷ್ಟಂ ರೂಪಂ ದಿವ್ಯಂ ಸನಾತನಂ ॥ ೨೩ ॥

ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ಸಚ್ಚಿದಾನಂದ ವಿಗ್ರಹಂ ।
ಪೂರ್ಣಂ ಪದ್ಮಪಲಾಶಾಕ್ಷಂ ನಾತಃ ಪರತರಂ ಮಮ ॥ ೨೪ ॥

ಇದಮೇವ ವದಂತ್ಯೇತೇ ವೇದಾಃ ಕಾರಣಕಾರಣಂ ।
ಸತ್ಯಂಚಾಪಿ ಪರಾನಂದಂ ಚಿದ್ಘನಂ ಶಾಶ್ವತಂ ಶಿವಂ ॥ ೨೫ ॥

ನಿತ್ಯಂ ಮೇ ಮಥುರಾಂ ವಿದ್ಧಿ ವನಂ ವೃಂದಾವನಂ ತಥಾ ।
ಯಮುನಾಂ ಗೋಪಕನ್ಯಾಶ್ಚ ತಥಾ ಗೋಪಾಲಬಾಲಕಾಃ ॥ ೨೬ ॥

---

೨೧. ಇಂದ್ರನ ಹೆಮ್ಮೆಯನ್ನು ಅಡಗಿಸಲು ರಾಮಕೃಷ್ಣರು ಕೈಯಲ್ಲಿ ಎತ್ತಿ ಹಿಡಿದಿರುವ ಗೋವರ್ಧನ ಪರ್ವತವನ್ನು ಕಂಡೆನು

೨೨. ಗೋಪಿಯರ ಸಹವಾಸದಿಂದ ಸಂತೋಷಗೊಂಡ ಕೊಳಲು ಬಾರಿಸುತ್ತಿರುವ ಸರ್ವಭೂಷಣಗಳಿಗೂ ಭೂಷಣನಾದ ಗೋಪಾಲನನ್ನು ಕಂಡೆನು. ನೋಡಿ ಬಹುವಾಗಿ ಸಂತೋಷಗೊಂಡೆನು.

೨೩-೨೪. ವೃಂದಾವನದಲ್ಲಿಯೇ ಯಾವಾಗಲೂ ಇರುವ ಸ್ವಾಮಿಯು ನನ್ನನ್ನು ಕುರಿತು ಇಂತೆಂದನು. ನೀನು ನೋಡಿದ ಈ ನನ್ನ ರೂಪವು ದಿವ್ಯವೂ ಸನಾತನವೂ ಆದುದು. ಅಭಿನ್ನವಾದುದು. ಕ್ರಿಯೆಯಿಲ್ಲದುದು. ಸತ್ ಚಿತ್ ಆನಂದ ರೂಪವಾದ ವಿಗ್ರಹವು ಪೂರ್ಣವಾದುದು. ಇದಕ್ಕಿಂತ ಬೇರೆ ಯಾವುದೂ ಇಲ್ಲ.

೨೫. ಈ ಶರೀರವನ್ನೇ ವೇದಗಳು ಕಾರಣಕ್ಕೂ ಕಾರಣವೆಂದು ಹೇಳುತ್ತವೆ. ಸತ್ಯಮಯವಾದುದು. ಆನಂದಮಯವಾದುದು. ಚಿತ್ ಘನಸ್ವರೂಪವಾದುದು. ಶಾಶ್ವತವೂ ಮಂಗಳವೂ ಆದುದು.

೨೬-೨೭. ಮಥುರೆ, ವೃಂದಾವನ, ಯಮುನೆ, ಗೋಪಕನ್ಯೆಯರು, ಗೋಪಾಲಬಾಲಕರು, ಇವರು ಎಲ್ಲರೂ ನನ್ನ ಕೂಡ ಇರತಕ್ಕ ನಿತ್ಯ ಪದಾರ್ಥವು. ನನ್ನ ಈ

ಮಮಾವತಾರೋ ನಿತ್ಯೋऽಹಂ ಅತ್ರ ಮಾ ಸಂಶಯಂ ಕೃಥಾಃ
ಮಮೇಷ್ಟಾ ಹಿ ಸದಾ ರಾಧಾ ಸರ್ವಜ್ಞೋऽಹಂ ಪರಾತ್ಪರಃ ॥ ೨೭ ॥

ಸರ್ವಕಾಮಶ್ಚ ಸರ್ವೇಶಃ ಸರ್ವಾನಂದಃ ಪರಾತ್ಪರಃ ।
ಮಯಿ ಸರ್ವಮಿದಂ ವಿಶ್ವಂ ಭಾತಿ ಮಾಯಾವಿಜೃಂಭಿತಂ ॥ ೨೮ ॥

ತತೋऽಹಮಬ್ರವಂ ದೇವಂ ಜಗತ್ಕಾರಣಕಾರಣ ।
ಕಾಶ್ಚ ಗೋಪ್ಯಸ್ತು ಕೇ ಗೋಪಾ ವೃಕ್ಷೋऽಯಂ ಕೀದೃಶೋऽಮತಃ ॥ ೨೯ ॥

ವನಂ ಕಿಂ ಕೋಕಿಲಾದ್ಯಾಶ್ಚ ನದೀ ಕೇಯಂ ಗಿರಿಶ್ಚ ಕಃ ।
ಕೋऽಸೌ ವೇಣುರ್ಮಹಾಭಾಗೋ ಲೋಕಾನಂದೈಕಭಾಜನಂ ॥ ೩೦ ॥

ಭಗವಾನಾಹ ಮಾಂ ಪ್ರೀತಃ ಪ್ರಸನ್ನವದನಾಂಬುಜಃ ।
ಗೋಪ್ಯಸ್ತು ಶ್ರುತಯೋ ಜ್ಞೇಯಾ ಋಚೋ ವೈ ಗೋಪಕನ್ಯಕಾಃ ॥ ೩೧ ॥

ದೇವಕನ್ಯಾಶ್ಚ ರಾಜೇಂದ್ರ ತಪೋಯುಕ್ತಾ ಮುಮುಕ್ಷವಃ ।
ಗೋಪಾಲಾಮುನಯಸ್ಸರ್ವೇ ವೈಕುಂಠಾನಂದಮೂರ್ತಯಃ ॥ ೩೨ ॥

---

ಅವತಾರವು ನಿತ್ಯವಾದುದು ಇದರಲ್ಲಿ ಸಂಶಯವಿಲ್ಲ. ನನಗೆ ರಾಧೆಯು ಯಾವಾಗಲೂ ಇಷ್ಟಳು. ನಾನು ಸರ್ವಜ್ಞನು. ಉತ್ತಮೋತ್ತಮನು.

೨೮. ಸರ್ವ ಇಷ್ಟಗಳೂ ಸರ್ವೇಶನೂ, ಸರ್ವಾನಂದನೂ, ಪರಾತ್ಪರನೂ, ಆಗಿದ್ದೇನೆ. ಮಾಯೆಯಿಂದ ಕೂಡಿರುವ ಈ ಪ್ರಪಂಚವೆಲ್ಲವೂ ನನ್ನಲ್ಲಿಯೇ ಇದೆ.

೨೯-೩೦. ಆಗ ನಾನು ಜಗತ್ತಿಗೆ ಕಾರಣನಾದ ಆ ಸ್ವಾಮಿಯನ್ನು ಕೇಳಿದೆನು ಗೋಪಿಯರಾರು ? ಗೋಪರಾರು ? ಈ ವೃಕ್ಷವಾವುದು ? ವನವು ಯಾವುದು ? ಈ ಕೋಗಿಲೆಗಳು ಮುಂತಾದುವೇನು ? ಈ ನದಿ ಯಾವುದು ? ಈ ಬೆಟ್ಟವು ಯಾವುದು? ಈ ಕೊಳಲಾವುದು ? ಇವೆಲ್ಲವೂ ಲೋಕಕ್ಕೆ ಆನಂದವನ್ನು ಕೊಡುತ್ತಿವೆಯಲ್ಲ!

೩೧-೩೨. ಆಗ ಪ್ರಸನ್ನನಾಗಿ ಸ್ವಾಮಿಯು ಹೇಳಿದನು ಈ ಗೋಪಿಯರೆಲ್ಲಾ ಶ್ರುತಿಗಳು. ಋಕ್ಕುಗಳು. ಗೋಪಕನ್ಯೆಯರು ದೇವಕನ್ಯೆಯರಾದ ಇವರೆಲ್ಲರೂ ಮುಕ್ತಿಯನ್ನು ಅಪೇಕ್ಷಿಸುವ ಋಷಿಗಳು. ವೈಕುಂಠದ ಆನಂದಮೂರ್ತಿಗಳಾದ ಮುನಿಗಳೇ ಈ ಗೋಪಾಲಕರು.

ಕಲ್ಪವೃಕ್ಷಃ ಕದಂಬೋಽಯಂ ಪರಾನಂದೈಕಭಾಜನಂ ।
ವನಂ ನಂದನಕಾಖ್ಯಂ ಹಿ ಮಹಾಪಾತಕನಾಶನಂ ॥ ೩೩ ॥

ಸಿದ್ಧಾಃ ಸಾಧ್ಯಾ ಗಂಧರ್ವಾಃ ಕೋಕಿಲಾದ್ಯಾ ನ ಸಂಶಯಃ ।
ಕೇಚಿದಾನಂದಹೃದಯಂ ಸಾಕ್ಷಾದ್ಯಮುನಯಾ ತನುಂ ॥ ೩೪ ॥

ಅನಾದಿರ್ಹರಿದಾಸೋಽಯಂ ಭೂಧರೋ ನಾತ್ರ ಸಂಶಯಃ ।
ವೇಣುರ್ಯಃ ಶೃಣು ತಂ ವಿಪ್ರಂ ತವಾಪಿ ವಿದಿತಂ ತಥಾ ॥ ೩೫ ॥

ದ್ವಿಜಆಸೀಚ್ಛಾಂತಮನಾಃ ತಪಸ್ಸತ್ತ್ವಪರಾಯಣಃ ।
ನಾಮ್ನಾ ದೇವವ್ರತೋ ದಾಂತಃ ಕರ್ಮಕಾಂಡವಿಶಾರದಃ ॥ ೩೬ ॥

ಸ ವೈಷ್ಣವಜನವ್ರಾತಮಧ್ಯವರ್ತೀ ಕ್ರಿಯಾಪರಃ ।
ಸ ಕದಾಚನ ಶುಶ್ರಾವ ಯಜ್ಞೀ ಸೋಽಸ್ತೀತಿ ಭೂಪತೇ ॥ ೩೭ ॥

ತಸ್ಯ ಗೇಹಮಥಾಭ್ಯಾಗಾದ್ದ್ವಿಜೋ ಮದ್ಗತನಿಶ್ಚಯಃ ।
ಸಮುಚ್ಛಕ್ತಃ ಕ್ವಚಿತ್ಪೂಜಾಂ ತುಳಸೀದಳವಾರಿಣಾ ॥ ೩೮ ॥

---

೩೩. ಈ ಕದಂಬವು ಕಲ್ಪವೃಕ್ಷವು. ಆನಂದಕರವಾದ ನಂದನವನವೇ ಈ ವನವು. ಅದು ಮಹಾಪಾತಕನಾಶನವು.

೩೪. ಈ ಕೋಕಿಲಾದಿಗಳು ಸಿದ್ಧರೂ, ಸಾಧ್ಯರೂ, ಗಂಧರ್ವರೂ, ಆಗಿದ್ದಾರೆ. ಸಂಶಯವಿಲ್ಲ. ಆನಂದಹೃದಯವಾದ ಯಮುನೆಯೇ ಸಾಕ್ಷಾತ್ತಾದ ದೇಹವು.

೩೫. ಈ ಬೆಟ್ಟವು ಬಹುಕಾಲದ ಹರಿದಾಸನು. ಈ ವೇಣುವು ನಿನಗೆ ತಿಳಿದಿರುವ ಬ್ರಾಹ್ಮಣನೇ.

೩೬. ಶಾಂತನಾದ ತಪಸ್ಸು ಸತ್ವಗಳಿಂದ ಕೂಡಿದ ಕರ್ಮಕಾಂಡದಲ್ಲಿ ನಿಪುಣನಾದ ದೇವವ್ರತನೆಂಬುವನು.

೩೭-೩೮. ಅವನು ಯಾವಾಗಲೂ ಜನಗಳ ಮಧ್ಯದಲ್ಲಿದ್ದು ಕೆಲಸದಲ್ಲಿ ಆಸಕ್ತನಾಗಿರುವನು ಅವನು ಒಂದು ಸಲ ಯಜ್ಞಮಾಡುತ್ತಿರುವನೆಂದು ಕೇಳಿ ನನ್ನ ಭಕ್ತನಾದ ಒಬ್ಬ ಬ್ರಾಹ್ಮಣನು ಅವನ ಮನೆಗೆ ಹೋದನು. ಆ ನನ್ನ ಭಕ್ತನು ತುಳಸಿ

ಕೃತವಾಂಸ್ತದ್ಗೃಹೇ ಕಿಂಚಿತ್ಫಲಮೂಲಂ ನ್ಯವೇದಯತ್ ।
ಸ್ನಾನವಾರಿ ಫಲಂಕಿಂಚಿತ್ತಸ್ಮೈ ಪ್ರೀತ್ಯಾ ದದೌ ಸುಧೀಃ ॥ ೩೯ ॥

ಅಶ್ರದ್ಧಯಾ ಸ್ಮಿತಂ ಕೃತ್ವಾ ಸೋಽಪ್ಯಗೃಹ್ಣಾದ್ದ್ವಿಜನ್ಮನಃ ।
ತೇನ ಪಾಪೇನ ಸಂಜಾತಂ ವೇಣುತ್ವಮತಿದಾರುಣಂ ॥ ೪೦ ॥

ತೇನ ಪುಣ್ಯೇನ ತಸ್ಯಾಥ ಮದೀಯಪ್ರಿಯತಾಂ ಗತಃ ।
ಅಮುನಾ ಸೋಽಪಿ ರಾಜೇಂದ್ರ ಕೇತುಮಾನಿವ ರಾಜತೇ ॥ ೪೧ ॥

ಯುಗಾಂತೇ ತದ್ವಿಷ್ಣುಪರೋ ಭೂತ್ವಾ ಬ್ರಹ್ಮ ಸಮಾಪ್ಸ್ಯಸಿ ॥ ೪೨ ॥

ಅಹೋ ನ ಜಾನಂತಿ ನರಾ ದುರಾಶಯಾಃ
ಪುರೀಂ ಮದೀಯಾಂ ಪರಮಾಂ ಸನಾತನೀಂ ॥
ಸುರೇಂದ್ರನಾಗೇಂದ್ರಮುನೀಂದ್ರಸಂಸ್ತುತಾಂ
ಮನೋರಮಾಂ ತಾಂ ಮಧುರಾಂ ಸನಾತನೀಂ ॥ ೪೩ ॥

ಕಾಶ್ಯಾದಯೋ ಯದ್ಯಪಿ ಸಂತಿ ಪುರ್ಯೋ
ತಾಸಾಂ ತು ಮಧ್ಯೇ ಮಧುರೈವ ಧನ್ಯಾ ।

---

ಯಿಂದಲೂ ನೀರಿನಿಂದಲೂ ಪೂಜೆಮಾಡಿ ಫಲ ಮೂಲಗಳನ್ನು ತಿನ್ನಲು ಕೊಟ್ಟನು, ಮತ್ತು ಸ್ವಲ್ಪ ಗೆಜ್ಜರಿಕೆಯ ಹಣ್ಣನ್ನೂ ಕೊಟ್ಟನು.

೪೦. ಉದಾಸೀನದಿಂದ ಸ್ವಲ್ಪ ನಕ್ಕು ಆ ಹಣ್ಣನ್ನು ತೆಗೆದುಕೊಂಡನು ಆ ಪಾಪದಿಂದ ಅವನು ಕಠಿಣವಾದ ಈ ವೇಣುವಾಗಿ ಹುಟ್ಟಿದನು.

೪೧-೪೨. ಆ ಪುಣ್ಯದಿಂದ ನನಗೆ ಪ್ರಿಯನಾದನು. ಈ ಬಿದಿರಾಗಿರುವುದರಿಂದಲೇ ಅವನು ದೊಡ್ಡದಾಗಿ ಪ್ರಕಾಶಿಸುತ್ತಾನೆ. ಅದರಂತೆ ನೀನು ವಿಷ್ಣುಪರನಾಗಿದ್ದುಕೊಂಡು ಬ್ರಹ್ಮನಲ್ಲಿ ಐಕ್ಯನಾಗುತ್ತೀಯೆ.

೪೩. ಉತ್ಕೃಷ್ಟವಾದ ಸನಾತನವಾದ ದೇವದಾನವ ಮುನೀಂದ್ರರಿಂದ ಹೊಗಳಲ್ಪಟ್ಟ ಮನೋಹರವಾದ ಮಧುರೆಯನ್ನು ಅಯೋಗ್ಯರಾದ ದುರಾಶಯರಾದ ಜನರು ತಿಳಿಯರು.

೪೪. ಕಾಶಿಯೇ ಮುಂತಾದ ಅನೇಕ ಮುಕ್ತಿ ಪ್ರದೇಶಗಳಿವೆ ಅವುಗಳಲ್ಲಿ ಮಧುರೆಯೇ ಧನ್ಯವಾದುದು. ಅದು ಜನರಿಗೆ ಜನ್ಮ, ಮುಂಜಿ, ಸಾವು,

ಯಜ್ಞಸ್ಯ ಮೌಂಜೀವ್ರತಮೃತ್ಯುದಾಶ್ಯೈ
ರ್ನೃಣಾಂ ಚತುರ್ಧಾ ವಿದಧಾತಿ ಮುಕ್ತಿಂ ॥ ೪೪ ॥

ಯದಾ ವಿಶುದ್ಧಾಸ್ತಪ ಆದಿನಾ ಜನಾಃ
ಶುಭಾಶಯಾ ಧ್ಯಾನಧನಾ ನಿರಂತರಂ ।
ತದೈವ ಪಶ್ಯಂತಿ ಮಮೋತ್ತಮಾಂ ಪುರೀಂ
ನಚಾನ್ಯಥಾ ಕಲ್ಪಶತೈರ್ದ್ವಿಜೋತ್ತಮಾಃ ॥ ೪೫ ॥

ಮಧುರಾವಾಸಿನೋ ಧನ್ಯಾ ಮಾನ್ಯಾ ಅಪಿ ದಿವೌಕಸಾಂ ।
ಅಗಣ್ಯಮಹಿಮಾನಸ್ತೇ ಸರ್ವ ಏವ ಚತುರ್ಭುಜಾಃ ॥ ೪೬ ॥

ಮಧುರಾವಾಸಿನಾಂ ಯೇ ತು ದೋಷಾ ನಶ್ಯಂತಿ ಮಾನವಾಃ ।
ತೇಷು ದೋಷಂ ನ ಪಶ್ಯಂತಿ ಜನ್ಮಮೃತ್ಯುಸಹಸ್ರಜಂ ॥ ೪೭ ॥

ಅಧಮಾ ಅಪಿ ಧನ್ಯಾಸ್ಯುರ್ಮಧುರಾಂ ಯೇಸ್ಮರಂತಿ ತಾಂ ।
ಯತ್ರ ಭೂತೇಶ್ವರೋ ದೇವೋ ಮೋಕ್ಷದಃ ಪಾಪಿನಾಮಪಿ ॥ ೪೮ ॥

---

ದಾಯಾರಿಕೆ, ಇವುಗಳಿಗೆ ಬೇಕಾದುದನ್ನು ಕೊಟ್ಟು ನಾಲ್ಕುವಿಧವಾಗಿ ಮುಕ್ತಿಯನ್ನು ಕೊಡುತ್ತದೆ

೪೫. ಜನರು ತಪಸ್ಸೇ ಮೊದಲಾದುವುಗಳಿಂದ ಶುದ್ಧರಾಗಿ ಒಳ್ಳೆಯಮನಸ್ಸಿನಿಂದ ಕೂಡಿದ್ದು ನಿರಂತರವೂ ಯಾವಾಗ ಧ್ಯಾನ ಮಾಡುತ್ತಾರೋ ಆಗ ಈ ನನ್ನ ನಗರವಾದ ಮಧುರೆಯನ್ನು ನೋಡುತ್ತಾರೆ. ಹಾಗಿಲ್ಲದಿದ್ದರೆ ನೂರು ಕಲ್ಪಗಳಾದರೂ ನನ್ನನ್ನು ನೋಡಲು ಸಾಧ್ಯವಿಲ್ಲ.

೪೬. ಮಧುರೆಯಲ್ಲಿರುವವರೇ ಧನ್ಯರು. ದೇವತೆಗಳಿಗೂ ಅವರು ಮಾನ್ಯರು ಅವರ ಮಹಿಮೆಯು ಹೆಚ್ಚಾದುದು.

೪೭. ಮಧುರೆಯಲ್ಲಿ ವಾಸಮಾಡುವವರ ದೋಷವೆಲ್ಲವೂ ನಾಶವಾಗುತ್ತದೆ. ಅವರಲ್ಲಿರುವ ಅನೇಕ ಸಾವಿರ ಹುಟ್ಟು ಸಾವುಗಳ ದೋಷವನ್ನು ನೋಡುವುದಿಲ್ಲ.

೪೮. ಮಧುರೆಯನ್ನು ಸ್ಮರಿಸುವವರು ಅಯೋಗ್ಯರಾದರೂ ಅವರು ಯೋಗ್ಯರೇ. ಅಲ್ಲಿ ಪಾಪಿಗಳಿಗೂ ಕೂಡ ಭೂತೇಶ್ವರನು ಮೋಕ್ಷವನ್ನು ಕೊಡುತ್ತಾನೆ.

ಮಮಪ್ರಿಯತಮೋ ನಿತ್ಯಂ ದೇವೋ ಭೂತೇಶ್ವರಃ ಪರಃ ।
ಯಃ ಕದಾಪಿ ಮಮ ಪ್ರೀತ್ಯೈ ನ ಸಂತ್ಯಜತಿ ತಾಂ ಪುರೀಂ ॥ ೪೯ ॥

ಭೂತೇಶ್ವರಂ ಯೋ ನ ನಮೇನ್ನ ಪೂಜಯೇ
ನ್ನವಾಸ್ಮರೇದ್ದುಶ್ಚರಿತೋ ಮನುಷ್ಯಃ ।
ನೈನಾಂ ನ ಪಶ್ಯೇನ್ಮಧುರಾಂ ಮದೀಯಾಂ
ಸ್ವಯಂ ಪ್ರಕಾಶಾಂ ಪರದೇವತಾಖ್ಯಾಂ ॥ ೫೦ ॥

ನ ಕಥಂ ಮಯಿ ಭಕ್ತಿಂ ಸ ಲಭೇತೇ ಪಾಪಪೂರುಷಃ ।
ಯೋ ಮದೀಯಂ ಪರಂ ಭಕ್ತಂ ಶಿವಂ ಸಂಪ್ರೂಜಯೇನ್ನ ಹಿ ॥ ೫೧ ॥

ಮನ್ಮಾಯಾ ಮೋಹಿತಧಿಯಃ ಪ್ರಾಯಸ್ತೇ ಮಾನವಾಧಮಾಃ ।
ಭೂತೇಶ್ವರಂ ನ ನಮನ್ತಿ ನ ಸ್ಮರಂತಿ ಸ್ತುವಂತಿ ಯೇ ॥ ೫೨ ॥

ಬಾಲಕೋಽಪಿ ಧ್ರುವೋ ಯತ್ರ ಮಮಾರಾಧನತತ್ಪರಃ ।
ಪ್ರಾಪ ಸ್ಥಾನಂ ಪರಂ ಶುದ್ಧಂ ಯನ್ನಯುಕ್ತಂ ಪಿತಾಮಹೈಃ ॥ ೫೩ ॥

---

೪೯. ನನಗೆ ಆ ಭೂತೇಶ್ವರನು ಬಹು ಪ್ರೀತಿ ಪಾತ್ರನು. ನನ್ನನ್ನು ಸಂತೋಷ ಪಡಿಸಬೇಕೆಂದೇ ಆ ಭೂತೇಶನು ಆ ಪಟ್ಟಣವನ್ನು ಬಿಡುವುದಿಲ್ಲ.

೫೦. ಭೂತೇಶ್ವರನನ್ನು ಯಾವನು ಪೂಜಿಸುವುದಿಲ್ಲವೋ ನಮಿಸುವು ದಿಲ್ಲವೋ ಸ್ಮರಿಸುವುದಿಲ್ಲವೋ ಅವನು ಪರದೇವತೆಯಾದ ಈ ನನ್ನ ಮಧುರೆಯನ್ನು ನೋಡಲಾರನು.

೫೧. ನನ್ನ ಭಕ್ತನಾದ ಶಿವನನ್ನು ಯಾವನು ಪೂಜಿಸುವುದಿಲ್ಲವೋ ಅವನು ಪಾಪಿಯಾಗಿ ನನ್ನಲ್ಲಿ ಭಕ್ತಿಯನ್ನು ಹೊಂದಲಾರನು.

೫೨. ಅಂತಹ ಅಧಮರು ಸಾಧಾರಣವಾಗಿ ನನ್ನ ಮಾಯೆಯಿಂದ ಮೋಹಿತ ರಾಗಿ ಭೂತೇಶ್ವರನನ್ನು ನಮಿಸುವುದಾಗಲಿ, ಸ್ತುತಿಸುವುದಾಗಲಿ, ಸ್ಮರಿಸುವುದಾಗಲಿ ಮಾಡುವುದಿಲ್ಲ.

೫೩. ಬಾಲಕನಾದ ಧ್ರುವನು ಇಲ್ಲಿ ನನ್ನನ್ನೇ ಆರಾಧಿಸುತ್ತಾ ಬ್ರಹ್ಮಾದಿಗಳು ಹೊಂದಲಸಾಧ್ಯವಾದ ಸ್ಥಾನವನ್ನು ಹೊಂದಿದ್ದಾನೆ.

ತಾಂ ಪುರೀಂ ಪ್ರಾಪ್ಯ ಮಧುರಾಂ ಮದೀಯಾಂ ಸುರದುರ್ಲಭಾಂ ।
ಖಂಜೋ ಭೂತ್ವಾಂಧಕೋವಾಪಿ ಪ್ರಾಣಾನೇವ ಪರಿತ್ಯಜೇತ್ ॥ ೫೪ ॥

ವೇದವ್ಯಾಸ ಮಹಾಭಾಗ ಮಾ ಕೃಥಾಃ ಸಂಶಯಂ ಕ್ವಚಿತ್ ।
ಸಹಸ್ರಂ ವೇದಶಿರಸಾಂ ಯನ್ಮಯಾ ತೇ ಪ್ರಕಾಶಿತಂ ॥ ೫೫ ॥

ಇಮಂ ಭಗವತಾ ಪ್ರೋಕ್ತಮಧ್ಯಾಯಂ ಯಃ ಪಠೇಚ್ಛುಚಿಃ ।
ಶೃಣುಯಾದ್ವಾಪಿ ಯೋ ಭಕ್ತ್ಯಾ ಮುಕ್ತಿಸ್ತಸ್ಯಾಪಿ ಶಾಶ್ವತೀ ॥ ೫೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಮಧುರಾಮಾಹಾತ್ಮ್ಯ ಕಥನಂ ನಾಮ ತ್ರಿಸಪ್ತತಿತಮೋಽಧ್ಯಾಯಃ

---

೫೪. ಕುಂಟನಾಗಲಿ, ಕುರುಡನಾಗಲಿ ಯಾವನೇ ಆಗಲೀ ಆ ನನ್ನ ಮಧುರಾ ಪುರಿಯನ್ನು ಹೊಂದಿ ಪ್ರಾಣಬಿಟ್ಟರೆ ಉತ್ತಮ ಸ್ಥಾನವನ್ನು ಹೊಂದುತ್ತಾನೆ.

೫೫. ಎಲೈ ವೇದವ್ಯಾಸನೇ, ಯಾವರೀತಿಯಲ್ಲೂ ಸಂಶಯಪಡಬೇಡ. ಉಪನಿಷತ್ತಿನ ರಹಸ್ಯವನ್ನೇ ನಿನಗೆ ಹೇಳಿದ್ದೇನೆ.

೫೬. ಭಗವಂತನು ಹೇಳಿದ ಈ ಅಧ್ಯಾಯವನ್ನು ಯಾವನು ಶುಚಿಯಾಗಿ ಭಕ್ತಿಯಿಂದ ಕೇಳುತ್ತಾನೆಯೋ ಅವನಿಗೆ ಶಾಶ್ವತವಾದ ಮುಕ್ತಿಯು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಮಧುರಾ ಮಹಾತ್ಮೆಯೆಂಬ ಎಪ್ಪತ್ತಮೂರನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಚತುಸ್ಸಪ್ತತಿತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

ಏಕದಾ ರಹಸಿಶ್ರೀಮಾನುದ್ಧವೋ ಭಗವತ್ಪ್ರಿಯಃ ।
ಸನತ್ಕುಮಾರಮೇಕಾನ್ತೇ ಹ್ಯಪೃಚ್ಛತ್ಪಾರ್ಷದಃ ಪ್ರಭೋಃ ॥ ೧ ॥

ಯತ್ರ ಕ್ರೀಡತಿ ಗೋವಿಂದೋ ನಿತ್ಯಂ ನಿತ್ಯಸುರಾಸ್ಪದೇ ।
ಗೋಪಾಂಗನಾಭಿಸ್ತತ್ಸ್ಥಾನಂ ಕುತ್ರ ವಾ ಕೀದೃಶಂ ಪರಂ ॥ ೨ ॥

ತತ್ತತ್ಕ್ರೀಡನವೃತ್ತಾನ್ತಮನ್ಯದ್ಯದ್ಯತ್ರ ತದದ್ಭುತಂ ।
ಜ್ಞಾತಂ ಚೇತ್ತವ ತತ್ತಥ್ಯಂ ಸ್ನೇಹೋ ಮೇ ಯದಿ ವರ್ತತೇ ॥ ೩ ॥

---

## ಎಪ್ಪತ್ತನಾಲ್ಕನೆಯ ಅಧ್ಯಾಯವು

೧. ಈಶ್ವರನು ಹೇಳಿದನು– ಒಂದು ಸಾರಿ ಭಗವತ್ಪ್ರಿಯನಾದ ಉದ್ಧವನು ಪಾರ್ಷದನಾದ ಸನತ್ಕುಮಾರನನ್ನು ಏಕಾಂತದಲ್ಲಿ ಕೇಳಿದನು.

೨. ದೇವತೆಗಳಿಂದ ಆವೃತವಾದ ಯಾವ ಜಾಗದಲ್ಲಿ ಗೋವಿಂದನು ಕ್ರೀಡಿಸುತ್ತಾನೋ ಆ ಜಾಗವು ಎಲ್ಲಿದೆ ? ಅದು ಎಂಥಾದ್ದು ?

೩. ಅವನ ಕ್ರೀಡೆಯ ವಿಷಯವನ್ನೂ ಇನ್ನೂ ಏನೇನು ಅದ್ಭುತಗಳಿವೆ ಯೆಂಬುದನ್ನೂ ನನ್ನಲ್ಲಿ ನಿನಗೆ ಸ್ನೇಹವಿದ್ದರೆ ನಿನಗೆ ಗೊತ್ತಿದ್ದರೆ ಹೇಳು.

॥ ಸನತ್ಕುಮಾರ ಉವಾಚ ॥

**ಕದಾಚಿದ್ಯಮುನಾಕೂಲೇ ಕಸ್ಯಾಪಿ ಚ ತರೋಸ್ತಲೇ ।**
**ಸುವ್ರತೇನೋಪವಿಷ್ಟೇನ ಭಗವತ್ಪಾರ್ಷದೇನ ವೈ ॥ ೪ ॥**

**ಯಮಿಹಾನುಭವಸ್ತಸ್ಯ ಪಾರ್ಥೇನಾಪಿ ಮಹಾತ್ಮನಾ ।**
**ದೃಷ್ಟಂ ಕೃತಂ ಚ ಯದ್ಯತ್ತತ್ಪ್ರಸಂಗಾತ್ಕಥಿತಂ ಮಯಿ ॥ ೫ ॥**

**ತತ್ತೇಽಹಂ ಕಥಯಾಮ್ಯೇತಚ್ಛೃಣುಷ್ವಾವಹಿತಃ ಪರಂ ।**
**ಕಿಂತ್ವೇತದ್ಯತ್ರ ಕುತ್ರಾಪಿ ನ ಪ್ರಕಾಶ್ಯಂ ಕದಾಚನ ॥ ೬ ॥**

॥ ಅರ್ಜುನ ಉವಾಚ ॥

**ಶಂಕರಾದ್ಯೈರ್ವಿರಿಂಚಾದ್ಯೈರದೃಷ್ಟಮಶ್ರುತಂ ಚ ಯತ್ ।**
**ಸರ್ವಮೇತತ್ಕೃಪಾಂಬೋಧೇ ಕೃಪಯಾ ಕಥಯ ಪ್ರಭೋ ॥ ೭ ॥**

**ಕಿಂ ತ್ವಯಾ ಕಥಿತಂ ಪೂರ್ವಮಾಭೀರ್ಯಸ್ತವ ವಲ್ಲಭಾಃ ।**
**ತಾಸ್ತಾಃ ಕತಿವಿಧಾ ದೇವ ಕತಿ ವಾ ಸಂಖ್ಯಯಾ ಪುನಃ ॥ ೮ ॥**

---

೪-೫. ಒಂದು ಸಾರಿ ಯಮುನಾನದಿಯ ದಡದಲ್ಲಿ ಒಂದು ಮರದ ಕೆಳಗೆ ಕೂತಿರುವ ಸುವ್ರತನೆಂಬ ಪಾರ್ಷದನು ಅರ್ಜುನನು ಅನುಭವಿಸಿದುದನ್ನು ನೋಡಿಯೂ ಕೇಳಿಯೂ ಇದ್ದುದನ್ನು ನನಗೆ ಹೇಳಿದನು.

೬ ಅದನ್ನೇ ನಿನಗೆ ಹೇಳುತ್ತೇನೆ. ಸ್ಥಿರಮನಸ್ಸಿನಿಂದ ಕೇಳು. ಆದರೆ ಇದುನ್ನ ಎಲ್ಲಿಯೂ ಯಾವಾಗಲೂ ಹೇಳಬೇಡ.

೭. ಅರ್ಜುನನು ಹೇಳಿದನು– ಶಂಕರ, ಬ್ರಹ್ಮ ಇವರೇ ಮೊದಲಾದವರಿಂದ ನೋಡದ ಕೇಳದ ವಿಷಯಗಳನ್ನು ನನಗೆ ಹೇಳಪ್ಪ. ಎಂದು ಭಗವಂತನಾದ ಕೃಷ್ಣನನ್ನು ಕೇಳಿದನು.

೮. ನೀನು ಮೊದಲು ಗೋಪಿಯರು ನಿನ್ನ ಹೆಂಡತಿಯರೆಂದು ಹೇಳಿದೆಯಲ್ಲವೆ. ಅವರೆಷ್ಟುಬಗೆ ? ಅವರೆಷ್ಟುಜನರು ?

ನಾಮಾನಿ ಕತಿ ವಾ ತಾಸಾಂ ಕಾ ವಾ ಕುತ್ರ ವ್ಯವಸ್ಥಿತಾಃ ।
ತಾಸಾಂ ವಾ ಕತಿ ಕರ್ಮಾಣಿ ವಯೋ ವೇಷಶ್ಚ ಕಃ ಪ್ರಭೋ ॥ ೯ ॥

ಕಾಭಿಸ್ಸಾರ್ಧಂ ಕ್ವ ವಾ ದೇವ ವಿಹರಿಷ್ಯಸಿ ಭೋ ರಹಃ ।
ನಿತ್ಯೇ ನಿತ್ಯಸುಖೇ ನಿತ್ಯವಿಭವೇ ಚ ವನೇವನೇ ॥ ೧೦ ॥

ತತ್ಸ್ಥಾನಂ ಕೀದೃಶಂ ಕುತ್ರ ಶಾಶ್ವತಂ ಪರಮಂ ಮಹತ್ ।
ಕೃಪಾಚೇತ್ತಾದೃಶೀ ತನ್ಮೇ ಸರ್ವಂ ವಕ್ತುಮಿಹಾರ್ಹಸಿ ॥ ೧೧ ॥

ಯದ ಪೃಷ್ಟಂ ಮಯಾಪ್ಯೇವಮಜ್ಞಾತಂ ಯದ್ರಹಸ್ತವ ।
ಆರ್ತಾರ್ತಿಘ್ನ ಮಹಾಭಾಗ ತತ್ಸರ್ವಂ ಕಥಯಿಷ್ಯಸಿ ॥ ೧೨ ॥

॥ ಶ್ರೀ ಭಗವಾನುವಾಚ ॥

ತತ್ಸ್ಥಾನಂ ವಲ್ಲಭಾಸ್ತಾಸ್ಮೇ ವಿಹಾರಸ್ತಾದೃಶೋ ಮಮ ।
ಅಪಿ ಪ್ರಾಣಸಮಾನಾನಾಂ ಸತ್ಯಂ ಪುಂಸಾಮಗೋಚರಂ ॥ ೧೩ ॥

---

೯. ಅವರ ಹೆಸರೇನು ? ಅವರಾರು ? ಅವರೆಲ್ಲಿದ್ದಾರೆ ? ಅವರ ಕೆಲಸವೇನು? ಅವರ ವಯಸ್ಸೇನು ? ಅವರ ವೇಷವೂ ಕೂಡ ಯಾವುದು ?

೧೦. ನಿತ್ಯ ಸುಖವುಳ್ಳ ನಿನ್ನ ಐಶ್ವರ್ಯವೂ ಉಳ್ಳ ನಿತ್ಯವಾದ ವನಗಳಲ್ಲಿ ಅವರಲ್ಲಿ ಯಾರ ಯಾರೊಡನೆ ಎಲ್ಲೆಲ್ಲಿ ವಿಹರಿಸುತ್ತಿದ್ದೆ ? ವಿಹರಿಸುತ್ತೀಯೆ ?

೧೧. ಆ ಶಾಶ್ವತವಾದ ಪರಮಸ್ಥಾನವು ಎಲ್ಲಿದೆ? ಎಂಥಾದ್ದು ? ನನ್ನಲ್ಲಿ ದಯೆಯಿದ್ದರೆ ಅದನ್ನು ಹೇಳು.

೧೨. ನೀನು ಕೇಳದ ಕಾಣದ ರಹಸ್ಯಗಳನ್ನು ದುಃಖಿತರ ದುಃಖವನ್ನು ನಾಶಮಾಡುವ ಸ್ವಾಮಿಯೇ ನಾನೂ ಕೇಳದ ನನಗೆ ತಿಳಿಯದ ಆ ರಹಸ್ಯಗಳನ್ನು ನೀನು ಹೇಳು.

೧೩ ಶ್ರೀ ಭಗವಂತನು ಹೇಳಿದನು— ಆ ಜಾಗವು ಆ ವಲ್ಲಭರು ಆ ವಿಹಾರವು ನನಗೆ ಪ್ರಾಣಸಮರಿಗೂ ಸಹ ಅಗೋಚರವು.

ಕಥಿತೇ ದ್ರಷ್ಟುಮುತ್ಕಂಠಾ ತವ ವತ್ಸ ಭವಿಷ್ಯತಿ ।
ಬ್ರಹ್ಮಾದೀನಾಮದೃಶ್ಯಂ ಯತ್ಕಿಂ ತದನ್ಯಜನಸ್ಯ ವೈ ॥ ೧೪ ॥

ತಸ್ಮಾದ್ವಿರಮ ವತ್ಸೈತತ್ಕಿಂನು ತೇನ ವಿನಾ ತವ ।
ಏವಂ ಭಗವತಸ್ತಸ್ಯ ಶ್ರುತ್ವಾ ವಾಕ್ಯಂ ಸುದಾರುಣಂ ॥ ೧೫ ॥

ದೀನಃ ಪಾದಾಂಬುಜದ್ವಂದ್ವೇ ದಂಡವತ್ಪತಿತೋಽರ್ಜುನಃ ।
ತತೋ ವಿಹಸ್ಯ ಭಗವಾನ್ದೋರ್ಭ್ಯಾಮುತ್ಥಾಪ್ಯ ತಂ ವಿಭುಃ ॥ ೧೬ ॥

ಉವಾಚ ಪರಮಪ್ರೇಮ್ಣಾ ಭಕ್ತಾಯ ಭಕ್ತವತ್ಸಲಃ ।
ತತ್ಕಿಂ ತತ್ಕಥನೇನಾತ್ರ ದ್ರಷ್ಟವ್ಯಂ ಚೇತ್ತ್ವಯಾ ಹಿ ಯತ್ ॥ ೧೭ ॥

ಯಸ್ಯಾಂ ಸರ್ವಂ ಸಮುತ್ಪನ್ನಂ ಯಸ್ಯಾಮದ್ಯಾಪಿ ತಿಷ್ಠತಿ ।
ಲಯಮೇಷ್ಯತಿ ತಾಂ ದೇವೀಂ ಶ್ರೀಮತ್ತ್ರಿಪುರಸುಂದರೀಂ ॥ ೧೮ ॥

---

೧೪. ಅಪ್ಪ ! ಹೇಳಿದಮೇಲೆ ನೋಡಲು ನಿನಗೆ ಆಸೆಯುಂಟಾಗುತ್ತದೆ. ಅದು ಬ್ರಹ್ಮಾದಿಗಳಿಗೂ ಅದೃಶ್ಯವಾದುದು. ಬೇರೆಯವರಿಗೆ ಹೇಳತಕ್ಕದ್ದೇನಿದೆ.

೧೫. ಆದ್ದರಿಂದ ಆ ತಂಟೆಗೆ ಹೋಗದೇ ಸುಮ್ಮನಿರು. ಅದರಿಂದ ನಿನಗೇನು? ಅದಿಲ್ಲದಿದ್ದರೆ ನಿನಗೆ ನಷ್ಟವೇನು ? ಎಂದನು. ಭಗವಂತನ ಕ್ರೂರವಾದ ಈ ಉತ್ತರವನ್ನು ಕೇಳಿದನು.

೧೬. ಅನಂತರ ದೀನನಾಗಿ ದುಃಖದಿಂದ ಆ ಸ್ವಾಮಿಯ ಪಾದಗಳಿಗೆ ದಂಡಪ್ರಣಾಮ ಮಾಡಿ ಬಿದ್ದನು. ಆಗ ಸ್ವಾಮಿಯು ನಗುತ್ತಾ ತೋಳಿನಿಂದ ಅವನನ್ನು ಎತ್ತಿದನು.

೧೭. ಆಗ ಭಕ್ತವತ್ಸಲನಾದ ಸ್ವಾಮಿಯು ಪರಮ ಪ್ರೀತಿಯಿಂದ ಅದನ್ನು ಇಲ್ಲಿ ಹೇಳಿದುದರಿಂದೇನು ? ನೀನು ಅದನ್ನು ನೋಡುತ್ತೀಯಂತೆ. ಎಂದನು.

೧೮. ಯಾವಳಿಂದ ಎಲ್ಲವೂ ಉತ್ಪನ್ನವಾಯಿತೋ ಯಾವಳಲ್ಲಿ ಇನೆಯೋ ಯಾವಳಲ್ಲಿ ನಾಶಹೊಂದುತ್ತದೆಯೋ ಆ ತ್ರಿಪುರಸುಂದರಿಯೊಬ್ಬಳಿರುವಳು.

ಆರಾಧ್ಯ ಪರಯಾ ಭಕ್ತ್ಯಾ ತಸ್ಯೈ ಸ್ವಂ ಚ ನಿವೇದಯ ।
ತಾಂ ವಿನೈತತ್ಪದಂ ದಾತುಂ ನ ಶಕ್ನೋಮಿ ಕದಾಚನ ॥ ೧೯ ॥

ಶ್ರುತ್ವೈತದ್ಭಗವದ್ವಾಕ್ಯಂ ಪಾರ್ಥೋ ಹರ್ಷಾಕುಲೇಕ್ಷಣಃ ।
ಶ್ರೀಮತ್ಯಾಸ್ತ್ರಿಪುರಾದೇವ್ಯಾ ಯಯೌ ಶ್ರೀಪಾದುಕಾತಳಂ ॥ ೨೦ ॥

ತತ್ರ ಗತ್ವಾ ದದರ್ಶೈನಾಂ ಶ್ರೀಚಿಂತಾಮಣಿವೇದಿಕಾಂ ।
ನಾನಾರತ್ನೈರ್ವಿರಚಿತೈಃ ಸೋಪಾನೈರುಪಶೋಭಿತಾಂ ॥ ೨೧ ॥

ತತ್ರ ಕಲ್ಪತರುಂ ನಾನಾಪುಷ್ಪೈಃ ಫಲಭರೈರ್ನತಂ ।
ಸರ್ವರ್ತುಕೋಮಲದಳೈಃ ಸ್ರವನ್ಮಾಧ್ವೀಕಶೀಕರೈಃ ॥ ೨೨ ॥

ವರ್ಷದ್ಭಿರ್ವಾಯುನಾ ಲೋಲೈಃ ಪಲ್ಲವೈರುಜ್ವಲೀಕೃತಂ ।
ಶುಕೈಶ್ಚ ಕೋಕಿಲೈಶ್ಚೈವ ಸಾರಿಕಾಭಿಃ ಕಪೋತಕೈಃ ॥ ೨೩ ॥

ಲೀಲಾ ಚಕೋರಕೈರನ್ಯೈಃ ಪಕ್ಷಿಭಿಶ್ಚ ನಿನಾದಿತಂ ।
ಯತ್ರ ಕುಂಜದ್ಭ್ರಮದ್ಭೃಂಗಕೋಲಾಹಲಸಮಾಕುಲಂ ॥ ೨೪ ॥

---

೧೯. ಆ ತ್ರಿಪುರ ಸುಂದರಿಯನ್ನು ಉತ್ತಮವಾದ ಭಕ್ತಿಯಿಂದ ಆರಾಧಿಸು. ನಿನ್ನನ್ನೇ ಒಪ್ಪಿಸು. ಈ ಪದವನ್ನು ಕೊಡುವುದಕ್ಕೆ ಅವಳು ಹೊರತು ಮತ್ತಾರಿಗೂ ಸಾಧ್ಯವಿಲ್ಲ.

೨೦. ಭಗವಂತನ ಈ ಮಾತನ್ನು ಕೇಳಿ ಅರ್ಜುನನು ಹರ್ಷಗೊಂಡು ಶ್ರೀಮತಿಯಾದ ತ್ರಿಪುರಾದೇವಿಯ ಪಾದುಕಾತಳವನ್ನು ಹೊಂದಿದನು.

೨೧. ಅಲ್ಲಿಗೆ ಹೋಗಿ ನಾನಾರತ್ನಗಳಿಂದ ಕೂಡಿದ ಸೋಪಾನದಿಂದ ರಮ್ಯವಾದ ಚಿಂತಾಮಣಿಯ ಜಗುಲಿಯನ್ನು ನೋಡಿದನು

೨೨. ನಾನಾಬಗೆಯಾದ ಹೂಗಳಿಂದಲೂ ಹಣ್ಣುಗಳಿಂದಲೂ ರಮ್ಯವಾಗಿ ಎಲ್ಲಾ ಋತುಗಳಲ್ಲೂ ಬಿಡುವ ಹೂ ಹಣ್ಣುಗಳನ್ನು ಬಿಟ್ಟು ಮಧುವನ್ನು ಸ್ರವಿಸುತ್ತಿರುವ ಒಂದು ಮರವನ್ನು ನೋಡಿದನು.

೨೩-೨೫. ಮಧುವನ್ನು ಸುರಿಸುತ್ತಿರುವ ವಾಯುವಿನಿಂದ ಅಲ್ಲಾಡಲು ಮನೋಹರವಾಗಿರುವ ಗಿಳಿ ಕೋಗಿಲೆ ಸಾರಿಕೆಗಳೇ ಮುಂತಾದುವುಗಳಿಂದ ಧ್ವನಿತವಾಗಿರುವ ಗುಂ ಎಂದು ಕೂಗುವ ಭೃಂಗಗಳುಳ್ಳ ಆ ಕಲ್ಪವೃಕ್ಷದ ಕೆಳಗೆ ಒಂದು ರತ್ನದ ಮನೆ

ಮಣಿಭಿರ್ಭಾಸ್ವರೈರುದ್ಯದ್ದೀಪ್ಯಮಾನಂ ಮನೋಹರಂ ।
ಶ್ರೀರತ್ನಮಂಡಪಂ ದಿವ್ಯ ತಲೇ ತಸ್ಯ ಮಹಾದ್ಭುತಂ ॥ ೨೫ ॥

ರತ್ನಸಿಂಹಾಸನಂ ತತ್ರ ಮಹಾಶ್ಚರ್ಯಮಾಭಿಮೋಹನಂ ।
ತತ್ರ ಬಾಲಾರ್ಕಸಂಕಾಶಾಂ ನಾನಾಲಂಕಾರಭೂಷಿತಾಂ ॥ ೨೬ ॥

ನವಯೌವನಸಂಪನ್ನಾಂ ಸೃಣಿಪಾಶಧನುಶ್ಶರೈಃ ।
ರಾಜಚ್ಚತುರ್ಭುಜಲತಾಂ ಸುಪ್ರಸನ್ನಾಂ ಮನೋಹರಾಂ ॥ ೨೭ ॥

ಬ್ರಹ್ಮವಿಷ್ಣು ಮಹೇಶಾದಿಕಿರೀಟಮಣಿರಶ್ಮಿಭಿಃ ।
ನಿರಾಜಿತಪದಾಂಭೋಜಾ-ಮಣಿಮಾದಿಭಿರಾವೃತಾಂ ॥ ೨೮ ॥

ಪ್ರಸನ್ನವದನಾಂ ದೇವೀಂ ವರದಾಂ ಭಕ್ತವತ್ಸಲಾಂ ।
ಅರ್ಜುನೋಹಮಿತಿ ಖ್ಯಾತಃ ಪ್ರಣಮ್ಯ ಚ ಪುನಃ ಪುನಃ ॥ ೨೯ ॥

ವಿಹಿತಾಂಜಲಿರೇಕಾಂತೇ ಸ್ಥಿತೋ ಭಕ್ತಿಭರಾನ್ವಿತಃ ।
ಸಾ ತಸ್ಯೋಪಾಸಿತಂ ಜ್ಞಾತ್ವಾ ಪ್ರಸಾದಂ ಚ ಕೃಪಾನಿಧೇಃ ॥ ೩೦ ॥

ಉವಾಚ ಕೃಪಯಾ ದೇವೀ ತತ್ಸ್ಮರಣವಿಹ್ವಲಾ ॥ ೩೧ ॥

---

ಮನ್ನು ನೋಡಿದನು. ಅದರಲ್ಲಿ ಆಶ್ಚರ್ಯವಾದ ಚಿನ್ನದಿಂದ ಕೂಡಿದ ಒಂದು ಸಿಂಹಾಸನವಿದ್ದಿತು.

೨೬-೩೧. ಅಲ್ಲಿ ಬಾಲಸೂರ್ಯನಂತಿರುವ ನಾನಾಬಗೆಯಾದ ಅಲಂಕಾರಗಳಿಂದ ಕೂಡಿದ ನವಯೌವನವುಳ್ಳ, ಪಾಶ, ಧನಸ್ಸು ಶರ, ಅಂಕುಶಗಳಿಂದ ಕೂಡಿದ ನಾಲ್ಕು ತೋಳುಳ್ಳ ಪ್ರಸನ್ನಳಾದ ಮನೋಹರಳಾಗಿರುವ ಬ್ರಹ್ಮ ವಿಷ್ಣು ಮಹೇಶ್ವರರಿಂದ ನಮಸ್ಕರಿಸಿದ ಪಾದವುಳ್ಳ ಅಣಿಮಾದಿ ಸಿದ್ಧಿಗಳಿಂದ ಸುತ್ತುವರಿದಿರುವ ವರದೆಯೂ ಭಕ್ತವತ್ಸಲಳೂ ಆದ ಆ ತ್ರಿಪುರ ಸುಂದರಿಯನ್ನು ನಾನು ಅರ್ಜುನನೆಂದು ಪ್ರಸಿದ್ಧನಾಗಿದ್ದೇನೆಂದು ಹೇಳಿ ಪದೇಪದೇ ನಮಸ್ಕರಿಸಿದನು. ಕೈ ಮುಗಿದುಕೊಂಡು ಏಕಾಂತದಲ್ಲಿ ಭಕ್ತಿಯಿಂದ ಬಾಗಿದ್ದೆನು. ಅವನು ತನ್ನನ್ನು ಪೂಜಿಸಿರುವುದನ್ನೂ ವಿಷ್ಣುವಿನ ಪ್ರಸಾದವನ್ನೂ ತಿಳಿದು ಅದೆಲ್ಲವನ್ನೂ ಸ್ಮರಿಸಿಕೊಂಡು ಇಂತೆಂದಳು.

॥ ಭಗವತ್ಯುವಾಚ ॥

ಕಿಂ ವಾ ದಾನಂ ತ್ವಯಾ ವತ್ಸ ಕೃತಂ ಪಾತ್ರಾಯ ದುರ್ಲಭಂ ।
ಇಷ್ಟಂ ಯಜ್ಞೇನ ಕೇನಾತ್ರ ತಪೋ ವಾ ಕಿಮನುಷ್ಠಿತಂ ॥ ೩೨ ॥

ಭಗವತ್ಯಮಲಾಭಕ್ತಿಃ ಕಾ ವಾ ಪ್ರಾಕ್ಸಮುಪಾರ್ಜಿತಾ ।
ಕಿಂವಾಸ್ಮಿನ್ದುರ್ಲಭಾ ಲೋಕೇ ಕಿಂ ವಾ ಕರ್ಮ-ಶುಭಂ ಮಹತ್ ॥ ೩೩ ॥

ಪ್ರಸಾದಸ್ತ್ವಯಿ ಯೇನಾಯಂ ಪ್ರಸನ್ನೇ ಚ ಮುದಾ ಕಿಲ ।
ಗೂಢಾತಿಗೂಢಶ್ಚಾನನ್ಯಲಭ್ಯೋ ಭಗವತಾ ಕೃತಃ ॥ ೩೪ ॥

ನೈತಾದೃಙ್ಮರ್ತ್ಯಲೋಕಾನಾಂ ನ ಚ ಭೂತಳವಾಸಿನಾಂ ।
ಸ್ವರ್ಗಿಣಾಂ ದೇವತಾದೀನಾಂ ತಪಸ್ವೀಶ್ವರಯೋಗಿನಾಂ ॥ ೩೫ ॥

ಭಕ್ತಾನಾಂ ಚೈವ ಸರ್ವೇಷಾಂ ನೈವ ನೈವ ಚ ನೈವ ಚ ।
ಪ್ರಸಾದಸ್ತು ಕೃತೋವತ್ಸ ತವ ವಿಷ್ಣ್ವಾತ್ಮನಾ ಯಥಾ ॥ ೩೬ ॥

ತದೇಹಿ ಭಜ ಬುದ್ಧ್ವೈವ ಕುಲಕುಂಡಂ ಸರೋ ಮಮ ।
ಸರ್ವ ಕಾಮಪ್ರದಾ ದೇವೀ ತ್ವನಯಾ ಸಹ ಗಮ್ಯತಾಂ ॥ ೩೭ ॥

---

೩೨-೩೩. ಭಗವತಿಯು ಹೇಳಿದಳು – ಎಲೈ ವತ್ಸನೇ ದುರ್ಲಭವಾದ ಯಾವ ದಾನವನ್ನು ಪಾತ್ರರಲ್ಲಿತ್ತೆ ? ಉತ್ತಮವಾದ ಯಾವ ಯಜ್ಞವನ್ನು ಮಾಡಿದೆ ? ಕಷ್ಟವಾದ ಯಾವ ತಪಸ್ಸುಗಳನ್ನು ಮಾಡಿದೆ ? ಪೂರ್ವ ಜನ್ಮದಲ್ಲಿ ಭಗವಂತನಲ್ಲಿ ಯಾವ ಭಕ್ತಿಯನ್ನು ಸಂಪಾದಸಿದೆ ? ಪೂರ್ವದಲ್ಲಿ ಯಾವ ಶುಭ ಕರ್ಮವನ್ನು ಮಾಡಿದ್ದೀಯೆ?

೩೪. ಅತಿ ಗೂಢವಾದ ಇತರರಿಗೆ ಸಿಕ್ಕದ ಅನುಗ್ರಹವನ್ನು ಭಕ್ತನಾದ ನಿನ್ನಲ್ಲಿ ಸ್ವಾಮಿಯು ಮಾಡಿದ್ದಾನಲ್ಲ.

೩೫-೩೬. ಮನುಷ್ಯರಿಗೆ ಈ ರೀತಿಯ ಅನುಗ್ರಹವಿಲ್ಲ. ಭೂತಾಳದಲ್ಲಿ ವಾಸಿಸುವ ಇತರರಿಗೂ ಇಲ್ಲ. ಸ್ವರ್ಗದ ದೇವತೆಗಳಿಗಾಗಲಿ ತಪಸ್ವಿಗಳಿಗಾಗಲಿ ಯೋಗಿಗಳಿಗಾಗಲಿ ಇಲ್ಲ. ಎಲ್ಲಾ ಭಕ್ತರಿಗೂ ಈ ರೀತಿ ಇಲ್ಲ. ಇಲ್ಲ. ಇಲ್ಲವೇ ಇಲ್ಲ. ನಿನಗೆ ಮಾಡಿರುವಂತಹ ಅನುಗ್ರಹವು ಯಾರಿಗೂ ಇಲ್ಲ.

೩೭. ಇಗೋ ಬಾ. ಈ ಕುಲಕುಂಡಲವೆಂಬ ಸರಸ್ಸು ನನ್ನದು. ಅದನ್ನು ತಿಳಿದು ಪೂಜಿಸು. ಇವಳು ಸರ್ವಕಾಮಪ್ರದೆಯಾದ ದೇವಿಯು ಇವಳೊಡನೆ ಹೋಗು.

ತತ್ರೈನ ವಿಧಿವತ್ಸ್ನಾತ್ವಾ ದ್ರುತಮಾಗಮ್ಯತಾಮಿಹ ।
ತದೈವ ತತ್ರ ಗತ್ವಾಽಸೌ ಸ್ನಾತ್ವಾ ಪಾರ್ಥಸ್ತಥಾಗತಃ ॥ ೩೮ ॥

ಆಗತಂ ತಂ ಕೃತಸ್ನಾನಂ ನ್ಯಾಸಮುದ್ರಾರ್ಪಣಾದಿಕಂ ।
ಕಾರಯಿತ್ವಾ ತತೋ ದೇವ್ಯಾ ತಸ್ಯ ವೈ ದಕ್ಷಿಣಶ್ರುತೌ ॥ ೩೯ ॥

ಸದ್ಯಸ್ಸಿದ್ಧಿಕರೀ ಬಾಲಾ ವಿದ್ಯಾ ನಿಗದಿತಾ ಪರಾ ।
ಹಕಾರಾರ್ಧಪರಾರ್ಧೀಯಯಾಽದ್ವಿತೀಯಯಾ ವಿಶ್ವಭೂಷಿತಾ ॥ ೪೦ ॥

ಅನುಷ್ಠಾನಂ ಚ ಪೂಜಾಂ ಚ ಜಪಂ ಚ ಲಕ್ಷಸಂಖ್ಯಕಂ ।
ಕೋರಕೈಃ ಕರವೀರಾಣಾಂ ಪ್ರಯೋಗಂ ಚ ಯಥಾತಥಂ ॥ ೪೧ ॥

ನಿರ್ವರ್ತ್ಯ ತಮುವಾಚೇದಂ ಕೃಪಯಾ ಪರಮೇಶ್ವರೀ ।
ಅನೇನೈವ ವಿಧಾನೇನ ಕ್ರಿಯತಾಂ ಮದುಪಾಸನಂ ॥ ೪೨ ॥

ತತೋ ಮಯಿ ಪ್ರಸನ್ನಾಯಾಂ ತವಾನುಗ್ರಹಕಾರಣಾತ್ ।
ಸದ್ಯಸ್ತು ಕೃಷ್ಣಲೀಲಾಯಾಮಧಿಕಾರೋ ಭವಿಷ್ಯತಿ ॥ ೪೩ ॥

---

೩೮-೪೨. ಆ ಕುಂಡದಲ್ಲಿ ವಿಧಿವತ್ತಾಗಿ ಸ್ನಾನ ಮಾಡಿ ಬಾ. ಆಗಲೇ ಆ ಕೊಳಕ್ಕೆ ಹೋಗಿ ಸ್ನಾನಮಾಡಿ ಪಾರ್ಥನು ಬರಲು ಆತನಿಗೆ ಮುದ್ರಾದಿಗಳನ್ನು ಮಾಡಿಸಿ ದೇವಿಯು ಅವನ ಬಲಗಿವಿಯಲ್ಲಿ ಸದ್ಯದಲ್ಲಿಯೇ ಸಿದ್ಧಿಯನ್ನುಂಟುಮಾಡುವ ಉತ್ತಮವಾದ ಬಾಲಾವಿದ್ಯೆಯನ್ನು ಉಪದೇಶಿಸಿದಳು. ಹಕಾರವು ಅರ್ಧಾಕ್ಷರವಾಗಿಯೂ ಪರಾರ್ಧೀಯವಾದ ರೇಫವೂ ಉಳ್ಳ ಈಕಾರದಿಂದ ಕೂಡಿ ಅದ್ವಿತೀಯವಾದ ಓಂಕಾರದಿಂದಲೂ ವಿಶ್ವಪೂಜಿತವೆಂದರೆ ಸೊನ್ನೆಯಿಂದಲೂ ಕೂಡಿದ ಓಂ ಹ್ರೀಂ ಎಂಬ ಮಂತ್ರವನ್ನುಪದೇಶಿಸಿದಳು. ಅನುಷ್ಠಾನ ಪೂಜೆಗಳನ್ನು ಹೇಳಿ ಲಕ್ಷಸಂಖ್ಯಾಕ ಜಪಮಾಡಬೇಕೆಂದಳು. ಕಣಿಗಲೆಯ ಮೊಗ್ಗಿನಿಂದ ಹೋಮವನ್ನೂ ಮಾಡಬೇಕೆಂದಳು. ಈ ರೀತಿ ಕ್ರಮವಾಗಿ ಪೂಜೆಮಾಡಿಸಿ ಆ ತ್ರಿಪುರಸುಂದರಿಯು ಕೃಪೆಯಿಂದ ಈ ವಿಧಾನದಿಂದಲೇ ನನ್ನನ್ನು ಪೂಜಿಸೆಂದಳು.

೪೩. ನಾನು ಪ್ರಸನ್ನಳಾಗಿ ನಿನ್ನಲ್ಲಿ ಅನುಗ್ರಹ ಮಾಡಿದರೆ ಆಗ ಕೃಷ್ಣಲೀಲೆಯಲ್ಲಿ ಅಧಿಕಾರವನ್ನು ಹೊಂದುತ್ತೀಯೆ.

ಇತ್ಯಯಂ ನಿಯಮಃ ಪೂರ್ವಂ ಸ್ವಯಂ ಭಗವತಾ ಕೃತಃ ।
ಶ್ರುತ್ವೈವಮರ್ಜುನಸ್ತೇನ ವರ್ತ್ಮನಾ ತಾಂ ಸಮರ್ಚಯತ್ ॥ ೪೪ ॥

ತತಃ ಪೂಜಾಂ ಚ ಪಂಚೈವ ಕೃತ್ವಾ ದೇವೀ ಪ್ರಸಾದಿತಾ ।
ಕೃತ್ವಾ ತತಶ್ಶುಭಂ ಹೋಮಂ ಸ್ನಾನಂ ಚ ವಿಧಿನಾ ತತಃ ॥ ೪೫ ॥

ಕೃತಕೃತ್ಯಮಿವಾತ್ಮಾನಂ ಪ್ರಾಪ್ತಪ್ರಾಯಮನೋರಥಂ ।
ಕರಸ್ಥಾಂ ಸರ್ವಸಿದ್ಧಿಂ ಚ ಸ ಪಾರ್ಥಸ್ಸಮಮನ್ಯತ ॥ ೪೬ ॥

ಅಸ್ಮಿನ್ನವಸರೇ ದೇವೀ ಸಮಾಗತ್ಯ ಸ್ಮಿತಾನನಾ ।
ಉವಾಚ ವತ್ಸ ಗಚ್ಛ ತ್ವಮಧುನಾ ತದ್ಗೃಹಾಂತರೇ ॥ ೪೭ ॥

ತತಸ್ಸಸಂಭ್ರಮಃ ಪಾರ್ಥಃ ಸಮುತ್ಥಾಯ ಮುದಾನ್ವಿತಃ ।
ಅಸಂಖ್ಯಹರ್ಷಪೂರ್ಣಸ್ಸ ದಂಡವತ್ತಾಂ ನನಾಮ ಹ ॥ ೪೮ ॥

ಆಜ್ಞಪ್ತಸ್ತು ತಯಾ ಸಾರ್ಥಂ ದೇವೀವಯಸ್ಯಯಾರ್ಜುನಃ ।
ಗತೋ ರಾಧಾಪತಿಸ್ಥಾನಂ ಯತ್ಸಿದ್ಧೈರಪ್ಯಗೋಚರಂ ॥೪೯॥

---

೪೪. ಈ ರೀತಿಯಾದ ನಿಯಮವನ್ನು ಭಗವಂತನು ತಾನೇ ಮೊದಲು ಮಾಡಿದ್ದಾನೆ. ಅರ್ಜುನನು ಇದನ್ನು ತಿಳಿದು ಆದೇ ದಾರಿಯಲ್ಲಿ ತಾನು ಆಕೆಯನ್ನು ಪೂಜಿಸಿದನು.

೪೫–೪೬. ಈ ರೀತಿ ಪೂಜೆಮಾಡಿ ದೇವಿಯನ್ನು ಪ್ರಸನ್ನಳನ್ನಾಗಿ ಮಾಡಿಕೊಂಡನು. ಆ ಮೇಲೆ ಹೋಮಮಾಡಿ ವಿಧಿವತ್ತಾಗಿ ಸ್ನಾನಮಾಡಿ ತಾನು ಕೃತಕೃತ್ಯನಾದಂತೆಯೂ, ಇಷ್ಟಾರ್ಥಗಳು ಸಿದ್ಧಿಹೊಂದಿದ ಹಾಗೂ, ತಿಳಿಮಕೊಂಡನು. ಆಗ ಪಾರ್ಥನು ಎಲ್ಲಾ ಸಿದ್ಧಿಗಳೂ ತನ್ನ ಕೈಯಲ್ಲಿದ್ದಂತೆ ತಿಳಿದುಕೊಂಡನು.

೪೭. ಇಷ್ಟರೊಳಗೆ ದೇವಿಯು ಬಂದು ನಗುತ್ತ ವತ್ಸನೇಈಗ ಈ ಮನೆಯೊಳಗೆ ಹೋಗಬಹುದೆಂದಳು.

೪೮. ಆಗ ಪಾರ್ಥನು ಸರ್ರನೆ ಎದ್ದು ಸಂತೋಷದಿಂದ ಬಹು ಹರ್ಷದಿಂದ ಕೂಡಿ ದಂಡನಮಸ್ಕಾರ ಮಾಡಿದನು.

೪೯. ಅವಳಿಂದ ಆಜ್ಞೆಯನ್ನು ಹೊಂದಿ ಅವಳೊಡನೆಯೂ, ದೇವಿಯ ಸಖಿಯೊಡನೆಯೂ ಕೂಡಿ ಸಿದ್ಧರಿಗೂ ಅಗೋಚರವಾದ ರಾಧಾಪತಿಯ ಸ್ಥಾನವನ್ನು ಹೊಂದಿದನು.

ತತಶ್ಚ ಸಮುಪಾವಿಷ್ಟೋ ಗೋಲೋಕಾದುಪರಿಸ್ಥಿತಂ ।
ಸ್ಥಿರಂ ವಾಯುಧೃತಂ ನಿತ್ಯಂ ಸತ್ಯಂ ಸರ್ವಸುಖಾಸ್ಪದಂ ॥ ೫೦ ॥

ನಿತ್ಯಂ ವೃಂದಾವನಂ ನಾಮ ನಿತ್ಯರಾಸಮಹೋತ್ಸವಂ ।
ಅಪಶ್ಯತ್ಪರಮಂ ಗುಹ್ಯಂ ಪೂರ್ಣಪ್ರೇಮರಸಾತ್ಮಕಂ ॥ ೫೧ ॥

ತಸ್ಯಾಹಿ ವಚನಾದ್ದಿವ್ಯಲೋಚನೈರ್ವೀಕ್ಷ್ಯ ತದ್ರುಹಃ ।
ವಿವಶಃ ಪತಿತಸ್ತತ್ರ ವಿಸ್ಪಷ್ಟಃ ಪ್ರೇಮವಿಹ್ವಲಃ ॥ ೫೨ ॥

ತತಃ ಕೃಚ್ಛ್ರಾಲ್ಲಬ್ಧಸಂಜ್ಞೋ ದೋರ್ಭ್ಯಾಮುತ್ಥಾಪಿತಸ್ತಯಾ ।
ಸಾಂತ್ವನೈರ್ವಚನೈಸ್ತಸ್ಯಾಃ ಕಥಂ ಚಿತ್ಸ್ಥೈರ್ಯಮಾಗತಃ ॥ ೫೩ ॥

ತತಸ್ತತಃ ಕಿಮನ್ಯನ್ಮೇ ಕರ್ತವ್ಯಂ ವಿದ್ಯತೇ ವದ ।
ಇತಿ ತದ್ದರ್ಶನೋತ್ಕಂಠಾಭರೇಣ ತರಲೋಽಭವೇತ್ ॥ ೫೪ ॥

ತತಸ್ತಯಾ ಕರೇ ತಸ್ಯ ಧೃತ್ವಾ ತತ್ಪದದಕ್ಷಿಣೇ ।
ಪ್ರತಿಪೇದೇ ಸುದೇಶೇನ ಗತ್ವಾ ಚೋಕ್ತಮಿದಂ ವಚಃ ॥ ೫೫ ॥

---

೫೦-೫೧. ಅನಂತರ ಅವಳು ಹೇಳಿ ತೋರಿಸಲು ಗೋಲೋಕದಿಂದ ಮೇಲಿರುವ ಸ್ಥಿರವಾದ ವಾಯುವಿನಿಂದ ಹಿಡಿಯಲ್ಪಟ್ಟ ಸತ್ಯವೂ, ಸರ್ವಸುಖಾಸ್ಪದವೂ ಆದ ರಾಸಮಹೋತ್ಸವಸ್ಥಾನವಾದ ವೃಂದಾವನವನ್ನು ಕಂಡನು. ಅದು ಗುಹ್ಯವಾಗಿಯೂ, ಪ್ರೇಮರಸಕ್ಕೆ ಸ್ಥಾನವಾಗಿಯೂ ಇದ್ದಿತು.

೫೨. ಅವಳ ಮಾತಿನಂತೆ ದಿವ್ಯದೃಷ್ಟಿಯಿಂದ ಆ ಸ್ಥಳವನ್ನು ನೋಡಿ ಪ್ರೇಮದಿಂದ ಪರಾಧೀನನಾಗಿ ಜ್ಞಾನತಪ್ಪಿದಂತೆ ಬಿದ್ದನು.

೫೩. ಅನಂತರ ಬಹುಕಷ್ಟದಿಂದ ಜ್ಞಾನವನ್ನು ಹೊಂದಿದನು. ಆಗ ಕೈ ಹಿಡಿದು ಈಕೆಯು ಎಬ್ಬಿಸಿದಳು. ಸಮಾಧಾನವಾದ ಮಾತನ್ನಾಡಲು ಕಷ್ಟದಿಂದ ಧೈರ್ಯ ತಂದುಕೊಂಡನು

೫೪. ಆಮೇಲಾಮೇಲೆ ನಾನೇನು ಮಾಡಬೇಕು ಹೇಳು. ಎಂದು ಹೇಳುತ್ತಾ ಅದರ ದರ್ಶನದಿಂದ ಮೋಹಗೊಂಡವನಾಗಿ ಚಂಚಲನಾದನು.

೫೫. ಆ ಮೇಲೆ ಅವನ ಕಯ್ಯನ್ನು ಹಿಡಿದುಕೊಂಡು ಆ ಜಾಗದ ಬಲಗಡೆಯಲ್ಲಿರುವ ಒಂದು ಒಳ್ಳೆಯ ಜಾಗಕ್ಕೆ ಹೋಗಿ ಇಂತೆಂದ

ಸ್ನಾನಾಯೈತಚ್ಛುಭಂ ಪಾರ್ಥ ವಿಶತ್ವಂ ಜಲವಿಸ್ತರಂ ।
ಸಹಸ್ರದಳಪದ್ಮಸ್ಯ ಸಂಸ್ಥಾನಂ ಪದ್ಮಕೋರಕಂ ॥ ೫೬ ॥

ಚತುಸ್ಸರಶ್ಚತುರ್ದ್ವಾರಮಾಶ್ಚರ್ಯಕುಲಸಂಕುಲಂ ।
ಅಸ್ಯಾಂತರೇ ಪ್ರವಿಶ್ಯಾಥ ವಿಶೇಷಮಿಹ ಪಶ್ಯಸಿ ॥ ೫೭ ॥

ಏತಸ್ಯ ದಕ್ಷಿಣೇ ದೇಶ ಏಷ ಚಾತ್ರ ಸರೋವರಃ ।
ಮಧುಮಾಧ್ವೀಕಪಾನಂ ಯನ್ನಾಮ್ನಾ ಮಲಯನಿರ್ಝರಃ ॥ ೫೮ ॥

ಏತಚ್ಚ ಫುಲ್ಲಮುದ್ಯಾನಂ ವಸಂತೇ ಮದನೋತ್ಸವಂ ।
ಕುರುತೇ ಯತ್ರ ಗೋವಿಂದೋ ವಸಂತಕುಸುಮೋಚಿತಂ ॥ ೫೯ ॥

ಯತ್ರಾವತಾರಂ ಕೃಷ್ಣಸ್ಯ ಸ್ತುವಂತೀವ ದಿವಾನಿಶಂ ।
ಭವೇದ್ಯತ್ಸ್ಮರಣಾದೇವ ಮುನೇಸ್ಸ್ವಾಂತೇ ಸ್ಮರಾಂಕುರಃ ॥ ೬೦ ॥

ತತೋಽಸ್ಮಿನ್ಸರಸಿ ಸ್ನಾತ್ವಾ ಪೂರ್ವಸ್ಯ ಸರಸಸ್ತಟಂ ।
ಉಪಸ್ಪೃಶ್ಯ ಜಲಂ ತಸ್ಯ ಸಾಧಯಸ್ವ ಮನೋರಥಂ ॥ ೬೧ ॥

---

೫೬. ಸಹಸ್ರದಳ ಪದ್ಮಕ್ಕೆ ಜಾಗವಾದ ಹೋಗುತ್ತ ಹೋಗುತ್ತ ಸಣ್ಣದಾಗಿರುವ ಶುಭಜಲವಿರುವ ಈ ಕೊಳದಲ್ಲಿ ಸ್ನಾನಮಾಡು.

೫೭. ನಾಲ್ಕು ಸರೋವರಗಳೂ, ನಾಲ್ಕು ಬಾಗಿಲುಗಳೂ, ಉಳ್ಳಂತೆ ಈ ಜಾಗವನ್ನು ಮಾಡಿದೆ. ಇದರೊಳಗೆ ಹೋದರೆ ವಿಶೇಷವನ್ನು ಕಾಣುತ್ತೀಯೆ.

೫೮. ಇದರ ದಕ್ಷಿಣದಲ್ಲಿ ಇನ್ನೊಂದು ಸರೋವರವಿದೆ. ಇದರಲ್ಲಿ ಮಧುಪಾನ ಮಾಡತಕ್ಕದ್ದು. ಇದರ ಹೆಸರು ಮಲಯನಿರ್ಝರವು.

೫೯. ಇದೇ ಚೆನ್ನಾಗಿರುವ ಉದ್ಯಾನವು. ವಸಂತಕಾಲದಲ್ಲಿ ಮದನನ ಉತ್ಸವವು ಇಲ್ಲೇ ನಡೆಯುತ್ತದೆ ವಸಂತಕುಸುಮಗಳಿಗೆ ಯೋಗ್ಯವಾದ ಉತ್ಸವವನ್ನು ಇಲ್ಲಿಯೇ ಗೋವಿಂದನು ಮಾಡುತ್ತಾನೆ.

೬೦. ಕೃಷ್ಣನು ಇಲ್ಲಿಯೇ ಅವತರಿಸಿದುದು. ಅವನ ಅವತಾರವನ್ನು ಹಗಲೂ ರಾತ್ರಿಯೂ ಹೊಗಳುವಂತಿವೆ ಈ ವನವನ್ನು ಸ್ಮರಿಸಿಕೊಂಡರೆ ಮುನಿಗೂ ಕೂಡ ಕಾಮೋದ್ರೇಕವಾಗುತ್ತದೆ.

೬೧. ಈ ಸರೋವರದಲ್ಲಿ ಸ್ನಾನಮಾಡಿ ಪೂರ್ವದಿಕ್ಕಿನ ಸರೋವರಕ್ಕೆ ಹೋಗಿ ಆ ನೀರಿನಲ್ಲಿ ಆಚಮನಮಾಡಿ ನಿನಗೆ ಬೇಕಾದುದನ್ನು ಸಾಧಿಸಿಕೋ.

ತತಸ್ತದ್ವಚನಂ ಶ್ರುತ್ವಾ ತಸ್ಮಿನ್ಸರಸಿ ತಜ್ಜಲೇ ।
ಕಹ್ಲಾರಕುಮುದಾಂಭೋಜರಕ್ತನೀಲೋತ್ಪಲಚ್ಯುತೈಃ ॥ ೬೨ ॥

ಪರಾಗೈರಂಚಿತೇ ಮಂಜುವಾಸಿತೇ ಮಧುಬಿಂದುಭಿಃ ।
ತುಂದಿಲೇ ಕಲಹಂಸಾದಿನಾದೈರಾಂದೋಳಿತೇ ತತಃ ॥ ೬೩ ॥

ರತ್ನಾಬದ್ಧಚತುಸ್ತೀರೇ ಪಂಚಮಾನಿಲತರಂಗಿತೇ ।
ಮಗ್ನೇ ಜಲಾಂತಃ ಪಾರ್ಥೇ ತು ತತ್ರೈವಾಂತರ್ದಧೇಽಥ ಸಾ ॥ ೬೪ ॥

ಉತ್ಥಾಯ ಪರಿತೋ ವೀಕ್ಷ್ಯ ಸಂಭ್ರಾಂತಾಂ ಚಾಸಹಾಯಿನೀಂ ।
ಸದ್ಯಃ ಶುದ್ಧಸ್ವರ್ಣರಶ್ಮಿಗೌರಕಾಂತತನೂಲತಾಂ ॥ ೬೫ ॥

ಸ್ಫುರತ್ಕಿಶೋರವಯಸೀಯಾಂ ಶಾರದೇಂದುನಿಭಾನನಾಂ ।
ಸುನೀಲಕುಟಿಲಸ್ನಿಗ್ಧ ವಿಲಸದ್ವೃತ್ತಕುಂಡಲಾಂ ॥ ೬೬ ॥

ಸಿಂದೂರಬಿಂದುಕಿರಣಪ್ರೋಜ್ಜ್ವಲಾಲಕಪಟ್ಟಿಕಾಂ ।
ಉನ್ಮೀಲದ್ಭ್ರೂಲತಾಭಂಗೀ ಜಿತಸ್ಮರಶರಾನನಾಂ ॥ ೬೭ ॥

---

೬೨-೬೪ ಅವಳ ಈ ಮಾತನ್ನು ಕೇಳಿ ಕಹ್ಲಾರ, ಕುಮುದ, ಕಮಲ, ರಕ್ತೋತ್ಪಲ ಇವುಗಳಿಂದ ಬಿದ್ದ ಹೂವಿನ ಧೂಳಿಯಿಂದಲೂ, ಮಕರಂದದಿಂದಲೂ, ವಾಸನೆಯುಳ್ಳ ಕಲಹಂಸಾದಿಗಳಿಂದ ಕೂಡಿರುವ ನಾಲ್ಕು ಕಡೆಯಲ್ಲೂ ರತ್ನದಿಂದಲೇ ಕಟ್ಟಿರುವ ಮಂದಾನಿಲದಿಂದ ಸಣ್ಣದಾಗಿ ತೆರೆಯೇಳುತ್ತಿರುವ ಆ ಕೊಳದ ನೀರಿನಲ್ಲಿ ಪಾರ್ಥನು ಮುಳುಗಲು ಆ ಹೆಂಗಸು ಅಲ್ಲಿಯೇ ಮಾಯವಾದಳು.

೬೫-೬೬ ಸ್ನಾನಮಾಡಿ ಮೇಲಕ್ಕೇಳಲು ಒಂದು ಹೆಂಗಸಾದನು. ಆಗ ಸುತ್ತಲೂ ನೋಡಲು ಅಸಹಾಯಳಾಗಿದ್ದಳು. ದೇಹವು ಪುಟಕ್ಕೆ ಹಾಕಿದ ಚಿನ್ನದ ವರ್ಣದಂತೆ ಹಳದಿಯಾಗಿತ್ತು ಬಾಲ್ಯಾವಸ್ಥೆಯಿಂದ ಯೌವನಾವಸ್ಥೆಗೆ ಕಾಲಿಟ್ಟ ಹುಡುಗಿಯಾಗಿದ್ದಳು ಮುಖವು ಚಂದ್ರನಂತಿತ್ತು. ನೀಲದ ಕಲ್ಲು ಡೊಂಕು ಡೊಂಕಾಗಿಯೂ, ಮನೋಹರವಾಗಿಯೂ, ಇರುವ ಓಲೆಯನ್ನು ಹಾಕಿದ್ದಳು.

೬೭-೬೮. ಬೈತಲೆಗೆ ಚಂದ್ರವನ್ನು ಸಾಲಾಗಿ ಸವರಿದ್ದಳು. ಪ್ರಕಾಶಮಾನವಾದ ಹುಬ್ಬುಗಳ ರೀತಿಯು ಸ್ಮರನ ಬಾಣವನ್ನು ಜಯಿಸಿದ್ದುವು. ವೋಡದ ಕಪ್ಪಿ

**ಘನಶ್ಯಾಮಲಸಲ್ಲೋಲಖೇಲಲ್ಲೋಚನಖಂಜನಾಂ ।**
**ಮಣಿಕುಂಡಲತೇಜೋಂಶುವಿಸ್ಫುರದ್ಗಂಡಮಂಡಲಾಂ ॥ ೬೮ ॥**

**ಮೃಣಾಳಕೋಮಲಭ್ರಾಜದಾಶ್ಚರ್ಯಭುಜವಲ್ಲರೀಂ ।**
**ಶರದಂಬುರುಹಾಂ ಸರ್ವ ಶ್ರೀಚೌರಪಾಣಿಪಲ್ಲವಾಂ ॥ ೬೯ ॥**

**ವಿದಗ್ಧರಚಿತಸ್ವರ್ಣಕಟಿಸೂತ್ರಕೃತಾಂತರಾಂ ।**
**ಕೂಜತ್ಕಾಂಚೀಕಲಾಪಾತಿವಿಭ್ರಾಜಜ್ಜಘನಸ್ಥಳಾಂ ॥ ೭೦ ॥**

**ಭ್ರಾಜದ್ದುಕೂಲಸಂವೀತನಿತಂಬೋರುಸುಮಂಡಲಾಂ ।**
**ಶಿಂಜಾನಮಂಜುಮಂಜೀರಸುಚಾರುಪದಪಂಕಜಾಂ ॥ ೭೧ ॥**

**ಸ್ಫುರದ್ವಿವಿಧಕಂದರ್ಪಕಲಾಕೌಶಲಶಾಲಿನೀಂ ।**
**ಸರ್ವಲಕ್ಷಣಸಂಪನ್ನಾಂ ಸರ್ವಾಭರಣಭೂಷಿತಾಂ ॥ ೭೨ ॥**

**ಆಶ್ಚರ್ಯಲಲನಾಶ್ರೇಷ್ಠಾಮಾತ್ಮಾನಂ ಚ ವ್ಯಲೋಕಯತ್ ।**
**ವಿಸಸ್ಮಾರ ಚ ಯತ್ಕಿಂಚಿತ್ಪೂರ್ವದೈಹಿಕಮೇವ ಚ ॥ ೭೩ ॥**

---

ನಂತೆ ಪ್ರಕಾಶಮಾನವಾದ ಕಪ್ಪನ್ನು ಇಟ್ಟುಕೊಂಡಿದ್ದಳು. ಮಣಿಮಯವಾದ ಕರ್ಣಾಭರಣದಿಂದ ಕಪೋಲಗಳು ಪ್ರಕಾಶಿಸುತ್ತಿದ್ದುವು.

೬೯. ಕಮಲದ ದಂಟಿನಂತೆ ಭುಜಗಳು ಪ್ರಕಾಶಮಾನವಾಗಿದ್ದುವು. ಶರತ್ಕಾಲದ ಕಮಲದಂತೆ ಹಸ್ತಗಳಿದ್ದುವು.

೭೦. ಜಾಣತನದಿಂದ ತೂತುಗಳನ್ನು ಮಾಡಿ ಪೋಣಿಸಿರುವ ಸೊಂಟಕಟ್ಟುವ ಸರಪಣಿಯುಳ್ಳವಳಾಗಿದ್ದಾಳೆ. ಸದ್ದುಮಾಡುತ್ತಿರುವ ಒಡ್ಡಿಯಾಣವನ್ನು ಇಟ್ಟು ಕೊಂಡಿದ್ದಾಳೆ.

೭೧. ಪ್ರಕಾಶಮಾನವಾದ ರೇಷ್ಮೆಯ ಬಟ್ಟೆಯನ್ನು ಸೊಂಟದ ಮೇಲೂ, ತೊಡೆಗಳ ಮೇಲೂ ಹೊಂದಿದ್ದಾಳೆ. ಇಂಪಾಗಿ ಧ್ವನಿಮಾಡುತ್ತಿರುವ ಕಾಲುಕಡಗವನ್ನು ಹಾಕಿದ್ದಾಳೆ.

೭೨. ಪ್ರಕಾಶಮಾನವಾದ ನಾನಾಬಗೆಯಾದ ಮನ್ಮಥ ಕಲಾಕೌಶಲಗಳನ್ನು ಹೊಂದಿದ್ದಾಳೆ. ಸರ್ವಲಕ್ಷಣಗಳಿಂದ ಕೂಡಿ ಸರ್ವಾಭರಣಗಳನ್ನು ತೊಟ್ಟಿದ್ದಾಳೆ

೭೩. ಆಶ್ಚರ್ಯವಾದ ಉತ್ತಮವಾದ ಹೆಂಗಸಾಗಿರುವುದನ್ನು ಕಂಡನು.

ಮಾಯಯಾ ಗೋಪಿಕಾಪ್ರಾಣನಾಥಸ್ಯ ತದನಂತರಂ ।
ಇತಿ ಕರ್ತವ್ಯತಾಮೂಢಾ ತಸ್ಥೌ ತತ್ರ ಸುವಿಸ್ಮಿತಾ ॥ ೭೪ ॥

ಅತ್ರಾಂತರೇಽಂಬರೇ ಧೀರೋ ಧ್ವನಿರಾಕಸ್ಮಿಕೋಽಭವತ್ ।
ಅನೇನೈವ ಪಥಾ ಸುಭ್ರು ಗಚ್ಛ ಪೂರ್ವಸರೋವರಂ ॥ ೭೫ ॥

ಉಪಸ್ಪೃಶ್ಯ ಜಲಂ ತಸ್ಯ ಸಾಧಯಸ್ವಮನೋರಥಂ ।
ತತ್ರ ಸಂತಿ ಹಿ ಸಖ್ಯಸ್ತೇ ಮಾ ಸೀದ ವರವರ್ಣಿನಿ ॥ ೭೬ ॥

ತಾ ಹಿ ಸಂಪಾದಯಿಷ್ಯಂತಿ ತತ್ರೈವ ವರಮೀಪ್ಸಿತಂ ।
ಇತಿ ದೈವೇಂಗಿತಂ ಶ್ರುತ್ವಾ ಗತ್ವಾ ಪೂರ್ವಸರೋಥ ಸಾ ॥ ೭೭ ॥

ನಾನಾಪೂರ್ವಪ್ರವಾಹಂ ಚ ನಾನಾಪಕ್ಷಿಸಮಾಕುಲಂ ।
ಸ್ಫುರತ್ಕೈರವಕಹ್ಲಾರಕಮಲೇಂದೀವರಾದಿಭಿಃ ॥ ೭೮ ॥

ಭ್ರಾಜಿನಂ ಪದ್ಮರಾಗೈಶ್ಚ ಪದ್ಮಸೋಪಾನಸತ್ತಟಂ ।
ವಿವಿಧೈಃ ಕುಸುಮೋದ್ಧಾಮೈರ್ಮಂಜುಕುಂಜಲತಾದ್ರುಮೈಃ ॥ ೭೯ ॥

---

೭೪. ಶ್ರೀಕೃಷ್ಣನ ಮಾಯೆಯಿಂದ ಹಿಂದಿನ ದೇಹದ ಎಲ್ಲಾ ವಿಷಯಗಳನ್ನೂ ಮರೆತಳು. ಏನುಮಾಡಬೇಕೆಂದು ತಿಳಿಯದೆ ನಗುತ್ತಾ ನಿಂತುಕೊಂಡಳು.

೭೫. ಈ ದಾರಿಯಿಂದಲೇ ಪೂರ್ವಸರೋವರಕ್ಕೆ ಹೋಗೆಂದು ಆಕಾಶವಾಣಿಯು ಅಕಸ್ಮಾತ್ತಾಗಿ ಕೇಳಿತು.

೭೬. ಆ ನೀರಿನಲ್ಲಿ ಆಚಮನಮಾಡಿ ನಿನಗೆ ಬೇಕಾದುದನ್ನು ಸಾಧಿಸಿಕೋ. ಅಲ್ಲಿ ನಿನಗೆ ಬೇಕಾದಷ್ಟು ಜನ ಸಖಿಯರಿದ್ದಾರೆ. ದುಃಖಪಡಬೇಡವಮ್ಮಾ. ಅವರು ನಿನಗೆ ಬೇಕಾದುದನ್ನು ಒದಗಿಸಿಕೊಡುತ್ತಾರೆ. ಎಂದೂ ಆಕಾಶವಾಣಿಯು ಹೇಳಿತು.

೭೭-೭೯. ಈ ಅಶರೀರವಾಣಿಯನ್ನು ಕೇಳಿ ಪೂರ್ವಕ್ಕೆ ಹೋಗಿ ಅಲ್ಲಿ ಅಪೂರವಾದ ನಾನಾಬಗೆಯಾದ ಪ್ರವಾಹಗಳುಳ್ಳ, ಬಗೆಬಗೆಯ ಪಕ್ಷಿಗಳಿಂದ ಕೂಡಿದ, ಅರಳಿರುವ ಕಹ್ಲಾರ ಕಮಲಗಳಿಂದ ಕೂಡಿದ, ಪದ್ಮರಾಗದ ಸೋಪಾನವಿರುವ, ಅನೇಕ ವಿಧವಾದ ಹೂ ಬಿಟ್ಟಿರುವ ಮರಗಳು ನಾಲ್ಕು ದಿಕ್ಕುಗಳಲ್ಲೂ ಇರುವ ಆ ಕೊಳಕ್ಕೆ ಹೋಗಿ ಆಚಮನ ಮಾಡಿ ಕ್ಷಣಕಾಲ ಕುಳಿತಳು.

ವಿರಾಜಿತಚತುಸ್ತೀರಮುಪಸ್ಪೃಶ್ಯ ಸ್ಥಿತಾ ಕ್ಷಣಂ ।
ತತ್ರಾಂತರೇ ಕ್ವಣತ್ಕಾಂಚಿಮಂಜುಮಂಜೀರರಂಜಿತಂ ॥ ೮೦ ॥

ಕಂಕಣಾನಾಂ ಝುಣತ್ಕಾರಂ ಶುಶ್ರಾವ್ರೋತ್ಕರ್ಣಸಂಪುಟೇ ।
ತತಶ್ಚ ಪ್ರಮದಾವೃಂದಮಾಶ್ಚರ್ಯಯುತಯೌವನಂ ॥ ೮೧ ॥

ಆಶ್ಚರ್ಯಾಲಂಕೃತಿನ್ಯಾಸಮಾಶ್ಚರ್ಯಾಕೃತಿಭಾಷಿತಂ ।
ಅದ್ಭುತಾಂಗಮಪೂರ್ವಂ ಸಾ ಪೃಥಗಾತ್ಚರ್ಯವಿಭ್ರಮಂ ॥ ೮೨ ॥

ಚಿತ್ರಸಂಭಾಷಣಂ ಚಿತ್ರಹಸಿತಾಲೋಕನಾದಿಕಂ ।
ಮಧುರಾದ್ಭುತಲಾವಣ್ಯಂ ಸರ್ವಮಾಧುರ್ಯಸೇವಿತಂ ॥ ೮೩ ॥

ಚಿತ್ರಲಾಸ್ಯಗತಾನಂತಮಾಶ್ಚರ್ಯಕುಲಸುಂದರಂ ।
ಆಶ್ಚರ್ಯಸ್ನಿಗ್ಧಸೌಂದರ್ಯಮಾಶ್ಚರ್ಯಾನುಗ್ರಹಾದಿಕಂ ॥ ೮೪ ॥

ಸರ್ವಾಶ್ಚರ್ಯಸಮುದಯಾಮಾಶ್ಚರ್ಯಾಲೋಕನಾದಿಕಂ ।
ದೃಷ್ಟ್ವಾ ತತ್ಪರಮಾಶ್ಚರ್ಯಂ ಚಿಂತಯಂತೀ ಹೃದಾ ಕಿಯತ್ ॥ ೮೫ ॥

ಪಾದಾಂಗುಷ್ಠೇನಾಲಿಖಂತೀ ಭುವಂ ನಮ್ರಾನನಾ ಸ್ಥಿತಾ ।
ತತಸ್ತಾಸಾಂ ಸಂಭ್ರಮೋಽಭೂದ್ದೃಷ್ಟೀನಾಂ ಚ ಪರಸ್ಪರಂ ॥ ೮೬ ॥

---

೮೦. ಅಷ್ಟರಲ್ಲಿ ಒಡ್ಡಿಯಾಣ, ಕಾಲುಕಡಗ ಕೈಬಳೆಗಳ ಸದ್ದನ್ನು ಕಿವಿಯಿಂದ ಕೇಳಿದಳು.

೮೧-೮೫. ಆ ಮೇಲೆ ಆಶ್ಚರ್ಯವಾದ ಯೌವನವುಳ್ಳ, ಆಶ್ಚರ್ಯವಾದ ಅಲಂಕಾರದ ಸೇರಿಸಿಕೊಂಡಿರುವಿಕೆಯುಳ್ಳ, ಆಶ್ಚರ್ಯವಾದ ಆಕಾರ ಭಾಷೆಗಳುಳ್ಳ ಅದ್ಭುತವಾದ ಅವಯವಗಳುಳ್ಳ, ಬೇರೆಬೇರೆಯಾಗಿ ಆಶ್ಚರ್ಯಕರವಾದ ತರಹತರಹವಾಗಿ ಮಾತಾಡುತ್ತಿರುವ, ಚಿತ್ರವಿಚಿತ್ರವಾಗಿ ನಗುತ್ತ ನೋಡುತ್ತಿರುವ, ಮಧುರವಾದ ಲಾವಣ್ಯವುಳ್ಳ, ಸರ್ವಮಾಧುರ್ಯದಿಂದ ಕೂಡಿರುವ, ಚಿತ್ರವಾಗಿರುವ ಕುಣಿತವುಳ್ಳ, ಆಶ್ಚರ್ಯವಾದ ಸೌಂದರ್ಯವುಳ್ಳ, ಆಶ್ಚರ್ಯವಾದ ಅನುಗ್ರಹವುಳ್ಳ, ಸರ್ವಾಶ್ಚರ್ಯಗಳೂ ಹುಟ್ಟುವ ಸ್ಥಾನವಾದ, ಆಶ್ಚರ್ಯವಾದ ನೋಡುವಿಕೆಯುಳ್ಳ ಆ ಹೆಂಗಸರ ಸಮೂಹವನ್ನು ನೋಡಿ ಈ ಪರಮಾಶ್ಚರ್ಯವನ್ನು ಮನಸ್ಸಿನಿಂದ ಚಿಂತಿಸುತ್ತಾ ಕ್ಷಣಕಾಲ ನಿಂತಳು.

೮೬ ಕಾಲಿನ ಅಂಗುಷ್ಠದಿಂದ ನೆಲವನ್ನು ಕೆರೆಯುತ್ತಾ ತಲೆತಗ್ಗಿಸಿಕೊಂಡು ನಿಂತಿದ್ದಳು. ಆಗ ಅವರೊಬ್ಬೊಬ್ಬರ ದೃಷ್ಟಿಗಳೂ ಸೇರಿ ಆಶ್ಚರ್ಯಪಟ್ಟರು.

ಕೇಯಂ ಮದೀಯಜಾತೀಯಾ ಚಿರೇಣ ಸ್ಮೃಸ್ತಕೌತುಕಾ ।
ಇತಿಸರ್ವಾ ಸ್ಸಮಾಲೋಕ್ಯ ಜ್ಞಾತನ್ಯೇಯಮಿತಿ ಕ್ಷಣಂ ॥ ೮೭ ॥

ಆಮಂತ್ರ್ಯ ಮಂತ್ರಣಾಭಿಜ್ಞಾ ಕೌತುಕಾದ್ದ್ರಷ್ಟುಮಾಗತಾ ।
ಆಗತ್ಯ ತಾಸಾಮೇಕಾಥ ನಾಮ್ನಾ ಪ್ರಿಯಮುದಾ ಮತಾ ॥ ೮೮ ॥

॥ ಪ್ರಿಯಂಮುದೋವಾಚ ॥

ಕಾಸಿ ತ್ವಂ ಕಸ್ಯ ಕನ್ಯಾಸಿ ಕಸ್ಯ ತ್ವಂ ಪ್ರಾಣವಲ್ಲಭಾ ।
ಜಾತಾ ಕುತ್ರಾಸಿ ಕೇನಾಸ್ಮಿನ್ನಾನೀತಾ ವಾಽಽಗತಾ ಸ್ವಯಂ ॥ ೮೯ ॥

ಏತಚ್ಚ ಸರ್ವಮಸ್ಮಾಕಂ ಕಥ್ಯತಾಂ ಚಿಂತಯಾ ಕಿಮು ।
ಸ್ಥಾನೇಸ್ಮಿನ್ಪರಮಾನಂದೇ ಕಸ್ಯಾಪಿ ದುಃಖಮಸ್ತಿ ಕಿಂ ॥ ೯೦ ॥

ಇತಿ ಪೃಷ್ಟಾ ತಯಾ ಸಾತು ವಿನಯಾವನತಿಂ ಗತಾ ।
ಉವಾಚ ಸುಸ್ವರಂ ತಾಸಾಂ ಮೋಹಯಂತೀ ಮನಾಂಸಿ ಚ ॥ ೯೧ ॥

---

೮೭. ನಮ್ಮ ಜಾತಿಯವಳು ಇವಳಾರು? ಬಹು ಹೊತ್ತಿನಿಂದ ಆಶ್ಚರ್ಯಪಡುತ್ತಿರುವಳಲ್ಲಾ? ಈ ರೀತಿ ಎಲ್ಲರೂ ಒಂದು ಗಳಿಗೆ ನೋಡಿ ಇವಳಾರು ತಿಳಿದುಕೊಳ್ಳಬೇಕೆಂದರು.

೮೮. ಅವರೆಲ್ಲರೂ ಯೋಚಿಸಿ ಆಕೆಯನ್ನು ನೋಡಲು ಪ್ರಿಯಮುದೆ ಎಂಬುವಳನ್ನು ಅವಳ ಬಳಿಗೆ ಕಳುಹಿಸಿದರು. ಆಕೆಯು ಬಂದು ಮಧುರವೂ, ಪ್ರಿಯವೂ ಆದ ಮಾತಿನಿಂದ ಇಂತೆಂದಳು.

೮೯. ಪ್ರಿಯಮುದೆಯು ಹೇಳಿದಳು.—ನೀನಾರು? ಯಾರ ಮಗಳು? ಯಾರ ಹೆಂಡತಿ? ಎಲ್ಲಿ ಹುಟ್ಟಿದೆ? ಇಲ್ಲಿಗೆ ಯಾರು ಕರೆತಂದರು? ಅಥವಾ ನೀನಾಗಿಯೇ ಬಂದೆಯಾ?

೯೦. ಇದೆಲ್ಲವನ್ನೂ ನನಗೆ ಹೇಳು ಯೋಚಿಸಬೇಡ. ಪರಮಾನಂದವಾದ ಈ ಜಾಗದಲ್ಲಿ ಯಾರಿಗಾದರೂ ದುಃಖಕ್ಕೆ ಅವಕಾಶವಿದೆಯೇ?

೯೧ ಹೀಗೆ ಹೇಳಲು ಆಕೆಯು ವಿನಯದಿಂದ ತಲೆತಗ್ಗಿಸಿಕೊಂಡು ಸುಸ್ವರದಿಂದ ಎಲ್ಲರನ್ನೂ ಮೋಹಗೊಳಿಸುವಂತೆ ಇಂತೆಂದಳು.

॥ ಅರ್ಜುನ ಉವಾಚ ॥

ಕಾವಾಸ್ಮಿ ಕಸ್ಯ ವಾ ಕನ್ಯಾ ಪ್ರಜಾತಾ ಕಸ್ಯವಲ್ಲಭಾ ।
ಆನೀತಾ ಕೇನ ವಾ ಚಾತ್ರ ಕಿಂ ವಾಥ ಸ್ವಯಮಾಗತಾ ॥ ೯೨ ॥

ಏತತ್ಕಿಂಚಿನ್ನ ಜಾನಾಮಿ ದೇವೀ ಜಾನಾತಿ ತತ್ಪುನಃ ।
ಕಥಿತಂ ಶ್ರೂಯತಾಂ ತನ್ಮೇ ಮದ್ವಾಕ್ಯೇ ಪ್ರತ್ಯಯೋ ಯದಿ ॥ ೯೩ ॥

ಅಸ್ಯೈವ ದಕ್ಷಿಣೇ ಪಾರ್ಶ್ವೇ ಏಕಮಸ್ತಿ ಸರೋವರಂ ।
ತತ್ರಾಹಂ ಸ್ನಾತುಮಾಯಾತಾ ಜಾತಾ ತತ್ರೈವ ಸಂಸ್ಥಿತಾ ॥ ೯೪ ॥

ವಿಷಮೋತ್ಕಂಠಿತಾ ಪಶ್ಚಾತ್ಪಶ್ಯಂತೀ ಪರಿತೋ ದಿಶಂ ।
ಏಕಮಾಕಾಶಸಂಭೂತಂ ಧ್ವನಿಮಶ್ರೌಷಮುದ್ಭುತಂ ॥ ೯೫ ॥

ಅನೇನೈವ ಪಥಾ ಸುಭ್ರು ಗಚ್ಛ ಪೂರ್ವಸರೋವರಂ ।
ಉಪಸ್ಪೃಶ್ಯ ಜಲಂ ತಸ್ಯ ಸಾಧಯಸ್ವ ಮನೋರಥಂ ॥ ೯೬ ॥

ತತ್ರ ಸಂತಿ ಹಿ ಸಖ್ಯಸ್ತೇ ಮಾಸೀದ ವರವರ್ಣಿನಿ ।
ತಾ ಹಿ ಸಂಪಾದಯಿಷ್ಯಂತಿ ತತ್ರ ತೇ ವರಮೀಪ್ಸಿತಂ ॥ ೯೭ ॥

---

೯೨. ಹೆಣ್ಣಾದ ಅರ್ಜುನನು ಹೇಳಿದನು.—ನಾನು ಯಾರು, ಯಾರ ಮಗಳು, ಯಾರ ಹೆಂಡತಿ, ನಾನಾಗಿ ಬಂದೆನೇ, ಯಾರಾದರೂ ಕರೆತಂದರೇ, ಇದೊಂದನ್ನೂ ನಾನು ತಿಳಿಯೆ. ದೇವಿಗೆಲ್ಲವೂ ಗೊತ್ತಿದೆ. ನನ್ನ ಮಾತಿನಲ್ಲಿ ನಂಬಿಕೆಯಿದ್ದರೆ ನಾನು ಹೇಳಿಡುದನ್ನು ಕೇಳಬಹುದು.

೯೪. ಇದರ ದಕ್ಷಿಣದಿಕ್ಕಿಗೆ ಒಂದು ಕೊಳವಿದೆ. ಅಲ್ಲಿಗೆ ಸ್ನಾನಮಾಡಲು ಬಂದೆನು. ಅಲ್ಲೇ ಹುಟ್ಟಿದೆನು. ಅಲ್ಲೇ ಇದ್ದೆನು.

೯೫. ಅನಂತರ ಕಷ್ಟಕ್ಕೀಡಾಗಿ ಎಲ್ಲಾ ಕಡೆಯನ್ನೂ ನೋಡುತ್ತಾ ದುಃಖಿಕ್ತ್ಯಾಳಗಾಗಿ ನಿಂತೆನು. ಆಗ ಒಂದು ಆಕಾಶವಾಣಿಯಾಯಿತು.

೯೬. ಅಮ್ಮಾ! ಇದೇ ದಾರಿಯಲ್ಲಿ ಪೂರ್ವಸರೋವರಕ್ಕೆ ಹೋಗು. ಅಲ್ಲಿ ಸ್ನಾನಮಾಡಿ ನಿನ್ನ ಇಷ್ಟಾರ್ಥವನ್ನು ಸಾಧಿಸಿಕೋ.

೯೭. ಅಲ್ಲಿ ನಿನ್ನ ಸ್ನೇಹಿತೆಯರಿದ್ದಾರೆ. ದುಃಖಪಡಬೇಡ. ಅವರು ನಿನಗೆ ಬೇಕಾದುದನ್ನು ಕೊಡುತ್ತಾರೆ.

ಇತ್ಯಾಕರ್ಣ್ಯ ವಚಸ್ತಸ್ಯ ತಸ್ಮಾದತ್ರ ಸಮಾಗತಾ ।
ವಿಷಾದಹರ್ಷಪೂರ್ಣಾತ್ಮಾ ಚಿಂತಾಕುಲಸಮಾಕುಲಾ ॥ ೯೮ ॥

ಆಗತಾಸ್ಯ ಜಲಂ ಸ್ಪೃಷ್ಟ್ವಾ ನಾನಾವಿಧಶುಭಧ್ವನಿಂ ।
ಅಶ್ರೌಷಂ ಚ ತತಃ ಪಶ್ಚಾದಪಶ್ಯಂ ಭವತೀಃ ಪರಾಃ ॥ ೯೯ ॥

ಏತನ್ಮಾತ್ರಂ ವಿಜಾನಾಮಿ ಕಾಯೇನ ಮನಸಾ ಗಿರಾ ।
ಏತದೇವ ಮಯಾ ದೇವ್ಯಃ ಕಥಿತಂ ಯದಿ ರೋಚತೇ ॥ ೧೦೦ ॥

ಕಾ ಯೂಯಂ ತನುಜಾಃ ಕೇಷಾಂ ಕ್ವಜಾತಾಃ ಕಸ್ಯ ವಲ್ಲಭಾಃ ।
ತಚ್ಛ್ರುತ್ವಾ ವಚನಂ ತಸ್ಯಾಃ ಸಾ ವೈ ಪ್ರಿಯಮುದಾಬ್ರವೀತ್ ॥ ೧೦೧ ॥

॥ ಪ್ರಿಯಮುದೋವಾಚ ॥

ಅಸ್ತ್ವೇವಂ ಪ್ರಾಣಸಖ್ಯಾಸ್ಸ್ತಃ ತಸ್ಯೈವ ಚ ವಯಂ ಶುಭೇ ।
ವೃಂದಾವನಕಲಾನಾಥವಿಹಾರಾ ದಾರಿಕಾಶ್ಶುಭಂ ॥ ೧೦೨ ॥

ತಾ ಆತ್ಮಮುದಿತಾಸ್ತೇನ ವ್ರಜಬಾಲಾ ಇಹಾಗತಾಃ ।
ಏತಾಃ ಶ್ರುತಿಗಣಾಖ್ಯಾತಾಃ ಏತಾಶ್ಚ ಮುನಯಸ್ತಥಾ ॥ ೧೦೩ ॥

---

೯೮-೯೯. ಆ ಮಾತನ್ನು ಕೇಳಿ ದುಃಖದಿಂದ ಚಿಂತಿಸುತ್ತಾ ಇಲ್ಲಿಗೆ ಬಂದು ಸ್ನಾನಮಾಡಲು ನಾನಾವಿಧವಾದ ಶುಭಧ್ವನಿಯನ್ನು ಕೇಳಿದೆನು. ಆ ಮೇಲೆ ನಿಮ್ಮನ್ನು ನೋಡಿದೆನು.

೧೦೦. ಮನೋವಾಕ್ಕಾಯಗಳಿಂದ ಇದಿಷ್ಟನ್ನೂ ಮಾತ್ರ ಬಲ್ಲೆ. ಎಲ್ಲವನ್ನೂ ನಿಮಗೆ ಹೇಳಿದ್ದೇನೆ. ಇದರ ಮೇಲೆ ನಿಮ್ಮಿಷ್ಟ.

೧೦೧. ನೀವಾರು? ಯಾರ ಮಕ್ಕಳು? ಯಾವೂರು? ಯಾರ ಹೆಂಡಿರು? ಎನ್ನಲು ಆ ಮಾತನ್ನು ಕೇಳಿ ಪ್ರಿಯಮುದೆಯಿಂತೆಂದಳು.

೧೦೨. ಪ್ರಿಯಮುದೆಯು ಹೇಳಿದಳು.—ಹಾಗಾದರೆ ನಿನಗೆ ಪ್ರಾಣಸಖಿಯರಾಗಿದ್ದೇವೆ. ನಾವೆಲ್ಲರೂ ಬೃಂದಾವನದ ಗೋಪಕನ್ನಿಕೆಯರು.

೧೦೩. ಸಂತೋಷಗೊಂಡ ಆ ಗೋಪಕನ್ನಿಕೆಯರು ಎಲ್ಲರೂ ಈಕೆಯ ಹತ್ತಿರಕ್ಕೆ ಬಂದರು. ಆಗ ಪ್ರಿಯಮುದೆಯು ಇವರು ಶ್ರುತಿಗಣಗಳು, ಇವರು ಮುನಿಗಳು.

ವಯಂ ವಲ್ಲವಬಾಲಾ ಹಿ ಕಥಿತಾಸ್ತೇ ಸ್ವರೂಪತಃ ।
ಅತ್ರ ರಾಧಾಪತೇರಂಗಾತ್ಪೂರ್ವಾ ಯಾಃ ಪ್ರೇಯಸೀ ಸಮಾಃ　　॥ ೧೦೪ ॥

ನಿತ್ಯಾ ನಿತ್ಯವಿಹಾರಿಣ್ಯೋ ನಿತ್ಯಕೇಳಿಭುವಶ್ಚರಾಃ ।
ಏಷಾ ಪೂರ್ಣರಸಾ ದೇವೀ ಏಷಾ ಚ ರಸಮಂಥರಾ　　॥ ೧೦೫ ॥

ಏಷಾ ರಸಾಲಯಾ ನಾಮ ಏಷಾ ಚ ರಸವಲ್ಲರೀ ।
ರಸಪೀಯೂಷಧಾರೇಯಮೇಷಾ ರಸತರಂಗಿಣೀ　　॥ ೧೦೬ ॥

ರಸಕಲ್ಲೋಲಿನೀಚ್ಛೈಷಾ ಇಯಂ ಚ ರಸವಾಪಿಕಾ ।
ಅನಂಗಸೇನಾ ಏವೈಷಾ ಇಯಂ ಚಾನಂಗಮಾಲಿನೀ　　॥ ೧೦೭ ॥

ಮದಯಂತೀ ಹೀಯಂ ಬಾಲಾ ಚೈಷಾ ಚ ರಸವಿಹ್ವಲಾ ।
ಇಯಂ ಚ ಲಲಿತಾ ನಾಮ ಇಯಂ ಲಲಿತಯೌವನಾ　　॥ ೧೦೮ ॥

ಅನಂಗಕುಸುಮಾಚೈಷಾ ಇಯಂ ಮದನಮಂಜರೀ ।
ಏಷಾ ಕಲಾವತೀ ನಾಮ ತ್ವಿಯಂ ಹಿ ಕಾಮದಾಯಿನೀ　　॥ ೧೦೯ ॥

---

೧೦೪. ನಾವು ಗೋಪಕನ್ಯೆಯರು. ಇದ್ದುದನ್ನು ತಿಳಿಸಿದ್ದೇವೆ. ಇಲ್ಲಿ ರಾಧಾಪತಿಯಾದ ಕೃಷ್ಣನಿಗೆ ಎಲ್ಲರೂ ಸಮರು.

೧೦೫. ನಾವೆಲ್ಲರೂ ನಿತ್ಯರು. ಯಾವಾಗಲೂ ವಿಹರಿಸುವವರು. ಶಾಶ್ವತವಾದ ಈ ಉದ್ಯಾನದಲ್ಲಿ ಸಂಚರಿಸುತ್ತಿರುವವರು.

೧೦೬-೧೧೧. ಇವಳು ಪೂರ್ಣರಸಳು, ಇವಳು ರಸಮಥರೆಯು, ಇವಳು ರಸಾಲಯಗಳು. ಇವಳು ರಸವಲ್ಲರಿಯು, ಇವಳು ರಸಪೀಯೂಷಧಾರೆ, ಇವಳು ರಸತರಂಗಿಣಿ, ಇವಳು ರಸಕಲ್ಲೋಲಿನಿ, ಇವಳು ರಸವಾಪಿಕೆಯು, ಇವಳು ಅನಂಗಸೇನೆಯು, ಇವಳು ಅನಂಗಮಾಲಿನಿ, ಇವಳು ಮದಯಂತಿಯು, ಇವಳು ರಸವಿಹ್ವಲೆಯು, ಇವಳು ಲಲಿತೆಯು, ಇವಳು ಲಲಿತಯೌವನಳು, ಇವಳು ಅನಂಗಕುಸುಮಳು, ಇವಳು ಮದನಮಂಜರಿಯು, ಇವಳು ಕಲಾವತಿಯು, ಇವಳು ರತಿಕಲೆಯು, ಇವಳು ಕಾಮಕಲೆಯು, ಇವಳು ಕುಮುದಾಯಿನಿಯು, ಇವಳು ರತಿ

ಇಯಂ ರತಿಕಲಾ ನಾಮ ಇಯಂ ಕಾಮಕಲಾ ಮತಾ ।
ರತಲೋಲಾತ್ವಿಯಂ ಬಾಲಾ ಚೇಯಂ ಬಾಲಾ ರಸೋತ್ಸುಕಾ ॥ ೧೧೦ ॥

ಏಷಾ ಚ ರತಿಸರ್ವಸ್ವಾ ರತಿಚಿಂತಾಮಣಿಸ್ತ್ವಸೌ ।
ನಿತ್ಯಾನಂದಾ ಕಾಚಿದೇಷಾ ನಿತ್ಯಪ್ರೇಮರಸಪ್ರದಾ ॥ ೧೧೧ ॥

ಅತಃ ಪರಂ ಶ್ರುತಿಗಣಾಃ ತಾಸಾಂ ಕಾಶ್ಚಿದಿಮಾಶ್ಶೃಣು ।
ಉದ್ಗೀತ್ಯೈಷಾ ಸುಗೀತೇಯಂ ಕಲಗೀತಾ ತ್ವಿಯಂ ಪ್ರಿಯಾ ॥ ೧೧೨ ॥

ಏಷಾ ಕಲಸುರಾ ಖ್ಯಾತಾ ಬಾಲೇಯಂ ಕಲಕಂಠಿಕಾ ।
ವಿಪಂಚೀಯಂ ಕ್ರಮಪದಾ ಹ್ಯೇಷಾ ಬಹುಹುತಾ ಮತಾ ॥ ೧೧೩ ॥

ಏಷಾ ಬಹುಪ್ರಯೋಗೇಯಂ ಖ್ಯಾತಾ ಬಹುಕಲಾ ಬಲಾ ।
ಇಯಂ ಕಲಾವತೀ ಖ್ಯಾತಾ ಮತಾ ಚೈಷಾ ಕ್ರಿಯಾವತೀ ॥ ೧೧೪ ॥

ಅತಃಪರಂ ಮುನಿಗಣಾಸ್ತಾಸಾಂ ಕತಿಪಯಾ ಇಹ ।
ಇಯಮುಗ್ರತಪಾ ನಾಮ ಏಷಾ ಬಹುಗಣಾ ಸ್ಮೃತಾ ॥ ೧೧೫ ॥

---

ಕಲ್ಲೋಲಳು, ಇವಳು ರಸೋತ್ಸುಕಳು, ಇವಳು ರಸರ್ವಸ್ವೆಯು, ಇವಳು ರತಿಸರ್ವಸ್ವಳು, ಇವಳು ರತಿಚಿಂತಾಮಣಿಯು, ಇವಳು ನಿತ್ಯಾನಂದೆಯು, ಇವಳು ನಿನ್ನಪ್ರೇಯಃರಸಪ್ರದೆಯು.

೧೧೨. ಇದರ ಮೇಲೆ ಇವರೇ ಶ್ರುತಿಗಣಗಳು. ಇವರಲ್ಲಿ ಕೆಲವರ ಹೆಸುರಗಳನ್ನು ಕೇಳು,

೧೧೩-೧೧೪. ಇವಳು ಉದ್ಗೀತೆಯು, ಇವಳು ಸುಗೀತೆಯು, ಇವಳು ಕಲಾಗೀತೆಯು, ಇವಳು ಕಲಸುರಳು, ಇವಳು ಕಲಕಂಠಿಕೆಯು, ಈಕೆಯು ವಿಪಂಚಿಯು, ಇವಳು ಕ್ರಮಪದಳು, ಇವಳು ಬಹುಹುತಳು, ಈಕೆಯು ಬಹುಪ್ರಯೋಗಳು, ಈಕೆಯು ಬಹುಕಲಳು, ಇವಳು ಕಲಾವತಿಯು, ಇವಳು ಕ್ರಿಯಾವತಿಯು.

೧೧೫-೧೨೦. ಇನ್ನು ಮೇಲೆ ಮುನಿಗಳಲ್ಲಿ ಕೆಲವರನ್ನು ಹೇಳುತ್ತೇನೆ. ಇವಳು ಉಗ್ರತಪಳು, ಇವಳು ಬಹುಗುಣಳು, ಇವಳು ಪ್ರಿಯವ್ರತಳು, ಸುವ್ರತೆ, ಸುರೇಖೆ,

ಏಷಾ ಪ್ರಿಯವ್ರತಾ ನಾಮ ಸುವ್ರತಾ ಚ ಇಯಂ ಮತಾ ।
ಸುರೇಖೇಯಂ ಮತಾ ಬಾಲಾ ಸುಪರ್ವೇಯಂ ಬಹುಪ್ರದಾ ॥ ೧೧೬ ॥

ರತ್ನರೇಖಾತ್ವಿಯಂ ಖ್ಯಾತಾ ಮಣಿಗ್ರೀವಾ ಹ್ಯಸೌ ಮತಾ ।
ಸುಪರ್ಣಾಚೇಯಮಾಕಲ್ಪಾ ಸುಕಲ್ಪಾ ರತ್ನಮಾಲಿಕಾ ॥ ೧೧೭ ॥

ಇಯಂ ಸೌದಾಮಿನೀ ಸುಭ್ರು ಇಯಂ ಚ ಕಾಮದಾಯಿನೀ
ಏಷಾ ಚ ಭೋಗದಾ ಖ್ಯಾತಾ ಇಯಂ ವಿಶ್ವಮತಾ ಸತೀ ॥ ೧೧೮ ॥

ಏಷಾ ಚ ಧಾರಿಣೀ ಧಾತ್ರೀ ಸುಮೇಧಾ ಕಾನ್ತಿರಪ್ಯಸೌ ।
ಅಪರ್ಣೈಷಾ ಸುಪರ್ಣೇಯಂ ಮತ್ತೈಷಾ ಚ ಸುಲಕ್ಷಣಾ ॥ ೧೧೯ ॥

ಸುದತೀಯಂ ಗುಣವತೀ ಚೈಷಾ ಸೌಕಲಿನೀ ಮತಾ ।
ಏಷಾ ಸುಲೋಚನಾ ಖ್ಯಾತಾ ತ್ವಿಯಂ ಚ ಸುಮನಾಸ್ಮೃತಾ ॥ ೧೨೦ ॥

ಅಶ್ರುತಾ ಚ ಸುಶೀಲಾಚ ರತಿಸುಖಪ್ರದಾಯಿನೀ ।
ಅತಃ ಪರಂ ಗೋಪಬಾಲಾ ವಯಮತ್ರಾಗತಾಸ್ತು ಯಾಃ ॥ ೧೨೧ ॥

ತಾಸಾಂ ಚ ಪರಿಚೀಯನ್ತಾಂ ಕಾಶ್ಚಿದಂಬುರುಹಾನನೇ ।
ಅಸೌ ಚಂದ್ರಾವಳೀ ಚಂದ್ರಿಕೇಯಂ ಚೈಷಾ ಶುಭಾ ಮತಾ ॥ ೧೨೨ ॥

---

ಸುಪರ್ವೆ, ಬಹುಪ್ರದೆ, ರತ್ನರೇಖೆ, ಮಣಿಗ್ರೀವೆ, ಸುಪರ್ಣೇ, ಆಕಲ್ಪೆ. ಸುಕಲ್ಪೆ, ರತ್ನ ಮಾಲಿಕೆ, ಸೌದಾಮಿನಿ, ಕಾಮದಾಯಿನಿ, ಭೋಗದೆ, ವಿಶ್ವಮತೆ, ಧಾರಿಣಿ. ಧಾತ್ರಿ ಸುಮೇಧೆ, ಕಾನ್ತಿ, ಅಪರ್ಣೇ, ಸುಪರ್ಣೇ, ಸುಲಕ್ಷಣೇ, ಸುದತಿ, ಗುಣವತಿ. ಸೌಕಲಿನೀ, ಸುಲೋಚನೇ, ಸುಮನೇ.

೧೨೧. ಅಶ್ರುತೆ, ಸುಶೀಲೆ, ರತಿಸುಖಪ್ರದೆ ಎಂದು ಒಬ್ಬೊಬ್ಬರನ್ನು ತೋರಿಸಿದಳು. ಇನ್ನು ಮೇಲೆ ಈ ಕಡೆ ಇರುವ ನಾವೆಲ್ಲರೂ ಗೋಪಬಾಲೆಯರು. ಅವರಲ್ಲಿ ಕೆಲವರನ್ನು ತಿಳಿದುಕೋ

೧೨೨-೧೨೮. ಚಂದ್ರಾವಳಿ, ಚಂದ್ರಿಕೆ, ಶುಭೆ, ಚಂದ್ರಾವಳಿ, ಚಂದ್ರರೇಖೆ. ಚಂದ್ರಿಕೆ, ಚಂದ್ರಮಾಲಾ, ಚಂದ್ರಾವಳೀ, ಚಂದ್ರಪ್ರಭಾ, ಚಂದ್ರಕಳೆ, ಅಬಲೆ.

ಏಷಾ ಚಂದ್ರಾವಳೀ ಚಂದ್ರರೇಖೇಯಂ ಚಂದ್ರಿಕಾಪ್ಯಸೌ ।
ಏಷಾ ಖ್ಯಾತಾ ಚಂದ್ರಮಾಲಾ ಮತಾ ಚಂಪ್ರಾವಳೀತ್ವಿಯಂ ॥ ೧೨೩ ॥

ಏಷಾ ಚಂಪ್ರಪ್ರಭಾ ಚಂಪ್ರಕಲೇಯಮಬಲಾ ಸ್ಮೃತಾ ।
ಏಷಾ ವರ್ಣಾವಳೀ ವರ್ಣಮಾಲೇಯಂ ಮಣಿಮಾಲಿಕಾ ॥ ೧೨೪ ॥

ಮಂತ್ರೀಯಂನವಮಂತ್ರೀಯಮಸೌ ಶೇಫಾಲಿಕಾ ಶುಭಾ ।
ವರ್ಣಪ್ರಭಾ ಸಮಾಖ್ಯಾತಾ ಸುಪ್ರಭೇಯಂ ಮಣಿಪ್ರಭಾ ॥ ೧೨೫ ॥

ಇಯಂ ಹಾರಾವಳೀ ತಾರಾಮಾಲಿನೀಯಂ ಶುಭಾ ಮತಾ ।
ಮಾಲತೀಯಮಿಯಂ ಯೂಥೀ ವಾಸಂತೀ ನವಮಲ್ಲಿಕಾ ॥ ೧೨೬ ॥

ಸೌಗಂಧಿಕೇಯಂ ಕಸ್ತೂರೀ ಪದ್ಮಿನೀಯಂ ಕುಮುದ್ವತೀ ।
ಏಷೈವ ಹಿ ರಸೋಲ್ಲಾಸಾ ಚಿತ್ರವೃಂದಾ ಸಮಾತ್ವಿಯಂ ॥ ೧೨೭ ॥

ರಂಭೇಯಮೂರ್ವಶೀಚೈಷಾ ಸುರೇಖಾ ಸ್ವರ್ಣರೇಖಿಕಾ ।
ಏಷಾ ಕಾಂಚನಮಾಲೇಯಂ ಸತಸಂತತಿಕಾಪರಾ ॥ ೧೨೮ ॥

ಏತಾಃ ಪರಿಕ್ಯೃತಾಸ್ಸರ್ವಾಃ ಪರಿಚೇಯಾಃ ಪರಾ ಅಪಿ ।
ಸಹಿತಾಸ್ಮಾಭಿರೇತಾಭಿಃ ವಿಹರಿಷ್ಯಸಿ ಭಾಮಿನಿ ॥ ೧೨೯ ॥

---

ವರ್ಣಾವಳೀ, ವರ್ಣಮಾಲೆ, ಮಣಿಮಾಲಿಕೇ, ಮಂತ್ರಿ, ನವಮಂತ್ರಿ, ಶೇಫಾಲಿಕೆ. ವರ್ಣಪ್ರಭೆ, ಸುಪ್ರಭೆ, ಮಣಿಪ್ರಭೆ, ಹಾರಾವಳಿ, ತಾರೆ, ಮಾಲಿನೀ, ಮಾಲತಿ, ಯೂಥಿ, ವಾಸಂತಿ, ನವಮಲ್ಲಿಕೆ, ಸೌಗಂಧಿಕೆ, ಕಸ್ತೂರಿ, ಪದ್ಮಿನಿ, ಕುಮುದ್ವತಿ, ರಸೋಲ್ಲಾಸೆ, ಚಿತ್ರವೃಂದೆ, ರಂಬೆ, ಊರ್ವಸಿ, ಸುರೇಖೆ, ಸ್ವರ್ಣರೇಖೆ, ಕಾಂಚನ ಮಾಲೆ, ಸತಸಂತತಿಕೆ, ಎಂಬದಾಗಿ ಒಬ್ಬೊಬ್ಬರನ್ನೂ ತೋರಿಸಿದಳು.

೧೨೯. ಇವರೆಲ್ಲರೂ ಕೃಷ್ಣನ ಸೇವಕಿಯರು, ಪರಿಚಯಮಾಡಿಕೊಟ್ಟಿದ್ದೇನೆ. ಮಿಕ್ಕವರನ್ನೂ ಪರಿಚಯ ಮಾಡಿಕೋ. ನಮ್ಮೊಡನೆಯೂ, ಇವರೊಡನೆಯೂ ವಿಹರಿಸುವೆಯಂತೆ.

ಏಹಿಪೂರ್ವಸರಸ್ತೀರೇ ತತ್ರ ತ್ವಾಂ ವಿಧಿವತ್ಸಖಿ ।
ಸ್ನಾಪಯಿತ್ವಾಥ ದಾಸ್ಯಾಮಿ ಮಂತ್ರಂ ಸಿದ್ಧಿಪ್ರದಾಯಕಂ ॥ ೧೩೦ ॥

ಇತಿ ತಾಂ ಸಹಸಾ ನೀತ್ವಾ ಸ್ನಾಪಯಿತ್ವಾ ವಿಧಾನತಃ ।
ವೃಂದಾವನಕಳಾನಾಥಪ್ರೇಯಸ್ಯಾ ಮಂತ್ರಮುತ್ತಮಂ ॥ ೧೩೧ ॥

ಗ್ರಾಹಯಾಮಾಸ ಸಂಕ್ಷೇಪಾದ್ದೀಕ್ಷಾವಿಧಿಪುರಸ್ಸರಂ ।
ಪರಂ ವರುಣಬೀಜಸ್ಯ ವಹ್ನಿಬೀಜಪುರುಸ್ಕೃತಂ ॥ ೧೩೨ ॥

ಚತುರ್ಥಸ್ವರಸಂಯುಕ್ತಂ ನಾದಬಿಂದುವಿಭೂಷಿತಂ ।
ಪುಟಿತಂ ಪ್ರಣವಾಭ್ಯಾಂ ಚ ತ್ರೈಲೋಕ್ಯೇಚಾತಿದುರ್ಲಭಂ ॥ ೧೩೩ ॥

ಮಂತ್ರಗ್ರಹಣಮಾತ್ರೇಣ ಸರ್ವಸಿದ್ಧಿಃ ಪ್ರಜಾಯತೇ ।
ಪುರಶ್ಚರ್ಯಾ ವಿಧಿರ್ಧ್ಯಾನಂ ಹೋಮಂ ಸಂಖ್ಯಾಂ ಜಪಸ್ಯ ಚ ॥ ೧೩೪ ॥

ತಪ್ತಕಾಂಚನಗೌರಾಂಗೀಂ ನಾನಾಲಂಕಾರಭೂಷಿತಾಂ ।
ಆಶ್ಚರ್ಯರೂಪಲಾವಣ್ಯಾಂ ಸುಪ್ರಸನ್ನಾಂ ವರಪ್ರದಾಂ ॥ ೧೩೫ ॥

---

೧೩೦. ಪೂರ್ವಸರೋವರದ ತೀರಕ್ಕೆ ಬಾ. ಅಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿಸಿ ಸಿದ್ಧಿಪ್ರದವಾದ ಮಂತ್ರವನ್ನು ಕೊಡುತ್ತೇನೆ.

೧೩೧. ಹೀಗೆಂದು ಹೇಳಿ ಕರೆದುಕೊಂಡು ಹೋಗಿ ಸ್ನಾನಮಾಡಿಸಿ ಆ ಗೋಪಿಯರು ದೀಕ್ಷೆಕೊಟ್ಟು ಸಿದ್ಧಿಮಂತ್ರವನ್ನು ಹೇಳಿಕೊಟ್ಟರು.

೧೩೨-೩೩. ವರುಣಬೀಜವಾದ ಹಕಾರ ವಹ್ನಿಬೀಜವಾದ ರಕಾರಕ್ಕೆ ನಾಲ್ಕನೆಯ ಸ್ವರವಾದ ಈಕಾರ, ಅದಕ್ಕೆ ಸೊನ್ನೆ ಸೇರಿದರೆ ಹ್ರೀಂ ಎಂಬ ಅಕ್ಷರ. ಇದಕ್ಕೆ ಪ್ರಣವ ಸೇರಿಸಿದರೆ ಓಂ ಹ್ರೀಂ. ಇದು ತ್ರೈಲೋಕ್ಯದುರ್ಲಭವಾದುದು. ಇದನ್ನು ಗ್ರಹಿಸಿದರೇನೇ ಸರ್ವಸಿದ್ಧಿಯೂ ಉಂಟಾಗುವುದು.

೧೩೪. ಪುರಶ್ಚರಣೆಯ ವಿಧಿ, ಧ್ಯಾನ, ಹೋಮ, ಜಪ ಸಂಖ್ಯೆಗಳನ್ನು ಹೇಳಿದರು.

೧೩೫-೧೩೮. ಕಾದ ಚಿನ್ನದ ಬಣ್ಣವುಳ್ಳ, ಬಗೆಬಗೆಯ ಅಲಂಕಾರವುಳ್ಳ, ರೂಪ ಲಾವಣ್ಯವತಿಯಾದ, ಪ್ರಸನ್ನಳೂ, ವರಪ್ರದಳೂ ಆದ, ಆ ತಾಯಿಯನ್ನು, ಕಲ್ಹಾರ

ಕಹ್ಲಾರೈಃ ಕರವೀರಾದ್ಯೈಃ ಚಂಪಕೈಸ್ಸರಸೀರುಹೈಃ ।
ಸುಗಂಧಿಕುಸುಮೈರನ್ಯೈಃ ಸೌಗಂಧಿಕಸಮನ್ವಿತೈಃ ॥ ೧೩೬ ॥

ಪಾದ್ಯಾರ್ಘ್ಯಾಚಮನೀಯೈಶ್ಚ ಧೂಪದೀಪೈರ್ಮನೋಹರೈಃ ।
ನೈವೇದ್ಯೈರ್ವಿವಿಧೈರ್ದಿವ್ಯೈಃ ಸಖಿವೃಂದಾಹೃತೈರ್ಮುದಾ ॥ ೧೩೭ ॥

ಸಂಪೂಜ್ಯ ವಿಧಿವದ್ದೇವೀಂ ಜಪ್ತ್ವಾ ಲಕ್ಷಮಿದಂ ತತಃ ।
ಹುತ್ವಾ ಚ ವಿಧಿನಾ ಸ್ತುತ್ವಾ ಪ್ರಣಮ್ಯ ದಂಡವದ್ಭುವಿ ॥ ೧೩೮ ॥

ತತಸ್ತ್ವಾ ಸಂಸ್ತುತಾ ದೇವೀ ನಿಮೇಷರಹಿತಾಂತರಾ ।
ಪರಿಕಲ್ಪ್ಯ ನಿಜಾಂ ಛಾಯಾಂ ಮಾಯಯಾ ತತ್ಸಮೀಹಯಾ ॥ ೧೩೯ ॥

ಪಾರ್ಶ್ವೇಽಥ ಪ್ರೇಯಸೀಂ ತತ್ರ ಸ್ಥಾಪಯಿತ್ವಾ ಬಲಾದಿವ ।
ಸಖೀಭಿರಾವೃತಾ ಹೃಷ್ಟಾ ಶುದ್ಧೈಃ ಪೂಜಾಜಪಾದಿಭಿಃ ॥ ೧೪೦ ॥

ಸ್ತುವೈರ್ಭಕ್ತ್ಯಾ ಪ್ರಣಾಮೈಶ್ಚ ಕೃಪಯಾವಿರಭೂತ್ತದಾ ।
ಹೇಮಚಂಪಕವರ್ಣಾಭಾ ವಿಚಿತ್ರಾಭರಣೋಜ್ವಲಾ ॥ ೧೪೧ ॥

---

ಗಳಿಂದಲೂ, ಕಣಿಗಿಲೆ, ಸಂಪಿಗೆ, ಕಮಲ, ವಾಸನೆಯುಳ್ಳ ಮಿಕ್ಕ ಹೂಗಳಿಂದಲೂ ಪೂಜೆಮಾಡಿ ಪಾದ್ಯ, ಅರ್ಘ್ಯ, ಆಚಮನೀಯ, ಧೂಪ, ದೀಪ, ನಾನಾವಿಧವಾದ ನೈವೇದ್ಯ ಇವನ್ನು ಸಖಿಯರು ತಂದುಕೊಡಲು ವಿಧಿವತ್ತಾಗಿ ಪೂಜಿಸಿ ಆ ಮೇಲೆ ಲಕ್ಷಜಪಮಾಡಿ ವಿಧಿವತ್ತಾಗಿ ಹೋಮಮಾಡಿ ಸ್ತುತಿಸಿ ನಮಸ್ಕರಿಸಿದಳು.

೧೩೮-೪೦. ಆಕೆಯು ಸ್ತೋತ್ರಮಾಡಲು ದೇವಿಯು ಒಡನೆಯೇ ಒಂದು ಅವಳು ಪೂಜಿಸುವ ಇಷ್ಟವಾದ ಆಕೃತಿಯ ಛಾಯೆಯನ್ನು ಅವಳು ಪೂಜಿಸುವ ಸ್ಥಳವಲ್ಲಿ ನಿಲ್ಲಿಸಿ ಅವಳು ತನ್ನ ಗೌರವದಿಂದೇಳುತ್ತಿದ್ದುದನ್ನು ಕಂಡು ಬಲಾತ್ಕಾರದಿಂದ ಕೂರಿಸಿ, ತಾನು ಸಖಿಯರೊಡನೆ ಸೇರಿಕೊಂಡು ಇದ್ದುಕೊಂಡು ಪೂಜಾದಿಗಳಿಂದ ಸಂತೋಷಗೊಂಡರು. ಈ ಹೊಸಬಳು ಭಕ್ತಿಯಿಂದ ಸ್ತೋತ್ರಮಾಡುತ್ತಾ ನಮಸ್ಕರಿಸುತ್ತಿರಲು, ಆ ದೇವಿಯು ಪ್ರಸನ್ನಳಾದಳು.

೧೪೧-೪೩. ಕೆಂಡಸಂಪಿಗೆ ಹೂವಿನ ಕಾಂತಿಯುಳ್ಳ, ಬಗೆಬಗೆಯಾದ ಆಭರಣಗಳುಳ್ಳ, ಅಂಗಪ್ರತ್ಯಂಗದ ಲಾವಣ್ಯದಿಂದ ಮನೋಹರಳಾದ ಮಚ್ಚೆಯಿಲ್ಲದ, ಚಂದ್ರ

ಅಂಗಪ್ರತ್ಯಂಗಲಾವಣ್ಯ ಲಾಲಿತ್ಯಮಧುರಾಕೃತಿಃ ।
ನಿಷ್ಕಳಂಕಾ ಶರತ್ಪೂರ್ಣಾ ಕಳಾನಾಥಶುಭಾನನಾ ॥ ೧೪೨ ॥

ಸ್ನಿಗ್ಧಮುಗ್ಧಸ್ಮಿತಾಲೋಕೆ ಜಗತ್ಪ್ರೀತಿಮನೋಹರಂ ।
ನಿಜಯಾ ಪ್ರಭಯಾತ್ಯಂತಂ ದ್ಯೋತಯಂತೀ ದಿಶೋದಶ
ಅಬ್ರವೀದಪಿ ಸಾ ದೇವೀ ವರದಾ ಭಕ್ತವತ್ಸಲಾ ॥ ೧೪೩ ॥

॥ ದೇವ್ಯುವಾಚ ॥

ಮತ್ಸಖೀನಾಂ ವಚಸ್ಸತ್ಯಂ ತೇನ ತ್ವಂ ಮೇ ಪ್ರಿಯಾ ಸಖಿ ।
ಸಮುತ್ತಿಷ್ಠ ಸಮಾಗಚ್ಛ ಕಾಮಂ ತೇ ಸಾಧಯಾಮ್ಯಹಂ ॥ ೧೪೪ ॥

ಅರ್ಜುನೀ ಸಾ ವಚೋ ದೇವ್ಯಾಃ ಶ್ರುತ್ವಾಚಾತ್ಮಮನೀಷಿತಂ
ಪುಲಕಾಕುಲ ಮೂರ್ಧಾಂಗೀ ಬಾಷ್ಪಾಕುಲವಿಲೋಚನಾ ॥ ೧೪೫ ॥

ಪಪಾತ ಚರಣೇ ದೇವ್ಯಾಃ ಪುನಶ್ಚ ಪ್ರೇಮ ವಿಹ್ವಲಾ ।
ತತಃ ಪ್ರಿಯಂವದಾಂ ದೇವೀಂ ಸಮುವಾಚ ಸಖೀಮಿಮಾಂ ॥ ೧೪೬ ॥

॥ ದೇವ್ಯುವಾಚ ॥

ಪಾಣೌ ಗೃಹೀತ್ವಾ ಮತ್ಸಂಗೇ ಸಮಾಶ್ವಾಸ್ಯ ಸಮಾನಯ ।
ತತಃ ಪ್ರಿಯಂವದಾ ದೇವ್ಯಾ ಆಜ್ಞಯಾ ಜಾತಸಂಭ್ರಮಾ ॥ ೧೪೭ ॥

---

ನಂತಿರುವ ಮುಖವುಳ್ಳ, ಮನೋಹರವಾದ ಮುಗುಳುನಗೆಯಿಂದ ಮೂರುಲೋಕ ದಲ್ಲೂ ಮನೋಹರಳಾದ ತ್ರಿಪುರಸುಂದರಿಯು ತನ್ನ ದೇಹದ ಕಾಂತಿಯಿಂದ ಹತ್ತು ದಿಕ್ಕುಗಳನ್ನೂ ಪ್ರಕಾಶಪಡಿಸುತ್ತಾ ಭಕ್ತವತ್ಸಲಳಾದ ಆಕೆಯು ಇಂತೆಂದಳು.

೧೪೪ ದೇವಿಯು ಹೇಳಿದಳು.—ನನ್ನ ಸಖಿಯ ಮಾತು ನಿಜವಾದುದು. ನೀನೂ ನನಗೆ ಪ್ರಿಯಸಖಿಯಾದೆ. ಏಳು, ಬಾ. ನಿನ್ನಿಷ್ಟವನ್ನು ಪೂರೈಸಿಕೊಡುತ್ತೇನೆ

೧೪೫ ೧೪೬. ಅರ್ಜುನಿಯು ಈ ಮಾತನ್ನು ಕೇಳಿ ಮೈನಿಮಿರಿದವಳಾಗಿ ಕಣ್ಣೀರು ಸುರಿಸುತ್ತಾ ಭಕ್ತಿಯಿಂದ ಮತ್ತೆ ತಾಯಿಯ ಪಾದಗಳಿಗೆ ಬಿದ್ದಳು. ಆ ಮೇಲೆ ದೇವಿಯು ಪ್ರಿಯಂವದೆಯನ್ನು ಕುರಿತಿಂತೆಂದಳು.

೧೪೭. ದೇವಿಯು ಹೇಳಿದಳು.—ಕೈ ಹಿಡಿದುಕೊಂಡು ಸಮಾಧಾನಪಡಿಸಿ ನನ್ನ ಜೊತೆಯಲ್ಲಿ ಕರೆದುಕೊಡು ಬಾ, ಎನ್ನಲು ದೇವಿಯ ಅಪ್ಪಣೆಯ ಪ್ರಕಾರ ಆಕೆಯು ಅವಸರದಿಂದ ಹಾಗೆಯೇ ಮಾಡುತ್ತ ಕೈ ಹಿಡಿದುಕೊಂಡು ಹೊರಟಳು.

ತಾಂ ತಥೈವ ಸಮಾದಾಯ ಸಂಗೇ ದೇವ್ಯಾ ಜಗಾಮಹ ।
ಗತೋತ್ತರಸರಸ್ತೀರೆ ಸ್ನಾಪಯಿತ್ವಾ ವಿಧಾನತಃ ॥ ೧೪೮ ॥

ಸಂಕಲ್ಪಾದಿಕಪೂರ್ವಂ ತು ಪೂಜಯಿತ್ವಾ ಯಥಾವಿಧಿ ।
ಶ್ರೀಗೋಕುಲಕಲಾನಾಥಂ ಮಂತ್ರಂ ತಚ್ಚ ಸುಸಿದ್ಧಿದಂ ॥ ೧೪೯ ॥

ಗ್ರಾಹಯಾಮಾಸ ತಾಂ ದೇವೀ ಕೃಪಯಾ ಹರಿವಲ್ಲಭಾ ।
ವ್ರತಂ ಗೋಕುಲನಾಥಾಖ್ಯಂ ಪೂರ್ವಂ ಮೋಹನಭೂಷಿತಂ ॥ ೧೫೦ ॥

ಸರ್ವಸಿದ್ಧಿಪ್ರದಂ ಮಂತ್ರಂ ಸರ್ವತಂತ್ರೇಷು ಗೋಪಿತಂ ।
ಗೋವಿಂದಗೀತವಿಜ್ಞಾಸ್ ದದೌ ಭಕ್ತಿಮುಚಂಚಲಾಃ ॥ ೧೫೧ ॥

ಧ್ಯಾನಂ ಚ ಕಥಿತಂ ತಸ್ಯೈ ಮಂತ್ರರಾಜಂ ಚ ಮೋಹನಂ ।
ಉಕ್ತಂ ಚ ಮೋಹನೇ ತಂತ್ರೇ ಸ್ಮೃತಿರಸ್ಯಸ್ಯ ಸಿದ್ಧಿದಾ ॥ ೧೫೨ ॥

ನೀಲೋತ್ಪಲದಳಶ್ಯಾಮಂ ನಾನಾಲಂಕಾರಭೂಷಿತಂ ।
ಕೋಟಿಕಂದರ್ಪಲಾವಣ್ಯಂ ಧ್ಯಾಯೇದ್ರಾಸರಸಾಕುಲಂ ॥
ಪ್ರಿಯಂವದಾಮುವಾಚೇದಂ ರಹಸ್ಸಂಪಾದನೇಚ್ಛಯಾ ॥ ೧೫೩ ॥

---

೧೪೮-೧೪೯. ಉತ್ತರ ಸರಸ್ಸಿನ ತೀರಕ್ಕೆ ಹೋಗಿ ವಿಧಿವತ್ತಾಗಿ ಸ್ನಾನಮಾಡಿಸಿ ಸಂಕಲ್ಪಪೂರ್ವಕವಾಗಿ ಪೂಜೆಮಾಡಿಸಿ ಆ ದೇವಿಯು ಸಿದ್ಧಿದಾಯಕವಾದ ಶ್ರೀಕೃಷ್ಣ ಮಂತ್ರವನ್ನುಪದೇಶಿಸಿದಳು.

೧೫೦-೧೫೧. ಮೋಹನಭೂಷಿತವಾದ ಸರ್ವಸಿದ್ಧಿಪ್ರದವಾದ ಗೋಕುಲನಾಥ ನೆಂಬ ವ್ರತವನ್ನು ಗೋವಿಂದನ ವಿಷಯವನ್ನು ಬಲ್ಲ ಈಕೆಯು ಕೊಟ್ಟಳು.

೧೫೨. ಧ್ಯಾನವೂ, ಮೋಹನವೂ ಉಪದೇಶಿಸಲ್ಪಟ್ಟಿತು. ಮೋಹನ ತಂತ್ರ ದಲ್ಲಿ ಈ ಮಂತ್ರದ ಸ್ಮೃತಿಯೂ ಕೂಡ ಸಿದ್ಧಿಯನ್ನು ಕೊಡುತ್ತದೆ. ಎಂದು ಹೇಳಿದೆ.

೧೫೩. ನೀಲೋತ್ಪಲದಂತೆ ಬಣ್ಣವುಳ್ಳ ಅಲಂಕಾರಗಳಿಂದ ಭೂಷಿತವಾದ ಕೋಟಿಜನ ಮನ್ಮಥರ ಲಾವಣ್ಯವುಳ್ಳ ರಾಸಕ್ರೀಡೆಯಲ್ಲಿರತಕ್ಕ ಸ್ವಾಮಿಯನ್ನು ಧ್ಯಾನಿ ಸಬೇಕು. ತಾನು ಕೃಷ್ಣನೊಡನೆ ರಹಸ್ಯ ಸ್ಥಾನಕ್ಕೆ ಹೋಗಬೇಕಾದುದರಿಂದ ಪ್ರಿಯಂ ವದೆಗೆ ಇಂತೆಂದಳು.

॥ ರಾಧಿಕೋವಾಚ ॥

ಅಸ್ಯಾ ಯಾವದ್ಭವೇತ್ಪೂರ್ಣಂ ಪುರಶ್ಚರಣಮುತ್ತಮಂ ।
ತಾವದ್ಧಿ ಪಾಲಯ್ಯೆನಾಂ ತ್ವಂ ಸಾವಧಾನಾ ಸಹಾಲಿಭಿಃ ॥
ಇತ್ಯುಕ್ತ್ವಾ ಸಾ ಯಯೌ ಕೃಷ್ಣಪಾದಾಂಬುರುಹಸನ್ನಿಧಿಂ ॥ ೧೫೪ ॥

ಛಾಯಾಮಾತ್ಮಭವಾಮಾತ್ಮಾ ಶ್ರೇಯಸೀನಾಂ ನಿಧಾಯ ಚ ।
ತಸ್ಥೌ ತತ್ರ ಯಥಾಪೂರ್ವಂ ರಾಧಿಕಾ ಕೃಷ್ಣವಲ್ಲಭಾ ॥ ೧೫೫ ॥

ಅತ್ರ ಪ್ರಿಯಂವದಾದೇಶಾತ್ಪದ್ಮಮಷ್ಟದಳಂ ಶುಭಂ ।
ಗೋರೋಚನಾಭಿರ್ನಿರ್ಮಾಯ ಕುಂಕುಮೇನಾಪಿ ಚಂದನೈಃ ॥ ೧೫೬ ॥

ಏಭಿರ್ನಾನಾವಿಧೈರ್ದ್ರವ್ಯೈಃ ಸಮ್ಮಿಶ್ರೈಸ್ಸಿದ್ಧಿದಾಯಕಂ ।
ಲಿಖಿತ್ವಾ ಯಂತ್ರರಾಜಂ ಚ ಶುದ್ಧಂ ಮಂತ್ರಂ ತಮುದ್ಭವಂ ॥ ೧೫೭ ॥

ಕೃತ್ವಾ ನ್ಯಾಸಾದಿಕಂ ಚಾರ್ಘ್ಯಂ ಪಾದ್ಯಂ ಚಾಪಿ ಯಥಾವಿಧಿ ।
ನಾನರ್ತುಸಂಭವೈಃ ಪುಷ್ಪೈಃ ಕುಂಕುಮೈರಪಿ ಚಂದನೈಃ ॥ ೧೫೮ ॥

---

೧೫೪. ರಾಧಿಕೆಯು ಹೇಳಿದಳು— ಈಕೆಯ ಪುರಶ್ಚರಣವು ಪೂರ್ಣವಾಗುವ ವರೆಗೂ ಸಖಿಯರೊಡನೆ ಈಕೆಯನ್ನು ಜೋಕೆಯಾಗಿ ನೋಡಿಕೊಂಡಿರು ಹೀಗೆಂದು ಹೇಳಿ ಕೃಷ್ಣನ ಪಾದಗಳ ಸಮೀಪಕ್ಕೆ ರಾಧೆಯು ಹೋದಳು.

೧೫೫. ಆ ಕೃಷ್ಣವಲ್ಲಭೆಯಾದ ರಾಧೆಯನ್ನು ಮತ್ತು ಸಖಿಯರ ಛಾಯೆಯನ್ನು ಅಲ್ಲಿ ಮೊದಲಿನಂತೆ ಇಟ್ಟಳು. ತಾನೂ ಇದ್ದಳು.

೧೫೬. ಅಲ್ಲಿ ಪ್ರಿಯಂವದೆಯ ಮಾತಿನಂತೆ ಅಷ್ಟದಳಪದ್ಮವನ್ನು ಗೋರೋಚನದಿಂದ ಬರೆದು ಕುಂಕುಮ ಚಂದನಗಳಿಂದಲೂ ಅಲಂಕರಿಸಿದಳು.

೧೫೭. ಇವೇ ಮುಂತಾದುವುಗಳಿಂದ ಮಿಶ್ರಮಾಡಿ ಸಿದ್ಧಿದಾಯಕವಾದ ಅದ್ಭುತವಾದ ಯಂತ್ರವನ್ನು ಬರೆದಳು.

೧೫೮-೧೫೯. ನ್ಯಾಸವನ್ನು ಮಾಡಿಕೊಂಡು ಅರ್ಘ್ಯ ಪಾದ್ಯಗಳನ್ನು ಕ್ರಮವಾಗಿ ಕೊಟ್ಟು ನಾನಾಋತುವಿನ ಪುಷ್ಪಗಳಿಂದಲೂ, ಕುಂಕುಮ ಚಂದನಗಳಿಂದಲೂ,

ಧೂಪದೀಪೈಶ್ಚ ನೈವೇದ್ಯೈಃ ತಾಂಬೂಲೈರ್ಮುಖವಾಸನೈಃ ।
ವಾಸೋಲಂಕಾರ ಮಾಲ್ಯೈಶ್ಚ ಸಂಪೂಜ್ಯ ನಂದನಂದನಂ ॥ ೧೫೯ ॥

ಪರಿವಾರೈಸ್ಸಮಂ ಸರ್ವೈಸ್ಸಾಯುಧಂ ಚ ಸವಾಹನಂ ।
ಸ್ತುತ್ವಾ ಪ್ರಣಮ್ಯ ವಿಧಿವಚ್ಚೇತಸಾ ಸ್ಮರಣಂ ಯಯೌ ॥ ೧೬೦ ॥

ತತೋ ಭಕ್ತವಶೋ ದೇವೋ ಯಶೋದಾನಂದನಃ ಪ್ರಭುಃ ।
ಸ್ಮಿತಾವಲೋಕಿತಾಪಾಂಗತರಂಗಿತವತೀಂಗಿತಂ ॥ ೧೬೧ ॥

ಉವಾಚ ರಾಧಿಕಾಂ ದೇವೀಂ ತಾಮಾನಯ ಇಹಾಶು ಚ ।
ಆಜ್ಞಪ್ತಾ ಚೈವ ಸಾ ದೇವಿ ಪ್ರಸ್ಥಾಪ್ಯ ಶಾರದಾಂ ಸಖೀಂ ॥ ೧೬೨ ॥

ತಾಮಾನಿನಾಯ ಸಹಸಾ ಪುರೋಪಾಸರಸಾತ್ಮನಃ ।
ಶ್ರೀಕೃಷ್ಣಸ್ಯ ಪುರಸ್ತಾತ್ಸಾ ಸಮೇತ್ಯ ಪ್ರೇಮವಿಹ್ವಲಾ ॥ ೧೬೩ ॥

ಪಪಾತ ಕಾಂಚನೀ ಭೂಮೌ ಪಶ್ಯಂತೀ ಸರ್ವಮದ್ಭುತಂ ।
ಕೃಚ್ಛ್ರಾತ್ಸ್ವಕಥಂಚಿದುತ್ಥಾಯ ಶನೈರುನ್ಮೀಲ್ಯ ಲೋಚನೇ ॥ ೧೬೪ ॥

---

ಧೂಪದೀಪನೈವೇದ್ಯಗಳಿಂದಲೂ ತಾಂಬೂಲ ಮುಖವಾಸನೆಗಳಿಂದಲೂ ಬಟ್ಟೆ ಅಲಂಕಾರಗಳಿಂದಲೂ ಕೃಷ್ಣನನ್ನು ಪೂಜಿಸಿದಳು.

೧೬೦. ಪರಿವಾರ, ಆಯುಧ ವಾಹನಗಳೊಡನಿರುವ ಸ್ವಾಮಿಯನ್ನು ಸ್ತೋತ್ರ ಮಾಡಿ ನಮಸ್ಕರಿಸಿ ಸ್ಮರಿಸುತ್ತಿದ್ದಳು.

೧೬೧. ಯಶೋದ ಪುತ್ರನಾದ ಕೃಷ್ಣನು ಕಡೆಗಣ್ಣಿನ ನೋಟವುಳ್ಳವನಾಗಿ ರಾಧಿಕೆಯನ್ನು ಕುರಿತು ಆಕೆಯನ್ನು ಇಲ್ಲಿ ಕರೆದುಕೊಂಡು ಬಾ. ಎಂದು ಹೇಳಿದನು.

೧೬೨. ಆ ದೇವಿಯು ಶಾರದೆಯೆಂಬ ಸಖಿಗೆ ಹೇಳಿಕಳುಹಿಸಿ ಆ ಸರಸ್ಸಿನ ಬಳಿಯಿಂದ ಕರೆಸಿದಳು.

೧೬೩ ಆಕೆಯು ಪ್ರೇಮದಿಂದ ಶ್ರೀಕೃಷ್ಣನೆದುರಿಗೆ ಬಂದು ಆ ಸ್ವರ್ಣಭೂಮಿಯಲ್ಲಿ ಎಲ್ಲಾ ಆಶ್ಚರ್ಯವನ್ನೂ ನೋಡುತ್ತಾ ನಮಸ್ಕರಿಸಿದಳು.

೧೬೪-೧೬೫. ಹೇಗೋ ಕಷ್ಟದಿಂದೆದ್ದು ಕಣ್ಣು ಬಿಟ್ಟು ಬೆವರು ಕಣ್ಣೀರು ರೋಮಾಂಚ ನಡುಕಗಳಿಂದ ಕೂಡಿದಳು.

ಸ್ವೇದಾಶ್ರುಪುಲಕೋತ್ಕಂಪಭಾವಭಾರಾಕುಲಾ ಸತೀ ।
ದದರ್ಶ ಪ್ರಥಮಂ ತತ್ರ ಸ್ಥಲಂ ಚಿತ್ರ ಮನೋರಮಂ ॥ ೧೬೫ ॥

ತತಃ ಕಲ್ಪತರೋಸ್ತತ್ರ ಲಸನ್ಮರಕತಚ್ಛದಃ ।
ಪ್ರನಾಳಪಲ್ಲವೈರ್ಯುಕ್ತಃ ಕೋಮಲೋ ಹೇಮದಂಡಕಃ ॥ ೧೬೬ ॥

ಸ್ಫಟಿಕಪ್ರವಾಳಮೂಲಶ್ಚ ಕಾಮದಃ ಕಾಮಸಂಪದಾಂ ।
ಪ್ರಾರ್ಥಕಾಭೀಷ್ಟಫಲದಃ ತಸ್ಯಾಧೋ ರತ್ನಮಂದಿರಂ ॥ ೧೬೭ ॥

ರತ್ನಸಿಂಹಾಸನಂ ತತ್ರ ತತ್ರಾಷ್ಟದಳಪದ್ಮಕಂ ।
ಶಂಖಪದ್ಮನಿಧೀ ತತ್ರ ಸವ್ಯಾಪಸವ್ಯಸಂಸ್ಥಿತೌ ॥ ೧೬೮ ॥

ಚತುರ್ದಿಕ್ಷು ಯಥಾಸ್ಥಾನಂ ಸಹಿತಾ ಕಾಮಧೇನವಃ ।
ಪರಿತೋ ನಂದನೋದ್ಯಾನಂ ಮಲಯಾನಿಲಸೇವಿತಂ ॥ ೧೬೯ ॥

ಋತೂನಾಂ ಚೈವ ಸರ್ವೇಷಾಂ ಕುಸುಮಾನಾಂ ಮನೋಹರೈಃ ।
ಆಮೋದೈರ್ವಾಸಿತಂ ಸರ್ವಂ ಕಾಲಾಗುರುಪರಾಜಿತಂ ॥ ೧೭೦ ॥

---

೧೬೫ ಮೊದಲು ಮನೋಹರವಾದ ಚಿತ್ರವಾದ ಒಂದು ಸ್ಥಳವನ್ನು ನೋಡಿದಳು.

೧೬೬-೧೬೭. ಮರಕತ ಮಣಿಯಂತೆ ಬಣ್ಣವುಳ್ಳ ಹವಳದ ಚಿಗುರಿಂದ ಕೂಡಿದ ಕೋಮಲವಾದ ಚಿನ್ನದ ಮೈಯುಳ್ಳ ಕಲ್ಪವೃಕ್ಷವು ಅಲ್ಲಿದ್ದಿತು. ಸ್ಫಟಿಕ, ಹವಳ. ಅದರ ಬುಡದಲ್ಲಿದ್ದುವು. ಇಷ್ಟಾರ್ಥದಾಯಕವಾದ ಮರವು. ಪ್ರಾರ್ಥನೆ ಮಾಡಿಕೊಂಡವರಿಗೆ ಇಷ್ಟವನ್ನೂ ಕೊಡತಕ್ಕದು. ಆ ಮರದ ಕೆಳಗೆ ರತ್ನದ ಮನೆಯಿತ್ತು.

೧೬೮. ಅಲ್ಲಿ ರತ್ನ ಸಿಂಹಾಸನವಿದೆ. ಅದರಲ್ಲಿ ಎಂಟುದಳದ ಪದ್ಮವಿದೆ. ಶಂಖ ಪದ್ಮ ನಿಧಿಗಳು ಎಡಬಲದಲ್ಲಿವೆ.

೧೬೯. ನಾಲ್ಕು ದಿಕ್ಕುಗಳಲ್ಲೂ ಅಲ್ಲಲ್ಲೇ ಕಾಮಧೇನುಗಳಿದ್ದುವು. ಸುತ್ತಲೂ ನಂದನೋದ್ಯಾನವಿದ್ದಿತು. ಅದು ಮಲಯ ಪರ್ವತದ ಗಾಳಿಯಿಂದ ಕೂಡಿದ್ದಿತು.

೧೭೦. ಎಲ್ಲ ಋತುಗಳ ಹೂಗಳಿಂದಲೂ ವಾಸನೆಯುಳ್ಳದ್ದಾಗಿತ್ತು. ಕಾಲಾಗುರುವಿನ ವಾಸನೆಯು ಇದಕ್ಕಿಂತ ಹೆಚ್ಚಾಗಿದ್ದಿತು.

ಮಕರಂದಕಣಾವೃಷ್ಟಿ ಶೀತಳಂ ಸುಮನೋಹರಂ ।
ಮಕರಂದರಸಾಸ್ವಾದಮತ್ತಾನಾಂ ಭೃಂಗಯೋಷಿತಾಂ ॥ ೧೭೧ ॥

ಸ್ಪಂದಶೋ ಝುಂಕೃತೈಶ್ಚಶ್ಚೈವಂ ಮುಖರಿತಾಂತರಂ ।
ಕಲಕಂಠೀಕಪೋತಾನಾಂ ಸಾರಿಕಾಶ ತಯೋಷಿತಾಂ ॥ ೧೭೨ ॥

ಅನ್ಯಾಸಾಂ ಪತ್ರಿಕಾನ್ತಾನಾಂ ಕಂಜನಾದ್ಯೈರ್ನಿನಾದಿತಂ ।
ನೃತ್ಯೈರ್ಮತ್ತಮಯೂರಾಣಾಮಾಕುಲಂ ಸ್ಮರವರ್ಧನಂ ॥ ೧೭೩ ॥

ರಸಾಂಬುಸೇಕಸಂಸ್ಪೃಷ್ಟತಮಾಂಜನತನುದ್ಯುತಿಂ ।
ಸುಸ್ನಿಗ್ಧನೀಲಕುಟಿಲಕಷಾಯಾವಾಸಿಕುಂತಳಂ ॥ ೧೭೪ ॥

ಮದಮತ್ತಮಯೂರಾದ್ಯಶಿಖಂಡಾಬದ್ಧಚೂಡಕಂ ।
ಭೃಂಗಸೇವಿತಸವ್ಯೇಪಕ್ರಮಪುಷ್ಪವತಂಸಕಂ ॥ ೧೭೫ ॥

ಲೋಲಾಲಕಾಳಿವಿಲಸತ್ಕಪೋಲಾದರ್ಶಕಾಶಿನಂ ।
ವಿಚಿತ್ರತಿಲಕೋತ್ದಾಮಭಾಲಶೋಭಾವಿರಾಜಿತಂ ॥ ೧೭೬ ॥

---

೧೭೧-೧೭೨. ಮಕರಂದದ ಹನಿಗಳಿಂದ ಶೀತಳವಾಗಿ ಮನೋಹರವಾಗಿದ್ದಿತು. ಮಕರಂದವನ್ನು ಕುಡಿದು ಮದಿಸಿದ ದುಂಬಿಗಳ ಗುಂಪಿನ ಝುಂಕಾರದಿಂದ ಕೂಡಿದ್ದಿತು. ಕೋಗಿಲೆ, ಕಪೋತ ಸಾರಿಕೆ ಗಿಳಿ ಇನ್ನೂ ಮಿಕ್ಕ ಪಕ್ಷಿಗಳ ದಿವ್ಯಧ್ವನಿಯಿಂದ ಕೂಡಿದ್ದಿತು.

೧೭೩-೧೭೬. ಅಲ್ಲಿ ಈ ಅರ್ಜುನಿಯು ಶ್ರೀ ಕೃಷ್ಣನನ್ನು ನೋಡಿದಳು ಆ ಕೃಷ್ಣನು ಮದಿಸಿದ ಮಯೂರಗಳನ್ನು ನರ್ತನೆಮಾಡಿಸುತ್ತ ಕೂಗಿಸುತ್ತಿರುವಂತಿದ್ದಾನೆ ಅಂದರೆ ಅವಕ್ಕೆ ಮೇಘದ ಭ್ರಮೆಯನ್ನು ಕೊಡುತ್ತಿದ್ದಾನೆ. ನೀರು ಹಾಕಿ ತೇದ ಕಾಡಿಗೆಯಂತೆ ದೇಹದ ಕಾಂತಿಯುಳ್ಳವನು. ಮೃದುವಾದ ಕಪ್ಪಗಿರುವ ವಕ್ರವಕ್ರವಾದ ಕೂದಲಿಗೆ ಕಷಾಯಗಳಿಂದ ವಾಸನೆ ಹಾಕಿಕೊಂಡಿರುವನು. ತಲೆಗೆ ನವಿಲುಗರಿಯನ್ನು ಕಟ್ಟಿಕೊಂಡಿದ್ದಾನೆ ತಲೆಯಲ್ಲಿ ಮುಡಿದಿರುವ ಹೂವಿಗೆ ಭೃಂಗಗಳು ಸುತ್ತಿ ಬರುತ್ತಿರುವಂತಹನು. ಜೋತಾಡುತ್ತಿರುವ ಮುಂಗುರುಗಳಿಂದ ಪ್ರಕಾಶಿಸುವ ಕಪೋಲವುಳ್ಳವನು. ವಿಚಿತ್ರವಾದ ತಿಲಕವುಳ್ಳ ಹಣೆಯುಳ್ಳವನು.

ತಿಲಪುಷ್ಪಪತಂಗೇಶಚಂಚುಮಂಜುಳನಾಸಿಕಾಂ ।
ಚಾರು ಬಿಂಬಾಧರಂ ಮಂದಸ್ಮಿತದೀಪಿತ ಮನ್ಮಥಂ ॥ ೧೭೭ ॥

ವನ್ಯಪ್ರಸೂನಸಂಕಾಶಂ ಗ್ರೈವೇಕಮನೋಹರಂ ।
ಮದೋನ್ಮತ್ತಭ್ರಮದ್ಭೃಂಗೀ ಸಙ್ಸ್ರಕ್ಕೃತಸೇವಯಾ ॥ ೧೭೮ ॥

ಸುರದ್ರುಮಸ್ರಜಾ ರಾಜನ್ಮೃಗ್ಧಕೀನಾಂಸಕದ್ವಯಂ ।
ಮುಕ್ತಾಹಾರಸ್ಫುರದ್ವಕ್ಷಸ್ಥಳಕೌಸ್ತುಭಭೂಷಿತಂ ॥ ೧೭೯ ॥

ಶ್ರೀವತ್ಸಲಕ್ಷಣಂ ಜಾನುಲಂಬಿಬಾಹುಮನೋಹರಂ ।
ಗಭೀರನಾಭಿಪಂಚಾಸ್ಯಮದ ಮಧ್ಯಾತಿಸುಂದರಂ ॥ ೧೮೦ ॥

ಸುಜಾತದ್ರುಮಸದ್ಧೃಕ್ತಮಧುರಾಜಾನುಮಂಜುಳಂ ।
ಕಂಕಣಾಂಗದಮಂಜೀರೈರ್ಭೂಷಿತಂ ಭೂಷಣೈಃ ಪರೈಃ ॥ ೧೮೧ ॥

ಪೀತಾಂಶುಕಲಯಾವಿಷ್ಟನಿತಂಬತಟನಾಯಕಂ ।
ಲಾವಣ್ಯೈರಪಿ ಸೌಂದರ್ಯೈಃ ಜಿತಕೋಟಿಮನೋಭವಂ ॥ ೧೮೨ ॥

---

೧೭೭. ಎಳ್ಳಿನ ಹೂವಿನಂತೆಯೂ ಗರುಡನ ಮೂಗಿನಂತೆಯೂ ಇರುವ ಮೂಗಿರುವವನು. ಮನೋಹರವಾದ ತುಟಿಯೂ ನಗುಮುಖವೂ ಉಳ್ಳವನು.

೧೭೮-೧೭೯. ಕಾಡಿನ ಹೂಗಳಿಂದ ಪ್ರಕಾಶನಾದ ಅದನ್ನೇ ಹಾರವಾಗಿಯೂ ಹಾಕಿಕೊಂಡಿರುವನು. ಮದಿಸಿದ ದುಂಬಿಗಳಿಂದ ಕೂಡಿದ ಪಾರಿಜಾತದ ಹೂವಿನ ಹಾರವನ್ನು ಹಾಕಿಕೊಂಡಿರುವನು. ದಪ್ಪವಾದ ಭುಜಶಿರಸ್ಸುಳ್ಳವನು. ಮುಕ್ತಾ ಹಾರದಿಂದ ಪ್ರಕಾಶಿಸುವ ಎದೆಯ ಪ್ರದೇಶವುಳ್ಳವನು.

೧೮೦-೧೮೧. ಶ್ರೀವತ್ಸನೆಂಬ ಮಚ್ಚೆಯುಳ್ಳವನು. ಮಂಡಿಯವರೆಗೂ ಇರುವ ಕೈಯುಳ್ಳವನು. ಆಳವಾದ ಹೊಕ್ಕಳೂ ಸಿಂಹದ ನಡುವಿನಂತೆ ಸಣ್ಣದಾದ ನಡುವೂ ಉಳ್ಳವನು. ಬರಬರುತ್ತ ಕ್ರಮವಾಗಿ ಸಣ್ಣನಾಗಿಯೂ ದುಂಡುಗೂ ಇರುವ ಮಂಡಿ ಯುಳ್ಳವನು. ಬಳೆ, ಭುಜಕೀರ್ತಿ, ಕಾಲು ಕಡಗಗಳಿಂದ ಭೂಷಿತನಾಗಿರುವವನು.

೧೮೨. ಹೊಂಬಣ್ಣವಾದ ಬಟ್ಟೆಯನ್ನು ಸೊಂಟದಲ್ಲಿ ಕಟ್ಟಿಕೊಂಡಿರುವವನು. ಲಾವಣ್ಯದಿಂದಲೂ ಸೌಂದರ್ಯದಿಂದಲೂ ಕೋಟಿಮನ್ಮಥರಿಗಿಂತಲೂ ಹೆಚ್ಚಾಗಿ ಕಾಣು ವವನು.

ವೇಣುಪ್ರವರ್ತಿತೈರ್ಗೀತರಾಗೈರಪಿ ಮನೋಹರೈಃ ।
ಮೋಹಯಂತಂ ಸುಖಾಂಭೋಧೌ ಮಜ್ಜಯನ್ತಂ ಜಗತ್ರಯಂ ॥ ೧೮೩ ॥

ಪ್ರತ್ಯಂಗ ಮದನಾವೇಶಧರಂ ರಾಗರಸಾಲಸಂ ।
ಚಾಮರಂ ವ್ಯಜನಂ ಮಾಲ್ಯಂ ಗಂಧಂ ಚಂದನಮೇವ ಚ ॥ ೧೮೪ ॥

ತಾಂಬೂಲಂ ದರ್ಪಣಂ ಪಾನಪಾತ್ರಂ ಚಾರ್ಚಿತಪಾತ್ರಕಂ ।
ಅನ್ಯತ್ಕ್ರೀಡಾಭವಂ ಯಚ್ಚ ತತ್ಸರ್ವಂ ಚ ಪೃಥಕ್‌ಪೃಥಕ್ ॥ ೧೮೫ ॥

ರಸಾಲಂ ವಿವಿಧಂ ಯನ್ತ್ರಂ ಕಲಯಂತೀಭಿರಾದರಾತ್ ।
ಯಥಾಸ್ಥಾನನಿಯುಕ್ತಾಭಿಃ ಪಶ್ಯಂತೀಭಿಃ ತದಿಂಗಿತಂ ॥ ೧೮೬ ॥

ತನ್ಮುಖಾಂಭೋಜದಂತಾಕ್ಷಿಚಂಚಲಾಭಿರನುಕ್ರಮಾತ್ ।
ಶ್ರೀಮತ್ಯಾ ರಾಧಿಕಾ ದೇವ್ಯಾ ವಾಮಭಾಗೇ ಸಸಂಭ್ರಮಂ ॥ ೧೮೭ ॥

ಆರಾಧಯನ್ತ್ಯಾ ತಾಂಬೂಲಮರ್ಪಯನ್ತ್ಯಾ ಶುಚಿಸ್ಮಿತಂ ।
ಸಮಾಲೋಕ್ಯಾರ್ಜುನೀ ಯಾ ಸಾ ಮದನಾವೇಶವಿಹ್ವಲಾ ॥ ೧೮೮ ॥

---

೧೮೩. ಕೊಳಲಿನಲ್ಲಿ ಬಾರಿಸುವ ಮನೋಹರವಾದ ರಾಗಗಳಿಂದ ಎಲ್ಲರನ್ನೂ ಮೋಹಿಸುವಂತೆ ಮಾಡುತ್ತ ಸುಖಸಮುದ್ರದಲ್ಲಿ ಮೂರು ಲೋಕವನ್ನೂ ಮುಳುಗಿಸುತ್ತಿರುವವನು.

೧೮೪-೧೮೬. ಪ್ರತಿಯೊಂದು ಅಂಗದಲ್ಲಿಯೂ ಮನೋಹರನಾಗಿರುವವನು. ರಾಸಕ್ರೀಡೆಯಲ್ಲಿ ಮತ್ತನಾಗಿರುವವನು. ಚಾಮರ, ಬೀಸಣಿಗೆ, ಮಾಲೆ, ಗಂಧ, ಚಂದನ, ತಾಂಬೂಲ, ಕನ್ನಡಿ, ಪಾನಪಾತ್ರೆ, ಇನ್ನೂ ಕ್ರೀಡೆಗೆ ಬೇಕಾದ ಪದಾರ್ಥಗಳ ನ್ನಿಟ್ಟಿರುವ ಪಾತ್ರೆಗಳನ್ನು ಒಬ್ಬೊಬ್ಬರೂ ಬೇರೆಬೇರೆಯಾಗಿ ಹಿಡಿದುಕೊಂಡಿರುವ ನೀರೆರಚುವ ನಾನಾಬಗೆಯ ಯಂತ್ರಗಳನ್ನು ಹಿಡಿದಿರುವ ತಮಗೆ ನಿಯಮಿತವಾದ ಸ್ಥಳಗಳಲ್ಲಿ ನಿಂತು ಸ್ವಾಮಿಯ ಮನೋಭಾವವನ್ನೇ ಎದುರು ನೋಡುತ್ತಿರುವವರಿಂದ ಕೂಡಿರುವವನು.

೧೮೭. ಮತ್ತು ಅವನ ಅಪ್ಪಣೆ ಏನಾಗುವುದೋ ಎಂದು ಅವನ ಮುಖದಲ್ಲೇ ಕಣ್ಣಿಟ್ಟು ನೋಡುತ್ತಿರುವವರಿಂದ ಕೂಡಿರುವನು.

೧೮೮. ಶ್ರೀಮತಿಯಾದ ರಾಧಿಕಾದೇವಿಯಿಂದ ಎಡಗಡೆಯಲ್ಲಿದ್ದು ಆರಾಧಿಸುತ್ತ ಮುಗುಳುನಗೆಯಿಂದ ತಾಂಬೂಲವನ್ನು ಸ್ವೀಕರಿಸುತ್ತಿರುವನು. ಇಂತಹ ಸ್ವಾಮಿಯನ್ನು ನೋಡಿ ಅರ್ಜುನಿಯು ಮದನನಿಂದ ಆವರಿಸಲ್ಪಟ್ಟಳು.

ತತಸ್ತಾಂ ಚ ತಥಾ ಜ್ಞಾತ್ವಾ ಹೃಷೀಕೇಶೋಽಪಿ ಸರ್ವವಿತ್ ।
ತಸ್ಯಾಃ ಪಾಣಿಂ ಗೃಹೀತ್ವೈವ ಸರ್ವಕ್ರೀಡಾವನಾಂತರೇ ॥ ೧೮೯ ॥

ಯಥಾಕಾಮರುಪಹೋ ರೇಮೇ ಮಹಾಯೋಗೇಶ್ವರೋ ವಿಭುಃ ।
ಸ ತಸ್ಯಸ್ಕಂಧದೇಶೇ ತು ಪ್ರದತ್ತಭುಜಪಲ್ಲವಃ ॥ ೧೯೦ ॥

ಆಗತ್ಯ ಶಾರದಾಂ ಪ್ರಾಹ ಪಶ್ಚಿಮೇಽಸ್ಮಿನ್ಸರೋವರೇ ।
ಶೀಘ್ರಂ ಸ್ನಾಪಯ ತನ್ವಂಗಿ ಕ್ರೀಡಾಶ್ರಾಂತಾಂ ಮೃದುಸ್ಮಿತಾಂ ॥ ೧೯೧ ॥

ತತಸ್ತಾಂ ಶಾರದಾದೇವೀ ತಸ್ಮಿನ್ಕ್ರೀಡಾಸರೋವರೇ ।
ಸ್ನಾನಂ ಕುರ್ವಿತಿಪಾಚ್ಯೈನಾಂ ಸಾ ಚ ಶಾಂತಾ ತಥಾಕರೋತ್ ॥ ೧೯೨ ॥

ಜಲಾಭ್ಯಂತರಮಾಪ್ತಾ ಸಾ ಪುನರರ್ಜುನತಾಂ ಗತಃ ।
ಉತ್ತಸ್ಥೌ ಯತ್ರ ದೇವೇಶಃ ಶ್ರೀಮದ್ವೈಕುಂಠನಾಯಕಃ ॥ ೧೯೩ ॥

ದೃಷ್ಟ್ವಾ ತಮರ್ಜುನಂ ಕೃಷ್ಣೋ ವಿಷಣ್ಣಂ ಭಗ್ನಮಾನಸಂ ।
ಮಾಯಯಾ ಪಾಣಿನಾ ಸ್ಪೃಷ್ಟ್ವಾ ಪ್ರಕೃತಿಂ ವಿದಧೇ ಪುನಃ ॥ ೧೯೪ ॥

---

೧೮೯-೧೯೧. ಸರ್ವಜ್ಞನಾದ ಹೃಷೀಕೇಶನು ಆ ಅರ್ಜುನಿಯ ವಿಷಯವನ್ನು ತಿಳಿದುಕೊಂಡು ಅವಳ ಕೈಯನ್ನು ಹಿಡಿದುಕೊಂಡು ಆ ಸರ್ವಕ್ರೀಡಾವನದಲ್ಲಿ ಆ ಸ್ವಾಮಿಯು ಇಷ್ಟಬಂದಂತೆ ಕ್ರೀಡಿಸಿದನು. ಅನಂತರ ಆ ಅರ್ಜುನಿಯ ಹೆಗಲಮೇಲೆ ಕೈಯಿಟ್ಟುಕೊಂಡು ಬಂದು ಶಾರದೆಯೆಂಬ ಸಖಿಯನ್ನು ಕರೆದು ಇವಳನ್ನು ಪಶ್ಚಿಮ ಸರೋವರಕ್ಕೆ ಕರೆದುಕೊಂಡು ಹೋಗಿ ಸ್ನಾನಮಾಡಿಸೆಂದನು.

೧೯೨. ಅನಂತರ ಶಾರದಾದೇವಿಯು ಈ ಸರೋವರದಲ್ಲಿ ಸ್ನಾನಮಾಡೆಂದು ಹೇಳಿ ಸ್ನಾನಮಾಡಿಸಿದಳು.

೧೯೩. ನೀರಿನ ಒಳಗಿರುವಾಗಲೇ ಈಕೆಯು ಅರ್ಜುನನಾಗಿ ಶ್ರೀ ಸ್ವಾಮಿಯಾದ ಕೃಷ್ಣನಿರುವಲ್ಲಿಯೇ ಇದ್ದನು.

೧೯೪. ದುಃಖಗೊಂಡ ಆ ಅರ್ಜುನನನ್ನು ನೋಡಿ ಕೃಷ್ಣನು ಕೈಯಿಂದ ಮುಟ್ಟಿ ಮೊದಲಿನಂತೆಯೇ ಮಾಡಿದನು.

॥ ಶ್ರೀಕೃಷ್ಣ ಉವಾಚ ॥

ಧನಂಜಯ ತ್ವಾಮಾಶಂಸೇ ಭವಾನ್ಪ್ರಿಯಸಖೋ ಮಮ ।
ತ್ವತ್ಸಮೋ ನಾಸ್ತಿ ಮೇ ಕೋಽಪಿ ರಹೋವಿತ್ತು ಜಗತ್ತ್ರಯೇ ॥ ೧೯೫ ॥

ಯದ್ರಹಸ್ಯಂ ತ್ವಯಾ ಪೃಷ್ಟಮನುಭೂತಂ ಚ ಯತ್ಪುನಃ ।
ಕಥ್ಯತೇ ಯದಿ ತತ್ಕಸ್ಮೈ ಶಪಸೇ ಮಾಂ ತದಾರ್ಜುನ ॥ ೧೯೬ ॥

॥ ಸನತ್ಕುಮಾರ ಉವಾಚ ॥

ಇತಿ ಪ್ರಸಾದಮಾಸಾದ್ಯ ಶಪಥೈರ್ಜಾತನಿರ್ಣಯಃ ।
ಯಯೌ ಹೃಷ್ಟಮನಾಸ್ತಸ್ಮಾತ್ಸ್ವಂ ಧಾಮಾದ್ಭುತ ಸಂಸ್ಮೃತಿಃ ॥ ೧೯೭ ॥

ಇತಿ ತೇ ಕಥಿತಂ ಸರ್ವಂ ರಹೋ ಯದ್ಗೋಽಚರಂ ಮಮ ।
ಗೋವಿಂದಸ್ಯ ತಥಾಚಾಸ್ಮೈ ಕಥನೇ ಶಪಥಸ್ತ್ವವ ॥ ೧೯೮ ॥

॥ ಈಶ್ವರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಸಿದ್ಧಿಮೌಪಗವಿರ್ಗತಃ ।
ನರನಾರಾಯಣಾವಾಸೇ ವೃಂದಾರಣ್ಯಮುಪಾವ್ರಜತ್ ॥ ೧೯೯ ॥

---

೧೯೫. ಶ್ರೀಕೃಷ್ಣನು ಹೇಳಿದನು- ಧನಂಜಯನೇ ! ನಿನಗೆ ಆಶೀರ್ವದಿಸುತ್ತೇನೆ. ನೀನು ನನಗೆ ಪ್ರಿಯಸಖನು. ಮೂರುಲೋಕದಲ್ಲಿಯೂ ನಿನ್ನಂತಹ ಮಿತ್ರನು ನನಗಿಲ್ಲ. ಅಲ್ಲದೆ ನನ್ನ ರಹಸ್ಯವನ್ನು ತಿಳಿದವರೂ ಇಲ್ಲ.

೧೯೬. ನೀನು ಕೇಳಿದ ರಹಸ್ಯವನ್ನು ನೀನೇ ಅನುಭವಿಸಿದೆ. ಈ ರಹಸ್ಯವನ್ನೂ ಈ ಅನುಭವವನ್ನೂ ಯಾರಿಗೂ ಹೇಳಕೂಡದು. ಹಾಗೆ ಹೇಳಿದರೆ ನನ್ನಾಣೆ ಎಂದನು.

೧೯೭. ಸನತ್ಕುಮಾರನು ಹೇಳಿದನು- ಈ ರೀತಿ ಅನುಗ್ರಹವನ್ನು ಹೊಂದಿ ಆಣೆಗಳಿಂದ ನಿಶ್ಚಯಮಾಡಿಕೊಂಡು ಸಂತೋಷದಿಂದ ಅದ್ಭುತವಾದ ಸ್ಮರಣೆಯನ್ನು ಹೊಂದಿದವನಾಗಿ ತನ್ನ ಊರಿಗೆ ಹೋದನು.

೧೯೮. ಈ ರೀತಿ ರಹಸ್ಯವೂ, ಅದನ್ನು ನೋಡಿದುದೂ, ಗೋವಿಂದನಿಗೆ ಪ್ರತಿಜ್ಞೆಮಾಡಿ ಬಂದುದೂ ಎಲ್ಲವೂ ಹೇಳಲ್ಪಟ್ಟಿತು.

೧೯೯-೨೦೦ ಈಶ್ವರನು ಹೇಳಿದನು- ಈ ರೀತಿಯಾದ ಮಾತನ್ನು ಕೇಳಿ ಸಿದ್ಧಿ ಹೊಂದಿದ ಔಪಗವಿಯು ನರನಾರಾಯಣಾಶ್ರಮದಲ್ಲಿ ವೃಂದಾರಣ್ಯವನ್ನು ಹೊಂದಿ

ತತ್ರಾಸ್ತೇಽದ್ಯಾಪಿ ಕೃಷ್ಣಸ್ಯ ನಿತ್ಯಲೀಲಾವಿಹಾರವಿತ್ ।
ನಾರದೇನಾಪಿ ಪೃಷ್ಟೋಽಹಂ ನಾಬ್ರವಂ ತದ್ರಹಸ್ಯಕಂ ॥ ೨೦೦ ॥

ಪ್ರಾಪ್ತಂ ತಥಾಪಿ ತೇನೇದಂ ಪ್ರಕೃತಿತ್ವಂ ಉಪೇತ್ಯ ಚ ।
ತನ್ನಕಸ್ಮೈಚಿದಾಖ್ಯೇಯಂ ತ್ವಯಾ ಭದ್ರೇ ಸ್ವಯೋನಿವತ್ ॥ ೨೦೧ ॥

ಇತಿ ಶ್ರೀ ಭಗವದ್ಭಕ್ತಮಹಿಮಾಧ್ಯಾಯಮುದ್ಧೃತಂ ।
ಯಃ ಪಠೇಚ್ಛೃಣುಯಾದ್ವಾಪಿ ಸ ರತಿಂ ವಿಂದತೇ ಪರಾಂ ॥ ೨೦೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅರ್ಜುನ್ಯನುನಯೋ ನಾಮ ಚತುಸ್ಸಪ್ತತಿತಮೋಽಧ್ಯಾಯಃ

---

ದನು. ಶ್ರೀಕೃಷ್ಣನ ನಿತ್ಯಲೀಲೆಯನ್ನು ತಿಳಿದು ಈಗಲೂಕೂಡ ಆತನು ಅಲ್ಲೇ ಇದ್ದಾನೆ. ನಾರದನು ಕೇಳಿದರೂ ಕೂಡ ಈ ರಹಸ್ಯವನ್ನು ನಾನು ಹೇಳಲಿಲ್ಲ. ಆದರೂ ಅವನು ಪ್ರಕೃತಿಯ ಸಂಬಂಧವನ್ನೂ ಹೊಂದಿ ತಿಳಿದನು. ನಿನ್ನಲ್ಲಿರುವ ಸ್ನೇಹದಿಂದ ಈ ರಹಸ್ಯವನ್ನು ಹೇಳಿದ್ದೇನೆ. ನೀನೂ ಕೂಡ ಅದನ್ನು ನಿನ್ನ ಗುಹ್ಯಸ್ಥಾನವನ್ನು ಗೋಪ್ಯವಾಗಿಡುವಂತಿಟ್ಟುಕೊಂಡಿರು. ಯಾರಿಗೂ ಹೇಳಬೇಡ.

೨೦೨. ಈ ರೀತಿ ಭಗವದ್ಭಕ್ತಿಯ ಅಧ್ಯಾಯವು ಹೇಳಲ್ಪಟ್ಟಿತು. ಇದನ್ನು ಕೇಳಿದವನೂ ಹೇಳಿದವನೂ ಹರಿಯಲ್ಲಿ ಸುಖವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಅರ್ಜುನೀ ಅನುನಯವೆಂಬ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

### ॥ ಪಂಚಸಪ್ತತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ವೃಂದಾವನರಹಸ್ಯಂ ಚ ಬಹುಧಾ ಕಥಿತಂ ಪ್ರಭೋ ।
ಕೇನ ಪುಣ್ಯವಿಶೇಷೇಣ ನಾರದಃ ಪ್ರಕೃತಿಂ ಗತಃ ॥ ೧ ॥

॥ ಈಶ್ವರ ಉವಾಚ ॥

ಏತದಾಶ್ಚರ್ಯವೃತ್ತಾಂತಂ ಮಯಾ ಜಿಜ್ಞಾಸಿತಂ ಪುರಾ ।
ಬ್ರಹ್ಮಣಾ ಕಥಿತಂ ಗುಹ್ಯಂ ಶ್ರುತಂ ಕೃಷ್ಣಮುಖಾಂಬುಜಾತ್ ॥ ೨ ॥

ನಾರದಃ ಪೃಷ್ಟವಾನ್ಮಹ್ಯಂ ತದಾಹಂ ಪ್ರೋಕ್ತವಾನಿದಂ ।
ಅಹಂ ವಕ್ತುಂ ನ ಶಕ್ನೋಮಿ ತನ್ಮಾಹಾತ್ಮ್ಯಂ ಕಥಂಚನ ॥ ೩ ॥

---

### ಎಪ್ಪತ್ತೈದನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು– ಎಲೈ ಪ್ರಭುವೇ ಬೃಂದಾವನರಹಸ್ಯವನ್ನು ಎಲ್ಲವನ್ನೂ ಕೇಳಿದೆನು. ಯಾವ ಪುಣ್ಯವಿಶೇಷದಿಂದ ನಾರದನು ಪ್ರಕೃತಿಯಾದನು. ಹೇಳು.

೨. ಈಶ್ವರನು ಹೇಳಿದನು- ನಾನು ಒಂದುಸಾರಿ ಈ ಆಶ್ಚರ್ಯವೃತ್ತಾಂತವನ್ನು ಕೇಳಲು ಬ್ರಹ್ಮನು ಕೃಷ್ಣನಿಂದ ಕೇಳಿದುದನ್ನೇ ಹೇಳಿದನು.

೩. ನಾರದನು ನನ್ನನ್ನೂ ಕೇಳಲು ಆಗ ನಾನು ಇಂತೆಂದೆನು. ಆ ಸ್ವಾಮಿಯ ಮಹಿಮೆಯನ್ನು ನಾನು ಸ್ವಲ್ಪವೂ ಹೇಳಲಾರೆ.

ಕಿಂ ಕುರ್ವೇ ಶಪನಂ ತಸ್ಯ ಸ್ಮೃತ್ವಾ ಸೀದಾಮಿ ಮಾನಸೇ ।
ಇತಿ ಶ್ರುತ್ವಾ ವಚೋ ಮಹ್ಯಂ ದುರ್ಮನಾಃ ಸೋಽಭವತ್ತದಾ ॥ ೪ ॥

ತದಾ ಬ್ರಹ್ಮಾಣಮಾಹೂಯ ಹ್ಯಹಮಾದಿಷ್ಟವಾನ್ಪ್ರಿಯೇ ।
ತ್ವಯಾ ಯತ್ಕಥಿತಂ ಮಹ್ಯಂ ನಾರದಾಯ ವದಸ್ವ ತತ್ ॥ ೫ ॥

ಬ್ರಹ್ಮಾ ತದಾ ಮಮ ವಚೋ ನಿಶಮ್ಯ ಸಹ ನಾರದಃ ।
ಜಗಾಮ ಕೃಷ್ಣಸವಿಧಂ ನತ್ವಾ ಪೃಚ್ಛತ್ತದೇವ ತು ॥ ೬ ॥

॥ ಬ್ರಹ್ಮೋವಾಚ ॥

ಕಿಮಿದಂ ದ್ವಾತ್ರಿಂಶದ್ವನಂ ವೃಂದಾರಣ್ಯಂ ವಿಶಾಂ ಪತೇ ।
ಶ್ರೋತುಮಿಚ್ಛಾಮಿ ಭಗವನ್ಯದಿ ಯೋಗ್ಯೋಽಸ್ಮಿ ಮೇ ವದ ॥ ೭ ॥

॥ ಶ್ರೀ ಭಗವಾನುವಾಚ ॥

ಇದಂ ವೃಂದಾವನಂ ರಮ್ಯಂ ಮಮ ಧಾಮ್ನೈಕ ಕೇವಲಂ ।
ಯತ್ರ ಮೇ ಪಶವಃ ಸಾಕ್ಷಾದ್ವೃಕ್ಷಾಃ ಕೀಟಾ ನರಾಮರಾಃ ॥ ೮ ॥

---

೪. ನಾನೇನು ಮಾಡಲಿ ? ಆ ಸ್ವಾಮಿಯು ಆಣೆಯಿಟ್ಟಿರುವುದನ್ನು ಸ್ಮರಿಸಿಕೊಂಡು ಮನಸ್ಸಿನಲ್ಲಿ ದುಃಖಿಸುತ್ತೇನೆ. ಎನಲು ಕೇಳಿ ಆ ನಾರದನು ದುಃಖಗೊಂಡನು.

೫. ಆಗ ಬ್ರಹ್ಮನನ್ನು ನಾನು ಕರೆದು ನನಗೆ ನೀನು ಹೇಳಿದುದನ್ನು ಈತನಿಗೂ ಹೇಳೆಂದು ಅಪ್ಪಣೆಮಾಡಿದೆನು.

೬. ಬ್ರಹ್ಮನು ನನ್ನ ಮಾತನ್ನು ಕೇಳಿ ನಾರದನೊಡನೆ ಕೃಷ್ಣನ ಬಳಿಗೆ ಹೋಗಿ ಅವನನ್ನು ಕೇಳಿದನು.

೭. ಬ್ರಹ್ಮನು ಹೇಳಿದನು- ಸ್ವಾಮಿ ಮೂವತ್ತೆರಡು ವನಗಳು ಸೇರಿರುವ ವೃಂದಾರಣ್ಯವಾವುದು ? ಹಾಗೆಂದರೇನು ? ಕೇಳಬೇಕೆಂದಿದ್ದೇನೆ ? ನನಗೆ ಹೇಳಬಹುದಾದರೆ ಹೇಳು.

೮-೧೦. ಭಗವಂತನು ಹೇಳಿದನು- ಈ ವೃಂದಾವನವು ರಮ್ಯವಾದುದು. ನನ್ನ ಮುಖ್ಯಸ್ಥಾನವು. ಇಲ್ಲಿರುವ ಪಶುಗಳೂ, ಮರಗಳೂ, ಕೀಟಗಳೂ, ವೃಕ್ಷಗಳೂ,

ಯೇ ವಸಂತಿ ಮಮಾಂತೇ ತೇ ಮೃತಾ ಯಾಂತಿ ಮಮಾಂತಿಕಂ ।
ಅತ್ರ ಯಾ ಗೋಪಪತ್ನ್ಯಶ್ಚ ನಿವಸಂತಿ ಮಮಾಲಯೇ ॥ ೯ ॥

ಯೋಗಿನ್ಯಸ್ತಾಸ್ತು ಏವಂ ಹಿ ಮಮ ದೇವಾಃ ಪರಾಯಣಾಃ ।
ಪಂಚಯೋಜನಮೇವಂ ಹಿ ವನಂ ಮೇ ದೇವರೂಪಕಂ ॥ ೧೦ ॥

ಕಾಳಿಂದೀಯಂ ಸುಷುಮ್ನಾ ಯಾ ಪರಮಾಮೃತವಾಹಿನೀ ।
ಯತ್ರ ದೇವಾಶ್ಚ ಭೂತಾನಿ ವರ್ತನ್ತೇ ಸೂಕ್ಷ್ಮರೂಪಕಾಃ ॥ ೧೧ ॥

ಸರ್ವ್ವತೋ ವ್ಯಾಪಕಶ್ಚಾಹಂ ನತ್ಯಕ್ಷ್ಯಾಮಿ ವನಂ ಕ್ವಚಿತ್ ।
ಆವಿರ್ಭಾವಸ್ತಿರೋಭಾವೋ ಭವೇದತ್ರ ಯುಗೇಯುಗೇ ॥ ೧೨ ॥

ತೇಜೋಮಯಮಿದಂ ಸ್ಥಾನಂ ಅದೃಶ್ಯಂ ಚರ್ಮಚಕ್ಷುಷಾಂ ।
ರಹಸ್ಯಂ ಮೇ ಪ್ರಭಾವಸ್ಯ ವೃಂದಾವನಂ ಯುಗೇಯುಗೇ ॥ ೧೩ ॥

ಬ್ರಹ್ಮಾದೀನಾಂ ಸುರಾಣಾಂ ಚ ನ ದೃಶ್ಯಂ ತತ್ಕಥಂಚನ ॥ ೧೪ ॥

---

ನರರೂ, ಅಸುರಾದವರೂ ನನ್ನ ಹತ್ತಿರದಲ್ಲಿ ವಾಸಮಾಡತಕ್ಕವುಗಳೂ ಸತ್ತಮೇಲೆ ನನ್ನ ಸ್ಥಾನಕ್ಕೆ ಬರುತ್ತವೆ. ಇಲ್ಲಿ ನನ್ನ ಬಳಿ ವಾಸಮಾಡುವ ಗೋಪಿಯರು ಯೋಗಿನಿಯರು. ಈರೀತಿಯಾಗಿ ದೇವತೆಗಳೂ ನನ್ನಲ್ಲಿ ಆಸಕ್ತರಾಗಿದ್ದಾರೆ. ಐದು ಯೋಜನಗಳ ವಿಸ್ತಾರವಾಗಿರುವಷ್ಟು ದೇವರೂಪವಾದ ಆ ನನ್ನ ವನವಿರುವುದು.

೧೧-೧೨. ಈ ಕಾಳಿಂದೀನದಿಯು ಸುಷುಮ್ನಾನಾಡಿಯಂತಿದ್ದು ಅಮೃತವಾಹಿನಿಯಾಗಿದೆ. ದೇವತೆಗಳೂ, ಪಂಚಭೂತಗಳೂ ಯಾವ ನನ್ನಲ್ಲಿ ಸೂಕ್ಷ್ಮರೂಪದಿಂದಿವೆಯೋ ಅ ನಾನು ಎಲ್ಲಾ ಕಡೆಯಲ್ಲೂ ಆವರಿಸಿಕೊಂಡಿದ್ದು ಈ ವನವನ್ನು ಯಾವ ಕಡೆಯಲ್ಲೂ ಬಿಡುವುದಿಲ್ಲ. ಪ್ರತಿಯುಗದಲ್ಲೂ ವೃಂದಾವನವು ಕಾಣುತ್ತದೆ. ಮುಚ್ಚಿಕೊಳ್ಳುತ್ತದೆ.

೧೩-೧೪. ಈ ಜಾಗವು ತೇಜಸ್ಸಿನರೂಪವಾದುದು. ಚರ್ಮದ ಕಣ್ಣಿಗೆ ಕಾಣುವುದಿಲ್ಲ. ಯುಗಯುಗದಲ್ಲಿಯೂ ವೃಂದಾವನವು ನನ್ನ ಪ್ರಭಾವಕ್ಕೆ ರಹಸ್ಯವಾದ ಜಾಗ. ಬ್ರಹ್ಮಾದಿಗಳಾದ ದೇವತೆಗಳಿಗೆ ಕಾಣತಕ್ಕದ್ದೇ ಅಲ್ಲ.

॥ ಈಶ್ವರ ಉವಾಚ ॥

ತಚ್ಛ್ರುತ್ವಾ ನಾರದೋ ನತ್ವಾ ಕೃಷ್ಣಂ ಬ್ರಹ್ಮಾಣಮೇವ ಚ ।
ಆಜಗಾಮ ಹಿ ಭೂರ್ಲೋಕೇ ಮಿಶ್ರಕಂ ನೈಮಿಷಂ ವನಂ ॥ ೧೫ ॥

ತತ್ರಾಸೌ ಸತ್ಕೃತಶ್ಚಾಪಿ ಶೌನಕಾದ್ಯೈರ್ಮುನೀಶ್ವರೈಃ ।
ಪೃಷ್ಟಶ್ಚಾದ್ಯಾಗತೋ ಬ್ರಹ್ಮನ್ಕುತಸ್ತ್ವಮಧುನಾ ವದ ॥ ೧೬ ॥

ತಚ್ಛ್ರುತ್ವಾ ನಾರದಃ ಪ್ರಾಹ ಗೋಲೋಕಾದಾಗತೋಽಸ್ಮ್ಯಹಂ ।
ಶ್ರುತ್ವಾ ಕೃಷ್ಣಮುಖಾಂಭೋಜಾದ್ವೃಂದಾವನರಹಸ್ಯಕಂ ॥ ೧೭ ॥

॥ ನಾರದ ಉವಾಚ ॥

ತತ್ರ ನಾನಾವಿಧಾಃ ಪ್ರಶ್ನಾಃ ಕೃತಾಶ್ಚೈವ ಪುನಃಪುನಃ ।
ಸಮಸ್ತಾ ಮನವಸ್ತತ್ರ ಯಾಗಶ್ಚೈವ ಶ್ರುತಾ ಮಯಾ ॥ ೧೮ ॥

ತಾನೇವ ಕಥಯಿಷ್ಯಾಮಿ ಯಥಾಪ್ರಶ್ನಂ ಚ ತತ್ವತಃ ॥ ೧೯ ॥

---

೧೫. ಈಶ್ವರನು ಹೇಳಿದನು- ಅದನ್ನು ಕೇಳಿ ನಾರದನು ಕೃಷ್ಣನನ್ನೂ ಬ್ರಹ್ಮನನ್ನೂ ನಮಸ್ಕರಿಸಿ ಭೂಲೋಕದಲ್ಲಿರುವ ಮಿಶ್ರವಾದ ನೈಮಿಶಾರಣ್ಯಕ್ಕೆ ಬಂದನು.

೧೬. ಅಲ್ಲಿ ನಾರದನು ಶೌನಕಾದಿಮುನಿಗಳಿಂದ ಸತ್ಕರಿಸಲ್ಪಟ್ಟನು. ಎಲೈ ಬ್ರಾಹ್ಮಣನೇ ನೀನು ಈಗ ಎಲ್ಲಿಂದ ಬಂದೆ ? ಎಂದರು.

೧೭. ಅದನ್ನು ಕೇಳಿ ನಾರದನು ನಾನು ಗೋಲೋಕದಿಂದ ಕೃಷ್ಣನ ಬಾಯಿಂದಲೇ ಬೃಂದಾವನ ರಹಸ್ಯವನ್ನು ಕೇಳಿ ಬಂದಿದ್ದೇನೆ, ಎಂದನು.

೧೮. ನಾರದನು ಹೇಳಿದನು- ಅಲ್ಲಿ ಬಗೆಬಗೆಯಾದ ಪ್ರಶ್ನೆಗಳನ್ನು ಮಾಡಿದೆವು. ಎಲ್ಲಾ ಮಂತ್ರಗಳೂ, ಎಲ್ಲಾ ಯಾಗಗಳೂ, ಯಾವರೀತಿಯಾಗಿವೆ ? ಎಂದು ಕೇಳಿದೆನು.

೧೯. ಆ ಪ್ರಶ್ನೆಗಳಿಗೆ ಉತ್ತರಹೇಳಿದ ರೀತಿಯಲ್ಲಿಯೇ ಹೇಳುತ್ತೇನೆ.

॥ ಶೌನಕ ಉವಾಚ ॥

ವೃಂದಾರಣ್ಯರಹಸ್ಯಂ ಹಿ ಯದುಕ್ತಂ ಬ್ರಹ್ಮಣಾ ತ್ವಯಿ ।
ತದಸ್ಮಾಕಂ ಪ್ರಚಕ್ಷ್ವಸ್ವ ಯದ್ಯಸ್ಮಾಸು ಕೃಪಾ ತವ ॥ ೨೦ ॥

॥ ನಾರದ ಉವಾಚ ॥

ಏದಾಚಿತ್ಸರಯೂತೀರೇ ದೃಷ್ಟೋಽಸ್ಮಾಭಿಶ್ಚ ಗೌತಮಃ ।
ಖಿನ್ನಸ್ವಾಂತ ಮಹಾದುಃಖೀ ಚಿಂತಾಕುಲಿತಚೇತನಃ ॥ ೨೧ ॥

ಮಾಂ ದೃಷ್ಟ್ವಾ ಗೌತಮೋ ದೇವಃ ಪಪಾತ ಧರಣೀತಲೇ ।
ಉತ್ತಿಷ್ಠ ವತ್ಸ ವತ್ಸೇತಿ ತಮುವಾಚಾಹಮೇವ ಹಿ ॥ ೨೨ ॥

ಕಥಂ ಭವನ್ಮನಸ್ವೀತಿ ಪ್ರೋಚ್ಯತಾಂ ಯದಿ ರೋಚತೇ ।

॥ ಗೌತಮ ಉವಾಚ ॥

ಶ್ರುತಂ ತವ ಮುಖಾದೇವ ಕೃಷ್ಣತತ್ವಂ ಚ ತಾದೃಶಂ ।
ದ್ವಾರಕಾಖ್ಯಂ ಮಧುರಾಖ್ಯಂ ರಹಸ್ಯಂ ಬಹುಶೋ ಮಯಾ ॥ ೨೩ ॥

ವೃಂದಾವನರಹಸ್ಯಂತು ನ ಶ್ರುತಂ ತ್ವನ್ಮುಖಾಂಬುಜಾತ್ ।
ಯತೋ ಮೇ ಮನಸಸ್ಸ್ಥೈರ್ಯಂ ಭವಿಷ್ಯತಿ ಚ ಸದ್ಗುರೋ ॥ ೨೪ ॥

---

೨೦. ಶೌನಕನು ಹೇಳಿದನು– ನಮ್ಮಲ್ಲಿ ನಿನಗೆ ದಯೆಯಿದ್ದರೆ ಬ್ರಹ್ಮನು ನಿನಗೆ ಹೇಳಿದ ವೃಂದಾರಣ್ಯಮಹತ್ವವನ್ನು ಹೇಳು.

೨೧. ನಾರದನು ಹೇಳಿದನು– ಒಂದು ಸಾರಿ ಸರಯೂತೀರದಲ್ಲಿ ದುಃಖದಿಂದ ಕೂಡಿದ ಮನಸ್ಸುಳ್ಳ ಯೋಚನಾಸಕ್ತನಾಗಿರುವ ಗೌತಮನನ್ನು ನೋಡಿದೆನು.

೨೨. ನನ್ನನ್ನು ನೋಡಿ ಗೌತಮನು ಭೂಮಿಯಲ್ಲಿ ನಮಸ್ಕರಿಸಲು ನಾನು ವತ್ಸನೇ ಏಳಪ್ಪ, ಏಳು ಎಂದು ಹೇಳಿದೆನು. ನೀನೇಕೆ ಅನ್ಯಮನಸ್ಸುಳ್ಳವನಾಗಿ ದುಃಖಿಯಾಗಿದ್ದೀಯೆ ? ಇಷ್ಟವಿದ್ದರೆ ಹೇಳು.

೨೩-೨೪. ಗೌತಮನು ಹೇಳಿದನು- ಎಲೈ ನಾರದನೇ ನೀನೇ ನನಗೆ ಕೃಷ್ಣನ ತತ್ವವನ್ನೂ ದ್ವಾರಕೆಯ ಮತ್ತು ಮಧುರೆಯ ರಹಸ್ಯಗಳನ್ನೂ ಅನೇಕ ಬಾರಿ ಹೇಳಿದ್ದೀಯೆ. ಆದರೆ ಬೃಂದಾವನದ ರಹಸ್ಯವನ್ನು ಮಾತ್ರ ಹೇಳಲೇ ಇಲ್ಲ. ಅದನ್ನು ಕೇಳಿದರೆ ನನ್ನ ಮನಸ್ಸಿಗೆ ಚಂಚಲತೆಯು ತಪ್ಪುತ್ತದೆ.

॥ ನಾರದ ಉವಾಚ ॥

ಇದಂ ತು ಪರಮಂ ಗುಹ್ಯಂ ರಹಸ್ಯಾತಿ ರಹಸ್ಯಕಂ ।
ಪುರಾ ಮೇ ಬ್ರಹ್ಮಣಾ ಪ್ರೋಕ್ತಂ ತಾದೃಗ್ಬೃಂದಾವನೋದ್ಭವಂ ॥ ೨೫ ॥

ರಹಸ್ಯಂ ವದ ದೇವೇಶ ವೃಂದಾರಣ್ಯಸ್ಯ ಮೇ ಪಿತಃ ।
ಇತಿ ಜಿಜ್ಞಾಸಿತಂ ಶ್ರುತ್ವಾ ಕ್ಷಣಂ ಮೌನೀ ಸ ಚಾಽಭವತ್ ॥ ೨೬ ॥

ತತೋ ಮಾಽಽಹ ಮಹಾವಿಷ್ಣುಂ ಗಚ್ಛ ವತ್ಸ ಪ್ರಭುಂ ಮಮ ।
ಮಯಾಪಿ ತತ್ರ ಗಂತವ್ಯಂ ತ್ವಯಾ ಸಹ ನ ಸಂಶಯಃ ॥ ೨೭ ॥

ಇತ್ಯುಕ್ತ್ವಾ ಮಾಂ ಗೃಹೀತ್ವಾ ಚ ಗತೋ ವಿಷ್ಣೋಶ್ಚ ಧಾಮನಿ ।
ಮಹಾವಿಷ್ಣೌ ಚ ಕತಂ ಮಯೋಕ್ತಂ ಯತ್ತದೇವ ಹಿ ॥ ೨೮ ॥

ತಚ್ಛ್ರುತ್ವಾ ಚ ಮಹಾವಿಷ್ಣುಃ ಸ್ವಯಂಭುವಮಥಾದಿಶತ್ ।
ತ್ವಮೇವಾದೇಶತೋ ಮಹ್ಯಂ ನೀತ್ವಾ ವೈ ನಾರದಂ ಮುನಿಂ ॥ ೨೯ ॥

ಸ್ನಾನಾಯೈವ ನಿಯುಂಕ್ಷ್ವಸ್ವ ಸರಸ್ಯಮೃತಸಂಜ್ಞಕೇ ।
ಮಹಾವಿಷ್ಣುಸಮಾದಿಷ್ಟಃ ಸ್ವಯಂಭೂರ್ಮಾಂ ತಥಾದಿಶತ್ ॥ ೩೦ ॥

---

೨೫. ನಾರದನು ಹೇಳಿದನು- ಇದು ಪರಮ ಗುಹ್ಯವಾದುದು. ರಹಸ್ಯದಲ್ಲಿಯೂ ರಹಸ್ಯವಾದುದು. ಆ ವೃಂದಾವನದ ರಹಸ್ಯವನ್ನು ಬ್ರಹ್ಮನು ಪೂರ್ವದಲ್ಲಿ ನನಗೆ ಹೇಳಿದ್ದಾನೆ.

೨೬. ಎಲೈ ತಂದೆಯೇ ವೃಂದಾರಣ್ಯದ ರಹಸ್ಯವನ್ನು ಹೇಳು. ಎಂದು ನಾನು ಕೇಳಲು ಇದನ್ನು ಆತನು ಕೇಳಿ ಕ್ಷಣಕಾಲ ಮೌನದಿಂದಿದ್ದನು.

೨೭. ಎಲೈ ವತ್ಸನೇ ಇದಕ್ಕೆ ನನ್ನ ಪ್ರಭುವಾದ ವಿಷ್ಣುವಿನ ಬಳಿಗೆ ಹೋಗಬೇಕು. ಆದ್ದರಿಂದ ನೀನೂ ನಾನೂ ಅಲ್ಲಿಗೆ ಹೋಗೋಣ. ಸಂಶಯಬೇಡ.

೨೮. ಇಂತೆಂದು ಹೇಳಿ ನಾನೂ ಆತನೂ ವಿಷ್ಣುವಿನ ಮನೆಗೆ ಹೋದೆವು. ನಾನು ಹೇಳಿದುದನ್ನೇ ವಿಷ್ಣುವಿನಲ್ಲೂ ಹೇಳಿದನು.

೨೯-೩೦. ಎಲೈ ಬ್ರಹ್ಮನೇ ನನ್ನ ಅಪ್ಪಣೆಯಂತೆ ನೀನು ಈ ನಾರದನನ್ನು ಕರೆದುಕೊಂಡು ಹೋಗಿ ಅಮೃತಸರೋವರದಲ್ಲಿ ಸ್ನಾನಮಾಡಿಸೆಂದನು. ವಿಷ್ಣುವು ಹೇಳಲು ಬ್ರಹ್ಮನು ನನಗೆ ಅಂತೆಯೇ ಅಪ್ಪಣೆಮಾಡಿದನು.

ತತ್ರಾಮೃತಸರಶ್ಶಾಹಂ ಪ್ರವಿಶ್ಯ ಸ್ನಾನಮಾಚರಂ ।
ತತ್ಕ್ಷಣಾತ್ತತ್ಸರಃ ಪಾರೇ ಯೋಷಿತಾಂ ಸವಿಧೇಽಭವಂ ॥ ೩೧ ॥

ಸರ್ವಲಕ್ಷಣಸಂಪನ್ನಾ ಯೋಷಿದ್ಭೂಪಾತಿವಿಸ್ಮಿತಾ ।
ಮಾಂ ದೃಷ್ಟ್ವಾ ತಾಸ್ಸಮಾಯಾನ್ತೀಮಪೃಚ್ಛಂಶ್ಚ ಮುಹುರ್ಮುಹುಃ ॥ ೩೨ ॥

॥ ಸ್ತ್ರಿಯ ಊಚುಃ ॥

ಕಾ ತ್ವಂ ಕುತಸ್ಸಮಾಯಾತಾ ಕಥಯಾತ್ಮವಿಚೇಷ್ಟಿತಂ ।
ತಾಸಾಂ ಪ್ರಿಯಕಥಾಶ್ಶ್ರುತ್ವಾ ಮಯೋಕ್ತಂ ತನ್ನಿಶಾಮಯ ॥ ೩೩ ॥

ಕುತಃ ಕೋಽಯಂ ಸಮಾಯಾತಃ ಕಥಂ ವಾ ಯೋಷಿದಾಕೃತಿಃ ।
ಸ್ವಪ್ನವದ್ದೃಶ್ಯತೇ ಸರ್ವಂ ಕಿಂ ವಾ ಮುಗ್ಧೋಽಸ್ಮಿ ಭೂತಲೇ ॥ ೩೪ ॥

ತಚ್ಛ್ರುತ್ವಾ ಮದ್ವಚೋ ದೇವೀ ಪ್ರೋವಾಚ ಮಧುರಸ್ವನೈಃ ।
ವೃಂದಾನಾಮ್ನೀ ಪುರೀಚೇಯಂ ಕೃಷ್ಣಚಂದ್ರಪ್ರಿಯಾ ಸದಾ ॥ ೩೫ ॥

ಅಹಂ ಸುಲಲಿತಾದೇವೀ ತುರ್ಯಾತೀತಾ ಚ ನಿಷ್ಕಳಾ ।
ಇತ್ಯುಕ್ತ್ವಾ ಚ ಮಹಾದೇವೀ ಕರುಣಾಸಾಂದ್ರಮಾನಸಾ ॥ ೩೬ ॥

---

೩೧. ಆ ಸರೋವರದಲ್ಲಿಳಿದು ಸ್ನಾನಮಾಡಲು ಆಕ್ಷಣವೇ ಹೆಂಗಸಿಗೆ ಸಮಾನವಾದ ರೂಪವನ್ನು ಹೊಂದಿದೆನು. ಮತ್ತು ಹೆಂಗಸರ ಹತ್ತಿರದಲ್ಲಿ ನಿಂತೆನು.

೩೨. ಸರ್ವ ಲಕ್ಷಣಗಳಿಂದ ಕೂಡಿದ ಹೆಂಗಸಾದೆನು. ಬಹು ಆಶ್ಚರ್ಯವಾಯಿತು. ನನ್ನನ್ನು ನೋಡಿ ಅವರು ಹತ್ತಿರಕ್ಕೆ ಬಂದು ಪದೇ ಪದೇ ಕೇಳಿದರು.

೩೩. ಸ್ತ್ರೀಯರು ಹೇಳಿದರು– ನೀನಾರು ? ಎಲ್ಲಿಂದ ಬಂದೆ ? ನಿನ್ನ ವಿಷಯವನ್ನು ಹೇಳು ? ಎಂದರು. ಅವರ ಆ ಪ್ರಿಯವಾದ ಮಾತುಗಳನ್ನು ಕೇಳಿ ನಾನು ಹೇಳಿದುದನ್ನು ಕೇಳು.

೩೪. ಎಲ್ಲಿಂದ ಬಂದೆನು ? ನಾನು ಯಾರು ? ಈ ಹೆಣ್ಣುರೂಪು ಹೇಗೆ ಬಂದಿತು ? ಇದೇನು? ಎಲ್ಲವೂ ಸ್ವಪ್ನದಂತೆ ಕಾಣುತ್ತಿವೆಯಲ್ಲಾ ! ಎಂದು ಮೋಹಗೊಂಡಿದ್ದೇನೆ.

೩೫-೩೭. ಅದನ್ನು ಕೇಳಿ ದೇವಿಯು ಇದು ವೃಂದಾವನ ಪಟ್ಟಣವು. ಕೃಷ್ಣನಿಗೆ ಪ್ರಿಯವಾದುದು. ನಾನು ಸುಲಲಿತಾದೇವಿಯು. ನನಗೆ ಯಾವಾಗಲೂ ಕೃಷ್ಣ

ಮಾಂ ಪ್ರತ್ಯಾಹ ಪುನರ್ದೇವೀ ಸಮಾಗಚ್ಛ ಮಯಾ ಸಹ ।
ಅನ್ಯಾಶ್ಚಯೋಷಿತಸ್ಸರ್ವಾಃ ಕೃಷ್ಣಪಾದಪರಾಯಣಾಃ ॥ ೩೭ ॥

ತಾಶ್ಚ ಮಾಂ ಪ್ರವದಂತ್ಯೇವಂ ಸಮಾಗಚ್ಛಾನಯಾ ಸಹ ।
ತತೋನು ಕೃಷ್ಣಚಂದ್ರಸ್ಯ ಚತುರ್ದಶಾಕ್ಷರೋ ಮನುಃ ॥ ೩೮ ॥

ಕೃಪಯಾ ಕಥಿತಸ್ತಸ್ಯಾ ದೇವ್ಯಾಶ್ಚಾಪಿ ಮಹಾತ್ಮನಃ ।
ತತ್ಕ್ಷಣಾದೇವ ತತ್ಸಾಮ್ಯಂ ಅಲಭಂ ವಿವಿಧೋಪಮಾ ॥ ೩೯ ॥

ತಾಭಿಸ್ಸಹ ಗತಾಸ್ತತ್ರ ಯತ್ರ ಕೃಷ್ಣಸ್ಸನಾತನಃ ।
ಕೇವಲಂ ಸಚ್ಚಿದಾನಂದಃ ಸ್ವಯಂ ಯೋಷಿನ್ಮಯಃ ಪ್ರಭುಃ ॥ ೪೦ ॥

ಯೋಷಿದಾನಂದಹೃದಯೋ ದೃಷ್ಟ್ವಾ ಮಾಮಬ್ರವೀನ್ಮುಹುಃ ।
ಸಮಾಗಚ್ಛ ಪ್ರಿಯೇ ಕಾಂತೇ ಭಕ್ತ್ಯಾ ಮಾಂ ಪರಿರಂಭಯ ॥ ೪೧ ॥

ರೇಮೇ ವರ್ಷಪ್ರಮಾಣೇನ ತತ್ರ ಚೈವ ದ್ವಿಜೋತ್ತಮ ।
ತದೋಕ್ತರಮಣೇ ಶೇಷೇ ದೇವೀಂ ತಾಂ ರಾಧಿಕಾಂ ಪ್ರತಿ ॥ ೪೨ ॥

---

ಚಂದ್ರನು ಪ್ರಿಯನು. ನನಗೆ ಮುಪ್ಪಿಲ್ಲ. ಮತ್ತು ಪೂರ್ಣಳು. ಎಂದು ಮಧುರವಚನದಿಂದ ಹೇಳಿದಳು. ಹೀಗೆಂದು ಹೇಳಿ ಆ ದೇವಿಯು ಕರುಣೆಯಿಂದ ತನ್ನೊಡನೆ ಬಾ ಎಂದಳು. ಕೃಷ್ಣಪಾದದಲ್ಲಿ ಭಕ್ತಿಯುಳ್ಳ ಮಿಕ್ಕ ಹೆಂಗಸರೂ ಇವಳೊಡನೆ ಬಾ ಎಂದರು. ಅನಂತರ ಕೃಷ್ಣಚಂದ್ರನ ಹದಿನಾಲ್ಕಕ್ಷರ ಮಂತ್ರವನ್ನು ನನಗೆ ಉಪದೇಶ ಮಾಡಿದಳು. ನಾನು ಅವರಂತೆ ಆಗಿಬಿಟ್ಟೆನು.

೪೦. ಸಚ್ಚಿದಾನಂದ ಸ್ವರೂಪನಾದ ಕೃಷ್ಣನು ಎಲ್ಲಿ ಗೋಪಿಯರಿಂದ ಕೂಡಿರುವನೋ ಅಲ್ಲಿಗೆ ಅವರ ಜೊತೆಯಲ್ಲಿ ಹೋದೆನು.

೪೧. ಸ್ತ್ರೀಯರಿಂದಲೇ ಆನಂದಪಡುವ ಆ ಸ್ವಾಮಿಯು ನನ್ನನ್ನು ನೋಡಿ ಕಾಂತೆಯೇ ಬಾ. ಭಕ್ತಿಯಿಂದ ನನ್ನನ್ನು ಆಲಂಗಿಸಿಕೋ. ಎಂದು ಅನೇಕಸಾರಿ ಹೇಳಿದನು.

೪೨. ಹೀಗೆ ಅನೇಕ ವರ್ಷಗಳವರೆಗೂ ಅಲ್ಲಿ ರಮಿಸಿದೆನು. ಇನ್ನು ಸ್ವಲ್ಪ ಕಾಲವುಳಿದಿರುವಲ್ಲಿ ಸ್ವಾಮಿಯು ರಾಧಿಕೆಯನ್ನು ಕುರಿತು ಇಂತೆಂದನು.

॥ ಶ್ರೀಕೃಷ್ಣ ಉವಾಚ ॥

ಇಯಂ ಮೇ ಪ್ರಕೃತಿಸ್ತತ್ರ ಚಾಸೀನ್ನಾರದರೂಪಧೃತ್ ।
ನೀತ್ವಾಽಮೃತಸರೋರಮ್ಯಂ ಸ್ನಾನಾರ್ಥಂ ಸನ್ನಿಯೋಜಯ ॥ ೪೩ ॥

ತಯಾ ಮೇರಮಣಸ್ಯಾಂತೇ ಗದಿತಂ ಪ್ರಿಯಭಾಷಿತಂ ।
ಅಹಂ ಚ ಲಲಿತಾದೇವೀ ರಾಧಿಕಾ ಯಾ ಚ ಗೀಯತೇ ॥ ೪೪ ॥

ಅಹಂ ಚ ವಾಸುದೇವಾಖ್ಯೋ ನಿತ್ಯಂ ಕಾಮಕಳಾತ್ಮಕಃ ।
ಸತ್ಯಂ ಯೋಷಿತ್ಸ್ವರೂಪೋಽಹಂ ಯೋಷಿಚ್ಚಾಹಂ ಸನಾತನೀ ॥ ೪೫ ॥

ಅಹಂ ಚ ಲಲಿತಾದೇವೀ ಪುಂರೂಪಾ ಕೃಷ್ಣವಿಗ್ರಹಾ ।
ಆವಯೋರಂತರಂ ನಾಸ್ತಿ ಸತ್ಯಂ ಸತ್ಯಂ ಹಿ ನಾರದ ॥ ೪೬ ॥

ಏವಂ ಯೋ ವೇತ್ತಿ ಮೇ ತತ್ವಂ ಸಮಯಂ ಚ ತಥಾ ಮನುಂ ।
ಸ ಸಮಾಚಾರಸಂಕೇತಂ ಲಲಿತಾ ವತ್ಸಮೇಪ್ರಿಯಃ ॥ ೪೭ ॥

---

೪೩. ಶ್ರೀ ಕೃಷ್ಣನು ಹೇಳಿದನು- ಈಕೆಯು ಎಲ್ಲಾ ಕಡೆಯಲ್ಲೂ ನಾರದ ರೂಪವನ್ನು ಹೊಂದಿ ಎಲ್ಲಾ ಕಡೆಯಲ್ಲಿಯೂ ಸಂಚರಿಸುವ ಮೂರ್ತಿಯು ಅಮೃತ ಸರೋವರಕ್ಕೆ ಕರೆದುಕೊಂಡು ಹೋಗಿ ಸ್ನಾನಮಾಡಿಸು.

೪೪. ರಮಿಸಿಯಾದ ಮೇಲೆ ಪ್ರೀತಿಯಿಂದ ನಾನು ಲಲಿತಾದೇವಿಯು. ನನ್ನನ್ನು ರಾಧಿಕೆ ಎಂದೂ ಹೇಳುತ್ತಾರೆ. ಎಂದಳು.

೪೫. ನಾನೇನೇ ವಾಸುದೇವನು. ಯಾವಾಗಲೂ ಕಾಮಕಳೆಯುಳ್ಳಿರತಕ್ಕವನು ನಾನು ಹೆಂಗಸಿನ ರೂಪದಲ್ಲಿದ್ದೇನೆ. ನಾನೇ ಪುರಾತನವಾದ ಹೆಂಗಸು.

೪೬. ನಾನೇನೇ ಲಲಿತಾದೇವಿಯು ಕೃಷ್ಣನಾಗಿ ಪುರುಷರಲ್ಲಿರುತ್ತೇನೆ. ಲಲಿತೆಗೂ ಕೃಷ್ಣನಿಗೂ ವ್ಯತ್ಯಾಸವಿಲ್ಲ. ಇದು ಸತ್ಯವು.

೪೭. ಯಾವನು ಹೀಗೆ ನನ್ನನ್ನು ತಿಳಿದು ನನ್ನ ಆ ಮಂತ್ರವನ್ನೂ ತಿಳಿದು ನಮ್ಮ ವಿಷಯಗಳನ್ನು ನಮ್ಮ ಸಂಕೇತಗಳನ್ನು ತಿಳಿಯುತ್ತಾನೋ, ಅವನು ನನಗೆ ಪ್ರೀತಿಪಾತ್ರನು.

ಇದಂ ವೃಂದಾವನಂ ನಾಮ ರಹಸ್ಯಂ ಮಮ ವೈ ಗೃಹಂ ।
ನ ಪ್ರಕಾಶ್ಯಂ ಕದಾ ಕುತ್ರ ನ ವಕ್ತವ್ಯಂ ಪಶೌ ಕ್ವಚಿತ್ ॥ ೪೮ ॥

ತತೋನು ರಾಧಿಕಾದೇವೀ ಮಾಂ ನೀತ್ವಾ ತತ್ಸರೋವರೇ ।
ಸ್ಥಿತ್ವಾ ಸಾ ಕೃಷ್ಣಚಂದ್ರಸ್ಯ ಚರಣಾಂತೇ ಗತಾ ಪುನಃ ॥ ೪೯ ॥

ತತೋ ನಿಮಜ್ಜನಾದೇವ ನಾರದೋಽಹಮುಪಾಗತಃ ।
ವೀಣಾಹಸ್ತೋಗಾನಪರಃ ತದ್ರಹಸ್ಯಂ ಮುಹುರ್ಮುದಾ ॥ ೫೦ ॥

ಸ್ವಯಂಭುವಂ ನಮಸ್ಕೃತ್ಯ ತತ್ರಾಗಾಂ ವಿಷ್ಣುಪಾರ್ಷದಂ ।
ಸ್ವಯಂಭುವಾ ತಥಾದೃಷ್ಟಂ ನೋಕ್ತಂ ಕಿಂಚಿತ್ತದಾ ಪುನಃ ॥ ೫೧ ॥

ಇತಿ ತೇ ಕಥಿತಂ ವತ್ಸ ಸುಗೋಪ್ಯಂ ಚ ಮಯಾ ತ್ವಯಿ ।
ತ್ವಯಾಪಿ ಕೃಷ್ಣಚಂದ್ರಸ್ಯ ಕೇವಲಂ ಧಾಮ ಚಿತ್ಕಲಂ ॥ ೫೨ ॥

ಗೋಪನೀಯಂ ಪ್ರಯತ್ನೇನ ಮಾತುರ್ಜಾರ ಇವ ಪ್ರಿಯಃ ।
ಯಥಾ ಪ್ರೋಕ್ತಂ ಮಯಾ ಶಿಷ್ಯೇ ಗೌತಮೇ ಸರಹಸ್ಯಕಂ ॥ ೫೩ ॥

---

೪೮. ಈ ವೃಂದಾವನವು ನನ್ನ ಗುಟ್ಟಾದ ಸ್ಥಳವು. ಇದೆಲ್ಲಿಯೂ ಹೇಳಬೇಡ. ಮೂಢನಾದವನಲ್ಲಿಯೂ ಹೇಳಬೇಡ.

೪೯. ಆಮೇಲೆ ಆ ರಾಧಿಕಾದೇವಿಯು ನನ್ನನ್ನು ಆ ಸರೋವರಕ್ಕೆ ಕರೆದುಕೊಂಡು ಹೋಗಿ ಸ್ನಾನಮಾಡಿಸುವುದಕ್ಕೆ ನಿಲ್ಲಿಸಿ ಆ ಕೃಷ್ಣಚಂದ್ರಮಂತ್ರದ ಚರಣವನ್ನುಚ್ಚರಿಸಿದಳು.

೫೦. ಅಲ್ಲಿ ಸ್ನಾನಮಾಡಿದೊಡನೆಯೇ ವೀಣೆ ಹಿಡಿದು ಗಾನಮಾಡುವ ನಾರದನಾದೆನು. ಆ ರಹಸ್ಯವನ್ನು ಪದೇ ಪದೇ ಗಾನಮಾಡಿದೆನು.

೫೧. ಬ್ರಹ್ಮನ ಬಳಿಗೆ ಹೋಗಿ ಆತನಿಗೆ ನಮಸ್ಕರಿಸಿ ವಿಷ್ಣುವಿನ ಪಾರ್ಷದನಾಗಿ ಹೋದೆನು. ಬ್ರಹ್ಮನೂ ಕೂಡ ಇದರಂತೆಯೇ ನೋಡಿದನು. ಏನನ್ನೂ ಹೇಳಲೇ ಇಲ್ಲ.

೫೨. ನಿನ್ನಲ್ಲಿ ಅತಿಗೋಪ್ಯವಾದರೂ ನಾನು ಹೇಳಿಬಿಟ್ಟಿದ್ದೇನೆ. ನೀನೂ ಕೂಡ ಆ ಕೃಷ್ಣಚಂದ್ರನ ಸ್ಥಳವನ್ನು ಗೋಪ್ಯವಾಗಿಟ್ಟಿರು.

೫೩. ಇದನ್ನು ತಾಯಿಯ ಜಾರನಂತೆ ಗುಟ್ಟಾಗಿಡುತ್ತಿರಬೇಕು. ಹೇಳಬಾರದು. ಈ ರಹಸ್ಯವನ್ನು ಶಿಷ್ಯನಾದ ಗೌತಮನಲ್ಲಿ ಹೇಳಿದೆನು.

ತಥಾಭವತ್ಸುಕಾರ್ತ್ಸ್ನ್ಯೇನ ಕಥಿತಂ ಚಾಪಿ ಗೋಪಿತಂ ।
ಯದಿ ಕುತ್ರ ಕದಾಚಿತ್ತು ಪ್ರಕಾಶ್ಯಂ ಮುನಿಪುಂಗವಾಃ ॥ ೫೪ ॥

ತದಾ ಶಾಪೋ ಭವೇದ್ವಿಪ್ರಾಃ ಕೃಷ್ಣಚಂದ್ರಸ್ಯ ನಿಶ್ಚಿತಂ ।
ಇಮಂ ಕೃಷ್ಣಸ್ಯಲೀಲಾಭಿರ್ಯುತಮಧ್ಯಾಯಮುತ್ತಮಂ ।
ಯಃ ಪಠೇಚ್ಛೃಣುಯಾದ್ವಾಪಿ ಸ ಯಾತಿ ಪರಮಂ ಪದಂ ॥ ೫೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ನಾರದೀಯಾನುನಯೇ ಪಂಚಸಪ್ತತಿತಮೋಽಧ್ಯಾಯಃ

---

೫೪. ಗುಟ್ಟಾದದ್ದಾದರೂ ನಿಮ್ಮಲ್ಲಿ ಬಹು ಕಷ್ಟದಿಂದ ಹೇಳಿದ್ದೇನೆ. ಎಲೈ ಋಷಿಗಳಿರಾ! ಇದನ್ನು ಎಲ್ಲೂ ಪ್ರಕಾಶಪಡಿಸಬೇಡಿರಿ.

೫೫. ಹಾಗೆ ಹೇಳಿದರೆ ಆಗ ಕೃಷ್ಣಚಂದ್ರನ ಶಾಪವು ನಿಮಗೆ ಖಂಡಿತವಾಗಿಯೂ ಉಂಟಾಗುತ್ತದೆ. ನಿಶ್ಚಯವು. ಕೃಷ್ಣನ ಲೀಲೆಗಳಿಂದ ಕೂಡಿದ ಈ ಅಧ್ಯಾಯವನ್ನು ಓದಿದವನೂ ಕೇಳಿದವನೂ ಪರಮಪದವನ್ನು ಹೊಂದುತ್ತಾನೆ.

ಇಂದು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ನಾರದೀಯಾನುನಯವೆಂಬ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಷಟ್ಸಪ್ತತಿತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

ಅತ್ರ ಶಿಶುಪಾಲಂ ನಿಹತಂ ಶ್ರುತ್ವಾ ದಂತವಕ್ತ್ರಃ ।
ಕೃಷ್ಣೇನ ಯೋದ್ಧುಂ ಮಥುರಾಮಾಜಗಾಮ ॥ ೧ ॥

ಕೃಷ್ಣಸ್ತು ತಚ್ಛ್ರುತ್ವಾ ರಥಮಾರುಹ್ಯ ತೇನ ಸಹ ।
ಮಥುರಾಮಾಯಯೌ ॥ ೨ ॥

ಅಥ ತಂ ಹತ್ವಾ ಯಮುನಾಮುತ್ತೀರ್ಯ ನಂದವ್ರಜಂ ಗತ್ವಾ
ಪಿತರಾವಭಿವಾದ್ಯ ಆಶ್ವಾಸ್ಯ ತಾಭ್ಯಾಮಾಲಿಂಗಿತಃ ಸಕಲ-
ಗೋಪವೃದ್ಧಾನ್ ಪರಿಷ್ವಜ್ಯ ತಾನಾಶ್ವಾಸ್ಯ ಬಹುವಸ್ತ್ರಾಭರಣಾ-
ದಿಭಿಸ್ತತ್ರಸ್ಥಾನ್ಸರ್ವಾನ್ಸಂತರ್ಪಯಾಮಾಸ ॥ ೩ ॥

---

## ಎಪ್ಪತ್ತಾರನೆಯ ಅಧ್ಯಾಯವು

೧-೨. ಒಂದು ಸಾರಿ ಕೃಷ್ಣನು ಶಿಶುಪಾಲನನ್ನು ಕೊಂದನೆಂಬ ಸುದ್ದಿಯನ್ನು ದಂತವಕ್ತ್ರನು ಕೇಳಿ ಮಥುರೆಯ ಮೇಲೆ ದಂಡೆತ್ತಿ ಬರಲು ಅದನ್ನು ಕೇಳಿ ಅವನೊಡನೆ ಯುದ್ಧಕ್ಕೆ ಹೋದನು.

೩. ಅನಂತರ ಅವರನ್ನು ಕೊಂದು ಯಮುನೆಯನ್ನು ದಾಟಿ ಗೋಕುಲಕ್ಕೆ ಬಂದು ತಾಯಿತಂದೆಗಳಿಗೆ ನಮಸ್ಕರಿಸಿ ಅವರನ್ನು ಸಮಾಧಾನಪಡಿಸಿ ಅವರಿಂದಾಲಿಂಗಿಸಲ್ಪಟ್ಟು ಗೋಪವೃದ್ಧರನ್ನು ಸಮಾಧಾನಪಡಿಸಿ ಬಹುವಾದ ವಸ್ತ್ರಾಭರಣಗಳಿಂದ ಅವರನ್ನು ತೃಪ್ತಿಪಡಿಸಿದನು.

ಕಾಳಿಂದ್ಯಾಃ ಪುಳಿನೇ ರಮ್ಯೇ ಪುಣ್ಯವೃಕ್ಷಸಮಾಕೀರ್ಣೇ
ಗೋಪಸ್ತ್ರೀಭಿರಹರ್ನಿಶಂ ಕ್ರೀಡಾಸುಖೇನ ತ್ರಿರಾತ್ರಂ
ತತ್ರ ಸಮುವಾಸ । ತತ್ರ ಸ್ಥಳೇ ನಂದಗೋಪಾದಯಃ
ಸರ್ವೇ ಜನಾಃ ಪುತ್ರದಾರಸಹಿತಾಃ ಪಶುಪಕ್ಷಿಮೃಗಾದಯೋಽಪಿ
ವಾಸುದೇವಪ್ರಸಾದೇನ ದಿವ್ಯರೂಪಧರಾ ವಿಮಾನಸಮಾರೂಢಾಃ
ಪರಮಂ ವೈಕುಂಠಲೋಕಮವಾಪುಃ ॥ ೪ ॥

ಶ್ರೀಕೃಷ್ಣಸ್ತು ನಂದಗೋಪವ್ರಜೌಕಸಾಂ ಸರ್ವೇಷಾಂ
ನಿರಾಮಯಂ ಸ್ವಪದಂ ದತ್ವಾ ದೇವೀದೇವಗಣೈಃ
ಸ್ತೂಯಮಾನಃ ಶ್ರೀಮತೀಂ ದ್ವಾರಾವತೀಂ ಪ್ರವಿವೇಶ ॥ ೫ ॥

ತತ್ರ ವಸುದೇವೋಗ್ರಸೇನಸಂಕರ್ಷಣಪ್ರದ್ಯುಮ್ನಾನಿರುದ್ಧಾ-
ಕ್ರೂರಾದಿಭಿಃ ಪ್ರತ್ಯಹಂ ಸಂಪೂಜಿತಃ
ಷೋಡಶಸಹಸ್ರಾಷ್ಟಾಧಿಕಮಹಿಷೀಭಿಶ್ಚ ವಿಶ್ವರೂಪಧರೋ
ದಿವ್ಯರತ್ನಮಯಲತಾಗೃಹಾನ್ತರೇಷು ಸುರತರುಕುಸುಮಾ-
ಚಿತಶ್ಲಕ್ಷ್ಣತರ ಪರ್ಯಂಕೇಷು ರಮಯಾಮಾಸ ॥ ೬ ॥

---

೪. ಆ ಕಾಳಿಂದೀ ನದಿಯ ಮರಳುದಿಣ್ಣೆಗಳಿಂದ ರಮ್ಯವಾದ ಪುಣ್ಯವೃಕ್ಷಗಳುಳ್ಳ ಆ ಸ್ಥಳದಲ್ಲಿ ರಾತ್ರಿಹಗಲೂ ಗೋಪಸ್ತ್ರೀಯರೊಡನೆ ಕ್ರೀಡಿಸುತ್ತಾ ಮೂರು ರಾತ್ರಿ ಇದ್ದನು. ಆಗ ಅಲ್ಲಿದ್ದ ನಂದಗೋಪನೇ ಮುಂತಾದ ಎಲ್ಲಾ ಜನರೂ ಹೆಂಡರು ಮಕ್ಕಳು ಸಹಿತರಾಗಿಯೂ, ಪಶುಪಕ್ಷಿಮೃಗಾದಿಗಳೂ ಕೂಡ ವಾಸುದೇವನ ಅನುಗ್ರಹದಿಂದ ದಿವ್ಯರೂಪವನ್ನು ಹೊಂದಿ ವಿಮಾನದಲ್ಲಿ ಕುಳಿತು ಉತ್ತಮವಾದ ವೈಕುಂಠಲೋಕವನ್ನು ಹೊಂದಿದರು.

೫ ಶ್ರೀಕೃಷ್ಣನಾದರೋ ಗೋಕುಲದಲ್ಲಿದ್ದವರಿಗೆಲ್ಲಾ ಉತ್ತಮವಾದ ತನ್ನ ಸ್ಥಳವನ್ನು ಕೊಟ್ಟು ದೇವತೆಗಳಿಂದ ಹೊಗಳಲ್ಪಟ್ಟು ಉತ್ತಮವಾದ ದ್ವಾರಕೆಗೆ ಬಂದನು.

೬. ಅಲ್ಲಿ ವಸುದೇವ, ಉಗ್ರಸೇನ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಅಕ್ರೂರನೇ ಮುಂತಾದವರಿಂದ ಪ್ರತಿದಿನವೂ ಗೌರವಿಸಲ್ಪಡುತ್ತಾ ಹದಿನಾರು ಸಾವಿರದ ಎಂಟು ಜನ ಹೆಂಡಿರೊಡನೆ ವಿಶ್ವರೂಪಧರನಾಗಿ ದಿವ್ಯರತ್ನಗಳಿಂದ ಕೂಡಿ ಲತಾಗೃಹಗಳಲ್ಲಿ ಪಾರಿಜಾತವೇ ಮುಂತಾದ ಮರಗಳ ಹೂಗಳಿಂದ ಹಾಸಿದ ಮೃದುವಾದ ಹಾಸಿಗೆಗಳಲ್ಲಿ ರಮಿಸಿದನು.

ಏವಂ ಹಿತಾರ್ಥಾಯ ಸರ್ವದೇವಾನಾಂ
ಸಮಸ್ತಭೂಭಾರವಿನಾಶಾಯ ಯದುವಂಶೇಽವತೀರ್ಯ
ಸಕಲರಾಕ್ಷಸವಿನಾಶಂ ಕೃತ್ವಾ ಮಹಾಂತಮುರ್ವಿಭಾರಂ
ನಾಶಯಿತ್ವಾ ನಂದವ್ರಜದ್ವಾರಕಾವಾಸಿನಃ
ಸ್ಥಾವರಜಂಗಮಾನ್ ಭವಬಂಧನಾನ್ಮೋಚಯಿತ್ವಾ
ಪರಮೇ ಶಾಶ್ವತೇ ಯೋಗಿಧ್ಯೇಯೇ ರಮ್ಯೇ
ಧಾಮ್ನಿ ಸಂಸ್ಥಾಪ್ಯ ನಿತ್ಯಂ ದಿವ್ಯಮಹಿಷ್ಯಾದಿಭಿಃ
ಸಂಸೇವ್ಯಮಾನೋ ವಾಸುದೇವೋಽಖಿಲೇಷೂವಾಸ ॥ ೭ ॥

ಆಸೀದವ್ಯಾಕೃತಂ ಬ್ರಹ್ಮ ಕರಕಾಘೃತಯೋರಿವ ।
ಪ್ರಕೃತಿಸ್ಥೋ ಗುಣಾನ್ಭುಕ್ತ್ವಾ ದ್ರವೀಭೂತ್ವಾ ದಿವಂ ಗತಃ ॥ ೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಾರ್ವತೀಶಿವಸಂವಾದೇ
ಷಟ್ಸಪ್ತತಿತಮೋಽಧ್ಯಾಯಃ

---

೭. ಈ ರೀತಿ ಸರ್ವದೇವತೆಗಳ ಹಿತಕ್ಕೋಸ್ಕರವೂ, ಭೂಭಾರದ ವಿನಾಶಕ್ಕೋಸ್ಕರವೂ ಯದುವಂಶದಲ್ಲಿ ಹುಟ್ಟಿ ರಾಕ್ಷಸರನ್ನೆಲ್ಲಾ ಕೊಂದು ಭೂಭಾರವನ್ನು ನಾಶ ಮಾಡಿ ಗೋಕುಲ ದ್ವಾರಕೆಯಲ್ಲಿನ ಚರಾಚರಪ್ರಾಣಿಗಳನ್ನು ಸಂಸಾರದಿಂದ ಬಿಡುಗಡೆ ಮಾಡಿ ಉತ್ತಮವಾದ ಶಾಶ್ವತವಾದ ಯೋಗಿಧ್ಯೇಯವಾದ ಉತ್ತಮಪದದಲ್ಲಿಟ್ಟು ನಿತ್ಯವೂ ದಿವ್ಯಸ್ತ್ರೀಯರೊಡನೆ ಸೇವಿಸಲ್ಪಡುವವನಾಗಿ ಎಲ್ಲರಿಗೂ ಇಂತೆಂದನು.

೮. ಆಲಿಕಲ್ಲು ಬೆಣ್ಣೆಯ ಮುದ್ದೆಗಳಂತೆ ವಿಕಾರವನ್ನು ಹೊಂದದ ಬ್ರಹ್ಮ ವಿದ್ದಿತು. ಅದು ಪ್ರಕೃತಿಯ ಗುಣಗಳನ್ನನುಭವಿಸಿ ಆ ಮೇಲೆ ನೀರಾಗಿ ವೈಕುಂಠ ವನ್ನು ಸೇರಿತು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಅರ್ಜುನೀ ಅನುನಯವೆಂಬ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## || ಸಪ್ತಸಪ್ತತಿತಮೋಽಧ್ಯಾಯಃ ||



|| ಪಾರ್ವತ್ಯುವಾಚ ||

ವಿಸ್ತರೇಣ ಸಮಾಚಕ್ಷ್ವ ಮಂತ್ರಾರ್ಥಪದ ಗೌರವಂ ।
ಈಶ್ವರಸ್ಯ ಸ್ವರೂಪಂ ಚ ತತ್ಸ್ಥಾನಾಂ ಚ ವಿಭೂತಯಃ || ೧ ||

ತದ್ವಿಷ್ಣೋಃ ಪರಮಂ ಧಾಮ ವ್ಯೂಹಭೇದಾಸ್ತಥಾ ಹರೇಃ ।
ನಿರ್ವಾಣಾಖ್ಯಾ ಹಿ ತತ್ತ್ವೇನ ಮಮ ಸರ್ವಂ ಸುರೇಶ್ವರ || ೨ ||

|| ಈಶ್ವರ ಉವಾಚ ||

ಸಾರೇ ವೃಂದಾವನೇ ಕೃಷ್ಣಂ ಗೋಪಿಕೋಟಿಭಿರಾವೃತಂ ।
ತತ್ರ ಗಂಗಾ ಪರಾಶಕ್ತಿಃ ತತ್ಸ್ಥಮಾನಂದಕಾನನಂ || ೩ ||

---

## ಎಪ್ಪತ್ತೇಳನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು—ಸ್ವಾಮಿ, ಮಂತ್ರಾರ್ಥವನ್ನೂ ಅದರ ಗೌರವವನ್ನೂ ವಿಸ್ತಾರವಾಗಿ ಹೇಳು. ಈಶ್ವರನ ಸ್ವರೂಪವನ್ನೂ ಅವನ ಸ್ಥಾನಗಳ ಸೌಂದರ್ಯವನ್ನೂ ತಿಳಿಸು.

೨. ವಿಷ್ಣುವಿನ ಪರಂಧಾಮದ ವಿಷಯವನ್ನೂ ಅದರಲ್ಲಿನ ಗುಂಪುಗಳ ಭೇದವನ್ನೂ ಮೋಕ್ಷದ ತತ್ವವನ್ನೂ ಎಲ್ಲವನ್ನೂ ನನಗೆ ತಿಳಿಸು.

೩-೫. ಈಶ್ವರನು ಹೇಳಿದನು—ಪ್ರಪಂಚಕ್ಕೆ ಸಾರಭೂತವಾದ ವೃಂದಾವನದಲ್ಲಿ ಕೃಷ್ಣನು ಗೋಪಿಯರಿಂದ ಕೂಡಿಕೊಂಡಿದ್ದಾನೆ. ಅಲ್ಲಿ ಗಂಗೆಯೇ ಪರಾಶಕ್ತಿಯು. ಆ ಜಾಗವು ಆನಂದ ಕಾನನವು. ಅದು ನಾನಾಬಗೆಯಾದ ಹೂವಿನ

ನಾನಾಸುಕುಸುಮಾಮೋದ ಸಮೀರ ಸುರಭೀಕೃತಂ ।
ಕಲಿಂದತನಯಾ ದಿವ್ಯತರಂಗಾಸಂಗಸೀತಳಂ ॥ ೪ ॥

ಸನಕಾದ್ಯೈರ್ಭಾಗವತೈಃ ಸಂಸ್ಪೃಷ್ಟಂ ಮುನಿಪುಂಗವೈಃ ।
ಅಹ್ಲಾದಿಮಧುರಾರಾವೈಃ ಗೋವಿಂದ್ಯೈರಭಿಮಂಡಿತಂ ॥ ೫ ॥

ರಮ್ಯಸ್ರಗ್ಭೂಷಣೋಪೇತೈರ್ನೃತ್ಯದ್ಭಿಃ ಬಾಲಕೈರ್ವೃತಂ ।
ತತ್ರ ಶ್ರೀಮಾನ್ಕಲ್ಪತರುಃ ಜಾಂಬೂನದಪರಿಚ್ಛದಃ ॥ ೬ ॥

ನಾನಾರತ್ನಪ್ರವಾಳಾಢ್ಯೋ ನಾನಾಮಣಿಫಲೋಜ್ವಲಃ ।
ತಸ್ಯ ಮೂಲೇ ರತ್ನವೇದೀ ರತ್ನದೀಧಿತಿದೀಪಿತಾ ॥ ೭ ॥

ತತ್ರಾಸೀನಂ ಜಗನ್ನಾಥಂ ತ್ರಿಗುಣಾತೀತಮವ್ಯಯಂ ॥ ೮ ॥

ಕೋಟಿಚಂದ್ರಪ್ರತೀಕಾಶಂ ಕೋಟಿಭಾಸ್ಕರಭಾಸ್ವರಂ ।
ಕೋಟಿಕಂದರ್ಪಲಾವಣ್ಯಂ ಭಾಸಯಂತಂ ದಿಶೋದಶ ॥ ೯ ॥

---

ವಾಸನೆಯಿಂದ ವಾಸಿತವಾಗಿದೆ. ಕಾಲಿಂದೀ ನದಿಯು ಹರಿಯುವುದರಿಂದ ಶೀತಳವಾಗಿದೆ. ಸನಕಾದಿಗಳಾದ ಭಾಗವತರಿಂದಲೂ ಋಷಿಗಳಿಂದಲೂ ಅದು ಕೂಡಿಕೊಂಡಿದೆ. ಗೋಪಾಲರಿಂದ ಶೋಭಿತವಾಗಿದೆ. ಒಳ್ಳೆಯ ವೇಷವನ್ನು ಹಾಕಿಕೊಂಡಿರುವ ಬಾಲಕರು ಅಲ್ಲಿ ಕುಣಿಯುತ್ತಿದ್ದಾರೆ.

೬. ಅಲ್ಲಿ ಕಲ್ಪವೃಕ್ಷವು ಚಿನ್ನದ ಬಣ್ಣದ್ದು ಒಂದಿದೆ. ಬಗೆಬಗೆಯಾದ ರತ್ನಗಳಂತಿರುವ ಚಿಗುರಿನಿಂದಲೂ ನಾನಾಮಣಿರೂಪವಾದ ಫಲಗಳಿಂದಲೂ ಕೂಡಿದೆ.

೭. ಅದರ ಕೆಳಗೆ ರತ್ನದ ಕಾಂತಿಯಿಂದ ಪ್ರಕಾಶಿಸಿದ ರತ್ನದ ವೇದಿಕೆಯಿದೆ.

೮-೯. ಅದರಲ್ಲಿ ಜಗನ್ನಾಥನು ಕುಳಿತಿರುವನು. ಅವನು ಸತ್ವರಜಸ್ತಮೋಗುಣಗಳಿಂದ ಹೊರತಾದವನು. ಅವ್ಯಯನು. ಕೋಟಿಚಂದ್ರರಂತೆ ಪ್ರಕಾಶವುಳ್ಳವನು. ಕೋಟಿಸೂರ್ಯರ ತೇಜಸ್ಸುಳ್ಳವನು. ಕೋಟಿಜನ ಕಂದರ್ಪರ ಲಾವಣ್ಯವುಳ್ಳವನು. ಇಂಥಾ ಜಗನ್ನಾಥನು ಹತ್ತುದಿಕ್ಕುಗಳನ್ನೂ ಪ್ರಕಾಶಿಸುತ್ತಿರುತ್ತಾನೆ.

ತ್ರಿನೇತ್ರಂ ದ್ವಿಭುಜಂ ಗೌರಂ ತಪ್ತಜಾಂಬೂನದಪ್ರಭಂ ।
ಶ್ಲಿಷ್ಯಮಾಣಂ ಚಾಂಗನಾಭಿಃ ಸುಹಾಮಾನಾಂ ಚ ಸರ್ವಶಃ ॥ ೧೦ ॥

ಬ್ರಹ್ಮಾದ್ಯೈಸ್ಸನಕಾದ್ಯೈಶ್ಚ ಧ್ಯೇಯಂ ಭಕ್ತವಶೀಕೃತಂ ।
ಮುದಾ ಘೂರ್ಣಿತನೇತ್ರಾಭಿಃ ನೃತ್ಯಂತೀಭಿರ್ಮಹೋತ್ಸವೈಃ ॥ ೧೧ ॥

ಚುಂಬಂತೀಭಿರ್ಹಸಂತೀಭಿಃ ಶ್ಲಿಷ್ಯಂತೀಭಿರ್ಮುಹುರ್ಮುಹುಃ ।
ಅವಾಪ್ತಗೋಪೀದೇಹಾಭಿಃ ಶ್ರುತಿಭಿಃ ಕೋಟಿಕೋಟಿಭಿಃ ॥ ೧೨ ॥

ತತ್ಪಾದಾಂಬುಜಮಾಧ್ವೀಕಚಿಂತಾಭಿಃ ಪರಿತೋನ್ವಿತಂ ।
ತಾಸಾಂ ತು ಮಧ್ಯೇ ಯಾ ದೇವೀ ತಪ್ತಚಾಮೀಕರಪ್ರಭಾ ॥ ೧೩ ॥

ದ್ಯೋತಮಾನಾ ದಿಶಸ್ಸರ್ವಾಃ ಕುರ್ವತೀ ವಿದ್ಯುದುಜ್ಜ್ವಲಾಃ ।
ಪ್ರಧಾನಂ ಯಾ ಭಗವತೀ ಯಯಾ ಸರ್ವಮಿದಂ ತತಂ ॥ ೧೪ ॥

ಸೃಷ್ಟಿಸ್ಥಿತ್ಯಂತರೂಪಾಯ ವಿದ್ಯಾವಿದ್ಯಾತ್ರಯೀ ಪರಾ ।
ಸ್ವರೂಪಾಶಕ್ತಿ ರೂಪಾ ಚ ಮಾಯಾರೂಪಾ ಚ ಚಿನ್ಮಯೀ ॥ ೧೫ ॥

---

೧೦. ಅವನು ಮೂರು ಕಣ್ಣುಳ್ಳವನು ಎರಡು ಭುಜಗಳುಳ್ಳವನು. ಹಳದಿಯ ಬಣ್ಣವುಳ್ಳವನಾಗಿದ್ದಾನೆ. ಚಿನ್ನದಂತೆ ಹೊಳೆಯುತ್ತಾನೆ. ಸ್ತ್ರೀಯರು ಆಲಿಂಗಿಸಿಕೊಂಡಿದ್ದಾರೆ. ಎಲ್ಲಾ ಕಡೆಯಲ್ಲೂ ತೋಳಿನಿಂದ ಕೂಡಿದ್ದಾನೆ.

೧೧-೧೫. ಬ್ರಹ್ಮಾದಿಗಳಿಂದಲೂ, ಸನಕಾದಿಗಳಿಂದಲೂ ಧ್ಯಾನಮಾಡಲ್ಪಡುತ್ತ ಭಕ್ತಾಧೀನನಾಗಿರುವ ಆ ಸ್ವಾಮಿಯನ್ನು ಮುದದಿಂದ ಕಣ್ಣನ್ನು ತಿರುಗಿಸುತ್ತಿರುವ, ಸಂತೋಷದಿಂದ ಕುಣಿಯುತ್ತಿರುವ ಪದೇಪದೇ ಚುಂಬಿಸುತ್ತಾ, ನಗುತ್ತ ಆಲಂಗಿಸುತ್ತಾ ಇರುವ ಗೋಪೀದೇಹವನ್ನು ಹೊಂದಿರುವ ಅನೇಕವಾದ ಶ್ರುತಿಗಳು ಆ ಸ್ವಾಮಿಯ ಪಾದಗಳನ್ನು ಚಿಂತಿಸುತ್ತ ಸುತ್ತುವರಿದಿವೆ. ಅವರ ಮಧ್ಯದಲ್ಲಿ ಒಬ್ಬಳು ದೇವಿಯಿರುವಳು. ಅವಳು ಪುಟವಿಟ್ಟ ಚಿನ್ನದಂತಿದ್ದು ದಿಕ್ಕುಗಳನ್ನೆಲ್ಲಾ ಪ್ರಕಾಶಪಡಿಸುತ್ತಾ ಮಿಂಚಿನಂತೆ ಪ್ರಕಾಶಮಾನಮಾಡುವಳು ಅವಳೇ ಪ್ರಧಾನಳು. ಅವಳಿಂದಲೇ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆ. ಅವಳೇ ಸೃಷ್ಟಿಸ್ಥಿತಿನಾಶನಗಳನ್ನು ಮಾಡುವಳು. ವಿದ್ಯೆಯ ರೂಪಳು. ವೇದದಸ್ವರೂಪಳು. ಪ್ರಕಾಶರೂಪಳು. ಶಕ್ತಿರೂಪಳು. ಬಹುರೂಪಳು. ಚಿತ್ಸ್ವರೂಪಳು.

ಬ್ರಹ್ಮವಿಷ್ಣುಶಿವಾದೀನಾಂ ದೇಹಕಾರಣಕಾರಣಂ ।
ಚರಾಚರಂ ಜಗತ್ಸರ್ವಂ ಯನ್ಮಾಯಾಪರಿರಂಭಿತಂ ॥ ೧೬ ॥

ವೃಂದಾವನೇಶ್ವರೀ ನಾಮ್ನಾ ರಾಧಾ ಧಾತ್ರಾನುಕಾರಣಾತ್ ।
ತಾಮಾಲಿಂಗ್ಯ ವಸಂತಂ ತಂ ಮುದಾ ವೃಂದಾವನೇಶ್ವರಂ ॥ ೧೭ ॥

ಅನ್ಯೋನ್ಯಚುಂಬನಾಶ್ಲೇಷಮುದಾವೇಶವಿಘೂರ್ಣಿತಂ ।
ಧ್ಯಾಯೇದೇತದ್ವಿಧಂ ದೇವಂ ಸ ಚ ಸಿದ್ಧಿಮವಾಪ್ನುಯಾತ್ ॥ ೧೮ ॥

ಮಂತ್ರರಾಜಮಿಮಂ ಗುಹ್ಯಂ ತಸ್ಯ ಮಂತ್ರಂಚ ಮಂತ್ರವಿತ್ ।
ಯೋಜಪೇಚ್ಛೃಣುಯಾಚ್ಚೈವ ಸ ಮಹಾತ್ಮಾ ಸುದುರ್ಲಭಃ ॥ ೧೯ ॥

ರಾಧಿಕಾ ಚಿತ್ರರೇಖಾ ಚ ಚಂದ್ರಾ ಮದನಸುಂದರೀ ।
ಪ್ರಿಯಾ ಚ ಶ್ರೀ ಮಧುಮತೀ ಶಶಿರೇಖಾ ಹರಿಪ್ರಿಯಾ ॥ ೨೦ ॥

ಸುವರ್ಣಶೋಭಾ ಸಂಮೋಹಾ ಪ್ರೇಮರೋಮಾಂಚರಂಜಿತಾ ।
ವೈವರ್ಣ್ಯಸ್ವೇದಸಂಯುಕ್ತಾ ಭಾವಾಃ ಶಕ್ತಾ ಪ್ರಿಯಂವದಾ ॥ ೨೧ ॥

ಸುವರ್ಣಮಾಲಿನೀ ಶಾನ್ತಾ ಸುರಾ ಸರಸಿಕಾ ತಥಾ ।
ಸರ್ವಸ್ತ್ರೀಜೀವನಾ ದೀನವತ್ಸಲಾ ವಿಮಲಾಶಯಾ ॥ ೨೨ ॥

---

೧೬-೧೮. ಆ ರಾಧೆಯನ್ನಾಲಂಗಿಸಿಕೊಂಡು ಪರಸ್ಪರವಾಗಿ ಸಂತೋಷದಿಂದ ಆಲಿಂಗಿಸಿಕೊಳ್ಳುತ್ತಾ ಚುಂಬಿಸುತ್ತಾ ಮದಾವೇಶದಿಂದ ಕಣ್ಣನ್ನು ತಿರುಗಿಸುತ್ತಿರುವ ಈ ರೀತಿಯಾದ ಸ್ವಾಮಿಯನ್ನು ಧ್ಯಾನಿಸಬೇಕು. ಆ ರೀತಿ ಧ್ಯಾನಿಸಿದವ ಸಿದ್ಧಿಯನ್ನು ಹೊಂದುವನು.

೧೯. ಈ ಗುಹ್ಯವಾದ ಮಂತ್ರವನ್ನು ತಿಳಿದಿರುವವರೂ ಜಪಿಸುವವನೂ ಬಹು ವಿರಳ.

೨೦-೩೦. ರಾಧಿಕೆ, ಚಿತ್ರರೇಖೆ, ಚಂದ್ರೆ, ಮದನಸುಂದರಿ, ಪ್ರಿಯೆ, ಶ್ರೀಮಧುಮತೀ, ಶಶಿರೇಖೆ, ಹರಿಪ್ರಿಯೆ, ಸುವರ್ಣಶೋಭೆ, ಸಂಮೋಹೆ, ಪ್ರೇಮರೋಮಾಂಚರಂಜಿತೆ, ವೈವರ್ಣ್ಯಸ್ವೇದಸಂಯುಕ್ತೆ, ಭಾವೆ, ಶಕ್ತೆ, ಪ್ರಿಯಂವದೆ, ಸುವರ್ಣಮಾಲಿನಿ. ಶಾನ್ತೆ, ಸುರೆ, ಸರಸಿಕೆ, ಸರ್ವಸ್ತ್ರೀಜೀವನೇ, ದೀನವತ್ಸಲೆ, ವಿಮಲಾಶಯೆ,

ನಿ ಪೀತನಾಮಪೀಯೂಷಾ ಸಾ ರಾಧಾ ಪರಿಕೀರ್ತಿತಾ ।
ಸುದೀರ್ಘಸ್ಮಿತಸಂಯುಕ್ತಾ ತಪ್ತಚಾಮೀಕರಪ್ರಭಾ ॥ ೨೩ ॥

ಮೂರ್ಛತ್ಪ್ರೇಮನದೀ ರಾಧಾ ಚರಣಾಲೋಚನಾಂಜನಾ ।
ಮಾಯಾಮಾತ್ಸರ್ಯಸಂಯುಕ್ತಾ ದಾನಸಾಮ್ರಾಜ್ಯಜೀವನಾ ॥ ೨೪ ॥

ಸುರತೋತ್ಸವಸಂಗ್ರಾಮಾ ಚಿತ್ರರೇಖಾ ಪ್ರಕೀರ್ತಿತಾ ।
ಗೌರಾಂಗೀ ನಾತಿ ದೀರ್ಘಾ ಚ ಸದಾ ವಾದನತತ್ಪರಾ ॥ ೨೫ ॥

ಕೃಷ್ಣಾನುರಾಗನಟನಾ ಮೂರ್ಛಾ ರೋಮಾಂಚವಿಹ್ವಲಾ ।
ಹರೇರ್ದಕ್ಷಿಣಪಾರ್ಶ್ವಸ್ಥಾ ಸರ್ವಮಂತ್ರಪ್ರಿಯಾ ತಥಾ ॥ ೨೬ ॥

ಅನಂಗಲೋಭಮಧುರಾ ಚಂದ್ರಾ ಸಾ ಪರಿಕೀರ್ತಿತಾ ।
ಸಲೀಲಮಂಥರಗತಿಃ ಮಂಜುಮುದ್ರಿತಲೋಚನಾ ॥ ೨೭ ॥

ಪ್ರೇಮಧಾರೋಜ್ವಲಾಕೀರ್ಣಾ ದಳಿತಾಂಜನ ಶೋಭನಾ ।
ಕೃಷ್ಣಾನುರಾಗರಸಿಕಾ ರಾಸಧ್ವನಿಸಮುತ್ಸುಕಾ ॥ ೨೮ ॥

---

ನಿಪೀತನಾಮಪಿಯೂಷೆ ಇದೆಲ್ಲವೂ ಕೂಡ ಆ ರಾಧೆಯ ಹೆಸರುಗಳೆಂದು ತಿಳಿ. ಆಕೆಯು ಯಾವಾಗಲೂ ಮುಗುಳುನಗೆಯುಳ್ಳವಳು. ಪುಟಹಾಕಿದ ಚಿನ್ನದಂತೆ ಕಾಂತಿಯುಳ್ಳವಳು. ಮಾಯೆ ಮತ್ಸರಗಳಿಂದ ಕೂಡಿದವಳು, ಕಣ್ಣುಗಳಿಗೆ ಪ್ರೀತಿಯನ್ನುಂಟುಮಾಡುವಳು. ಸುರತೋತ್ಸವಪರಂಪರೆಯುಳ್ಳವಳು. ಚಿತ್ರವಾದ ರೇಖೆಗಳುಳ್ಳವಳು ಎಂದೆನಿಸಿಕೊಂಡಿದ್ದಾಳೆ. ಹಳದಿಯ ಬಣ್ಣವುಳ್ಳವಳು. ಬಹು ಎತ್ತರವಿಲ್ಲ. ಯಾವಾಗಲೂ ವಾದ್ಯಗಳನ್ನು ನುಡಿಸುತ್ತಿರುವವಳು. ದೀನತೆ ಪ್ರೀತಿಗಳನ್ನು ತೋರಿಸುವವಳು. ಸಂತೋಷದಿಂದ ಬಹುವಾದ ರೋಮಾಂಚವುಳ್ಳವಳು. ಯಾವಾಗಲೂ ಹರಿಯ ಬಲ ಪಾರ್ಶ್ವದಲ್ಲಿರುವವಳು. ಸರ್ವಮಂತ್ರದಲ್ಲಿಯೂ ಪ್ರೀತಿಯುಳ್ಳವಳು. ನೋಡಿದರೆ ಕಾಮೋದ್ರೇಕವಾಗುವಂತಹ ಮಧುರತೆಯುಳ್ಳವಳು. ಎಂದು ಚಂದ್ರಳು ಪ್ರಸಿದ್ಧಳಾಗಿದ್ದಾಳೆ. ಲೀಲೆಯಿಂದ ಕೂಡಿದ ಅಮುಕುವ ನಡಗೆ ಮನೋಹರವಾಗಿ ಸ್ವಲ್ಪ ಮುಚ್ಚಿರುವ ಕಣ್ಣು, ಪ್ರೇಮದ ಧಾರೆ, ಅಂಜನದಕಲ್ಲಿನಂತೆ ಬಣ್ಣ. ಕೃಷ್ಣನಿಗೆ ಅನುರಾಗವನ್ನುಂಟುಮಾಡುವುದರಲ್ಲಿ ಇಷ್ಟವುಳ್ಳವಳು ರಾಸಧ್ವನಿಯಲ್ಲಿ ಆಸೆಯುಳ್ಳವಳು. ಅಹಂ

ಅಹಂಕಾರಸಮಾಯುಕ್ತಾ ಮುಖನಿಂದಿತ ಚಂದ್ರಮಾಃ
ಮಧುರಾಲಾಪಚತುರಾ ಜಿತೇಂದ್ರಿಯಶಿರೋಮಣಿಃ ॥ ೨೯ ॥

ಸುಂದರಸ್ಮಿತಸಂಯುಕ್ತಾ ಸಾ ಸೋ ಮದನಸುಂದರೀ ।
ಪ್ರೇಮ್ನಾ ಪ್ರೇಮಕಟಾಕ್ಷೇಣ ಹರೇಶ್ಚಿತ್ತವಿಮೋಹಿನೀ । ॥ ೩೦ ॥

ಜಿತೇಂದ್ರಿಯಾ ಜಿತಕ್ರೋಧಾ ಸಾ ಪ್ರಿಯಾ ಪರಿಕೀರ್ತಿತಾ ॥ ೩೧ ॥

ಸುತಪ್ತಸ್ವರ್ಣಗೌರಾಂಗೀ ಲೀಲಾಗಮನಸುಂದರೀ ।
ಸ್ಮಾರಂ ಚ ಪ್ರೇಮರೋಮಾಂ ಚ ವೈಚಿತ್ರ್ಯಮಧುರಾಕೃತಿಃ ॥ ೩೨ ॥

ಸುಂದರಸ್ಮಿತಸಂಯುಕ್ತಾ ಮುಖನಿಂದಿತಚಂದ್ರಮಾಃ ।
ಮಧುರಾಲಾಪಚತುರಾ ಜಿತೇಂದ್ರಿಯಶಿರೋಮಣಿಃ ॥ ೩೩ ॥

ಕೀರ್ತಿತಾ ಸಾ ಮಧುಮತೀ ಪ್ರೇಮರೋಧನತತ್ಪರಾ ।
ಸಂಮೋಹಜ್ವರರೋಮಾಂಚಪ್ರೇಮಧಾರಾಸಮನ್ವಿತಾ ॥ ೩೪ ॥

ದಾನಧೂಳಿವಿನೋದಾಚ ರಾಸಧ್ವನಿಮಹಾನಟೀ ।
ಶಶಿರೇಖಾ ಚ ವಿಜ್ಞೇಯಾ ಗೋಪಾಲಪ್ರೇಯಸೀ ಸದಾ ॥ ೩೫ ॥

---

ಕಾರವುಳ್ಳವಳು. ಚಂದ್ರನಂತೆ ಮುಖವುಳ್ಳವಳು. ಮಧುರವಾದ ಮಾತುಗಳನ್ನಾಡು ವುದರಲ್ಲಿ ಜಾಣೆ. ಜಿತೇಂದ್ರಿಯಳು. ಸುಂದರವಾಗಿ ನಗತಕ್ಕವಳು. ಮದನಸುಂದರಿಯು ಈ ರೀತಿಯಿದ್ದಾಳೆ. ಪ್ರೇಮದಿಂದಲೂ ಪ್ರೇಮದ ಕಟಾಕ್ಷಗಳಿಂದಲೂ ಹರಿಯ ಚಿತ್ತ ವನ್ನು ಮೋಹಿಸುವಳು. ಜಿತೇಂದ್ರಿಯಳು. ಕೋಪವನ್ನು ಜಯಿಸಿರುವಳು. ಇವಳು ಪ್ರಿಯೆಯು.

೩೧-೩೫. ಮಧುಮತಿ ಎಂಬುವಳು ಚಿನ್ನದ ಬಣ್ಣವುಳ್ಳವಳು. ಲೀಲೆಯಿಂದ ನಡೆಯತಕ್ಕವಳು. ಸ್ಮರನನ್ನು ಉದ್ರೇಕಿಸುವ ಪ್ರೇಮ ರೋಮಾಂಚವುಳ್ಳವಳು ವಿಚಿತ್ರವಾದ ಮಧುರಾಕಾರವುಳ್ಳವಳು. ಸುಂದರವಾದ ನಗೆಯುಳ್ಳವಳು. ಚಂದ್ರನಂತೆ ಮುಖವುಳ್ಳವಳು. ಮಧುರವಾದ ಮಾತನಾಡಬಲ್ಲವಳು. ಜಿತೇಂದ್ರಿಯಳು ಪ್ರೇಮದ ಆಳವುಳ್ಳವಳು. ಶಶಿರೇಖೆಯು ಯಾವಾಗಲೂ ಸಂಮೋಹಜ್ವರದಿಂದ ರೋಮಾಂಚ ವುಳ್ಳವಳು. ಪ್ರೇಮಧಾರೆಯಿಂದ ಕೂಡಿದವಳು. ದಾನಮಾಡುವುದರಲ್ಲಿ ಆಸಕ್ತಳು. ರಾಸಕ್ರೀಡೆಯಲ್ಲಿ ಮುಖ್ಯ ನರ್ತಕಳು. ಇವಳು ಗೋಪಾಲನಿಗೆ ಪ್ರೇಯಸಿಯು.

ಕೃಷ್ಣಾತ್ಮಾ ಸೋತ್ತಮಾ ಶ್ಯಾಮಾ ಮಧುಪಿಂಗಳಲೋಚನಾ ।
ತತ್ಪಾದ ಪ್ರೇಮ ಸಂಮೋಹಾತ್ಕ್ವಚಿತ್ಪುಳಕಚುಂಬಿತಂ ॥ ೩೬ ॥

ಶಿವಕುಂಡೇ ಶಿವಾನಂದಾ ನಂದಿನೀ ದೇವಿಕಾತಟೇ ।
ರುಕ್ಮಿಣೀ ದ್ವಾರವತ್ಯಾಂ ತು ರಾಧಾ ವೃಂದಾವನೇ ವನೇ ॥ ೩೭ ॥

ದೇವಕೀ ಮಥುರಾಯಾಂ ತು ಜಾತಾ ಸಾ ಪರಮೇಶ್ವರೀ ।
ಚಂದ್ರಕೂಟೇ ತಥಾ ಸೀತಾ ವಿಂಧ್ಯೇ ವಿಂಧ್ಯನಿವಾಸಿನೀ ॥ ೩೮ ॥

ವಾರಾಣಸ್ಯಾಂ ವಿಶಾಲಾಕ್ಷೀ ವಿಮಲಾ ಪುರುಷೋತ್ತಮೇ ।
ವೃಂದಾವನಾಧಿಪತ್ಯಂ ಚ ದತ್ತಂ ತಸ್ಯೈ ಪ್ರಸೀದತಾ ॥ ೩೯ ॥

ಕೃಷ್ಣೇನಾನ್ಯತ್ರ ದೇವೀತು ರಾಧಾವೃಂದಾವನೇ ವನೇ ।
ನಿತ್ಯಾನಂದತನುಶ್ಶೌರಿಃ ಯೋಽಶರೀರೀತಿ ಭಾಷ್ಯತೇ ॥ ೪೦ ॥

ವಾಯ್ವಗ್ನಿನಾಕಭೂಮೀನಾಮಂಗಾಧಿಷ್ಠಿತದೇವತಾ ।
ನಿರೂಪ್ಯತೇ ಬ್ರಹ್ಮಣೋಽಪಿ ಗೀತ ಗೋವಿಂದವಿಗ್ರಹಃ ॥ ೪೧ ॥

ಸೇಂಯೋಽಪಿ ಯಥಾ ಸೂರ್ಯಸ್ತೇಜಸಾ ನೋಪಲಕ್ಷ್ಯತೇ ।
ತಥಾ ಕಾನ್ತಿಯುತಃ ಕೃಷ್ಣಃ ಕಾಲಂ ಮೋಹಯತಿಧ್ರುವಂ ॥ ೪೨ ॥

---

೩೬. ಅವಳು ಕೃಷ್ಣನನ್ನೇ ಧ್ಯಾನಿಸುವಳು ಯೌವನಮಧ್ಯಸ್ಥಳು. ಹೊಂಬಣ್ಣದ ಕಣ್ಣುಳ್ಳವಳು. ಆ ಸ್ವಾಮಿಯ ಪಾದಗಳಲ್ಲಿರುವ ಮೋಹದಿಂದ ರೋಮಾಂಚಿತಳೂ ಆಗಿರುತ್ತಾಳೆ.

೩೭-೪೧ ಈ ಲಲಿತೆಯು, ಶಿವಕುಂಡದಲ್ಲಿ ಶಿವಾನಂದಳೆಂದೂ, ದೇವಿಕಾನದಿಯದಡದಲ್ಲಿ ನಂದಿನಿಎಂಬದಾಗಿಯೂ, ದ್ವಾರಾವತಿಯಲ್ಲಿ ರುಕ್ಮಿಣಿಎಂಬುದಾಗಿಯೂ ವೃಂದಾವನದಲ್ಲಿ ರಾಧೆ ಎಂಬುದಾಗಿಯೂ, ಮಥುರೆಯಲ್ಲಿ ದೇವಕಿ ಎಂಬುದಾಗಿಯೂ ಚಂದ್ರಕೂಟದಲ್ಲಿ ಸೀತೆ ಎಂಬುದಾಗಿಯೂ, ವಾರಾಣಸಿಯಲ್ಲಿ ವಿಶಾಲಾಕ್ಷಿಯೆಂದೂ, ಪುರುಷೋತ್ತಮನಲ್ಲಿ ವಿಮಲೆಯೆಂದೂ ಅವತರಿಸಿದ್ದಾಳೆ ಪ್ರಸನ್ನನಾದ ಕೃಷ್ಣನಿಂದ ಆ ವೃಂದಾವನಾಧಿಪತ್ಯವು ರಾಧೆಗೆ ಕೊಡಲ್ಪಟ್ಟಿದೆ. ಶೌರಿಯು ನಿತ್ಯಾನಂದ ಶರೀರವುಳ್ಳವನೆಂದೂ ಈ ರೀತಿಯಾದ ಶರೀರವಿಲ್ಲದವನೆಂದೂ ಹೇಳುತ್ತಾರೆ.

೪೨ ಗಾಳಿ, ಬೆಂಕಿ, ಆಕಾಶ, ಭೂಮಿ, ಸ್ವರ್ಗ ಈ ಅಂಗಗಳಿಗೆ ಅಧಿಷ್ಠಾನ ದೇವತೆಯು ಬ್ರಹ್ಮನೆಂದು ಹೇಳಲ್ಪಟ್ಟಿದೆ. ಹಾಗೇನೇ ಗೋವಿಂದನೂ ಇರುವನು.

ನ ತಸ್ಯ ಪ್ರಕೃತೀರ್ಮೂರ್ತಿಃ ಮೇದೋಮಾಂಸಾಸ್ಥಿಸಂಭವಾ ।
ಯೋಗೀ ಚೈವೇಶ್ವರಶ್ಚಾಸ್ಯಃ ಸರ್ವಾತ್ಮಾ ನಿತ್ಯವಿಗ್ರಹಃ ॥ ೪೩ ॥

ಕಾರ್ಣ್ಯಂ ದೈವಯೋಗೇನ ಕರಕಾಪ್ಸೃತಯೋರಿವ ।
ಕೃಷ್ಣಸ್ಯಾಮಿತತತ್ವಸ್ಯ ಪಾದಪೃಷ್ಠಂ ನ ದೇವತಾ ॥ ೪೪ ॥

ವೃಂದಾವನರಜೋ ವಂದೇ ತತ್ರಸ್ಯುರ್ವಿಷ್ಣುಕೋಟಯಃ ।
ಆನಂದಕಿರಣಾವೃಂದವ್ಯಾಪ್ತವಿಶ್ವಕಲಾನಿಧಿಃ ॥ ೪೫ ॥

ಗುಣಾವೃತಾತ್ಮನಿ ಯಥಾ ಜೀವಾಸ್ತತ್ಕಿರಣಾಂಗಕಾಃ ।
ಭುಜದ್ವಯವಾವೃತಃ ಕೃಷ್ಣೋ ನ ಕದಾಚಿಚ್ಚತುರ್ಭುಜಃ ॥ ೪೬ ॥

ಗೋಪ್ಯೈಕಯಾವೃತಸ್ತತ್ರ ಪರಿಕ್ರೀಡತಿ ಸರ್ವದಾ ।
ಗೋವಿಂದ ಏಷ ಪುರುಷೋ ಬ್ರಹ್ಮಾದ್ಯಾಸ್ತ್ರಿಯ ಏವ ಚ ॥ ೪೭ ॥

---

೪೨. ಇಂದ್ರಿಯಗಳು ಚೆನ್ನಾಗಿದ್ದರೂ ಕೂಡ ಸೂರ್ಯನನ್ನು ತೇಜಸ್ಸಿನ ಪುಂಜನಾದುದರಿಂದ ಹೇಗೆ ನೋಡಲು ಅಸಾಧ್ಯವೋ ಹಾಗೆ ಕಾಂತಿಯಿಂದ ಕೂಡಿದ ಕೃಷ್ಣನು ಕಾಲವನ್ನೇ ಮೋಹಗೊಳಿಸುವಂತೆ ಮಾಡುತ್ತಾನೆ.

೪೩. ಆ ಗೋವಿಂದನಿಗೆ ಮೇದಸ್ಸು, ಮಾಂಸ, ಮೂಳೆಗಳಿಂದ ಕೂಡಿದ ನಮ್ಮಂತಹ ಪ್ರಕೃತಿಸಿದ್ಧವಾದ ಶರೀರವಿಲ್ಲ. ಇವನು ಯೋಗಿಯು ಈಶ್ವರನು. ಸರ್ವಾತ್ಮನು. ನಿತ್ಯದೇಹಿಯು.

೪೪. ಕೃಷ್ಣನು ಯಾವಾಗಲೂ ಸರ್ವವ್ಯಾಪಿ. ಅವನು ಕೂಡಿರಬೇಕಾದರೆ ಆನೆಕಲ್ಲು ಬೆಣ್ಣೆಯುಂಡೆಗಳಂತೆ ಕೂಡಿರುತ್ತಾನೆ. ಸರ್ವವ್ಯಾಪಿಯಾದ ಆ ಸ್ವಾಮಿಯ ಪಾದವೇ ಆಗಲಿ ಪೃಷ್ಠವೇ ಆಗಲಿ ಯಾವ ಅಂಗವೇ ಆಗಲಿ ದೇವತೆಯಲ್ಲ.

೪೫ ವೃಂದಾವನದಲ್ಲಿ ಕೋಟಿ ವಿಷ್ಣುಗಳಿರುವುದರಿಂದ ಅಲ್ಲಿರುವ ಒಂದೊಂದು ರಜಸ್ಸಿಗೂ ನಮಸ್ಕಾರವು. ಆ ಕೃಷ್ಣನು ಆನಂದದ ಕಲೆಯು. ಕಿರಣಗಳಿಂದ ವ್ಯಾಪಿಸಿರುವ ಪ್ರಪಂಚದ ವಿದ್ಯೆಗಳುಳ್ಳವನು.

೪೬. ಗುಣದಿಂದ ಕೂಡಿದ ಆತ್ಮನಲ್ಲಿ ಜೀವಗಳು ಆ ಆತ್ಮನ ಕಿರಣಗಳಾಗಿರುತ್ತವೆ. ಕೃಷ್ಣನು ಎರಡು ಭುಜವುಳ್ಳವನೇ ಹೊರತು ಚತುರ್ಭುಜನಲ್ಲ.

೪೭. ಒಬ್ಬಳು ಗೋಪಿಯಿಂದ ಕೂಡಿಕೊಂಡು ಆ ಕೃಷ್ಣನು ಅಲ್ಲಿ ಯಾವಾಗಲೂ ಕ್ರೀಡಿಸುತ್ತಾನೆ. ಅಲ್ಲಿ ಗೋವಿಂದನೊಬ್ಬನೇ ಪುರುಷನು. ಬ್ರಹ್ಮಾದಿಗಳೇ ಹೆಂಗಸರು.

ತತ ಏವ ಸ್ವಭಾವೋಽಯಂ ಪ್ರಕೃತೇರ್ಭಾವ ಈಶ್ವರಃ ।
ಪುರುಷಪ್ರಕೃತೀ ಚಾದ್ಯೌ ರಾಧಾವೃಂದಾವನೇಶ್ವರೌ ।
ಪ್ರಕೃತೇರ್ವಿಕೃತಂ ಸರ್ವಂ ವಿನಾ ವೃಂದಾವನೇಶ್ವರಂ ॥ ೪೮ ॥

ಸಮುದ್ಭವೇ ನೈವ ಸಮುದ್ಭವೇದಿದಂ
ಭೇದಂ ಗತಂ ತಸ್ಯ ವಿನಾಶನೇ ಹಿ
ಸ್ವರ್ಣಸ್ಯ ನಾಶೋ ನಹಿ ವಿದ್ಯತೇ ತಥಾ
ಮತ್ಸ್ಯಾದಿನಾಶೋಽಪಿ ನ ಕೃಷ್ಣವಿಚ್ಯುತಿಃ ॥ ೪೯ ॥

ತ್ರಿಗುಣಾದಿಪ್ರಪಂಚೋಽಯಂ ವೃಂದಾವನವಿಹಾರಿಣಃ ।
ಊರ್ಮಿರ್ವಾಬ್ಧೇಸ್ತರಂಗಸ್ತು ಯಥಾಬ್ಧಿರ್ನೈವ ಜಾಯತೇ ॥ ೫೦ ॥

ನ ರಾಧಿಕಾಸಮಾ ನಾರೀ ನ ಕೃಷ್ಣಸದೃಶಃ ಪುಮಾನ್ ।
ವಯಃ ಪರಂ ನ ಕೈಶೋರಾತ್ಸ್ವಭಾವಃ ಪ್ರಕೃತೇಃ ಪರಃ ॥ ೫೧ ॥

---

೪೮. ಆದ್ದರಿಂದಲೇ ಈಶ್ವರನು ಪ್ರಕೃತಿಯ ಭಾವವುಳ್ಳವನೆಂದು ಹೇಳುವುದು. ರಾಧೆಯು ಪುರಾತನ ಪ್ರಕೃತಿಯು ಕೃಷ್ಣನು ಪುರಾತನ ಪುರುಷನು. ಈ ಕೃಷ್ಣನನ್ನು ಬಿಟ್ಟು ಪ್ರಕೃತಿಯಿಂದ ಎಲ್ಲವೂ ವಿಕಾರವನ್ನು ಹೊಂದಿದುವೇ.

೪೯. ಇವೆಲ್ಲವೂ ಕೂಡ ಹುಟ್ಟಿದ ಪದಾರ್ಥದಿಂದಲೇ ಹುಟ್ಟುತ್ತವೆ. ಆ ಪದಾರ್ಥವು ನಾಶಹೊಂದಿದರೆ ಆ ಹುಟ್ಟಿದುದೆಲ್ಲವೂ ನಾಶವಾಗಲೇ ಬೇಕು. ಚಿನ್ನದ ಒಡವೆಗಳು ನಾಶವಾಗುತ್ತವೆ. ಚಿನ್ನವು ಹಾಗೆಯೇ ಇರುತ್ತದೆಯಷ್ಟೆ! ಹೀಗೆ ಮತ್ಸ್ಯಾದ್ಯವತಾರಗಳು ನಾಶವಾದರೂ ವಿಷ್ಣುವಿಗೆ (ಕೃಷ್ಣನಿಗೆ) ನಾಶವಿಲ್ಲ. ಅವತಾರಗಳು ನಾಶವಾದರೂ ಪರಮಾತ್ಮನು ಮೂಲಭೂತನು. ಇದ್ದೇ ಇರುವನೆಂದು ತಾತ್ಪರ್ಯ.

೫೦. ವೃಂದಾವನ ವಿಹಾರಿಯಾದ ಸ್ವಾಮಿಯ ಈ ಪ್ರಪಂಚವು ಅವನ ತ್ರಿಗುಣಗಳಿಂದ ಹುಟ್ಟಿದುದು. ಸಮುದ್ರದಿಂದ ಅಲೆಗಳು ಹುಟ್ಟುತ್ತವೆಯೇ ಹೊರತು ಅಲೆಯಿಂದ ಸಮುದ್ರವು ಹುಟ್ಟಬೇಕಾದುದಿಲ್ಲ.

೫೧. ರಾಧಿಕೆಗೆ ಸಮನಾದ ಹೆಂಗಸೂ ಕೃಷ್ಣನಿಗೆ ಸಮನಾದ ಗಂಡಸೂ ಇಲ್ಲವೇ ಇಲ್ಲ. ವಯಸ್ಸು ಬಾಲ್ಯಯೌವನಗಳಿಗೆ ಮಧ್ಯದ್ದೇ ಹೊರತು ಬೇರೆಯಿಲ್ಲ. ಸ್ವಭಾವವು ಪ್ರಕೃತಿಯ ಸ್ವಭಾವವೇ.

**ಧ್ಯೇಯಂ ಕೈಶೋರಕಂ ಧ್ಯೇಯಂ ವನಂ ವೃಂದಾವನಂ ವನಂ ।**
**ಶ್ಯಾಮಮೇವ ಪರಂ ರೂಪಂ ಆದಿದೈವಂ ಪರೋ ರಸಃ** ॥ ೫೨ ॥

**ಬಾಲ್ಯಂ ತು ಪಂಚವರ್ಷಾಬ್ದಾಂತಂ ಪೌಂಗಂಡಂ ದಶವರ್ಷಾವಧಿ ।**
**ಅಷ್ಟಪಂಚಕಕೈಶೋರಂ ಸೀಮಾ ಪಂಚದಶಾವಧಿ** ॥ ೫೩ ॥

**ಯೌವನೋದ್ಭಿನ್ನಕೈಶೋರಂ ನವಯೌವನಮುಚ್ಯತೇ ।**
**ತದ್ವಯಸ್ತಸ್ಯ ಸರ್ವಸ್ವಂ ಪ್ರಪಂಚಮಿತರದ್ವಯಃ** ॥ ೫೪ ॥

**ಬಾಲ್ಯಪೌಗಂಡಕೈಶೋರಂ ವಯೋ ವಂದೇ ಮನೋಹರಂ ।**
**ಬಾಲಗೋಪಾಲಗೋಪಾಲಂ ಸ್ಮರಗೋಪಾಲರೂಪಿಣಂ** ॥ ೫೫ ॥

**ವಂದೇ ಮದನಗೋಪಾಲಂ ಕೈಶೋರಾಕಾರಮದ್ಭುತಂ ।**
**ಯಮಾಹುರ್ಯೌವನೋದ್ಭಿನ್ನ ಶ್ರೀಮನ್ಮದನಮೋಹನಂ** ॥ ೫೬ ॥

---

೫೨. ಕೈಶೋರಕವನ್ನು ಧ್ಯಾನಮಾಡಬೇಕು. ವೃಂದಾವನವನ್ನು ಧ್ಯಾನ ಮಾಡಬೇಕು. ಅವನ ರೂಪವು ಶ್ಯಾಮವರ್ಣವಾದುದು. ಅದನ್ನೇ ಧ್ಯಾನಮಾಡ ಬೇಕು. ಆದಿದೈವವಾದ ಆ ಸ್ವಾಮಿಯೇ ಶ್ರೇಷ್ಠವಾದ ರಸವು. ಅದನ್ನು ಧ್ಯಾನ ಮಾಡಬೇಕು.

೫೩. ಐದು ವರ್ಷ ಬಾಲ್ಯ. ಹತ್ತು ವರ್ಷ ಪೌಗಂಡವು ಎಂದರೆ ಆ ಹುಡುಗನಿಗೆ ಐದು ವರ್ಷದವರೆಗೂ ಬಾಲ್ಯ. ಅನಂತರ ಹದಿನೈದು ವರ್ಷದವರೆಗೆ ಪೌಗಂಡವು. ಹದಿನೆಂಟು ವರ್ಷಕ್ಕೆ ಕೈಶೋರವು. ಆ ಕೈಶೋರಕ್ಕೆ ಹದಿನೈದನೇ ವರ್ಷದಿಂದ ಮೊದಲಾಗುವುದು.

೫೪. ಯೌವನ ಬಂದು ಕೈಶೋರವೂ ಇದ್ದರೆ ಆ ಯೌವನವು ಬಹು ಮನೋಹರವಾದುದು. ಆ ವಯಸ್ಸೇನೇ ಅವನಿಗೆ ಬಹು ಅಮೂಲ್ಯವಾದುದು. ಮಿಕ್ಕ ವಯಸ್ಸಿನಲ್ಲಿ ಪ್ರಪಂಚ ವ್ಯವಹಾರ ಮಿಶ್ರವಾದುದರಿಂದ ಅಷ್ಟು ಅಮೂಲ್ಯ ವೆನ್ನಲಾಗುವುದಿಲ್ಲ

೫೫. ಕರುಗಳನ್ನು ಕಾಯುವ ಸ್ಮರನಾದ ಗೋಪಾಲರೂಪಿಯಾದ ಮನೋ ಹರನಾದ ಬಾಲ್ಯ, ಪೌಗಂಡ, ಕೈಶೋರ ವಯಸ್ಸನ್ನು ಹೊಂದಿದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೫೬. ಯೌವನದಿಂದ ಹೊರಹೊಮ್ಮುವ ಮನ್ಮಥನಂತೆ ಮೋಹಕನಾದ ಕೈಶೋರ ವಯಸ್ಸುಳ್ಳ ಗೋಪಾಲನನ್ನು ನಮಸ್ಕರಿಸುತ್ತೇನೆ.

ಅಖಂಡಾಕುಲಪೀಯೂಷರಸಾನಂದಮಹಾರ್ಣವಂ ।
ಜಯತಿ ಶ್ರೀಪತೇರ್ಗೂಢಂ ವಯಃ ಕೈಶೋರರೂಪಿಣಃ ॥ ೫೭ ॥

ಏಕಮಪ್ಯವ್ಯಯಂ ಪೂರ್ವಂ ವಲ್ಲವೀವೃಂದಮಧ್ಯಗಂ ।
ಧ್ಯಾನಗಮ್ಯಂ ಪ್ರಪಶ್ಯಂತಿ ರುಚಿಭೇದಾತ್ಪೃಥಗ್ಧಿಯಃ ॥ ೫೮ ॥

ಯನ್ನಖೇಂದುರುಚಿರ್ಬ್ರಹ್ಮ ಧ್ಯೇಯಂ ಬ್ರಹ್ಮಾದಿಭಿಸ್ಸುರೈಃ ।
ಗುಣತ್ರಯಮತೀತಂ ತಂ ವಂದೇ ವೃಂದಾವನೇಶ್ವರಂ ॥ ೫೯ ॥

ವೃಂದಾವನಪರಿತ್ಯಾಗೋ ಗೋವಿಂದಸ್ಯ ನ ವಿದ್ಯತೇ ।
ಅನ್ಯತ್ರ ಯದ್ವಪುಸ್ತತ್ತು ಕೃತ್ರಿಮಂ ತನ್ನ ಸಂಶಯಃ ॥ ೬೦ ॥

ಸುಲಭಂ ವ್ರಜನಾರೀಣಾಂ ದುರ್ಲಭಂ ತನ್ಮುಮುಕ್ಷುಣಾಂ ।
ತಂ ಭಜೇನ್ನಂದಸೂನುಂ ಯನ್ನಖತೇಜಃ ಪರಂ ಮನುಃ ॥ ೬೧ ॥

---

೫೭. ಪೂರ್ಣವಾದ ಅಮೃತರಸದ ಸಮುದ್ರವಾದ ಕೈಶೋರ ರೂಪವಾದ ಶ್ರೀಪತಿಯ ಗೂಢವಾದ ವಯಸ್ಸು ಪ್ರಕಾಶಿಸುತ್ತದೆ

೫೮. ಗೋಪಿಯರ ಮಧ್ಯದಲ್ಲಿರುವ ಆ ಗೋಪಾಲನು ಏಕನೂ, ಅದ್ವಿತೀಯನೂ, ಅನಾದಿಯಾದವನೂ, ಧ್ಯಾನಕ್ಕೆ ಗೋಚರವಾಗತಕ್ಕವನೂ, ಆದರೂ ಜನರು ಅವರ ಬುದ್ಧಿಯ ಭೇದದಿಂದ ಬೇರೆಬೇರೆಯವನನ್ನಾಗಿ ತಿಳಿಯುತ್ತಾರೆ.

೫೯. ಯಾವನ ಪಾದದ ಉಗುರುಗಳ ಕಿರಣವೇ ಬ್ರಹ್ಮವೋ, ಬ್ರಹ್ಮಾದಿಗಳಾದ ದೇವತೆಗಳು ಯಾವನನ್ನು ಧ್ಯಾನಿಸುತ್ತಾರೆಯೋ ಯಾವನು ಸತ್ವರಜಸ್ತಮೋ ಗುಣಗಳಿಗೆ ಅತೀತನೋ ಅಂತಹ ವೃಂದಾವನೇಶ್ವರನನ್ನು ನಮಸ್ಕರಿಸುತ್ತೇನೆ.

೬೦. ಗೋವಿಂದನು ಯಾವಾಗಲೂ ವೃಂದಾವನವನ್ನು ಬಿಡುವುದೇ ಇಲ್ಲ. ಬೇರೆಯ ಜಾಗದಲ್ಲಿರುವ ಅವನ ದೇಹವು ಕೃತ್ರಿಮವು ಎಂಬುವುದರಲ್ಲಿ ಸಂಶಯವಿಲ್ಲ.

೬೧. ಗೋಕುಲದಲ್ಲಿರುವ ಗೋಪಿಯರಿಗೆ ಯಾವ ಪದಾರ್ಥವು ಸುಲಭವಾಗಿದ್ದರೂ ಮುಮುಕ್ಷುಗಳಿಗೆ ದುರ್ಲಭವೋ ಅಂತಹ ನಂದನಂದನನನ್ನು ಭಜಿಸುತ್ತೇನೆ. ಅವನ ಕಾಲುಗರ ತೇಜಸ್ಸೇ ಪರಮ ಮಂತ್ರವು.

॥ ಪಾರ್ವತ್ಯುವಾಚ ॥

ಭುಕ್ತಿಮುಕ್ತಿಸ್ಪೃಹಾಯಾವತ್ಪಿಶಾಚೀ ಹೃದಿ ವರ್ತತೇ ।
ತಾವತ್ಪ್ರೇಮಸುಖಸ್ಯಾತ್ರ ಕಥಮಭ್ಯುದಯೋ ಭವೇತ್ ॥ ೬೨ ॥

॥ ಈಶ್ವರ ಉವಾಚ ॥

ಸಾಧುಪೃಷ್ಟಂ ತ್ವಯಾ ಭದ್ರೇ ಯನ್ಮೇ ಮನಸಿ ವರ್ತತೇ ।
ತತ್ಸರ್ವಂ ಕಥಯಿಷ್ಯಾಮಿ ಸಾವಧಾನಾ ನಿಶಾಮಯ ॥ ೬೩ ॥

ಸ್ಮೃತ್ವಾ ಗುಣಾನ್ಸ್ಮರನ್ನಾಮ ಗಾನಂ ವಾ ಮನರಂಜನಂ ।
ಬೋಧಯತ್ಯಾತ್ಮನಾತ್ಮಾನಾಂ ಸತತಂ ಪ್ರೇಮ್ಣಿ ಲೀಯತೇ ॥ ೬೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವಪಾರ್ವತೀಸಂವಾದೇ
ಶ್ರೀ ಕೃಷ್ಣರೂಪಗುಣವರ್ಣನಂ ನಾಮ ಸಪ್ತಸಪ್ತತಿತಮೋಽಧ್ಯಾಯಃ

---

೬೨. ಪಾರ್ವತಿಯು ಹೇಳಿದಳು — ಊಟದ ವಿಷಯ, ಮುಕ್ತಿಯ ವಿಷಯ, ಇವುಗಳ ಆಶೆಯೆಂಬ ಪಿಶಾಚಿಯು ಮನಸ್ಸಿನಲ್ಲಿರುವವರೆಗೂ ಪ್ರೇಮಸುಖವು ಹೇಗೆ ತಾನೆ ಮೇಲಕ್ಕೆದ್ದೀತು.

೬೩. ಈಶ್ವರನು ಹೇಳಿದನು—ಭದ್ರಳೇ! ನೀನು ಕೇಳಿದ್ದೇನೋ ಸರಿ. ನನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಹೇಳುತ್ತೇನೆ. ಮನಸ್ಸು ಕೊಟ್ಟು ಕೇಳು.

೬೪. ಆ ಸ್ವಾಮಿಯ ಗುಣಗಳನ್ನು ಸ್ಮರಿಸಿಕೊಂಡು ನಾಮಗಳನ್ನು ಸ್ಮರಿಸುತ್ತ ಜನರಂಜನವಾದ ಆ ಸ್ವಾಮಿಯ ಗಾನವನ್ನು ಕೇಳುತ್ತಿದ್ದರೆ ಜೀವಾತ್ಮನು ಪರಮಾತ್ಮನನ್ನು ಎಚ್ಚತ್ತುಕೊಳ್ಳುವಂತೆ ಮಾಡಿ ಯಾವಾಗಲೂ ಪ್ರೇಮದಲ್ಲಿ ಲೀನವಾಗುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶಿವಪಾರ್ವತೀ ಸಂವಾದದಲ್ಲಿ
ಶ್ರೀ ಕೃಷ್ಣರೂಪಗುಣವರ್ಣನವೆಂಬ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಅಷ್ಟಸಪ್ತತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ವೈಷ್ಣವಾನಾಂ ಚ ಯದ್ಧರ್ಮಂ ಸರ್ವಂ ತಥ್ಯಂ ಚ ಮೇ ವದ ।
ಯತ್ಕೃತ್ವಾ ಮಾನವಾಸ್ಸರ್ವೇ ಭವಾಂಭೋಧಿಂ ತರಂತಿ ಹಿ ॥ ೧ ॥

॥ ಈಶ್ವರ ಉವಾಚ ॥

ಅಥ ದ್ವಾದಶಶುದ್ಧಿಂ ಚ ವೈಷ್ಣವಾನಾಮಿಹೋಚ್ಯತೇ ।
ಗೃಹೋಪಲೇಪನಂ ಚೈವ ತಥಾನುಗಮನಂ ಹರೇಃ ॥ ೨ ॥

ಭಕ್ತ್ಯಾ ಪ್ರದಕ್ಷಿಣಂಚೈವ ಪಾದಯೋಶ್ಶೋಧನಂ ಪುನಃ ।
ಪೂಜಾರ್ಥಂ ಪತ್ರಪುಷ್ಪಾಣಾಂ ಭಕ್ತ್ಯೈವೋಚ್ಚಯನಂ ಹರೇಃ ॥ ೩ ॥

---

## ಎಪ್ಪತ್ತೆಂಟನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು. ಯಾವ ಧರ್ಮವನ್ನು ಆಚರಿಸಿದರೆ ಮಾನವರು ಸಂಸಾರಸಾಗರವನ್ನು ದಾಟುತ್ತಾರೆಯೋ ಅಂತಹ ವೈಷ್ಣವ ಧರ್ಮವನ್ನು ಸರಿಯಾಗಿ ನನಗೆ ತಿಳಿಸು.

೨-೩. ಈಶ್ವರನು ಹೇಳಿದನು.—ಆ ಮೇಲೆ ವೈಷ್ಣವರಿಗೆ ಹನ್ನೆರಡು ಬಗೆಯ ಶುದ್ಧಿಗಳನ್ನು ಹೇಳುತ್ತೇನೆ. ದೇವರ ಮನೆಯನ್ನು ಸಾರಿಸುವುದು, ದೇವರ ಹಿಂದೆ ಹೋಗುವುದು, ಭಕ್ತಿಯಿಂದ ಪ್ರದಕ್ಷಿಣೆ ಮಾಡುವುದು, ಕಾಲನ್ನು ತೊಳೆಯುವುದು, ಪೂಜೆಗೋಸ್ಕರ ಹೂವುಪತ್ರೆಗಳನ್ನು ಕೊಯ್ದು ತರುವುದು. ಇದು ಕರಶುದ್ಧಿಯೆನಿಸಿಕೊಳ್ಳುತ್ತದೆ.

ಕೆರಯೋಃಸರ್ವಶುದ್ಧೀನಾಂ ಇಯಂ ಶುದ್ಧಿರ್ವಿಶಿಷ್ಯತೇ ।
ತನ್ನಾಮಕೀರ್ತನಂ ಚೈವ ಗುಣಾನಾಮಪಿ ಕೀರ್ತನಂ ॥ ೪ ॥

ಭಕ್ತ್ಯಾ ಶ್ರೀಕೃಷ್ಣದೇವಸ್ಯ ವಚಸಶ್ಶುದ್ಧಿರಿಷ್ಯತೇ ।
ತತ್ಕಥಾಶ್ರವಣಂ ಚೈವ ತಸ್ಯೋತ್ಸವನಿರೀಕ್ಷಣಂ ॥ ೫ ॥

ಶ್ರೋತ್ರಯೋರ್ನೇತ್ರಯೋಶ್ಚೈವ ಶುದ್ಧಿಸ್ಸಮ್ಯಗಿಹೋಚ್ಯತೇ ।
ಪಾದೋದಕಂ ಚ ನಿರ್ಮಾಲ್ಯಂ ಮಾಲಾನಾಮಪಿಧಾರಣಂ ॥ ೬ ॥

ಉಚ್ಯತೇ ಶಿರಸಶ್ಶುದ್ಧಿಃ ಪ್ರಣತಸ್ಯ ಹರೇಃ ಪುನಃ ।
ಆಘ್ರಾಣಂ ತಸ್ಯ ಪುಷ್ಪಾದೇಃ ನಿರ್ಮಾಲ್ಯಸ್ಯ ತಥಾ ಪ್ರಿಯೇ ॥ ೭ ॥

ವಿಶುದ್ಧಿಸ್ಸ್ಯಾದಂತರಸ್ಯ ಘ್ರಾಣಸ್ಯಾಪಿ ವಿಧೀಯತೇ ।
ಪತ್ರಪುಷ್ಪಾದಿಕಂ ಯಚ್ಚ ಕೃಷ್ಣಪಾದಯುಗಾರ್ಪಿತಂ ॥ ೮ ॥

ತದೇಕಂ ಪಾವನಂ ಲೋಕೇ ತದ್ಧಿ ಸರ್ವಂ ವಿಶೋಧಯೇತ್ ।
ಪೂಜಾ ಚ ಪಂಚಧಾ ಪ್ರೋಕ್ತಾ ತಾಸಾಂ ಭೇದಾನ್ ಶೃಣುಷ್ವ ಮೇ ॥ ೯ ॥

---

೪. ಅವನ ನಾಮಕೀರ್ತನವನ್ನೂ ಗುಣಗಳ ವರ್ಣನವನ್ನೂ ಭಕ್ತಿಯಿಂದ ಮಾಡಿದರೆ ಅದೇ ವಚಶ್ಶುದ್ಧಿಯು.

೫. ಅವನ ಕಥೆಯನ್ನು ಕೇಳುವುದು ಶ್ರೋತ್ರಶುದ್ಧಿಯೆನಿಸುತ್ತದೆ. ಅವನ ಉತ್ಸವವನ್ನು ನೋಡುವುದು ನೇತ್ರಶುದ್ಧಿಯಾಗುವುದು.

೬. ಪಾದೋದಕವನ್ನು ತೆಗೆದುಕೊಳ್ಳುವುದು, ಪ್ರೋಕ್ಷಿಸಿಕೊಳ್ಳುವುದು, ನಿರ್ಮಾಲ್ಯವಾದ ಮಾಲೆಯನ್ನು ಧರಿಸುವುದು ಶಿರಶ್ಶುದ್ಧಿಯೆನಿಸಿಕೊಳ್ಳುತ್ತದೆ.

೭. ಅವನ ನಿರ್ಮಾಲ್ಯ ಹೂಗಳನ್ನು ಮೂಸಿನೋಡುವುದು ಅಂತಃಶುದ್ಧಿ ಮತ್ತು ಘ್ರಾಣಶುದ್ಧಿಯೆನಿಸುವುದು.

೮. ಪತ್ರಪುಷ್ಪಗಳನ್ನು ಅವನ ಪಾದದಲ್ಲಿ ಅರ್ಪಿಸಿದರೆ ಅದು ಪಾವನವಾಗುವುದು. ಅದು ಸರ್ವಶುದ್ಧಿ ಎನಿಸುವುದು.

[೧. ದೇವರ ಮನೆ ಸಾರಿಸುವುದು. ೨. ಸ್ವಾಮಿಯನ್ನು ಅನುಸರಿಸುವುದು ೩. ಪ್ರದಕ್ಷಿಣೆ ಮಾಡುವುದು. ೪. ಹೊಸಪತ್ರೆಗಳನ್ನು ಕೊಯ್ದು ತರುವುದು. ೫ ನಾಮಗುಣಕೀರ್ತನೆ ಮಾಡುವುದು. ೬. ಕಥಾಶ್ರವಣ ಮಾಡುವುದು. ೭. ಉತ್ಸವ

ಅಭಿಗಮನಮುಪಾದಾನಂ ಯೋಗಸ್ಸ್ವಾಧ್ಯಾಯ ಏವ ಚ ।
ಇಜ್ಯಾ ಪಂಚಪ್ರಕಾರಾರ್ಚಾ ಕ್ರಮೇಣ ಕಥಯಾಮಿ ತೇ ॥ ೧೦ ॥

ತತ್ರಾಭಿಗಮನಂ ನಾಮ ದೇವತಾಸ್ಥಾನಮಾರ್ಜನಂ ।
ಉಪಲೇಪಂ ಚ ನಿರ್ಮಾಲ್ಯದೂರೀಕರಣಮೇವ ಚ ॥ ೧೧ ॥

ಉಪಾದಾನಂ ನಾಮ ಗಂಧಪುಷ್ಪಾದಿ ಚಯನಂ ತಥಾ ।
ಯೋಗೋ ನಾಮ ಸ್ವದೇವಸ್ಯ ಸ್ವಾತ್ಮನೈವಾತ್ಮಭಾವನಾ ॥ ೧೨ ॥

ಸ್ವಾಧ್ಯಾಯೋ ನಾಮ ಮಂತ್ರಾರ್ಥಸಂಧಾನಪೂರ್ವಕೋ ಜಪಃ ।
ಸೂಕ್ತಸ್ತೋತ್ರಾದಿಪಾಠಶ್ಚ ಹರೇಃ ಸಂಕೀರ್ತನಂ ತಥಾ ॥ ೧೩ ॥

ತತ್ವಾದಿ ಶಾಸ್ತ್ರಾಭ್ಯಾಸಶ್ಚ ಸ್ವಾಧ್ಯಾಯಃ ಪರಿಕೀರ್ತಿತಃ ।
ಇಜ್ಯಾ ನಾಮ ಸ್ವದೇವಸ್ಯ ಪೂಜನಂ ಚ ಯಥಾರ್ಥಃ ॥ ೧೪ ॥

---

ವನ್ನು ನೋಡುವುದು. ೮. ಪಾದೋದಕ ನಿರ್ಮಾಲ್ಯಗಳನ್ನು ಧರಿಸುವುದು. ೯. ನಿರ್ಮಾಲ್ಯವನ್ನು ಮೂಸಿನೋಡುವುದು. ೧೦. ಅಂತರಂಗ ಮತ್ತು ಘ್ರಾಣಶುದ್ಧಿಗಳು. ೧೧. ಪಾದವನ್ನು ಪತ್ರಪುಷ್ಪಗಳಿಂದ ಪೂಜಿಸುವುದು. ೧೨. ಪಾದವನ್ನು ತೊಳೆಯುವುದು. ಈ ರೀತಿ ದ್ವಾದಶಶುದ್ಧಿಗಳು.]

೯. ಪೂಜೆಯು ಐದು ಪ್ರಕಾರವಾಗಿದೆ. ಅವುಗಳನ್ನು ಕೇಳು.

೧೦. ಅಭಿಗಮನ, ಉಪಾದಾನ, ಯೋಗ, ಸ್ವಾಧ್ಯಾಯ, ಇಜ್ಯಾ ಎಂಬದಾಗಿ ಪೂಜೆಯು ಐದು ಪ್ರಕಾರವಿರುವುದು. ಅವನ್ನು ವಿವರಿಸುತ್ತೇನೆ.

೧೧-೧೪. ಅಭಿಗಮನವೆಂದರೆ ದೇವಸ್ಥಾನವನ್ನು ಗುಡಿಸುವುದು. ರಂಗವಲ್ಲಿ ಹಾಕುವುದು ನಿರ್ಮಾಲ್ಯವನ್ನು ತೆಗೆವುದು. ೨. ಉಪಾದಾನವೆಂದರೆ ಗಂಧಪುಷ್ಪಾದಿಗಳನ್ನು ಸಿದ್ಧಮಾಡುವುದು. ೩. ಯೋಗವೆಂದರೆ ತಾನು ಪೂಜೆ ಮಾಡುವ ದೇವರನ್ನು ಆತ್ಮಭಾವನೆಯಿಂದ ನೋಡುವುದು. ೪. ಸ್ವಾಧ್ಯಾಯವೆಂದರೆ ಮಂತ್ರಾರ್ಥವನ್ನು ತಿಳಿದು ಅದರಂತೆ ಜಪ ಮಾಡುವುದು. ಸೂಕ್ತ, ಸ್ತೋತ್ರಪಾಠ, ಹರಿಕೀರ್ತನೆ ತತ್ವಾಭ್ಯಾಸಗಳು. ೫. ಇಜ್ಯಾ–ತನ್ನ ದೇವರನ್ನು ಸರಿಯಾಗಿ ಪೂಜಿಸುವುದು. ಈ ರೀತಿಯಾಗಿ ಐದುಪ್ರಕಾರವಾಗಿ ಅರ್ಚನೆಯು ಹೇಳಲ್ಪಟ್ಟಿದೆ. ಈ ಐದು ಪೂಜೆಗಳು

ಇತಿ ಪಂಚಪ್ರಕಾರಾರ್ಚಾ ಕಥಿತಾ ತವ ಸುವ್ರತೇ ।
ಸಾರ್ಷ್ಟಿಸ್ಸಾಮೀಪ್ಯಸಾಲೋಕ್ಯಸಾಯುಜ್ಯಸಾರೂಪ್ಯದಾಕ ಕ್ರಮಾತ್ ॥ ೧೫ ॥

ಪ್ರಸಂಗಾತ್ಕಥಯಿಷ್ಯಾಮಿ ಶಾಲಗ್ರಾಮಶಿಲಾರ್ಚನಂ ।
ಕೇಶವಾದೇಶ್ಚತುರ್ಬಾಹೋಃ ದಕ್ಷಿಣೋರ್ಧ್ವಕರಕ್ರಮಾತ್ ॥ ೧೬ ॥

ಶಂಖಚಕ್ರಗದಾಪದ್ಮೀ ಕೇಶವಾಖ್ಯೋ ಗದಾಧರಃ ।
ನಾರಾಯಣಃ ಪದ್ಮಗದಾ ಚಕ್ರಶಂಖಾಯುಧೈಃ ಕ್ರಮಾತ್ ॥ ೧೭ ॥

ಮಾಧವಶ್ಚಕ್ರಶಂಖಾಭ್ಯಾಂ ಪದ್ಮೇನ ಗದಯಾ ಭವೇತ್ ।
ಗದಾಬ್ಜಶಂಖೀ ಚಕ್ರೀ ವಾ ಗೋವಿಂದಾಖ್ಯೋ ಗದಾಧರಃ ॥ ೧೮ ॥

ಪದ್ಮಶಂಖಾರಿಗದಿನೇ ವಿಷ್ಣುರೂಪಾಯ ವೈ ನಮಃ ।
ಸ ಶಂಖಾಬ್ಜಗದಾಚಕ್ರಮಧುಸೂದನಮೂರ್ತಯೇ ॥ ೧೯ ॥

---

ಕ್ರಮವಾಗಿ ಸಾರ್ಷ್ಟಿ, ಸಾಮೀಪ್ಯ, ಸಾಲೋಕ್ಯ, ಸಾಯುಜ್ಯ, ಸಾರೂಪ್ಯಗಳನ್ನು ಕೊಡುತ್ತವೆ.

೧೬. ಪ್ರಸಂಗದಿಂದ ಸಾಲಗ್ರಾಮಶಿಲೆಯ ಅರ್ಚನೆಯನ್ನು ಹೇಳುತ್ತೇನೆ. ಕೇಶವಾದಿ ದೇವರುಗಳ ರೀತಿಯನ್ನು ಆ ಬಲ, ಎಡ, ಮೇಲು, ಕೆಳಗಿನ ಕೈರೀತಿಯಿಂದ ನಾಲ್ಕು ಕೈಗಳ ವ್ಯತ್ಯಾಸದಿಂದ ಹೇಳುತ್ತೇನೆ

೧೭. ಬಲಗೈಗಳಿಂದ ಮೊದಲುಮಾಡಿಗೊಳ್ಳಬೇಕು. ಇವರಲ್ಲಿ ಮೇಲಿನದೊಂದು ಅನಂತರ ಕೆಳಗಿನದು ಎರಡು ಕೈಗಳು. ಅನಂತರ ಅವರಲ್ಲಿ ಮೊದಲು ಮೇಲಿನದು ಅನಂತರ ಕೆಳಗಿನದು. ಈಕ್ರಮದಲ್ಲಿ ಹೇಳಲ್ಪಟ್ಟಿದೆ. ಬಲಗೈಗಳಲ್ಲಿ ಶಂಖ, ಚಕ್ರಗಳೂ, ಎಡಗೈಗಳಲ್ಲಿ ಗದಾ ಪದ್ಮಗಳೂ, ಇದ್ದರೆ ಕೇಶವ ದೇವರು. ಪದ್ಮ, ಗದೆ, ಚಕ್ರ, ಶಂಖಗಳು ಆಕ್ರಮದಲ್ಲಿದ್ದರೆ ನಾರಾಯಣ ದೇವರು.

೧೮. ಚಕ್ರ, ಶಂಖ, ಪದ್ಮ, ಗದೆಗಳ ಕ್ರಮದಲ್ಲಿದ್ದರೆ ಮಾಧವಮೂರ್ತಿಯು ಪದೆ, ಪದ್ಮ, ಶಂಖ, ಚಕ್ರಗಳಿದ್ದರೆ ಗೋವಿಂದನು.

೧೯. ಪದ್ಮ, ಶಂಖ, ಚಕ್ರ, ಗದೆಗಳು ಕ್ರಮದಲ್ಲಿದ್ದರೆ ವಿಷ್ಣುಮೂರ್ತಿಯು. ಶಂಖ, ಪದ್ಮ, ಗದೆ ಚಕ್ರಗಳು ಕ್ರಮದಲ್ಲಿದ್ದರೆ ಮಧುಸೂದನಮೂರ್ತಿಯು.

ನಮೋ ಗದಾದಿಶಂಖಾಬ್ಜ ಯುಕ್ತತ್ರಿವಿಕ್ರಮಾಯ ಚ ।
ಸಾರಿಕೌಮೋದಕೀ ಪದ್ಮ ಶಂಖ ವಾಮನಮೂರ್ತಯೇ ॥ ೨೦ ॥

ಚಕ್ರಾಬ್ಜ ಶಂಖಗದಿನೇ ನಮಃ ಶ್ರೀಧರಮೂರ್ತಯೇ ।
ಹೃಷೀಕೇಶ ಸ್ಸಾರಿಗದಾಶಂಖಪದ್ಮನ್ನಮೋಸ್ತು ತೇ ॥ ೨೧ ॥

ಸಾಬ್ಜ ಶಂಖಗದಾಚಕ್ರಪದ್ಮನಾಭಸ್ಯಮೂರ್ತಯೇ ।
ದಾಮೋದರಶ್ಶಂಖಗದಾಚಕ್ರ ಪದ್ಮನ್ನಮೋಸ್ತು ತೇ ॥ ೨೨ ॥

ಶಂಖಾಬ್ಜ ಚಕ್ರಗದಿನೇ ನಮಃ ಸಂಕರ್ಷಣಾಯ ಚ ।
ಸಾರಿಶಂಖಗದಾಬ್ಜಾಯ ವಾಸುದೇವ ನಮೋಸ್ತು ತೇ ॥ ೨೩ ॥

ಶಂಖಚಕ್ರಗದಾಬ್ಜಾದಿ ಧೃತಪ್ರದ್ಯುಮ್ನಮೂರ್ತಯೇ ।
ನಮೋಽನಿರುದ್ಧಾಯ ಗದಾಶಂಖಾಬ್ಜಾದಿವಿಧಾರಿಣೇ ॥ ೨೪ ॥

ಸಾಬ್ಜ ಶಂಖಗದಾಚಕ್ರಪುರುಷೋತ್ತಮಮೂರ್ತಯೇ ।
ನಮೋಧೋಕ್ಷಜರೂಪಾಯ ಗದಾಶಂಖಾದಿ ಪದ್ಮಿನೇ ॥ ೨೫ ॥

---

೨೦. ಗದೆ, ಚಕ್ರ, ಶಂಖ, ಪದ್ಮಗಳಿದ್ದರೆ ತ್ರಿವಿಕ್ರಮದೇವರು. ಸಾರಿ (ಚಕ್ರ) ಖಡ್ಗ, ಪದ್ಮ, ಶಂಖಗಳಿದ್ದರೆ ವಾಮನಮೂರ್ತಿಯು.

೨೧. ಚಕ್ರ, ಪದ್ಮ, ಶಂಖ, ಗದೆಗಳಿದ್ದರೆ ಶ್ರೀಧರಮೂರ್ತಿಯು. ಚಕ್ರ, ಗದೆ, ಶಂಖ, ಪದ್ಮಗಳಿದ್ದರೆ ಹೃಷಿಕೇಶಸ್ವಾಮಿಯು.

೨೨. ಕಮಲ, ಶಂಖ, ಗದೆ, ಚಕ್ರಗಳಿದ್ದರೆ ಪದ್ಮನಾಭಮೂರ್ತಿಯು. ಶಂಖ ಗದೆ, ಚಕ್ರ, ಪದ್ಮಗಳಿದ್ದರೆ ದಾಮೋದರಮೂರ್ತಿಯು.

೨೩. ಶಂಖ, ಪದ್ಮ, ಚಕ್ರ, ಗದೆಯಿದ್ದರೆ ಸಂಕರ್ಷಣಸ್ವಾಮಿಯು. ಚಕ್ರ, ಶಂಖ, ಗದೆ, ಪದ್ಮಗಳಿದ್ದರೆ ವಾಸುದೇವಮೂರ್ತಿಯು

೨೪. ಶಂಖ, ಚಕ್ರ, ಗದೆ, ಪದ್ಮಗಳನ್ನು ಹಿಡಿದಿದ್ದರೆ, ಪ್ರದ್ಯುಮ್ನ ಮೂರ್ತಿಯು. ಗದೆ, ಶಂಖ, ಪದ್ಮ, ಚಕ್ರ ಹಿಡಿದಿದ್ದರೆ ಅನಿರುದ್ಧಮೂರ್ತಿಯು.

೨೫. ಪದ್ಮ, ಶಂಖ, ಗದೆ, ಚಕ್ರಗಳಿದ್ದರೆ ಪುರುಷೋತ್ತಮಮೂರ್ತಿಯು ಗದೆ, ಶಂಖ, ಚಕ್ರ, ಪದ್ಮಗಳಿದ್ದರೆ ಅಧೋಕ್ಷಜಮೂರ್ತಿಯು.

ನೃಸಿಂಹಮೂರ್ತಯೇ ಪದ್ಮಗದಾಶಂಖಾದಿಧಾರಿಣೇ ।
ಪದ್ಮಾದಿಶಂಖಗದಿನೇ ನಮೋ ಸ್ತ್ವಚ್ಯುತಮೂರ್ತಯೇ ॥ ೨೬ ॥

ಗದಾಬ್ಜಾದಿಸಶಂಖಾಯ ನಮಶ್ಶ್ರೀಕೃಷ್ಣಮೂರ್ತಯೇ ।
ಸಾಲಗ್ರಾಮಶಿಲಾದ್ವಾರಗತಲಗ್ನದ್ವಿಚಕ್ರಧೃತ್ ॥ ೨೭ ॥

ಶುಕ್ಲಾಭರೇಖಶ್ಶೋಭಾಢ್ಯಃ ಸದೇವಶ್ಶ್ರೀಗದಾಧರಃ ।
ಲಗ್ನದ್ವಿಚಕ್ರೋರಕ್ತಾಭಃ ಪೂರ್ವಭಾಗಸ್ತು ಪುಷ್ಕಳಃ ॥ ೨೮ ॥

ಸಂಕರ್ಷಣೋಥ ಪ್ರದ್ಯುಮ್ನಃ ಸೂಕ್ಷ್ಮಚಕ್ರಸ್ತು ಪೀತಕಃ ।
ಸದೀರ್ಘಸುಷಿರಚ್ಛಿದ್ರೋಹ್ಯನಿರುದ್ಧಸ್ತು ವರ್ತುಲಃ ॥ ೨೯ ॥

ನೀಲೋ ದ್ವಾರೇ ತ್ರಿರೇಖಶ್ಚ ಹ್ಯಥನಾರಾಯಣೋಸಿತಃ ।
ಮಧ್ಯೇ ಗದಾಕೃತೀ ರೇಖಾ ನಾಭಿಪದ್ಮಂ ಮಹೋನ್ನತಂ ॥ ೩೦ ॥

ಪೃಥುಚಕ್ರೋ ನೃಸಿಂಹೋ ಯಃ ಕಪಿಲೋ ಸ್ಯಾತ್ತ್ರಿಬಿಂದುಕಃ ।
ಅಥವಾ ಪಂಚಬಿಂದೋಸ್ತು ಪೂಜನಂ ಬ್ರಹ್ಮಚಾರಿಣಃ ॥ ೩೧ ॥

---

೨೬. ಪದ್ಮ, ಗದೆ, ಶಂಖ, ಚಕ್ರಗಳನ್ನು ಧರಿಸಿದ್ದರೆ ನೃಸಿಂಹಮೂರ್ತಿ. ಪದ್ಮ ಚಕ್ರ, ಶಂಖ, ಗದೆಗಳಿದ್ದರೆ ಅಚ್ಯುತಮೂರ್ತಿಯು.

೨೭. ಗದೆ, ಪದ್ಮ, ಚಕ್ರ, ಶಂಖಗಳಿದ್ದರೆ ಶ್ರೀಕೃಷ್ಣಮೂರ್ತಿಯು.

೨೮-೨೯. ಇನ್ನು ಮೇಲೆ ಸಾಲಗ್ರಾಮದ ವಿಷಯವನ್ನು ಹೇಳುತ್ತೇನೆ. ಸಾಲಗ್ರಾಮಶಿಲೆಯ ರಂಧ್ರದಲ್ಲಿ ಎರಡುಕಡೆಯಲ್ಲೂ ಚಕ್ರಗಳಿದ್ದರೆ ಅದು ಬಿಳಿಯರೇಖೆಯಿಂದ ಕೂಡಿದ್ದರೆ ಗದಾಧರನು. ಎರಡು ಚಕ್ರಗಳಿದ್ದು ಮುಂಭಾಗವು ಕೆಂಪಾಗಿದ್ದರೆ ಪುಷ್ಕಲ. ಉಬ್ಬಿದ್ದರೆ ಸಂಕರ್ಷಣನು ಚಕ್ರವು ಸೂಕ್ಷ್ಮವಾಗಿದ್ದು ಹಳದಿಯ ವರ್ಣವಿದ್ದರೆ ಪ್ರದ್ಯುಮ್ನನು. ಉದ್ದವಾಗಿರುವ ತೂತುಳ್ಳದಾಗಿ ವರ್ತುಲವಾಗಿದ್ದು ಎರಡು ಚಕ್ರಗಳಿದ್ದರೆ ಅನಿರುದ್ಧನು.

೩೦-೩೩. ಶಿಲೆಯ ಮುಖಭಾಗದಲ್ಲಿ ನೀಲವರ್ಣವಾಗಿದ್ದು ಮೂರುರೇಖೆಗಳಿದ್ದು ಕಪ್ಪಗಿದ್ದರೆ ನಾರಾಯಣ ಸಾಲಗ್ರಾಮವು. ಮಧ್ಯದಲ್ಲಿ ಗದೆಯ ಆಕಾರದ ರೇಖೆ ನಾಭಿಯಲ್ಲಿ ಪದ್ಮಭಾಗವು ಉಬ್ಬಿದ್ದು ಚಕ್ರವು ದೊಡ್ಡದಾಗಿದ್ದು ಮೂರುಬಿಂದುಗಳಿದ್ದು ಬಣ್ಣವು ಕಪಿಲವರ್ಣಕ್ಕಿದ್ದರೆ ನೃಸಿಂಹಸಾಲಗ್ರಾಮವು. ಐದು ಬಿಂದುಗಳಿದ್ದರೆ ಅದೂ ನರಸಿಂಹನೇ. ಅದು ಬ್ರಹ್ಮಚಾರಿಗೆ ಪೂಜಾಯೋಗ್ಯವು. ಮೂರು ಲಿಂಗಗ

ವರಾಹಸ್ಸ್ರಿಲಿಂಗೋಸ್ಯಾದ್ವಿಷಮದ್ವಯಚಕ್ರಕಃ ।
ನಾಳಸ್ತ್ರಿರೇಖಸ್ಸೂಕ್ಷ್ಮೋಥ ಕೂರ್ಮಮೂರ್ತಿಸ್ಸಬಿಂದುಕಃ ॥ ೩೨ ॥

ಕೃಷ್ಣಸ್ಸವರ್ತುಲಾವರ್ತಃ ಪಾಂಡುರೋ ಧೃತಸ್ತ್ವಪೃಕಃ ।
ಶ್ರೀಧರಃ ಪಂಚರೇಖಶ್ಚ ವನಮಾಲೀ ಗದಾಂಕಿತಃ ॥ ೩೩ ॥

ವಾಮನೋ ವರ್ತುಲೋ ನಾಮ ಮಧ್ಯಚಕ್ರಸ್ಸನೀಲಕಃ ।
ನಾನಾವರ್ಣೋನೇಕಮೂರ್ತಿರ್ನಾಗಭೋಗೀತ್ವನಂತಕಃ ॥ ೩೪ ॥

ಸ್ಥೂಲೋ ದಾಮೋದರೋ ನೀಲೋ ಮಧ್ಯೇ ಚಕ್ರಸ್ಸನೀಲಕಃ ।
ಸಂಕರ್ಷಣದ್ವಾರಕೋಸ್ಯಾದಥ ಬ್ರಹ್ಮಾ ಸುಲೋಹಿತಃ ॥ ೩೫ ॥

ಸದೀರ್ಘರೇಖಾಸುಷಿರಃ ಏಕಚಕ್ರಾಂಬುಜಃ ಪೃಥುಃ ।
ಪೃಥುಚ್ಛಿದ್ರಃ ಸ್ಥೂಲಚಕ್ರಃ ಕೃಷ್ಣೋಬಿಂದುಶ್ಚ ಬಿಂದುಮಾನ್ ॥ ೩೬ ॥

ಹಯಗ್ರೀವೋಂಕುಶಾಕಾರಃ ಪಂಚರೇಖಸ್ತು ಕೌಸ್ತುಭಃ ।
ವೈಕುಂಠೋ ಮಲವದ್ಭಾತಿ ಹ್ಯೇಕಚಕ್ರಮಯೋಸಿತಃ ॥ ೩೭ ॥

---

ಳಿದ್ದು ಒಂದೇ ಕಡೆಯಲ್ಲಿ ಎರಡು ಚಕ್ರಗಳಿದ್ದರೆ ವರಾಹವು. ನಾಳದಲ್ಲಿ ಮೂರು ರೇಖೆಗಳಿದ್ದು ಅವು ಸೂಕ್ಷ್ಮವಾಗಿದ್ದು ಬಿಂದುವೂ (ಚಿಕ್ಕಿ) ಇದ್ದರೆ ಅದು ಕೂರ್ಮಮೂರ್ತಿಯು. ಹಿಂಭಾಗದಲ್ಲಿ ಬೆಳ್ಳಗಿದ್ದು ವರ್ತುಲವಾದ ಸುಳಿಯಿದ್ದರೆ ಕೃಷ್ಣನು. ಐದು ರೇಖೆಗಳಿದ್ದರೆ ಶ್ರೀಧರನು. ಗದೆಯಿಂದ ಕೂಡಿದ್ದರೆ ವನಮಾಲಿಯು.

೩೪. ವರ್ತುಳವಾಗಿ ಮಧ್ಯಚಕ್ರವಿದ್ದು ನೀಲಿಬಣ್ಣವಿದ್ದರೆ ವಾಮನನು. ನಾನಾಬಣ್ಣಗಳಿದ್ದು ಹಡೆಯಿದ್ದು ಅನೇಕ ಮೂರ್ತಿಗಳಿದ್ದರೆ ಅನಂತನು.

೩೫-೩೬ ನೀಲವಾಗಿದ್ದು ದಪ್ಪವಾಗಿದ್ದರೆ ದಾಮೋದರನು. ಮಧ್ಯದಲ್ಲಿ ಚಕ್ರವಿದ್ದು ನೀಲಿಬಣ್ಣಕ್ಕಿದ್ದು ದ್ವಾರವು ಸಣ್ಣನಾಗಿದ್ದರೆ ಸಂಕರ್ಷಣನು. ಲೋಹಿತ ವರ್ಣವಾಗಿದ್ದು ಬಾಯಿಯ ಬಳಿ ದೀರ್ಘರೇಖೆಗಳಿದ್ದು ಒಂದು ಚಕ್ರವೂ ಒಂದು ಪದ್ಮವೂ ಇದ್ದು ದೊಡ್ಡದಾಗಿದ್ದರೆ ಬ್ರಹ್ಮನು. ಬಾಯಿ ದೊಡ್ಡದಾಗಿದ್ದ ಚಕ್ರವೂ ದೊಡ್ಡದಾಗಿದ್ದು ಬಿಂದುವಿದ್ದೂ ಇಲ್ಲದಂತೆ(ಕಂಡೂ ಕಾಣದಂತೆ) ಇದ್ದರೆ ಕೃಷ್ಣನು.

೩೭. ಅಂಕುಶದ ಆಕಾರಗಳಿದ್ದರೆ ಹಯಗ್ರೀವನು. ಐದು ರೇಖೆಗಳಿದ್ದರೆ ಕೌಸ್ತುಭ. ನಿರ್ಮಲವಾಗಿದ್ದರೆ ವೈಕುಂಠಮೂರ್ತಿ ಇದಕ್ಕೆ ಒಂದು ಚಕ್ರವಿದ್ದು ಕಪ್ಪಗಿರಬೇಕು.

ಮತ್ಸ್ಯೋ ದೀರ್ಘಾಂಬುಜಾಕಾರೋ ಹಾರರೇಖಶ್ಚ ಪಾಂಡುರಃ ।
ರಾಮಚಂದ್ರೋ ದಕ್ಷರೇಖಃ ಶ್ಯಾಮೋಸ್ಯಾತ್ತ್ರಿವಿಕ್ರಮಃ ॥ ೩೮ ॥

ಸಾಲಗ್ರಾಮದ್ವಾರಕಾಯಾಂ ಸ್ಥಿತಾಯ ಗದಿನೇ ನಮಃ ।
ಏಕೇನ ಲಕ್ಷತೋ ಯೋಸ್ಯಾದ್ಗದಾಧಾರೀ ಸುದರ್ಶನಃ ॥ ೩೯ ॥

ಲಕ್ಷ್ಮೀನಾರಾಯಣೋ ದ್ವಾಭ್ಯಾಂ ತ್ರಿಭಿಶ್ಚೈವ ತ್ರಿವಿಕ್ರಮಃ ।
ಚತುರ್ಭಿಶ್ಚ ಚತುರ್ವ್ಯೂಹೋ ವಾಸುದೇವಶ್ಚ ಪಂಚಭಿಃ ॥ ೪೦ ॥

ಪ್ರದ್ಯುಮ್ನಃ ಷಡ್ಭಿರೇವಸ್ಯಾತ್ಸಂಕರ್ಷಣಶ್ಚ ಸಪ್ತಭಿಃ ।
ಪುರುಷೋತ್ತಮೋಷ್ಟಭಿಸ್ಯಾನ್ನವವ್ಯೂಹೋ ನವಾಂಕಿತಃ ॥ ೪೧ ॥

ದಶಾವತಾರೋ ದಶಭಿಃ ಅನಿರುದ್ಧೋದಶಾದಥ ।
ದ್ವಾದಶಾತ್ಮಾ ದ್ವಾದಶಭಿಃ ಅತ ಊರ್ಧ್ವಂತ್ವನಂತಕಃ ॥ ೪೨ ॥

ಬ್ರಹ್ಮಾ ಚತುರ್ಮುಖೋ ದಂಡೀ ಕಮಂಡಲುಸ್ರುಗುನ್ನತಃ ।
ಮಹೇಶ್ವರಃ ಪಂಚವಕ್ತ್ರೋ ದಶಬಾಹುರ್ವೃಷಧ್ವಜಃ ॥ ೪೩ ॥

---

೩೮. ದೀರ್ಘವಾಗಿ ಕಮಲದಂತಿದ್ದರೆ ಮತ್ಸ್ಯಮೂರ್ತಿಯು. ಬೆಳ್ಳಗಿದ್ದು ಹಾರದ ರೇಖೆಯಿಂದ ಕೂಡಿದ್ದರೆ ರಾಮಚಂದ್ರಮೂರ್ತಿ. ಬಲಗಡೆಯಲ್ಲಿ ರೇಖೆಯಿದ್ದು ಶ್ಯಾಮವರ್ಣಕ್ಕಿದ್ದರೆ ತ್ರಿವಿಕ್ರಮಮೂರ್ತಿಯು

೩೯. ದ್ವಾರಕೆಯಲ್ಲಿರುವ ಗದಾಧಾರಸಾಲಗ್ರಾಮಕ್ಕೆ ನಮಸ್ಕಾರವು. ಗದಾಧಾರಿಯಾದ ಸುದರ್ಶನವು ಒಂದಕ್ಕೆ ಲಕ್ಷದಷ್ಟು ಫಲವನ್ನು ಕೊಡುತ್ತದೆ.

೪೧-೪೨. ಮೇಲೆ ಹೇಳಿದ ವಿಶೇಷ ಲಕ್ಷಣಗಳಿಲ್ಲದೆ ಬರಿಯ ಚಕ್ರಮಾತ್ರವಿದ್ದರೆ ಈ ರೀತಿಯ ಹೆಸರುಗಳೆಂದು ತಿಳಿಯಬೇಕು. ಎರಡು ಚಕ್ರವಿದ್ದರೆ ಲಕ್ಷ್ಮೀನಾರಾಯಣ. ಮೂರಿದ್ದರೆ ತ್ರಿವಿಕ್ರಮ. ನಾಲ್ಕಿದ್ದರೆ ಚತುರ್ವ್ಯೂಹ. ಐದಿದ್ದರೆ ವಾಸುದೇವನು. ಆರಿದ್ದರೆ ಪ್ರದ್ಯುಮ್ನನು. ಏಳು ಚಕ್ರವಿದ್ದರೆ ಸಂಕರ್ಷಣನು. ಎಂಟಿದ್ದರೆ ಪುರುಷೋತ್ತಮನು. ಒಂಭತ್ತಿದ್ದರೆ ನವವ್ಯೂಹವು ಹತ್ತಿದ್ದರೆ ದಶಾವತಾರಮೂರ್ತಿಯು. ಹನ್ನೊಂದಿದ್ದರೆ ಅನಿರುದ್ಧಮೂರ್ತಿಯು. ಹನ್ನೆರಡಿದ್ದರೆ ದ್ವಾದಶಾತ್ಮನು. ಇದಕ್ಕಿಂತಲೂ ಮೇಲೆ ಎಷ್ಟೆಷ್ಟು ಚಕ್ರಗಳಿದ್ದರೂ ಅನಂತಮೂರ್ತಿಯು.

೪೩-೪೫. ಇಲ್ಲಿ ಹೇಳತಕ್ಕವು ಪ್ರತಿಮೆಯ ವಿಚಾರಗಳು. ನಾಲ್ಕು ಮುಖಗಳಿದ್ದು ಕೈಗಳಲ್ಲಿ ದಂಡ, ಕಮಂಡಲು, ಜಪಮಾಲೆಗಳಿದ್ದರೆ ಬ್ರಹ್ಮನು. ಐದು ಮುಖಗಳಿದ್ದರೆ ಮಹೇಶ್ವರಮೂರ್ತಿಯು. ಹತ್ತು ತೋಳುಗಳಿದ್ದು ವೃಷಧ್ವಜನಾಗಿ

ಯಥಾಯುಧಸ್ತಥಾ ಗೌರೀ ಚಂಡಿಕಾ ಚ ಸರಸ್ವತೀ ।
ಮಹಾಲಕ್ಷ್ಮೀರ್ಮಾತರಶ್ಚ ಪದ್ಮಹಸ್ತೋ ದಿವಾಕರಃ ॥ ೪೪ ॥

ಗಜಾಸ್ಯಶ್ಚ ಗಜಸ್ಕಂಧೋ ಷಣ್ಮುಖೋನೇಕಧಾ ಗಣಾಃ ।
ಏತೇ ಸ್ಥಿತಾ ಸ್ಥಾಪಿತಾಸ್ಸ್ಯುಃ ಪ್ರಾಸಾದೇವಾಥ ಪೂಜಿತಾಃ ।
ಧರ್ಮಾರ್ಥ-ಕಾಮಮೋಕ್ಷಾದ್ಯಾಃ ಪ್ರಾಪ್ಯಸ್ತೇ ಪುರುಷೇಣ ಚ ॥ ೪೫ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಾಲಗ್ರಾಮನಿರ್ಣಯೋ
ನಾಮ ಅಷ್ಟಸಪ್ತತಿತಮೋಧ್ಯಾಯಃ

---

ಬೇಕು. ಆಯುಧಗಳನ್ನು ನೋಡಿ ಗೌರಿ, ಚಂಡಿಕೆ, ಸರಸ್ವತಿ, ಲಕ್ಷ್ಮಿ, ಷಣ್ಮುಖ ಇವರುಗಳ ಆಕೃತಿಗಳನ್ನು ತಿಳಿಯಬೇಕು. ದಿವಾಕರನಿಗೆ ಕೈಯ್ಯಲ್ಲಿ ಕಮಲವಿರುವುದು. ಗಜಾಸ್ಯ, ಗಜಸ್ಕಂಧ, ಷಣ್ಮುಖನೆಂದು ಆ ಪದ್ಮವು ಅನ್ವರ್ಥವಾಗಿರಬೇಕು. ಈ ರೀತಿ ಗಣಗಳು ಅನೇಕವಾಗಿವೆ. ಇವುಗಳನ್ನು ದೇವಸ್ಥಾನದಲ್ಲಿ ಸ್ಥಾಪಿಸಿ ಪೂಜಿಸಿದರೆ ಮನುಷ್ಯನಿಂದ ಧರ್ಮ, ಅರ್ಥ, ಕಾಮ, ಮೋಕ್ಷ ಮೊದಲಾದುವುಗಳು ಹೊಂದಲ್ಪಡುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಸಾಲಗ್ರಾಮನಿರ್ಣಯವೆಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

— x —

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಏಕೋನಾಶೀತಿತಮೋऽಧ್ಯಾಯಃ ॥



॥ ಈಶ್ವರ ಉವಾಚ ॥

ಸಾಲಿಗ್ರಾಮೇ ಮಣೌ ಯಂತ್ರೇ ಮಂಡಲೇ ಪ್ರತಿಮಾಸು ಚ ।
ನಿತ್ಯಂ ತು ಶ್ರೀಹರೇಃ ಪೂಜಾ ಕೇವಲೇ ಭವನೇನ ತು ॥ ೧ ॥

ಗಂಡಕ್ಯಾಮೇಕದೇಶೇತು ಸಾಲಗ್ರಾಮಸ್ಥಲಂ ಮಹತ್ ।
ಪಾಷಾಣಂ ತದ್ಭವಂ ಯತ್ತು ಸಾಲಗ್ರಾಮ ಇತಿ ಸ್ಥಿತಂ ॥ ೨ ॥

ಸಾಲಗ್ರಾಮಶಿಲಾಸ್ಪರ್ಶಾತ್ಕೋಟಿಜನ್ಮಾಘನಾಶನಂ ।
ಕಿಂ ಪುನಃ ಪೂಜನಂ ತತ್ರ ಹರೇಸ್ಸಾನ್ನಿಧ್ಯಕಾರಣಂ ॥ ೩ ॥

---

## ಎಪ್ಪತ್ತೊಂಭತ್ತನೆಯ ಅಧ್ಯಾಯವು

೧. ಈಶ್ವರನು ಹೇಳಿದನು- ಹರಿಪೂಜೆಯನ್ನು ಮಾಡಬೇಕಾದರೆ ಸಾಲಿಗ್ರಾಮ, ಮಣಿ, ಯಂತ್ರ, ಮಂಡಲ, ಪ್ರತಿಮೆ ಇವುಗಳಲ್ಲಿ ಯಾವುದಾದರೂ ಒಂದು ಇರಬೇಕು. ಇವೊಂದೂ ಇಲ್ಲದ ಜಾಗದಲ್ಲಿ ಪೂಜೆಮಾಡಬಾರದು.

೨. ಗಂಡಕೀ ನದಿಯ ಒಂದು ಜಾಗದಲ್ಲಿ ದೊಡ್ಡದಾದ ಸಾಲಗ್ರಾಮದ ಸ್ಥಳವಿದೆ. ಅಲ್ಲಿ ಹುಟ್ಟಿದ ಕಲ್ಲನ್ನೇ ಸಾಲಗ್ರಾಮವೆಂದು ತಿಳಿಯಬೇಕು.

೩. ಸಾಲಿಗ್ರಾಮದ ಶಿಲೆಯನ್ನು ಮುಟ್ಟಿದರೇನೇ ಕೋಟಿ ಜನ್ಮದ ಪಾಪವು ನಾಶವಾಗುತ್ತದೆ. ಹರಿಸನ್ನಿಧಿಯಿರುವ ಅದರ ಪೂಜೆಯಲ್ಲಿ ಹೇಳಬೇಕಾದುದೇ ಇಲ್ಲ.

ಶಾಲಗ್ರಾಮಸ್ಯೈಕಯಜನಾಚ್ಛತಲಿಂಗಫಲಂ ಲಭೇತ್ ।
ಬಹುಭಿರ್ಜನ್ಮಭಿಃ ಪುಣ್ಯೈಃ ಯದಿ ಕೃಷ್ಣಶಿಲಾಂ ಲಭೇತ್ ॥ ೪ ॥

ಗೋಷ್ಪದೇನ ಚ ಚಿಹ್ನೇನ ತೇನ ಸಮಾಪ್ಯತೇ ಜನುಃ ।
ಆದೌ ಶಿಲಾಂ ಪರೀಕ್ಷೇತ ಸ್ನಿಗ್ಧಾಂ ಶ್ರೇಷ್ಠಾಂ ಚ ಮೋಚಕಾಂ ॥ ೫ ॥

ಅಕೃಷ್ಣಾ ಮಧ್ಯಮಾ ಪ್ರೋಕ್ತಾ ಮಿಶ್ರಾಮಿಶ್ರಫಲಪ್ರದಾ ।
ಸದಾ ಕಾಷ್ಠಸ್ಥಿತೋ ವಹ್ನಿಃ ಮಥನೇನ ಪ್ರಕಾಶಯೇತ್ ॥ ೬ ॥

ಯಥಾ ತಥಾ ಹರಿರ್ವ್ಯಾಪೀ ಶಾಲಗ್ರಾಮೇ ಪ್ರಕಾಶ್ಯತೇ ।
ಪ್ರತ್ಯಹಂ ದ್ವಾದಶಶಿಲಾಃ ಸಾಲಗ್ರಾಮಸ್ಯ ಯೋರ್ಚಯೇತ್ ॥ ೭ ॥

ದ್ವಾರವತ್ಯಾಃ ಶಿಲಾಯುಕ್ತಾಃ ಸ ವೈಕುಂಠೇ ಮಹೀಯತೇ ।
ಶಾಲಗ್ರಾಮಶಿಲಾಯಾಂ ತು ಗಹ್ವರಂ ಲಕ್ಷ್ಯತೇ ನರಃ ॥ ೮ ॥

ಪಿತರಸ್ತಸ್ಯ ತಿಷ್ಠಂತಿ ತೃಪ್ತಾಃ ಕಲ್ಪಾಂತಕಂ ದಿವಿ ।
ವೈಕುಂಠಭವನಂ ತತ್ರ ಯತ್ರ ದ್ವಾರವತೀ ಶಿಲಾ ॥ ೯ ॥

---

೪. ಸಾಲಗ್ರಾಮ ಒಂದನ್ನು ಪೂಜಿಸಿದರೆ ನೂರು ಲಿಂಗಗಳನ್ನು ಪೂಜಿಸಿದ ಫಲ ಬರುತ್ತದೆ. ಅದರಲ್ಲಿಯೂ ಕೃಷ್ಣನ ಲೀಲೆಯು ಸಿಕ್ಕಬೇಕಾದರೆ ಬಹು ಜನ್ಮಗಳಿಂದ ಪುಣ್ಯಮಾಡಿರಬೇಕು

೫-೧೦. ಗೋವಿನ ಪಾದದ ಚಿಹ್ನೆಯಿರುವ ಸಾಲಗ್ರಾಮವನ್ನು ಪೂಜಿಸಿದರೆ ಪುನರ್ಜನ್ಮವಿಲ್ಲ. ಮೊದಲು ಸಾಲಗ್ರಾಮ ಶಿಲೆಯನ್ನು ಪರೀಕ್ಷೆ ಮಾಡಬೇಕು. ಅದರಲ್ಲಿ ನುಣ್ಣಗೂ ಕಪ್ಪುಬಣ್ಣಕ್ಕೂ ಇರುವುದು ಶ್ರೇಷ್ಠವು ಕಪ್ಪುಬಣ್ಣವಿಲ್ಲದಿರುವುದು ಮಧ್ಯಮವು. ಮಿಶ್ರವಾಗಿರುವ ಬಣ್ಣವುಳ್ಳದ್ದು ಮಿಶ್ರಫಲವನ್ನು ಕೊಡುತ್ತದೆ. ಮರದಲ್ಲಿರುವ ಬೆಂಕಿಯು ಕಡೆತದಿಂದ ಕಣ್ಣಿಗೆ ಕಾಣುವಂತೆ ಹರಿಯು ಸಾಲಗ್ರಾಮದ ಪೂಜೆಯಿಂದ ಪ್ರಕಾಶಿಸುತ್ತಾನೆ. ಮನುಷ್ಯನು ಪ್ರತಿದಿನವೂ ಹನ್ನೆರಡು ಸಾಲಗ್ರಾಮಗಳನ್ನು ಪೂಜಿಸಬೇಕು. ಅದರಲ್ಲಿ ದ್ವಾರವತಿಯ ಸಾಲಗ್ರಾಮವೂ ಇರಬೇಕು. ಹಾಗಿದ್ದರೆ ಅವನು ವೈಕುಂಠವನ್ನು ಹೊಂದುತ್ತಾನೆ. ಸಾಲಗ್ರಾಮಶಿಲೆಯಲ್ಲಿ ಪೂಜೆ ಮಾಡಿ ರಂಧ್ರಬಿದ್ದರೆ ಅವನ ಪಿತೃಗಳು ತೃಪ್ತರಾಗಿ ಕಲ್ಪಾಂತದವರೆಗೂ ಸ್ವರ್ಗದಲ್ಲಿರುತ್ತಾರೆ. ದ್ವಾರಕೆಯ ಸಾಲಗ್ರಾಮವಿರುವಲ್ಲಿ ವೈಕುಂಠವಿದೆಯೆಂದು ತಿಳಿಯಬೇಕು ಅಲ್ಲಿ ಸತ್ತರೆ ವೈಕುಂಠಕ್ಕೆ ಹೋಗುತ್ತಾನೆ. ಅದಿರುವ ಸ್ಥಳದ ಮೂರು ಯೋಜನಗಳ

ಮೃತೋ ವಿಷ್ಣುಪುರಂ ಯಾತಿ ತತ್ತೀರ್ಥಂ ಯೋಜನತ್ರಯಂ ।
ಜಪಃ ಪೂಜಾ ಚ ಹೋಮಶ್ಚ ಸರ್ವಂ ಕೋಟಿಗುಣಂಭವೇತ್ ॥ ೧೦ ॥

ಮನಸ್ಕಾಮಸಮಾಭೀಷ್ಟಂ ಕ್ರೋಶಮಾತ್ರಂ ನ ಸಂಶಯಃ ।
ಕೀಟಕೋಽಪಿ ಮೃತೋ ಯಾತಿ ವೈಕುಂಠಭವನಂ ಯತಃ ॥ ೧೧ ॥

ಸಾಲಗ್ರಾಮಶಿಲಾಯಾಂ ಯೋ ಮೂಲ್ಯಮುದ್ಘಾಟಯೇನ್ನರಃ ।
ವಿಕ್ರೇತಾಚಾನುಮಂತಾ ಚ ಯಃ ಪರೀಕ್ಷಾನುಮೋದಕಃ ॥ ೧೨ ॥

ಸರ್ವೇ ತೇ ನರಕಂ ಯಾಂತಿ ಯಾವತ್ಪೂರ್ವಸ್ಯ ಸಂಪ್ಲವಃ ।
ಅತಸ್ತದ್ವರ್ಜಯೇದ್ದೇವಿ ಚಕ್ರಕ್ರಯಣವಿಕ್ರಯಂ ॥ ೧೩ ॥

ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರಕೋದ್ಭವಃ ।
ಉಭಯೋಸ್ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ॥ ೧೪ ॥

ದ್ವಾರಕೋದ್ಭವಚಕ್ರಾಢ್ಯೋ ಬಹುಚಕ್ರೇಣ ಚಿಹ್ನಿತಃ ।
ಚಕ್ರಾಸನಶಿಲಾಕಾರಶ್ಚಿತ್ಸ್ವರೂಪೋ ನಿರಂಜನಃ ॥ ೧೫ ॥

---

ಸುತ್ತಳತೆಯುಳ್ಳ ಸ್ಥಳವು ತೀರ್ಥವೆನಿಸಿಕೊಳ್ಳುತ್ತದೆ. ಅದಿರುವ ಜಾಗದಲ್ಲಿ ಮಾಡಿದ ಜಪ, ಪೂಜೆ, ಹೋಮ ಮುಂತಾದುವು ಒಂದಕ್ಕೆ ಕೋಟಿಯಷ್ಟು ಫಲಕೊಡುತ್ತದೆ.

೧೧. ಅದರ ಒಂದು ಕ್ರೋಶದಗಲದಲ್ಲಿ ಇಷ್ಟವಾದುವು ಲಭಿಸುತ್ತವೆ. ಸಂಶಯ ವಿಲ್ಲ. ಅಷ್ಟಗಲದಲ್ಲಿ ಸತ್ತ ಕೀಟವೂ ಕೂಡ ವೈಕುಂಠವನ್ನು ಹೊಂದುತ್ತದೆ.

೧೨-೧೩. ಸಾಲಗ್ರಾಮಶಿಲೆಗೆ ಯಾರು ಕ್ರಯವನ್ನು ಹೇಳುತ್ತಾರೆಯೋ ಯಾರು ಮಾರುತ್ತಾರೆಯೋ, ಯಾರು ಒಪ್ಪುತ್ತಾರೆಯೋ, ಯಾರು ಪರೀಕ್ಷಿಸಿ ಒಪ್ಪುತ್ತಾರೆಯೋ, ಅವರೆಲ್ಲರೂ ಪ್ರಳಯವಾಗುವವರೆಗೂ ನರಕವನ್ನು ಹೊಂದುತ್ತಾರೆ. ಆದ್ದರಿಂದ ಯಾರೂ ಕೂಡ ಸಾಲಗ್ರಾಮವನ್ನು ಮಾರಬಾರದು

೧೪. ಸಾಲಗ್ರಾಮವೂ, ದ್ವಾರಕೆಯ ಶಿಲೆಯದೇವರೂ ಸಿಕ್ಕಿ ಎರಡನ್ನೂ ಒಟ್ಟಿಗೆ ಪೂಜೆಮಾಡಿದರೆ ಆಗ ಖಂಡಿತ ಮುಕ್ತಿಯು ಸಿಕ್ಕುತ್ತದೆ ಸಂಶಯವಿಲ್ಲವು.

೧೫. ದ್ವಾರಕೆಯಲ್ಲಿ ಹುಟ್ಟುವ ಸಾಲಗ್ರಾಮದಲ್ಲಿ ಬಹು ಚಕ್ರಗಳಿರುತ್ತವೆ. ಆ ಚಕ್ರಾಸನದಲ್ಲಿ ಶಿಲಾಕಾರದ ಸ್ವಾಮಿಯು ಚಿತ್ಸ್ವರೂಪನು.

ನಮೋಽಸ್ತ್ವೋಂಕಾರರೂಪಾಯ ಸದಾನಂದಸ್ವರೂಪಿಣೇ ।
ಶಾಲಗ್ರಾಮಮಹಾಭಾಗ ಭಕ್ತಸ್ಯಾನುಗ್ರಹಂಕುರು ॥ ೧೬ ॥

ತವಾನುಗ್ರಹಕಾಮಸ್ಯ ಋಣಗ್ರಸ್ತಸ್ಯ ಮೇ ಪ್ರಭೋ ।
ಅತಃಪರಂ ಪ್ರವಕ್ಷ್ಯಾಮಿ ತಿಲಕಸ್ಯ ವಿಧಿಂ ಮುದಾ ॥ ೧೭ ॥

ಯತ್ಕೃತ್ವಾ ಮಾನವಾಸ್ಸರ್ವೇ ವಿಷ್ಣುಸಾರೂಪ್ಯಮಾಪ್ನುಯುಃ ।
ಲಲಾಟೇ ಕೇಶವಂ ವಿಂದ್ಯಾತ್ಕಂಠೇ ಶ್ರೀಪುರುಷೋತ್ತಮಂ ॥ ೧೮ ॥

ನಾಭೌ ನರಾಯಣಂ ದೇವಂ ವೈಕುಂಠಂ ಹೃದಯೇ ತಥಾ ।
ದಾಮೋದರಂ ವಾಮಪಾರ್ಶ್ವೇ ದಕ್ಷಿಣೇ ಚ ತ್ರಿವಿಕ್ರಮಂ ॥ ೧೯ ॥

ಮೂರ್ಧ್ನಿಚೈವ ಹೃಷೀಕೇಶಂ ಪದ್ಮನಾಭಂ ಚ ಪೃಷ್ಠತಃ ।
ಕರ್ಣಯೋರ್ಯಮುನಾಂಗಂಗಾಂ ಬಾಹ್ವೋಃ ಕೃಷ್ಣಂ ಹರಿಂತಥಾ ॥ ೨೦ ॥

ಯಥಾಸ್ಥಾನೇಷು ತುಷ್ಯಂತಿ ದೇವತಾ ದ್ವಾದಶಸ್ಮೃತಾಃ ।
ದ್ವಾದಶೈತಾನಿ ನಾಮಾನಿ ಕರ್ತವ್ಯೇ ತಿಲಕೇ ಪಠೇತ್ ॥ ೨೧ ॥

---

೧೬. ಓಂಕಾರರೂಪನಾದ ಸದಾನಂದ ರೂಪಿಯಾದ ಸಾಲಗ್ರಾಮವೇ ನಿನಗೆ ನಮಸ್ಕಾರವು. ಭಕ್ತರಿಗೆ ಅನುಗ್ರಹಿಸು.

೧೭-. ಋಣಬಾಧೆಗೆ ಸಿಕ್ಕಿ ನಿನ್ನ ಅನುಗ್ರಹವನ್ನಪೇಕ್ಷಿಸುವ ನನಗೆ ಅನುಗ್ರಹಿಸು. ಇನ್ನು ಮೇಲೆ ತಿಲಕವನ್ನಿಟ್ಟುಕೊಳ್ಳುವ ವಿಧಿಯುನ್ನು ಹೇಳುತ್ತೇನೆ.

೧೮-೨೦. ಹಣೆಯಲ್ಲಿ ಕೇಶವನನ್ನೂ, ಕತ್ತಿನಲ್ಲಿ ಶ್ರೀಪುರುಷೋತ್ತಮನನ್ನೂ, ಹೊಕ್ಕಳಿನಲ್ಲಿ ನಾರಾಯಣನನ್ನೂ, ಹೃದಯದಲ್ಲಿ ವೈಕುಂಠನನ್ನೂ, ಎಡಪಾರ್ಶ್ವದಲ್ಲಿ ದಾಮೋದರನನ್ನೂ, ಬಲಪಾರ್ಶ್ವದಲ್ಲಿ ತಿವಿಕ್ರಮನನ್ನೂ, ತಲೆಯಲ್ಲಿ ಹೃಷೀಕೇಶನನ್ನೂ ಪೃಷ್ಠಪ್ರದೇಶದಲ್ಲಿ ಪದ್ಮನಾಭನನ್ನೂ, ಕಿವಿಗಳಲ್ಲಿ ಯಮುನೆ ಗಂಗೆಗಳನ್ನೂ, ಬಾಹುಗಳಲ್ಲಿ ಕೃಷ್ಣಹರಿಗಳನ್ನೂ ಧ್ಯಾನಿಸಬೇಕು

೨೧. ಈ ಸ್ಥಾನಗಳಲ್ಲಿ ಆಯಾಯಾ ದೇವತೆಗಳನ್ನು ಸ್ಮರಿಸಿದರೆ ಆಯಾ ದೇವತೆಗಳು ತುಷ್ಟರಾಗುತ್ತಾರೆ. ನಾವು ಇಡುವ ತಿಲಕದಲ್ಲಿ ಅವರ ಹೆಸರನ್ನು ಹೇಳುತ್ತಾ ಇಟ್ಟುಕೊಳ್ಳಬೇಕು

ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಂ ಸ ಗಚ್ಛತಿ ।
ಊರ್ಧ್ವಪುಂಡ್ರಮೂರ್ಧ್ವರೇಖಂ ಲಲಾಟೇ ಯಸ್ಯ ದೃಶ್ಯತೇ ॥ ೨೨ ॥

ಚಂಡಾಲೋಽಪಿ ಸ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ।
ಯಸ್ಯೋರ್ಧ್ವಪುಂಡ್ರಂ ದೃಶ್ಯೇತ ಲಲಾಟೇ ನ ನರಸ್ಯ ಹಿ । ॥ ೨೩ ॥

ತದ್ದರ್ಶನಂ ನ ಕರ್ತವ್ಯಂ ದೃಷ್ಟ್ವಾ ಸೂರ್ಯಂ ನಿರೀಕ್ಷಯೇತ್ ।
ತ್ರಿಪುಂಡ್ರಂ ಯಸ್ಯ ವಿಪ್ರಸ್ಯ ಊರ್ಧ್ವಪುಂಡ್ರಂ ನ ದೃಶ್ಯತೇ ॥ ೨೪ ॥

ತಂ ದೃಷ್ಟ್ವಾಪ್ಯಥವಾ ಸ್ಪೃಷ್ಟ್ವಾ ಸಚೈಲಂ ಸ್ನಾನಮಾಚರೇತ್ ।
ಸಾಂತರಾಳಂ ಪ್ರಕರ್ತವ್ಯಂ ಪುಂಡ್ರಂ ಹರಿಪದಾಕೃತಿ ॥ ೨೫ ॥

ನಿರಂತರಾಳಂ ಯಃ ಕುರ್ಯಾದೂರ್ಧ್ವಪುಂಡ್ರಂ ದ್ವಿಜಾಧಮಃ ।
ಲಲಾಟಸ್ತಸ್ಯ ಸತತಂ ಶುನಃ ಪಾದೌ ನ ಸಂಶಯಃ ॥ ೨೬ ॥

ನಾಸಾದಿಕೇಶಪರ್ಯಂತಮೂರ್ಧ್ವಪುಂಡ್ರಂ ಸುಶೋಭನಂ ।
ಮಧ್ಯೇ ಛಿದ್ರಸಮಾಯುಕ್ತಂ ತಂ ವಿದ್ಯಾದ್ಧರಿಮಂದಿರಂ ॥ ೨೭ ॥

---

೨೨-೨೫. ಹೀಗೆ ಮಾಡಿದರೆ ಎಲ್ಲಾ ಪಾಪಗಳೂ ಹೋಗಿ ಶುದ್ಧವಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ. ಯಾವನ ಹಣೆಯಲ್ಲಿ ನಾಮವಾಗಲಿ ವಿಭೂತಿಯಾಗಲೀ ಕಾಣುತ್ತದೆಯೋ ಅವನು ಚಂಡಾಲನಾದರೂ ಶುದ್ಧನು ಪೂಜ್ಯನು. ಸಂಶಯವಿಲ್ಲ. ಯಾವನ ಹಣೆಯಲ್ಲಿ ಊರ್ಧ್ವಪುಂಡ್ರಾದಿಗಳು ಕಾಣುವುದಿಲ್ಲವೋ ಅವನ ದರ್ಶನವನ್ನು ಮಾಡಬಾರದು. ಅವನನ್ನು ನೋಡಿದರೆ ಸೂರ್ಯನನ್ನು ನೋಡಬೇಕು. ಹಣೆಯಲ್ಲಿ ತ್ರಿಪುಂಡವಾಗಲಿ ಊರ್ಧ್ವಪುಂಡ್ರವಾಗಲಿ ಕಾಣದಿದ್ದರೆ ಆ ಬ್ರಾಹ್ಮಣನನ್ನು ನೋಡಿದರೂ ಮುಟ್ಟಿದರೂ ಸಚೇಲಸ್ನಾನವನ್ನು ಮಾಡಬೇಕು. ತ್ರಿಪುಂಡವನ್ನಿಡುವಾಗ ಒಂದಕ್ಕೊಂದಕ್ಕೆ ಬಿಟ್ಟು ಹರಿಯ ಹೆಜ್ಜೆಯಂತೆ ಮಾಡಬೇಕು.

೨೬. ಊರ್ಧ್ವಪುಂಡವನ್ನು ಜಾಗಬಿಡದೆ ಒಂದಾಗಿ ಕೂಡಿಸಿದ್ದರೆ ಅವನ ಹಣೆಯು ನಾಯಿಯ ಕಾಲುಗಳೆಂದು ತಿಳಿಯಬೇಕು.

೨೭. ಮೂಗಿನಿಂದ ಮೊದಲುಮಾಡಿ ಕೂದಲು ಸಿಕ್ಕುವವರೆಗೂ ಪುಂಡ್ರವನ್ನಿಡಬೇಕು. ಮಧ್ಯದಲ್ಲಿ ತೂತುಗಳಿರುವಂತಿರಬೇಕು. ಹಾಗಿದ್ದರೆ ಅದು ಹರಿಯ ಮಂದಿರವು.

ವಾಮಭಾಗೇ ಸ್ಥಿತೋ ಬ್ರಹ್ಮಾ ದಕ್ಷಿಣೇತು ಸದಾಶಿವಃ ।
ಮಧ್ಯೇ ವಿಷ್ಣುಂ ವಿಜಾನೀಯಾತ್ತಸ್ಮಾನ್ಮಧ್ಯಂ ನ ಲೇಪಯೇತ್ ॥ ೨೮ ॥

ವೀಕ್ಷ್ಯಾದರ್ಶೇ ಜಲೇ ವಾಪಿ ಯೋ ವಿದಧ್ಯಾತ್ಪ್ರಯತ್ನತಃ ।
ಊರ್ಧ್ವಪುಂಡ್ರಂ ಮಹಾಭಾಗಃ ಸ ಯಾತಿ ಪರಮಾಂ ಗತಿಂ ॥ ೨೯ ॥

ಅಗ್ನಿರಾಪಶ್ಚ ವೇದಾಶ್ಚ ಚಂದ್ರಾದಿತ್ಯೌ ತಥಾನಿಲಃ ।
ವಿಪ್ರಾಣಾಂ ನಿತ್ಯಮೇತೇ ಹಿ ಕರ್ಣೇ ತಿಷ್ಠಂತಿ ದಕ್ಷಿಣೇ ॥ ೩೦ ॥

ಗಂಗಾ ಚ ದಕ್ಷಿಣೇ ಶ್ರೋತ್ರೇ ನಾಸಿಕಾಯಾಂ ಹುತಾಶನಃ ।
ಉಭಯೋರಪಿ ಸಂಸ್ಪರ್ಶಾತ್ತತ್ಕ್ಷಣಾದೇವ ಶುಧ್ಯತಿ ॥ ೩೧ ॥

ಕೃತ್ವಾ ವೈ ಚೋದಕಂ ಶಂಖೇ ವೈಷ್ಣವಾನಾಂ ಮಹಾತ್ಮನಾಂ ।
ತುಳಸೀಮಿಶ್ರಿತಂ ದದ್ಯಾತ್ಪಿಬೇನ್ಮೂರ್ಧ್ನಾಭಿವಂದಯೇತ್ ॥ ೩೨ ॥

ಸ್ವಾಶ್ರಿಯಾತ್ಪ್ರೋಕ್ಷಯೇದ್ದೇಹಂ ಪುತ್ರಮಿತ್ರಪರಿಗ್ರಹಂ ।
ವಿಷ್ಣೋಃ ಪಾದೋದಕಂ ಪೀತಂ ಕೋಟಿಜನ್ಮಾಘನಾಶನಂ ॥ ೩೩ ॥

---

೨೮. ಎಡಪಾರ್ಶ್ವದಲ್ಲಿ ಬ್ರಹ್ಮನೂ, ಬಲಪಾರ್ಶ್ವದಲ್ಲಿ ಸದಾಶಿವನೂ, ಮಧ್ಯದಲ್ಲಿ ವಿಷ್ಣುವೂ ಇರುವರು. ಆದ್ದರಿಂದ ಮಧ್ಯಕ್ಕೆ ಲೇಪಿಸಕೂಡದು.

೨೯. ಕನ್ನಡಿಯಲ್ಲಾಗಲೀ, ನೀರಿನಲ್ಲಾಗಲಿ ನೋಡಿಕೊಂಡು ಊರ್ಧ್ವಪುಂಡವನ್ನಿಟ್ಟುಕೊಳ್ಳಬೇಕು. ಹಾಗಿಟ್ಟುಕೊಂಡರೆ ಉತ್ತಮಗತಿ ಹೊಂದುತ್ತಾನೆ.

೩೦. ಅಗ್ನಿ, ನೀರು, ವೇದಗಳು, ಚಂದ್ರಾದಿತ್ಯರು, ವಾಯು ಇವರು ಬ್ರಾಹ್ಮಣರ ಬಲಗಿವಿಯಲ್ಲಿ ಯಾವಾಗಲೂ ಇರುತ್ತಾರೆ.

೩೧. ಬಲಗಿವಿಯಲ್ಲಿ ಗಂಗೆಯೂ, ಮೂಗಿನಲ್ಲಿ ಅಗ್ನಿಯೂ ಇರುತ್ತಾರೆ. ಈ ಇಬ್ಬರನ್ನೂ ಮುಟ್ಟಿದರೆ ಆ ಕ್ಷಣದಲ್ಲಿ ಶುದ್ಧನಾಗುತ್ತಾನೆ.

೩೨. ಶಂಖದಲ್ಲಿ ನೀರು ತುಂಬಿಕೊಂಡು ವೈಷ್ಣವರಿಗೆ ಅದನ್ನು ತುಳಸಿಯೊಡನೆ ಹಾಕಬೇಕು. ಮತ್ತು ತಾನೂ ಕುಡಿಯಬೇಕು ನಮಸ್ಕರಿಸಬೇಕು.

೩೩. ಪುತ್ರರು, ಮಿತ್ರರು, ಇತರ ತನ್ನವರೊಡನೆ ತೀರ್ಥವನ್ನು ತೆಗೆದುಕೊಂಡು ದೇಹವನ್ನು ಪ್ರೋಕ್ಷಿಸಿಕೊಳ್ಳಬೇಕು. ವಿಷ್ಣುವಿನ ಪಾದೋದಕವನ್ನು ತೆಗೆದುಕೊಂಡರೆ ಕೋಟಿಜನ್ಮದ ಪಾಪಗಳು ಹೋಗುತ್ತವೆ.

ತದೇವಾಷ್ಟಗುಣಂ ಪಾಪಂ ಭೂಮೌ ಬಿಂದುನಿಪಾತನಾತ್ ।
ಜಲಶಂಖಂ ಕರೇಕೃತ್ವಾ ಸ್ತುತ್ವಾ ನತ್ವಾ ಪ್ರದಕ್ಷಿಣಂ ॥ ೩೪ ॥

ಸತತಂ ಧಾರ್ಯತೇ ವಾರಿ ತೇನಾಪ್ತಂ ಜನ್ಮನಃ ಫಲಂ ।
ಶಂಖೋ ಯಸ್ಯ ಗೃಹೇ ನಾಸ್ತಿ ಘಂಟಾ ವಾ ಗರುಡಾನ್ವಿತಾ ॥ ೩೫ ॥

ಪುರತೋ ವಾಸುದೇವಸ್ಯ ನ ಸ ಭಾಗವತಃ ಕಲೌ ।
ಯಾನೈರ್ವಾ ಪಾದುಕಾಭಿರ್ವಾ ಯಾನಂ ಭಗವತೋ ಗೃಹೇ ॥ ೩೬ ॥

ದೇವೋತ್ಸವೇಷ್ವಸೇವಾ ಚ ತ್ವಪ್ರಣಾಮಸ್ತದಗ್ರತಃ ।
ಉಚ್ಛಿಷ್ಟೈಶ್ಚೈವಚಾಶೌಚೇ ಭಗವದ್ವಂದನಾದಿಕಂ ॥ ೩೭ ॥

ಏಕಹಸ್ತಪ್ರಣಾಮಶ್ಚ ತತ್ಪುರಸ್ತಾತ್ಪ್ರದಕ್ಷಿಣಂ ।
ಪಾದಪ್ರಸಾರಣಂ ಚಾಗ್ರೇ ತಥಾ ಪರ್ಯಂಕಸೇವನಂ ॥ ೩೮ ॥

ಶಯನಂ ಭಕ್ಷಣಂ ಚಾಪಿ ಮಿಥ್ಯಾಭಾಷಣಮೇವ ಚ ।
ಉಚ್ಚೈರ್ಭಾಷಾ ಮಿಥೋ ಜಲ್ಪೋ ರೋದನಾನಿ ಚ ವಿಗ್ರಹಃ ॥ ೩೯ ॥

---

೩೪. ಆ ತೀರ್ಥದ ಒಂದು ಬಿಂದುವು ನೆಲದಲ್ಲಿ ಬಿದ್ದರೆ ಎಂಟರಷ್ಟು ಪಾಪ ಬರುತ್ತದೆ.

೩೫. ನೀರಿನಿಂದ ತುಂಬಿದ ಶಂಖವನ್ನು ಕೈಯಲ್ಲಿಟ್ಟುಕೊಂಡು ಪ್ರದಕ್ಷಿಣೆಮಾಡಿ ಸ್ತೋತ್ರಮಾಡಿ ನಮಸ್ಕರಿಸಿ ಆ ನೀರನ್ನು ಧರಿಸಿಕೊಂಡಿದ್ದರೆ ಅವನ ಜನ್ಮವು ಸಫಲ.

೩೫. ದೇವರ ಮುಂದೆ ಶಂಖವೂ, ಗರುಡನಿಂದ ಕೂಡಿದ ಘಂಟೆಯೂ, ಇಲ್ಲದಿರುವವನ ಮನೆಯು ಕಲಿಯುಗದಲ್ಲಿ ಭಾಗವತನ ಮನೆಯಲ್ಲ. ಅವನೂ ಭಾಗವತನಲ್ಲ.

೩೬-೪೩. ದೇವರ ಮನೆಯಲ್ಲಿ ಯಾನದಿಂದಾಗಲಿ ಕುದುರೆಯಿಂದಾಗಲಿ ಸಂಚರಿಸುವುದು, ಉತ್ಸವ ಬಂದಾಗ ಸೇವೆಮಾಡದಿರುವುದು, ಅದರ ಮುಂದೆ ನಮಸ್ಕರಿಸದಿರುವುದು, ಎಂಜಲಿನಲ್ಲಿಯೂ ಅಶೌಚದಲ್ಲಿಯೂ ವಂದಿಸುವುದು, ಒಂದೇ ಕೈಯಲ್ಲಿ ಕೈಮುಗಿಯುವುದು, ಸ್ವಾಮಿಯ ಎದುರಿಗೆ ಪ್ರದಕ್ಷಿಣ ಮಾಡುವುದ, ಎದುರಿನಲ್ಲಿ ಕಾಲುನೀಡಿ ಕುಳಿತುಕೊಳ್ಳುವುದು, ಅವನೆದುರಿನಲ್ಲಿ ಮಂಚದ ಮೇಲೆ ಕುಳಿತಿರುವುದು, ಅವನೆದುರಿಗೆ ಮಲಗಿರುವುದು, ಊಟಮಾಡುವುದು, ಸುಳ್ಳು ಹೇಳುವುದು, ಗಟ್ಟಿಯಾಗಿ ಕೂಗಿಕೊಳ್ಳುವುದು, ಪಿಸುಮಾತಾಡಿಕೊಳ್ಳುವುದು, ಅಳುವುದು,

ನಿಗ್ರಹಾನುಗ್ರಹೌ ಚೈವ ಸ್ತ್ರೀಷು ಚ ಕ್ರೂರಭಾಷಣಂ ।
ಕಂಬಳಾವರಣಂ ಚೈವ ಪರನಿಂದಾ ಪರಸ್ತುತಿಃ ॥ ೪೦ ॥

ಅಶ್ಲೀಲಭಾಷಣಂ ಚೈವ ಹ್ಯಧೋ ವಾಯುವಿಮೋಕ್ಷಣಂ ।
ಶಕ್ತೌ ಗೌಣೋಪಚಾರಶ್ಚ ಹ್ಯನಿವೇದಿತಭಕ್ಷಣಂ ॥ ೪೧ ॥

ತತ್ತತ್ಕಾಲೋದ್ಭವಾನಾಂ ಚ ಫಲಾದೀನಾಮನರ್ಪಣಂ ।
ವಿನಿಯುಕ್ತಾವಶಿಷ್ಟಸ್ಯ ಪ್ರದಾನಂ ವ್ಯಂಜನಸ್ಯ ಯತ್ ॥ ೪೨ ॥

ಪೃಷ್ಟೀಕೃತ್ಯಾಶನಂ ಚೈವ ಪರನಿಂದಾ ಪರಸ್ತುತಿಃ ।
ಗುರೌ ಮೌನಂ ನಿಜಸ್ತೋತ್ರಂ ದೇವತಾನಿಂದನಂ ತಥಾ ।
ಅಪರಾಧಾಸ್ತಥಾ ವಿಷ್ಣೋಃ ದ್ವಾತ್ರಿಂಶತ್ಪರಿಕೀರ್ತಿತಾಃ ॥ ೪೩ ॥

ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।
ತವಾಹಮಿತಿ ಮಾಂ ಮತ್ವಾ ಕ್ಷಮಸ್ವ ಮಧುಸೂದನ ॥ ೪೪ ॥

ಇತಿ ಮಂತ್ರಂ ಸಮುಚ್ಚಾರ್ಯ ಪ್ರಣಮೇದ್ದಂಡವದ್ಭುವಿ ।
ಅಪರಾಧಸಹಸ್ರಾಣಿ ಕ್ಷಮತೇ ಸರ್ವದಾ ಹರಿಃ ॥ ೪೫ ॥

---

ಜಗಳವಾಡುವುದು, ಶಿಕ್ಷಿಸುವುದು, ಅನುಗ್ರಹಿಸುವುದು, ಹೆಂಗಸರಿಗೆ ಕಠಿಣವಾಗಿ ಮಾತಾಡುವುದು ಶಾಲನ್ನು ಹೊದೆದಿರುವುದು, ಪರನಿಂದೆ ಪರಸ್ತುತಿಗಳು, ಅಯೋಗ್ಯವಾದ ಮಾತನಾಡುವುದು, ಹೂಸುವುದು, ಮಾಡುವುದಕ್ಕೆ ಶಕ್ತಿಯಿದ್ದರೂ ಒಣವುಪಚಾರ ಹೇಳುವುದು, ಅವನಿಗೆ ನಿವೇದನ ಮಾಡದೆ ತಿನ್ನುವುದು, ತಿಂದ ಶೇಷವನ್ನು ಕೊಡುವುದು, ಜಂಭ ಹೇಳಿಕೊಳ್ಳುತ್ತಾ ಊಟಮಾಡುವುದು, ಗುರುವನ್ನು ಹೊಗಳದೆ ಮೌನವಾಗಿರುವುದು, ತನ್ನನ್ನು ಹೊಗಳಿಕೊಳ್ಳುವುದು, ದೇವರನ್ನು ನಿಂದಿಸುವುದು, ಈ ಮೂವತ್ತೆರಡೂ ವಿಷ್ಣುವಿಗೆ ಮಾಡಿದ ಅಪರಾಧಗಳಾಗುತ್ತವೆ.

೪೪. ನಾನು ನಿತ್ಯವೂ ಸಾವಿರಾರು ತಪ್ಪುಗಳನ್ನು ಮಾಡುತ್ತೇನೆ ನಾನು ನಿನ್ನ ಸೇವಕನೆಂದು ಅವೆಲ್ಲವನ್ನೂ ಕ್ಷಮಿಸು ಸ್ವಾಮಿ.

೪೫. ಈ ಮಂತ್ರವನ್ನು ಹೇಳುತ್ತಾ ದಂಡ ಪ್ರಣಾಮ ಮಾಡಿದರೆ ಆ ಅಪರಾಧಗಳಿನ್ನೆಲ್ಲಾ ಹರಿಯು ಕ್ಷಮಿಸುತ್ತಾನೆ.

ಸಾಯಂ ಪ್ರಾತರ್ದ್ವಿಜಾತೀನಾಂ ಶ್ರುತ್ಯುಕ್ತಮಶನಂ ತಥಾ ।
ವಿಷ್ಣುಭಕ್ತಾವಶಿಷ್ಟಸ್ಯ ದಿನಪಾಪಾತ್ಪ್ರಮುಚ್ಯತೇ ॥ ೪೬ ॥

ಅನ್ನಂ ಬ್ರಹ್ಮ ರಸೋ ವಿಷ್ಣುಃ ಖಾದಯನ್ಮಾಂ ಸಮುಚ್ಚರನ್ ।
ಏವಂ ಜ್ಞಾತ್ವಾ ತು ಯೋ ಭುಂಕ್ತೇ ಸೋನ್ನದೋಷೈರ್ನಲಿಪ್ಯತೇ ॥ ೪೭ ॥

ಆಲಾಬುಂ ವರ್ತುಲಾಕಾರಂ ಲಶುನಂ ಚ ಸವಲ್ಕಲಂ ।
ತಾಳಂ ಶುಕ್ಲಂ ಚ ವೃಂತಾಕಂ ನ ಖಾದೇದ್ವೈಷ್ಣವೋ ನರಃ ॥ ೪೮ ॥

ವಟಾಶ್ವತ್ಥಾರ್ಕಪತ್ರೇಷು ಕುಂಭೀ ತಿಂದುಕಪತ್ರಯೋಃ ।
ಕೋವಿದಾರೇ ಕದಂಬೇ ಚ ನ ಖಾದೇದ್ವೈಷ್ಣವೋ ನರಃ ॥ ೪೯ ॥

ಶ್ರಾವಣೇ ವರ್ಜಯೇಚ್ಛಾಕಂ ದಧಿ ಭಾದ್ರಪದಿ ತ್ಯಜೇತ್ ।
ದುಗ್ಧಂ ತು ಚಾಶ್ವಿನೇ ಮಾಸಿ ಕಾರ್ತಿಕೇ ಚಾಮಿಷಂ ತ್ಯಜೇತ್ ॥ ೫೦ ॥

ದಗ್ಧಮನ್ನಂ ತು ಜಂಬೀರಂ ಯದ್ವಿಷ್ಣೋರನಿವೇದಿತಂ ।
ಬೀಜಪೂರಂ ಚ ಶಾಕಂಚ ಪ್ರತ್ಯಕ್ಷಲವಣಂ ತಥಾ ॥ ೫೧ ॥

---

೪೬. ದ್ವಿಜರು ಬೆಳಗ್ಗೆ ಒಂದುಸಾರಿ ಸಾಯಂಕಾಲ ಒಂದುಸಾರಿ ಊಟಮಾಡ ಬೇಕೆಂದು ವೇದದಲ್ಲಿ ಹೇಳಿದೆ. ವಿಷ್ಣುಭಕ್ತನು ಊಟಮಾಡಿದ ಶೇಷವನ್ನು ಊಟ ಮಾಡಿದರೆ ಆ ದಿನದ ಪಾಪವು ಹೋಗುತ್ತದೆ.

೪೭. ಊಟಮಾಡುತ್ತಾ ಅನ್ನವು ಬ್ರಹ್ಮ, ರಸವು ವಿಷ್ಣು, ಎಂದು ಉಚ್ಚರಿಸಿ ಹಾಗೇ ತಿಳಿದುಕೊಂಡು ನನ್ನನ್ನು ಸ್ಮರಿಸುತ್ತಾ ಊಟಮಾಡಿದರೆ ಅವನಿಗೆ ಅನ್ನದೋಷ ಗಳು ಅಂಟುವುದಿಲ್ಲ.

೪೮. ದುಂಡಗಿರುವ ಸೋರೇಕಾಯಿ, ಹೊದ್ದಿಕೆ ಇರುವ ಬೆಳ್ಳುಳ್ಳಿ, ತಾಳಫಲ ಬಿಳಿಯ ಬದನೆಕಾಯಿ ಇವನ್ನು ವೈಷ್ಣವನು ತಿನ್ನಬಾರದು.

೪೯. ಆಲ, ಅರಳಿ, ಎಕ್ಕ, ತೇಗ, ತೂಬರು, ಕಂಚುವಾಳ, ಕಡಹದ ಮರ ಗಳ ಎಲೆಗಳಲ್ಲಿ ವೈಷ್ಣವನು ಊಟಮಾಡಬಾರದು.

೫೦ ಶ್ರಾವಣ ಮಾಸದಲ್ಲಿ ಶಾಕವನ್ನೂ ಭಾದ್ರಪದಮಾಸದಲ್ಲಿ ಮೊಸರನ್ನೂ ಆಶ್ವಯುಜ ಮಾಸದಲ್ಲಿ ಹಾಲನ್ನೂ ಕಾರ್ತಿಕದಲ್ಲಿ ಮಾಂಸವನ್ನೂ ಬಿಡಬೇಕು.

೫೧-೫೨. ಸೀಕಲು ಅನ್ನ, ಹುಳಿ, ವಿಷ್ಣುವಿಗೆ ನಿವೇದನ ಮಾಡದಿರುವ ಪದಾರ್ಥ, ಶೀಬೇಕಾಯಿ, ಮತ್ತು ಬೀಜದಿಂದ ತುಂಬಿರುವ ಕಾಯಿಪಲ್ಯಗಳು ತೊಂಡೆ

ಯದಿ ದೈವಾಚ್ಚ ಭುಂಜೀತ ತದಾ ತನ್ನಾಮಸಂಸ್ಮರೇತ್ ।
ಹೈಮಂತಿಕಂ ಸಿತಾಸ್ವಿನ್ನಂ ಧಾನ್ಯಂ ಗುಂದ್ರಾಸ್ತಿಲಾ ಯವಾಃ ॥ ೫೨ ॥

ಕಲಾಯ ಕಂಗು ನೀವಾರಾಃ ಶಾಕಂ ಚ ಹಿಲಮೋಚಿಕಾ ।
ಕಾಲಶಾಕಂ ಚ ವಾಸ್ತೂಕಂ ಮೂಲಕಂ ಕೇಮುಕೇತರಂ ॥ ೫೩ ॥

ಲವಣೇ ಸೈಂಧವಸಾಮುದ್ರೇ ಗವ್ಯೇ ಚ ದಧಿಸರ್ಪಿಷೀ ।
ಪಯೋನುದ್ಧೃತಸಾರಂ ಚ ಪನಸಾಮ್ರಹರೀತಕೀ ॥ ೫೪ ॥

ಪಿಪ್ಪಲೀ ಜೀರಕಂ ಚೈವ ನಾಗರಂಗಕತಿಂತಿಡೀ ।
ಕದಳೀ ಲವಣೀ ಧಾತ್ರೀ ಫಲಾನ್ಯಗುಡಮೈಕ್ಷವಂ ॥ ೫೫ ॥

ಅತೈಲಪಕ್ವಂ ಮುನಯೋ ಹವಿಷ್ಯಾನ್ನಂ ಪ್ರಚಕ್ಷತೇ ।
ತುಲಸೀ ಪತ್ರಪುಷ್ಪಾದ್ಯೈಃ ಮಾಲ್ಯಂ ವಹತಿ ಯೋ ನರಃ ॥ ೫೬ ॥

ಸೋಽಪಿ ವಿಷ್ಣುರ್ವಿಜಾನೀಯಾತ್ಸತ್ಯಂ ಸತ್ಯಂ ನ ಸಂಶಯಃ ।
ಧಾತ್ರೀವೃಕ್ಷಂ ಸಮಾರೋಪ್ಯ ವಿಷ್ಣುತುಲ್ಯೋ ಭವೇನ್ನರಃ ॥ ೫೭ ॥

---

ಕಾಯಿ, ಪ್ರತ್ಯಕ್ಷವಾಗಿ ಉಪ್ಪು, ಇವನ್ನು ತಿನ್ನಬಾರದು. ಒಂದು ವೇಳೆ ತಿನ್ನಬೇಕಾದರೆ ಆ ಸ್ವಾಮಿಯ ಹೆಸರನ್ನು ಉಚ್ಚಾರಮಾಡುತ್ತಾ ತಿನ್ನಬೇಕು

೫೩-೫೫ ಹೇಮಂತಋತುವಿನಲ್ಲಿ ಸುಟ್ಟಿದ ಪದಾರ್ಥಗಳು, ಸಕ್ಕರೆಯು ಜೋಗಿರುವ ಧಾನ್ಯ, ಹುರಿದ ಅಕಿ, ಎಳ್ಳು, ನೆಲಗಡಲೆ, ಕಂಗೆಂಬಗೆಡ್ಡೆ, ಶೂಕಧಾನ್ಯ, ಹಾವುಚಿ ಬಳ್ಳಿ, ಕೊಮ್ಮೆಬಳ್ಳಿ, ಚಕ್ರವರ್ತಿ ಸೊಪ್ಪು (ಚಕ್ಕೋತನಸೊಪ್ಪು) ಬಳಯುದಲ್ಲಿದ ಮೂಲಂಗಿಗಳು, ಸೈಂಧವ ಲವಣ, ಸಮುದ್ರ ಲವಣಗಳು, ಗೋವಿನ ಮೊಸರು ತುಪ್ಪ, ಬೆಣ್ಣೆತೆಗೆಯದಿರುವ ಹಾಲು, ಹಲಸಿನ ಹಣ್ಣು, ಮಾವಿನ ಹಣ್ಣು, ಅಳಲೆ ಹಿಪ್ಪಲಿ, ಜೀರಿಗೆ, ಹೇರಳೆ, ಹುಣಿಸೆ, ಬಾಳೆ, ಉಪ್ಪಿ ಹಣ್ಣುಗಳು, ನೆಲ್ಲಿ, ಬೆಲ್ಲ ಹಾಕದಿರುವ ಪದಾರ್ಥ, ಕಬ್ಬು, ಇವನ್ನು ಹವಿಷ್ಯವೆಂದೆನ್ನುತ್ತಾರೆ.

೫೬, ಎಣ್ಣೆಹಾಕದಿರುವ ಅನ್ನ ಇವು ಹವಿಷ್ಯಾನ್ನವೆನ್ನಿಸಿಕೊಳ್ಳುತ್ತವೆ. ತುಲಸಿ ಪತ್ರದಿಂದ ಕೂಡಿದ ಹೂಮಾಲೆಯನ್ನು ಧರಿಸಿರುವ ನರನು ವಿಷ್ಣುವೆಂದೇ ತಿಳಿಯಬೇಕು. ಸತ್ಯವು. ಸಂಶಯವಿಲ್ಲ.

೫೭. ನೆಲ್ಲಿಮರವನ್ನು ಎಬ್ಬಿಸಿದ ಮನುಷ್ಯನು ವಿಷ್ಣುವಿಗೆ ಸಮಾನನು. ಆ ನೆಲ್ಲಿಯಮರದಸುತ್ತಲೂ ಮುನ್ನೂರುವರೆ ಮಾರುಗಳು ಕುರುಕ್ಷೇತ್ರವೆಂದು ತಿಳಿಯಬೇಕು.

ಕುರುಕ್ಷೇತ್ರಂ ವಿಜಾನೀಯಾತ್ಸಾರ್ಧಹಸ್ತಶತತ್ರಯಂ ।
ತುಲಸೀಕಾಷ್ಠ ಘಟಿತೈಃ ರುದ್ರಾಕ್ಷಾಕಾರಕಾರಿತೈಃ ।
ನಿರ್ಮಿತಾಂ ಮಾಲಿಕಾಂ ಕಂಠೇ ನಿಧಾಯಾರ್ಚನಮಾರಭೇತ್ ॥ ೫೮ ॥

ತಥಾಮಲಕಮಾಲಾಂ ಚ ಸಮ್ಯಕ್ಪುಷ್ಕರಮಾಲಿಕಾಂ ।
ಕಂಠೇ ಮಾಲಾಂ ಚ ಯತ್ನೇನ ಧಾರಯೇದ್ವಿಷ್ಣುಪೂಜಕಃ ॥ ೫೯ ॥

ನಿರ್ಮಾಲ್ಯಂ ತುಳಸೀಮಾಲಾಂ ಶಿರಸ್ಯಪಿ ಚ ಧಾರಯೇತ್ ।
ನಿರ್ಮಾಲ್ಯಚಂದನೇನಾಂಗಮಂಕಯೇತ್ತಸ್ಯ ನಾಮಭಿಃ ॥ ೬೦ ॥

ಲಲಾಟೇ ಚ ಗದಾ ಧಾರ್ಯಾ ಮೂರ್ಧ್ನಿ ಚಾಪಂ ಶರಸ್ತಥಾ ।
ನಂದಕಂ ಚೈವ ಹೃನ್ಮಧ್ಯೇ ಶಂಖಂ ಚಕ್ರಂ ಭುಜದ್ವಯೇ ॥ ೬೧ ॥

ಶಂಖಚಕ್ರಾನ್ವಿತೋ ವಿಪ್ರಃ ಶ್ಮಶಾನೇ ಮ್ರಿಯತೇ ಯದಿ ।
ಪ್ರಯಾಗೇ ಯಾ ಗತಿಃ ಪ್ರೋಕ್ತಾ ಸಾ ಗತಿಸ್ತಸ್ಯ ನಿಶ್ಚಿತಾ ॥ ೬೨ ॥

---

೫೮. ತುಳಸಿಯ ಕಡ್ಡಿಯಲ್ಲಿ ರುದ್ರಾಕ್ಷಿಗಳಂತೆ ಮಾಲೆಯನ್ನು ಮಾಡಿ ಕತ್ತಿಗೆ ಹಾಕಿಕೊಂಡು ಪೂಜೆಗೆ ಆರಂಭಿಸಬೇಕು.

೫೯. ಹಾಗೆಯೇ ನೆಲ್ಲೀಕಾಯಿ ಮಾಲೆಯನ್ನೂ ಕಮಲದ ಮಣಿಯ ಮಾಲಿಕೆಯನ್ನೂ ಕತ್ತಿನಲ್ಲಿ ಹಾಕಿಕೊಂಡು ವಿಷ್ಣುವನ್ನು ಪೂಜೆಮಾಡಬೇಕು.

೬೦. ನಿರ್ಮಾಲ್ಯವಾದ ತುಳಸೀ ಮಾಲೆಯನ್ನು ತಲೆಯಲ್ಲಿ ಧರಿಸಬೇಕು. ನಿರ್ಮಾಲ್ಯವಾದ ಚಂದನವನ್ನು ಸ್ವಾಮಿಯ ಹೆಸರನ್ನು ಹೇಳಿ ಮೈಗೆ ಬಳಿದುಕೊಳ್ಳಬೇಕು.

೬೧. ಹಣೆಯಲ್ಲಿ ಗದೆಯ ಆಕಾರವಾಗಿಯೂ ತಲೆಯಲ್ಲಿ ಬಿಲ್ಲು ಬಾಣಗಳ ಆಕಾರವಾಗಿಯೂ ಹೃದಯದಲ್ಲಿ ನಂದರೂಪವಾಗಿಯೂ ಭುಜಗಳಲ್ಲಿ ಶಂಖ ಚಕ್ರಗಳ ರೂಪವಾಗಿಯೂ ಆ ಗಂಧವನ್ನು ಹಚ್ಚಿಕೊಳ್ಳಬೇಕು.

೬೨. ಶಂಖ ಚಕ್ರಗಳನ್ನು ಬರೆದುಕೊಂಡು ಶ್ಮಶಾನದಲ್ಲಿ ಸತ್ತರೆ ಅವನಿಗೆ ಪ್ರಯಾಗದಲ್ಲಿ ಸತ್ತಗತಿ ಬರುತ್ತದೆ.

ಯೋ ಧೃತ್ವಾ ತುಳಸೀಪತ್ರಂ ಶಿರಸಾ ವಿಷ್ಣುತತ್ಪರಃ ।
ಕರೋತಿ ಸರ್ವಕಾರ್ಯಾಣಿ ಫಲಮಾಪ್ನೋತಿ ಚಾಕ್ಷಯಂ ॥ ೬೩ ॥

ತುಳಸಿಕಾಷ್ಠಮಾಲಾಭಿಃ ಭೂಷಿತಃ ಕರ್ಮ ಹ್ಯಾಚರೇತ್ ।
ಪಿತೄಣಾಂ ದೇವತಾನಾಂ ಚ ಕೃತಂ ಕೋಟಿಗುಣಂ ಭವೇತ್ ॥ ೬೪ ॥

ನಿವೇದ್ಯ ಕೇಶವೇ ಮಾಲಾಂ ತುಳಸಿಕಾಷ್ಠನಿರ್ಮಿತಾಂ ।
ವಹತೇ ಯೋ ನರೋ ಭಕ್ತ್ಯಾ ತಸ್ಯ ನಶ್ಯತಿ ಪಾತಕಂ ।
ಪಾದ್ಯಾದಿಭಿಸ್ತಥಾಪೂಜ್ಯಚೇಮಂ ಮಂತ್ರಮುದೀರಯೇತ್ ॥ ೬೫ ॥

ಯಾ ದೃಷ್ಟ್ವಾ ನಿಖಿಲಾಘಸಂಘಶಮನೀಸ್ಪೃಷ್ಟ್ವಾ ವಪುಃಪಾವನೀ ।
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ ।
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥ ೬೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದೇವೀಶ್ವರ ಸಂವಾದೇ
ತಿಲಕಾದಿ ನಿಯಮೋನಾಮ ನವಸಪ್ತತಿತಮೋಽಧ್ಯಾಯಃ

---

೬೩-೬೫. ವಿಷ್ಣುವನ್ನು ಸ್ಮರಣೆ ಮಾಡುತ್ತಾ ತಲೆಯಲ್ಲಿ ತುಳಸಿ ಪತ್ರವನ್ನಿಟ್ಟು ಎಲ್ಲಾ ಕೆಲಸಗಳನ್ನೂ ಮಾಡಿದರೆ ಅಕ್ಷಯ ಫಲವು ಬರುತ್ತದೆ. ತುಳಸಿಯ ಕಾಷ್ಠಗಳನ್ನೂ ಧರಿಸಿ ಪೂಜೆ ಶ್ರಾದ್ಧಾದಿಕರ್ಮಗಳನ್ನು ಮಾಡಿದರೆ ಅದು ಕೋಟಿಯಷ್ಟು ಫಲವಾಗುತ್ತದೆ ತುಳಸಿ ಕಾಷ್ಠಮಾಲೆಯನ್ನು ಕೇಶವನಿಗೆ ನಿವೇದಿಸಿ ಮನುಷ್ಯನು ಧರಿಸಿಕೊಂಡರೆ ಅವನ ಪಾಪವು ಹೋಗುತ್ತದೆ. ಪಾದ್ಯಾದಿಗಳಿಂದ ಅರ್ಚನೆ ಮಾಡಿ ಈ ಮಂತ್ರವನ್ನು ಹೇಳಬೇಕು.

೬೬. ಯಾವ ತುಳಸಿಯನ್ನು ನೋಡಿದ ಮಾತ್ರಕ್ಕೆ ಪಾಪವೆಲ್ಲವೂ ನಾಶವಾಗುತ್ತದೋ ಮುಟ್ಟಿದರೆ ದೇಹವು ಪಾವನವಾಗುತ್ತದೋ ನಮಸ್ಕರಿಸಿದರೆ ರೋಗಗಳು ನಾಶವಾಗುತ್ತವೆಯೋ ನೀರು ಹಾಕಿದರೆ ಯಮನಿಗೂ ಹೆದರಿಕೆಯನ್ನುಂಟುಮಾಡುತ್ತದೋ ಬೆಳಿಸಿದರೆ ಸ್ವಾಮಿಯಲ್ಲಿ ಐಕ್ಯವನ್ನು ಹೊಂದುವಂತೆ ಮಾಡುತ್ತದೆಯೋ ಸ್ವಾಮಿಯ ಪಾದದಲ್ಲಿ ಹಾಕಿದರೆ ಮುಕ್ತಿಯನ್ನು ಕೊಡುತ್ತದೆಯೋ ಅಂತಹ ತುಳಸಿಗೆ ನಮಸ್ಕಾರವು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ದೇವೀಶ್ವರ ಸಂವಾದದಲ್ಲಿ
ತಿಲಕಾದಿನಿಯಮವೆಂಬ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಅಶೀತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ಘೋರೇ ಕಲಿಯುಗೇ ಪ್ರಾಪ್ತೇ ವಿಷಯಗ್ರಾಹಸಂಕುಲೇ ।
ಪುತ್ರದಾರಧನಾದ್ಯಾರ್ತೈಃ ತತ್ಕಥಂ ಧಾರ್ಯತೇ ವಿಭೋ ।
ತದುಪಾಯಂ ಮಹಾದೇವ ಕಥಯಸ್ವ ಕೃಪಾನಿಧೇ ॥ ೧ ॥

॥ ಈಶ್ವರ ಉವಾಚ ॥

ಹರೇರ್ನಾಮ ಹರೇರ್ನಾಮ ಹರೇರ್ನಾಮೈವ ಕೇವಲಂ ।
ಹರೇರಾಮ ಹರೇಕೃಷ್ಣ ಕೃಷ್ಣ ಕೃಷ್ಣೇತಿ ಮಂಗಳಂ ॥ ೨ ॥

ಏವಂ ವದಂತಿ ಯೇ ನಿತ್ಯಂ ನ ಹಿ ತಾನ್ಬಾಧತೇ ಕಲಿಃ ।
ಅತ ಆಂತರಕರ್ಮಾಣಿ ಕೃತ್ವಾ ನಾಮಾನಿ ಚ ಸ್ಮರೇತ್ ॥ ೩ ॥

---

## ಎಂಭತ್ತನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು— ವಿಷಯವೆಂಬ ಮೊಸಳೆಗಳಿಂದ ಕೂಡಿದ ಈ ಕಲಿಯುಗದಲ್ಲಿ ಹೆಂಡತಿ ಮಕ್ಕಳು ಹಣಗಳಿಂದ ಎಲ್ಲರೂ ಕೂಡಿರುವಾಗ್ಯೆ ಆ ತುಳಸಿಯನ್ನು ಎಲ್ಲರೂ ಹೇಗೆ ಧರಿಸಿಯಾರು ? ಅದರ ಉಪಾಯವನ್ನು ದಯವಿಟ್ಟು ಹೇಳು.

೨. ಈಶ್ವರನು ಹೇಳಿದನು— ಹರಿಯ ನಾಮ, ಹರಿಯ ನಾಮ, ಹರಿಯ ನಾಮವೆಂಬುದೇ ಮುಖ್ಯವಾದುದು. ಹರೇ ರಾಮ ಹರೇ ಕೃಷ್ಣ, ಕೃಷ್ಣ, ಕೃಷ್ಣ, ಎಂಬುದು ಮಂಗಳವಾದುದು.

೩. ಹೀಗೆ ಸ್ಮರಿಸುವವರನ್ನು ಕಲಿ ಪುರುಷನು ಬಾಧಿಸುವುದಿಲ್ಲ. ಆದ್ದರಿಂದ ತಮ್ಮ ಕೆಲಸಗಳನ್ನು ಮಾಡಿಕೊಂಡು ಈ ನಾಮಗಳನ್ನು ಸ್ಮರಿಸಬೇಕು.

ಕೃಷ್ಣ ಕೃಷ್ಣೇತಿ ಕೃಷ್ಣೇತಿ ಕೃಷ್ಣೇತ್ಯಾಹ ಪುನಃ ಪುನಃ ।
ಮನ್ನಾಮ ಚೈವ ತ್ವನ್ನಾಮ ಯೋ ಜಪಿತ್ವಾ ವ್ಯತಿಕ್ರಮಾತ್ ॥ ೪ ॥

ಸೋಽಪಿ ಪಾಪಾದ್ವಿಮುಚ್ಯೇತ ತೂಲರಾಶೇರಿವಾನಲಃ ।
ಜಯಾದ್ಯೇತತ್ತ್ವಯಾವಾಪ್ಯಥವಾ ಶ್ರೀಶಬ್ದಪೂರ್ವಕಂ ॥ ೫ ॥

ತಚ್ಚ ಮೇ ಮಂಗಳಂ ನಾಮ ಜಪಾತ್ಪಾಪಾತ್ಪ್ರಮುಚ್ಯತೇ ।
ದಿವಾ ನಿಶಿ ಚ ಸಂಧ್ಯಾಯಾಂ ಸರ್ವಕಾಲೇಷು ಸಂಸ್ಮರೇತ್ ॥ ೬ ॥

ಅಹರ್ನಿಶಂ ಸ್ಮರನ್ನಾಮ ಕೃಷ್ಣಂ ಪಶ್ಯತಿ ಚಕ್ಷುಷಾ ।
ಅಶುಚಿರ್ವಾ ಶುಚಿರ್ವಾಪಿ ಸರ್ವಕಾಲೇಷು ಸರ್ವದಾ ॥ ೭ ॥

ನಾಮಸಂಸ್ಮರಣಾದೇವ ಸಂಸಾರಾನ್ಮುಚ್ಯತೇ ಕ್ಷಣಾತ್ ।
ನಾನಾಪರಾಧಯುಕ್ತಸ್ಯ ನಾಮಾಪಿ ಚ ಹರತ್ಯಘಂ ॥ ೮ ॥

---

೪. ಕೃಷ್ಣ, ಕೃಷ್ಣ, ಕೃಷ್ಣ, ಎಂಬುದಾಗಿ ಬಾರಿ ಬಾರಿಗೂ ಹೇಳಬೇಕು. ನನ್ನ ಹೆಸರನ್ನಾಗಲೀ ನಿನ್ನ ಹೆಸರನ್ನಾಗಲೀ ನನ್ನ ಹೆಸರೆಂದು ನಿನ್ನ ಹೆಸರನ್ನಾಗಲೀ ನಿನ್ನ ಹೆಸರೆಂದು ನನ್ನ ಹೆಸರನ್ನಾಗಲೀ ಹೇಳಿದರೆ ಬೆಂಕಿಯು ಹತ್ತಿಯರಾಶಿಯನ್ನು ಸುಡುವಂತೆ ಆ ನಾಮವು ಪಾಪಗಳನ್ನು ಸುಡುತ್ತದೆ.

೫. ನೀನು ಜಯಶಬ್ದ ಅಥವಾ ಶ್ರೀ ಶಬ್ದವನ್ನು ಆದಿಯಲ್ಲಿ ಉಚ್ಚರಿಸಿದರೆ ಅದು ನನ್ನ ಮಂಗಳನಾಮವೇ ಆಗುತ್ತದೆ. ಅದರ ಜಪವನ್ನು ಮಾಡಿದರೆ ಪಾಪವು ಪರಿಹಾರವಾಗುತ್ತದೆ ಜಯ ಶಿವ, ಜಯ ಕೃಷ್ಣ, ಶ್ರೀ ಶಿವ, ಶ್ರೀ ಕೃಷ್ಣ, ಎಂಬ ಪದಗಳೆಂದರ್ಥವು.

೬-೮. ಹೀಗೆ ಪಾಪನಾಶವಾಗಬೇಕಾದರೆ ಹಗಲು, ರಾತ್ರಿ ಸಂಧ್ಯಾಕಾಲದಲ್ಲಿ ಸ್ಮರಿಸಬೇಕು. ಅಥವಾ ಯಾವಾಗಲೂ ಸ್ಮರಿಸಬಹುದು. ಯಾವಾಗಲೂ ಜಪಿಸಿದರೆ ಕೃಷ್ಣನನ್ನು ಕಣ್ಣಿನಿಂದಲೇ ಕಾಣುತ್ತಾನೆ. ಶುಚಿಯಾಗಲೀ ಅಶುಚಿಯಾಗಲೀ ಸರ್ವಕಾಲದಲ್ಲಿಯೂ ಯಾವಾಗಲೂ ನಾಮವನ್ನು ಸ್ಮರಿಸುವುದರಿಂದಲೇ ಸಂಸಾರದಿಂದ ಮುಕ್ತನಾಗುತ್ತಾನೆ. ಯಾವ ಬಗೆಯ ತಪ್ಪನ್ನು ಮಾಡಿದ್ದರೂ ನಾಮವು ಪಾಪವನ್ನು ನಾಶಮಾಡುತ್ತದೆ.

ಯಜ್ಞವ್ರತತಪೋದಾನಂ ಸಾಂಗಂ ನೈವ ಕಲೌಯುಗೇ ।
ಗಂಗಾಸ್ನಾನಂ ಹರೇರ್ನಾಮ ನಿರಪಾಯಮಿದಂ ದ್ವಯಂ ॥ ೯ ॥

ಹತ್ಯಾಯುತಂ ಪಾಪಸಹಸ್ರಮುಗ್ರಂ
ಗುರ್ವಂಗನಾಕೋಟಿನಿಷೇವಣಂ ಚ
ಸ್ತೇಯಾನ್ಯಥಾನ್ಯಾನಿ ಹರೇಃ ಪ್ರಿಯೇಣ
ಗೋವಿಂದನಾಮ್ನಾ ನ ಚ ಸಂತಿ ಭದ್ರೇ ॥ ೧೦ ॥

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ ।
ಯಃಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಂಭ್ಯಂತರಶ್ಶುಚಿಃ ॥ ೧೧ ॥

ನಾಮಸಂಸ್ಮರಣಾದೇವ ತಥಾ ತತ್ಪಾದಚಿಂತನಾತ್ ।
ಸೌವರ್ಣೀಂ ರಾಜತೀಂ ವಾಪಿ ತಥಾ ಪೈಷ್ಟೀಂ ಪ್ರಜಾಕೃತಿಂ ॥ ೧೨ ॥

ಪಾದಯೋಶ್ಚಿಹ್ನಿತಾಂ ಕೃತ್ವಾ ಪೂಜಾಂ ಚೈವ ಸಮಾಚರೇತ್ ।
ದಕ್ಷಿಣಸ್ಯ ಪದಾಂಗುಷ್ಠಮೂಲೇ ಚಕ್ರಂ ಬಿಭರ್ತಿ ಯಃ ॥ ೧೩ ॥

---

೯. ಯಾಗ, ವ್ರತ, ತಪಸ್ಸು, ದಾನಗಳು ಸಾಂಗವಾಗಿ ಕಲಿಯುಗದಲ್ಲಿ ನೆರವೇರು ವುದಿಲ್ಲ. ಗಂಗಾಸ್ನಾನ, ಹರಿಯನಾಮ ಎರಡು ಮಾತ್ರ ಬಾಧಕವಿಲ್ಲದೆ ನಡೆಯುತ್ತವೆ

೧೦. ಹತ್ತುಸಾವಿರ ಬ್ರಹ್ಮಹತ್ಯೆಗಳಾಗಲಿ, ಉಗ್ರವಾದ ಗುರುಭಾರ್ಯಾಗಮನ ಗಳ ಕೋಟಿಯಾಗಲಿ, ಸ್ವರ್ಣಸ್ತೇಯಾದಿಗಳು ಲೆಕ್ಕವಿಲ್ಲದಷ್ಟಾಗಲಿ ಹರಿಗೆ ಪ್ರಿಯವಾದ ಗೋವಿಂದನಾಮವನ್ನುಚ್ಚರಿಸಿದರೆ ಆ ಪಾಪಗಳು ಇರುವುದಿಲ್ಲ.

೧೧. ಶುಚಿಯಾಗಿರಲಿ ಅಶುಚಿಯಾಗಿರಲಿ ಅವನು ಎಂತಹ ದುರವಸ್ಥೆಯನ್ನು ಬೇಕಾದರೂ ಹೊಂದಿರಲಿ ಪುಂಡರೀಕಾಕ್ಷನನ್ನು ಸ್ಮರಿಸಿದರೆ ಹೊರಗೆ ಒಳಗೆ ಕೂಡ ಶುಚಿಯಾಗುತ್ತಾನೆ.

೧೨. ಆ ಕೃಷ್ಣನ ನಾಮವನ್ನು ಸ್ಮರಿಸುವುದರಿಂದಾಗಲಿ, ಚಿಂತಿಸುವುದರಿಂದಾ ಗಲಿ ಅವನು ಸರ್ವವಿಧದಲ್ಲಿಯೂ ಶುಚಿಯಾಗುತ್ತಾನೆ. ಚಿನ್ನ ಅಥವಾ ಬೆಳ್ಳಿ ತಪ್ಪಿದರೆ ಹಿಟ್ಟು ಇವುಗಳಲ್ಲಿ ಶಕ್ತ್ಯಾನುಸಾರವಾದ ಚಿಹ್ನೆಗಳನ್ನು ಮಾಡಿ ಪೂಜೆಮಾಡಬೇಕು.

೧೩. ಯಾವ ಸ್ವಾಮಿಯು ಬಲಗಾಲಿನ ಹೆಬ್ಬೆರಳಿನ ಬುಡದಲ್ಲಿ ಚಕ್ರವನ್ನು ಹೊಂದಿರುವನೋ, ಅವನಿಗೆ ನಮಸ್ಕಾರಮಾಡಿದವರಿಗೆ ಜನನಮರಣಗಳಿಲ್ಲ.

ತತ್ರ ನಮ್ರಜನಸ್ಯಾಪಿ ಸಂಸಾರಚ್ಛೇದನಾಯ ಚ ।
ಮಧ್ಯಮಾಂಗುಲಿಮೂಲೇ ತು ಧತ್ತೇ ಕಮಲಮಚ್ಯುತಃ ॥ ೧೪ ॥

ಧ್ಯಾತುಶ್ಚಿತ್ತದ್ವಿರೇಫಾಣಾಂ ಲೋಭನಾಯಾತಿಶೋಭನಂ ।
ಪದ್ಮಸ್ಯಾಧೋ ಧ್ವಜಂ ಧತ್ತೇ ಸರ್ವಾನರ್ಥಜಯಧ್ವಜಂ ॥ ೧೫ ॥

ಕನಿಷ್ಠಾಮೂಲತೋ ವಜ್ರಂ ಭಕ್ತಪಾಪೌಘಭೇದನಂ ।
ಪಾರ್ಶ್ವಮಧ್ಯೇಂಕುಶಂ ಭಕ್ತಚಿತ್ತೇಭದಮಕಾರಣಂ ॥ ೧೬ ॥

ಭೋಗಸಂಪನ್ಮಯಂ ಧತ್ತೇ ಯವಮಂಗುಷ್ಠಪರ್ವಣಿ ।
ಮೂಲೇ ಗದಾಂ ಚ ಪಾಪಾದ್ರಿಭೇದಿನೀಂ ಸರ್ವದೇಹಿನಾಂ ॥ ೧೭ ॥

ಸರ್ವವಿದ್ಯಾಪ್ರಕಾಶಾಂಯ ಧತ್ತೇ ಸ ಭಗವಾನಜಃ ।
ಪದ್ಮಾದೀನ್ಯಪಿ ಚಿಹ್ನಾನಿ ತತ್ರ ದಕ್ಷೇಣ ಯತ್ಪ್ರನಃ ॥ ೧೮ ॥

---

೧೪. ಮಧ್ಯದ ಬೆರಳಿನ ಬುಡದಲ್ಲಿ ಅಚ್ಯುತನು ಕಮಲವನ್ನು ಧರಿಸಿದ್ದಾನೆ. ಅವನನ್ನು ಧ್ಯಾನಿಸಿದವನಿಗೆ ಆಶೆ ನಾಶವಾಗುತ್ತದೆ. ಒಳ್ಳೆಯ ಗತಿಯನ್ನೂ ಸಹ ಹೊಂದುತ್ತಾನೆ.

೧೫. ಆ ಪದ್ಮದ (ಕಮಲದ) ಕೆಳಗೆ ಎಲ್ಲಾ ಅನರ್ಥಗಳನ್ನೂ ನಾಶಮಾಡುವ ಧ್ವಜವನ್ನು ಧರಿಸಿದ್ದಾನೆ.

೧೬. ಕಡೇ ಬೆರಳಿನ ಬುಡದಲ್ಲಿ ವಜ್ರಚಿಹ್ನೆಯನ್ನು ಧರಿಸಿದ್ದಾನೆ. ಅದು ಪಾಪನಾಶಕವಾದುದು. ಅದರ ಪಾರ್ಶ್ವದಲ್ಲಿಯೇ ಅಂಕುಶಚಿಹ್ನೆಯಿದೆ ಅದು. ಭಕ್ತರ ಚಿತ್ತವನ್ನು ಸರಿಮಾಡತಕ್ಕುದು.

೧೭. ಅಂಗುಷ್ಠದ ಗಿಣ್ಣಿನಲ್ಲಿ ಯವಚಿಹ್ನೆಯನ್ನು ಧರಿಸಿದ್ದಾನೆ. ಅದು ಭೋಗಸಂಪತ್ಪ್ರದವಾದುದು. ಆ ಅಂಗುಷ್ಠದ ಮೂಲದಲ್ಲಿ ಗದೆಯನ್ನು ಧರಿಸಿದ್ದಾನೆ ಅದು ಪಾಪನಾಶಕವಾದುದು.

೧೮. ಸರ್ವವಿದ್ಯೆಗಳನ್ನು ಪ್ರಕಾಶಪಡಿಸಲು ಆ ಬ್ರಹ್ಮನು ಈ ಪದ್ಮಾದಿ ಚಿಹ್ನೆಗಳನ್ನು ಬಲದ ಕಾಲಿನಲ್ಲಿ ಹೊಂದಿದ್ದಾನೆ.

ವಾಮಪಾದೇ ವಸೇತ್ಸೋಽಯಂ ಬಿಭರ್ತಿ ಕರುಣಾನಿಧಿಃ ।
ತಸ್ಮಾದ್ಗೋವಿಂದಮಾಹಾತ್ಮ್ಯಮಾನಂದರಸಸುಂದರಂ ॥ ೧೯ ॥

ಶೃಣುಯಾತ್ಕೀರ್ತಯೇನ್ನಿತ್ಯಂ ಸ ನಿರ್ಮುಕ್ತೋ ನ ಸಂಶಯಃ ।
ಮಾಸಕೃತ್ಯಂ ಪ್ರವಕ್ಷ್ಯಾಮಿ ವಿಷ್ಣೋಃ ಪ್ರೀತಿಕರಂ ಪುನಃ ॥ ೨೦ ॥

ಜ್ಯೇಷ್ಠೇ ತು ಸ್ನಾಪನಂ ಕುರ್ಯಾಚ್ಛ್ರೀವಿಷ್ಣೋರ್ಯತ್ನತಶ್ಶುಚಿಃ ।
ದೈನಂದಿನಂ ತು ದುರಿತಂ ಪಕ್ಷಮಾಸರ್ತುವರ್ಷಜಂ ॥ ೨೧ ॥

ಬ್ರಹ್ಮಹತ್ಯಾಸಹಸ್ರಾಣಿ ಜ್ಞಾತಾಜ್ಞಾತಕೃತಾನಿ ಚ ।
ಸ್ವರ್ಣಸ್ತೇಯಂ ಸುರಾಪಾನಗುರುತಲ್ಪಾಯುತಾನಿ ಚ ॥ ೨೨ ॥

ಕೋಟಿಕೋಟಿಸಹಸ್ರಾಣಿ ಹ್ಯುಪಪಾಪಾನಿ ಯಾನಿ ಚ ।
ಸರ್ವಾಣ್ಯಪಿ ಪ್ರಣಶ್ಯಂತಿ ಪೌರ್ಣಮಾಸ್ಯಾಂ ತು ವಾಸರೇ ॥ ೨೩ ॥

ಆಸಿಂಚೇದಚ್ಯುತಂ ಮೂರ್ಧ್ನಿ ತದಾ ತತ್ಕಲಶೋದಕಂ ।
ಪುರುಷಸೂಕ್ತೇನ ಮಂತ್ರೇಣ ಪಾವಮಾನೀಭಿರೇವ ಚ ॥ ೨೪ ॥

---

೧೯. ಬಲಗಾಲಿನಲ್ಲಿರುವ ಚಿಹ್ನೆಗಳೇ ಎಡಗಾಲಲ್ಲಿಯೂ ಇವೆ. ಆದ್ದರಿಂದ ಗೋವಿಂದನ ಮಹಿಮೆಯು ಅತಿ ಸುಂದರವೂ ಆನಂದವೂ ಆದುದು. ಆದ್ದರಿಂದ ಅದನ್ನು ಕೇಳಿದವನು ಮುಕ್ತನಾಗುತ್ತಾನೆ

೨೦ ವಿಷ್ಣುಪ್ರೀತ್ಯರ್ಥವಾಗಿ ಯಾವ ಮಾಸದಲ್ಲಿ ಏನು ಮಾಡಬೇಕೆಂಬು ದನ್ನು ಹೇಳುತ್ತೇನೆ.

೨೧. ಜ್ಯೇಷ್ಠಮಾಸದಲ್ಲಿ ವಿಷ್ಣುವಿಗೆ ಸ್ನಾನಮಾಡಿಸಿದರೆ ದಿನದ್ದು, ಪಕ್ಷದ್ದು, ವರ್ಷದ್ದು, ಎಲ್ಲ ಪಾಪವೂ ಹೋಗುತ್ತದೆ.

೨೨–೨೩. ಜ್ಯೇಷ್ಠಮಾಸದ ಪೌರ್ಣಮಾಸ್ಯೆಯ ದಿನ ಅಚ್ಯುತನಿಗೆ ಸ್ನಾನ ಮಾಡಿಸಿದರೆ ತಿಳಿದೂ ತಿಳಿಯದೆಯೂ ಮಾಡಿದ ಸಾವಿರಾರು ಬ್ರಹ್ಮಹತ್ಯೆಗಳೂ, ಚಿನ್ನವನ್ನು ಕದ್ದಿದುವುದು. ಹೆಂಡ ಕುಡಿಯುವುದು. ಗುರುವಿನ ಹೆಂಡತಿ ಬಳಿ ಹೋಗುವುದು ಈ ಮಹಾಪಾಪಗಳೂ, ಕೋಟಿಗಟ್ಟಲೆಯಾದ ಉಪಪಾತಕಗಳೂ ಎಲ್ಲವೂ ನಾಶವಾಗುತ್ತವೆ.

೨೪-೨೫. ಪುರುಷಸೂಕ್ತದಿಂದಲೂ, ಪವಮಾನದಿಂದಲೂ ವಿಷ್ಣುವಿಗೆ ತಲೆ ಯಮೇಲೆ ಅಭಿಷೇಕಮಾಡಬೇಕು. ಎಳನೀರು, ತಾಳೆಯನೀರು, ರತ್ನೋದಕ,

ನಾರಿಕೇಳೋದಕೇನಾಥ ತಥಾ ತಾಳಫಲಾಂಬುನಾ ।
ರಕ್ತೋದಕೇನ ಗಂಧೇನ ತಥಾ ಪುಷ್ಪೋದಕೇನ ಚ ॥ ೨೫ ॥

ಪಂಚೋಪಚಾರೈರಾರಾಧ್ಯ ಯಥಾವಿಭವವಿಸ್ತರೈಃ ।
ಘಂ ಘಂಟಾಯೈನಮ ಇತಿ ಘಂಟಾನಾದ್ಯಂ ನಿವೇದಯೇತ್ ॥ ೨೬ ॥

ಪತಿತಸ್ಯ ಮಹಾದ್ವಾರಸ್ಯಸ್ತುಪಾತಕಸಂಚಯೇ ।
ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಂ ॥ ೨೭ ॥

ಯ ಏವಂ ಕುರುತೇ ವಿದ್ವಾನ್ಬ್ರಾಹ್ಮಣಃ ಶ್ರೋತ್ರಿಯಶ್ಶುಚಿಃ ।
ಸರ್ವಪಾಪೈಃ ಪ್ರಮುಚ್ಯೇತ ವಿಷ್ಣುಲೋಕಂ ಸ ಗಚ್ಛತಿ ॥ ೨೮ ॥

ಆಷಾಢಶುಕ್ಲೈಕಾದಶ್ಯಾಂ ಕುರ್ಯಾತ್ಸ್ವಾಪಮಹೋತ್ಸವಂ ।
ಆಷಾಢೇ ಚ ರಥಂ ಕುರ್ಯಾಚ್ಛ್ರಾವಣೇ ಶ್ರವಣಾವಿಧಿಃ ॥ ೨೯ ॥

ಭಾದ್ರೇ ಚ ಜನ್ಮದಿವಸಃ ಉಪವಾಸಪರೋ ಭವೇತ್ ।
ಪ್ರಸುಪ್ತಸ್ಯ ಪರೀವರ್ತಮಾಶ್ವಿನೇ ಮಾಸಿ ಕಾರಯೇತ್ ॥ ೩೦ ॥

ಉತ್ಥಾನಂ ಶ್ರೀಹರೇಃ ಕುರ್ಯಾದನ್ಯಥಾ ವಿಷ್ಣುದ್ರೋಹಕೃತ್ ।
ಶುಭೇ ಚೈವಾಶ್ವಿನೇ ಮಾಸಿ ಮಹಾಮಾಯಾಂ ಚ ಪೂಜಯೇತ್ ॥ ೩೧ ॥

---

ಗಂಧೋದಕ, ಪುಷ್ಪೋದಕಗಳಿಂದಲೂ, ಅಭಿಷೇಕಮಾಡಬೇಕು. ಅನಂತರ ಪಂಚೋಪಚಾರಗಳಿಂದ ಪೂಜಿಸಬೇಕು.

೨೬-೩೧. ಘಂ ಘಂಟಾಯೈನಮಃ ಎಂದು ಘಂಟಾನಾದವನ್ನು ಒಪ್ಪಿಸಬೇಕು. ಮಹಾ ಪಾಪದಲ್ಲಿ ಬಿದ್ದಿರುವ ಪಾಪಿಯಾದ ಸಂಸಾರ ಸಮುದ್ರದಲ್ಲಿ ಬಿದ್ದಿರುವ ನನ್ನನ್ನು ಕಾಪಾಡು. ಶ್ರೋತ್ರಿಯನಾದ ಬ್ರಾಹ್ಮಣನು ಹೀಗೆ ಮಾಡಿದರೆ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ. ಆಷಾಢಶುದ್ಧ ಏಕಾದಶಿಯಲ್ಲಿ ಮಲಗುವ ಉತ್ಸವವನ್ನು ಮಾಡಬೇಕು. ಆಷಾಢದಲ್ಲಿಯೇ ರಥೋತ್ಸವವನ್ನು ಮಾಡಬೇಕು. ಭಾದ್ರಪದದಲ್ಲಿ ಹುಟ್ಟಿದ ದಿವಸವನ್ನೂ ಆಚರಿಸಿ ಉಪವಾಸ ಮಾಡಬೇಕು. ಆಶ್ವಿಜಮಾಸದಲ್ಲಿ ಮಲಗಿದ್ದವನನ್ನು ಮಗ್ಗುಲುಮಾಡುವ ಉತ್ಸವವನ್ನು ಮಾಡಬೇಕು. ಅನಂತರ ಹರಿಯನ್ನು ಎಬ್ಬಿಸುವ ಉತ್ಸವವನ್ನು ಮಾಡಬೇಕು. ಹಾಗಿಲ್ಲದಿದ್ದರೆ ದ್ರೋಹಿಯಾಗುತ್ತಾನೆ.

ಸೌವರ್ಣೀಂ ರಾಜತೀಂ ವಾಪಿ ವಿಷ್ಣುರೂಪಾಂ ಬಲಿಂ ವಿನಾ ।
ಹಿಂಸಾ ದ್ವೇಷಾ ನ ಕರ್ತವ್ಯಾ ಧರ್ಮಾತ್ಮಾ ವಿಷ್ಣುಪೂಜಕೈಃ ॥ ೩೨ ॥

ಕಾರ್ತಿಕೇ ಪುಣ್ಯಮಾಸೇ ಚ ಕಾಮತಃ ಪುಣ್ಯಮಾಚರೇತ್ ।
ದಾಮೋದರಾಯ ದೀಪಂ ಚ ಪ್ರಾಂಶುಸ್ಥಾನೇ ಪ್ರನಾಪಯೇತ್ ॥ ೩೩ ॥

ಸಪ್ತವರ್ತ್ಯಾ ಪ್ರಮಾಣೇನ ದೀಪಸ್ಸ್ಯಾಚ್ಚತುರಂಗುಳಃ ।
ಪಕ್ಷಾಂತೇ ಚ ಪ್ರಕರ್ತವ್ಯಾ ದೀಪಮಾಲಾವಳಿಶ್ಶುಭಾ ॥ ೩೪ ॥

ಮಾರ್ಗಶೀರ್ಷೇ ಸಿತೇ ಪಕ್ಷೇ ಷಷ್ಠ್ಯಾಂ ಚ ಸಿತವಸ್ತ್ರಕೈಃ ।
ಪೂಜಯೇಜ್ಜಗದೀಶಂ ಚ ಬ್ರಹ್ಮಾಣಂ ಚ ವಿಶೇಷತಃ ॥ ೩೫ ॥

ಪೌಷೇ ಪುಷ್ಪಾಭಿಷೇಕಂ ಚ ವರ್ಜಯೇಚ್ಚಂದನಂ ಶ್ಲಥಂ ।
ಸಂಕ್ರಾನ್ತ್ಯಾಂ ಮಾಘಮಾಸೇ ಚ ಸಾಧಿವಾಸಿತತಂಡುಲಾನ್ ॥ ೩೬ ॥

ನೈವೇದ್ಯಂ ವಿಷ್ಣವೇ ದದ್ಯಾ ದಿಮಂ ಮಂತ್ರಮುದೀರಯೇತ್ ।
ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ದೇವದೇವಪುರಸ್ಥಿತಾನ್ ॥ ೩೭ ॥

---

೩೨. ಆಶ್ವಯುಜಮಾಸದಲ್ಲಿ ಚಿನ್ನದ್ದಾಗಲಿ, ಬೆಳ್ಳಿಯದಾಗಲಿ ವಿಷ್ಣುರೂಪಿಣಿಯಾದ ಮಾಯೆಯನ್ನು ಮಾಡಿ ಪೂಜಿಸಬೇಕು. ಇದರಲ್ಲಿ ಬಲಿಯಿಲ್ಲ. ಪೂಜೆಮಾಡತಕ್ಕವನು ಹಿಂಸೆ ದ್ವೇಷ ಮುಂತಾದುವುಗಳನ್ನು ಬಿಟ್ಟುಬಿಡಬೇಕು.

೩೩. ಕಾರ್ತಿಕಮಾಸವು ಬಹು ಪುಣ್ಯವಾದ ಮಾಸ. ಆ ತಿಂಗಳಲ್ಲಿ ಪುಣ್ಯ ಕೆಲಸಗಳನ್ನು ಮಾಡಬೇಕು. ಆಗ ಎತ್ತರವಾದ ಜಾಗದಲ್ಲಿ ದೀಪವನ್ನು ಹಚ್ಚಬೇಕು.

೩೪. ಏಳು ಬತ್ತಿಗಳನ್ನು ಹಾಕಿರಬೇಕು. ನಾಲ್ಕಂಗುಲ ಆ ಬತ್ತಿಗಳು ಉದ್ದವಿರಬೇಕು. ಆ ತಿಂಗಳಿನ ಪೂರ್ಣಿಮಾ, ಅಮಾವಾಸ್ಯೆಗಳಲ್ಲಿ ಸಾಲುದೀಪಗಳನ್ನು ಹಚ್ಚಬೇಕು.

೩೫. ಮಾರ್ಗಶೀರ್ಷ ಶುದ್ಧ ಷಷ್ಠಿಯ ದಿನ ಬಿಳಿಯ ಬಟ್ಟೆಗಳಿಂದ ವಿಷ್ಣುವನ್ನೂ, ಬ್ರಹ್ಮನನ್ನೂ ಪೂಜಿಸಬೇಕು.

೩೬–೪೪. ಪುಷ್ಯಮಾಸದಲ್ಲಿ ಪುಷ್ಪೋದಕ ಪೂಜೆಯನ್ನೂ ಚಂದನವನ್ನೂ ಬಿಟ್ಟು ಮಾಡಬೇಕು. ಸಂಕ್ರಾಂತಿಯಲ್ಲೂ ಮಾಘಮಾಸದಲ್ಲೂ ಸುವಾಸನೆಯೊಡನೆ ಕೂಡಿದ ಅನ್ನವನ್ನು ನೀವೇದಿಸಬೇಕು. ಈ ಮಂತ್ರವನ್ನು ಹೇಳಬೇಕು. ದೇವದೇವನ ಪುರವಾದ ದ್ವಾರಕೆಯಲ್ಲಿರುವ ಬ್ರಾಹ್ಮಣರನ್ನು ಭೋಜಿಸಬೇಕು. ಆ ಬ್ರಾಹ್ಮಣರನ್ನು

ಅಭ್ಯರ್ಚ್ಯ ಭಗವದ್ಭಕ್ತಾನ್ದ್ವಿಜಾಂಶ್ಚ ಭಗವದ್ಧಿಯಾ ।
ಏಕಸ್ಮಿನ್ಭೋಜಿತೇ ಭಕ್ತೇ ಕೋಟಿರ್ಭವತಿ ಭೋಜಿತಾ ॥ ೩೮ ॥

ಪತ್ರಭೋಜನಮಾತ್ರೇಣ ವ್ಯಂಗಂ ಸಾಂಗಂ ಭವೇದ್ಧ್ರುವಂ ।
ಪಂಚಮ್ಯಾಂ ಶುಕ್ಲಪಕ್ಷೇತು ಸ್ನಾಪಯಿತ್ವಾ ಚ ಕೇಶವಂ ॥ ೩೯ ॥

ಪೂಜಯಿತ್ವಾ ವಿಧಾನೇನ ಚೂತಪಲ್ಲವಸಂಯುತೈಃ ।
ಫಲ್ಗುಚೂರ್ಣೈಶ್ಚ ವಿವಿಧೈಃ ವಾಸಿತೈಃ ಪಟವಾಸಾಧಿತೈಃ ॥ ೪೦ ॥

ಕಾನನಂ ರಮಣೀಯಂ ಚ ಪ್ರದೀಪ್ತ ದೀಪದೀಪಿತಂ ।
ದ್ರಾಕ್ಷೇಕ್ಷುರಂಭಾಜಂಬೀರನಾಗರಂಗಂ ಚ ಪೂಗಕಂ ॥ ೪೧ ॥

ನಾರಿಕೇಳಂ ಚ ಧಾತ್ರೀ ಚ ಪನಸಂ ಚ ಹರೀತಕೀ ।
ಅನ್ಯೈಶ್ಚ ವೃಕ್ಷಕಂದ್ಯೈಶ್ಚ ಸರ್ವರ್ತುಕುಸುಮಾನ್ವಿತೈಃ ॥ ೪೨ ॥

ಅನ್ಯೈಶ್ಚ ವಿವಿಧೈಶ್ಚೈವ ಫಲಪುಷ್ಪಸಮನ್ವಿತೈಃ ।
ವಿತಾನೈಃ ಕುಸುಮೋದ್ಧಾಮ್ಯೈರ್ವಾರಿಪೂರ್ಣೈರ್ಘಟೈಸ್ತಥಾ ॥ ೪೩ ॥

ಚೂತಶಾಖೋಪಶಾಖಾಭಿಃ ಶೋಭಿತಂ ಛತ್ರಚಾಮರೈಃ ।
ಜಯಕೃಷ್ಣೇತಿ ಸಂಸ್ಕೃತ್ಯ ಪ್ರದಕ್ಷಿಣಪುರಸ್ಸರಂ ॥ ೪೪ ॥

---

ಸ್ವಾಮಿಯೆಂಬ ಬುದ್ಧಿಯಿಂದ ಪೂಜಿಸಿ ಅನ್ನ ಹಾಕಬೇಕು. ಒಬ್ಬನಿಗೆ ಅನ್ನ ಹಾಕಿದರೂ ಕೋಟಿ ಜನಕ್ಕೆ ಅನ್ನ ಹಾಕಿದಂತಾಗುವುದು. ಬ್ರಾಹ್ಮಣರಿಗೆ ಭೋಜನಮಾಡಿಸಿದರೆ ವ್ರತದಲ್ಲಿರುವ ನ್ಯೂನತೆಯು ಹೋಗಿ ಸಾಂಗವಾಗುತ್ತದೆ. ಶುದ್ಧಪಂಚಮಿಯು ದಿನ ಕೃಷ್ಣನಿಗೆ ಅಭಿಷೇಕ ಮಾಡಿ ಮಾವಿನ ಚಿಗುರು ಮುಂತಾದುಗಳಿಂದಲೂ, ಬುಕ್ಕಿ ಹಿಟ್ಟು ಗಂಧ ಮುಂತಾದುವುಗಳಿಂದಲೂ ಪೂಜಿಸಬೇಕು. ಒಂದು ಉದ್ಯಾನದಲ್ಲಿ ಬಹುವಾಗಿ ದೀಪಹಚ್ಚಿ ಬೆಳಕುಮಾಡಬೇಕು. ದ್ರಾಕ್ಷಿ, ಕಬ್ಬು, ಬಾಳೆ, ನಿಂಬೆ, ಹಲಸು, ಅಡಕೆ, ತೆಂಗು, ನೆಲ್ಲಿ, ಅಳಲೆ ಮುಂತಾದ ಮರಗಳಿಂದಲೂ, ಎಲ್ಲಾ ಕಾಲದ ಹೂಗಳಿಂದಲೂ ಕೂಡಿರಬೇಕು. ಅವು ಹೂಗಳಿಂದಲ್ಲದೆ ಹಣ್ಣುಗಳಿಂದಲೂ ಕೂಡಿರಬೇಕು. ಮೇಲುಗಡೆಯಲ್ಲಿ ಮೇಲುಕಟ್ಟಿನ ಹೊದಿಕೆಯಿಂದ ಕೂಡಿದ ಮಂಟಪವಿರಬೇಕು. ಮಂಟಪದಲ್ಲಿ ಕಲಶಗಳನ್ನಿಟ್ಟು ಅದಕ್ಕೆ ಮಾವಿನ ಚಿಗುರು ಎಲೆ ಮುಂತಾದುವುಗಳನ್ನು ಹಾಕಿ ಛತ್ರಚಾಮರಗಳಿಂದ ಅಲಂಕರಿಸಿ ಜಯಕೃಷ್ಣ ಜಯಕೃಷ್ಣ ಎಂಬುದಾಗಿ ಪ್ರದಕ್ಷಿಣೆಮಾಡಿ ಪೂಜಿಸಬೇಕು.

ವಿಶೇಷತಃ ಕಲಿಯುಗೇ ಡೋಲೋತ್ಸವೋ ವಿಧೀಯತೇ ।
ಫಾಲ್ಗುನೇ ಚ ಚತುರ್ದಶ್ಯಾಮಷ್ಟಮೋ ಯಾಮಸಂಜ್ಞಿಕೇ ॥ ೪೫ ॥

ಅಥವಾ ಪೌರ್ಣಮಾಸ್ಯಾಂ ತು ಪ್ರತಿಪತ್ಸಂಧಿಸಂಜ್ಞಿಕೇ ।
ಪೂಜಯೇದ್ವಿಧಿವದ್ಭಕ್ತ್ಯಾ ಫಲ್ಗುಚೂರ್ಣೈಶ್ಚತುರ್ವಿಧೈಃ ॥ ೪೬ ॥

ಸಿತರಕ್ತೈರ್ಗೌರಪೀತೈಃ ಕರ್ಪೂರಾದಿವಿಮಿಶ್ರಿತೈಃ ।
ಹರಿದ್ರಾರಾಗಯೋಗಾಚ್ಚ ರಂಗರೂಪೈರ್ಮನೋಹರೈಃ ॥ ೪೭ ॥

ಅನ್ಯೈರ್ವಾರಂಗರೂಪೈಶ್ಚ ಪ್ರೀಣಯೇತ್ಪರಮೇಶ್ವರಂ ।
ಏಕಾದಶ್ಯಾಂ ಸಮಾರಭ್ಯ ಪಂಚಮ್ಯಂತಂ ಸಮಾಪಯೇತ್ ॥ ೪೮ ॥

ಪಂಚಾಹಾನಿ ತ್ರ್ಯಹಾನಿ ವಾ ಡೋಲೋತ್ಸವೋ ವಿಧೀಯತೇ ।
ದಕ್ಷಿಣಾಭಿಮುಖಂ ಕೃಷ್ಣಂ ಡೋಲಮಾನಂ ಸಕೃನ್ನರಾಃ ॥ ೪೯ ॥

ದೃಷ್ಟ್ವಾಽಪರಾಧನಿಚಯೈಃ ಮುಕ್ತಾಸ್ತೇ ನಾತ್ರ ಸಂಶಯಃ ।
ನಿಕ್ಷಿಪ್ಯ ಜಲಪಾತೇ ಚ ಮಾಸೇ ಮಾಧವಸಂಜ್ಞಕೇ ॥ ೫೦ ॥

---

೪೫ ಫಾಲ್ಗುನಮಾಸದ ಚತುರ್ದಶಿಯ ದಿನ ಎಂಟನೇಯಾಮದಲ್ಲಿ ಡೋಲೋತ್ಸವವನ್ನು ಮಾಡಬೇಕು. ಇದು ಕಲಿಯುಗದಲ್ಲಿ ವಿಶೇಷವಾದುದು.

೪೬. ಅಥವಾ ಫಾಲ್ಗುನ ಪೌರ್ಣಮಿಯ ದಿನ. ಆದಿನ ಪ್ರತಿಪತ್ತು ಸೇರಿರಬೇಕು ಅಂತಹ ಸಂಧಿಯಲ್ಲಿ ಬುಕ್ಕಿಹಿಟ್ಟು ಮುಂತಾದ ಚೂರ್ಣಗಳಿಂದ ಪೂಜಿಸಬೇಕು.

೪೭. ಬಿಳಿದು, ಕೆಂಪು, ಹಳದಿ, ಗುಲಾಬಿ ಬಣ್ಣಗಳ ಹಿಟ್ಟುಗಳಿಗೆ ಕರ್ಪೂರವನ್ನು ಬೆರಸಿ ಪೂಜಿಸಬೇಕು. ಅರಿಸಿನವನ್ನೂ ಅದಕ್ಕೆ ಸೇರಿಸಿ ಪೂಜಿಸಬೇಕು

೪೮. ಇನ್ನೂ ಬೇರೆಗಿರುವ ಪುಡಿಗಳಿಂದ ದೇವರನ್ನು ಪೂಜಿಸಬೇಕು. ಇದು ಏಕಾದಶಿಯ ದಿನ ಮೊದಲು ಮಾಡಿ ಪಂಚಮಿಯ ದಿನ ಮುಗಿಸಬೇಕಾದುದು.

೪೯-೫೦. ಆದಿಲ್ಲದಿದ್ದರೆ ಐದು ದಿನ ಮಾಡಬಹುದು. ಅಥವಾ ಮೂರುದಿನ ಈ ಡೋಲೋತ್ಸವವನ್ನು ಮಾಡಬಹುದು. ದಕ್ಷಿಣಾಭಿಮುಖವಾಗಿ ಮಲಗಿಸಿ ತೂಗುತ್ತಿರುವ ಕೃಷ್ಣನನ್ನು ನೋಡಿದರೆ ಪಾಪವೆಲ್ಲವೂ ನಾಶವಾಗುತ್ತವೆ.

ಸೌವರ್ಣಪಾತ್ರೇ ರೌಪ್ಯೇ ವಾ ತಾಮ್ರೇವಾ ಮೃಣ್ಮಯೇಪಿ ವಾ ।
ತೋಯಸ್ಥಂ ಯೋರ್ಚಯೇದ್ದೇವಂ ಸಾಲಗ್ರಾಮಸಮುದ್ಭವಂ ॥ ೫೧ ॥

ಪ್ರತಿಮಾಂ ವಾ ಮಹಾಭಾಗೇ ತಸ್ಯ ಪುಣ್ಯಂ ನ ಗಣ್ಯತೇ ।
ದಮನಾರೋಪಣಂ ಕೃತ್ವಾ ಶ್ರೀವಿಷ್ಣೌ ಚ ಸಮರ್ಪಯೇತ್ ॥ ೫೨ ॥

ವೈಶಾಖೇ ಶ್ರಾವಣೇ ಭಾದ್ರೇ ಕರ್ತವ್ಯಂ ವಾ ತದರ್ಪಣಂ ।
ಪೂರ್ವೇ ಪೂರ್ವೇ ತು ಪಾತಸ್ಥೇ ದಮನಾದಿಷು ಕರ್ಮಸು ॥ ೫೩ ॥

ಪ್ರಕರ್ತವ್ಯಂ ವಿಧಾನೇನ ತ್ವನ್ಯಥಾ ನಿಷ್ಫಲಂ ಭವೇತ್ ।
ವೈಶಾಖೇ ಚ ತೃತೀಯಾಯಾ ಜಲಮಧ್ಯೇ ವಿಶೇಷತಃ ॥ ೫೪ ॥

ಅಥವಾ ಮಂಡಲೇ ಕುರ್ಯಾತ್ಕೃಶಾಂಗಸ್ಯೈವ ಪುಷ್ಟಿದಂ ॥ ೫೫ ॥

ಚಂದನಾಗರುಹ್ರೀಬೇರಂ ಕೃಷ್ಣಂ ಕುಂಕುಮರೋಚನಾ ॥ ೫೬ ॥

---

೫೧. ವೈಶಾಖಮಾಸದಲ್ಲಿ, ಚಿನ್ನ, ಬೆಳ್ಳಿ, ತಾಮ್ರ, ಅಥವಾ ಮಣ್ಣಿನ ಪಾತ್ರೆಯಲ್ಲಿ ನೀರನ್ನು ಹಾಕಿ ಸಾಲಗ್ರಾಮರೂಪವಾದ ಸ್ವಾಮಿಯನ್ನು ಅಥವಾ ಕೃಷ್ಣ ಪ್ರತಿಮೆಯನ್ನು ಅದರಲ್ಲಿಟ್ಟು ಪೂಜಿಸಿದರೆ ಅವನಿಗೆ ಲೆಕ್ಕವಿಲ್ಲದಷ್ಟು ಪುಣ್ಯವು ಬರುತ್ತದೆ.

೫೨. ದವನವನ್ನು ಫಲಕ್ಕೆ ಸಿಕ್ಕಿಸಿ ವಿಷ್ಣುವಿಗೆ ಅರ್ಪಿಸಬೇಕು. ಇದನ್ನು ವೈಶಾಖ, ಶ್ರಾವಣ, ಭಾದ್ರಪದಗಳಲ್ಲಿ ಮಾಡಬೇಕು. ಮತ್ತು ತಟ್ಟಿಕುಟ್ಟಿಮಾಡುವ ಕೆಲಸವನ್ನು ಮಾಡಬೇಕು.

೫೩. ವಾತವು ಹೆಚ್ಚಾದ ಹಿಂದು ಹಿಂದಿನ ತಿಂಗಳುಗಳಲ್ಲಿ ಈ ಕೆಲಸವನ್ನು ಮಾಡಬೇಕು. ಇಷ್ಟ ಬಂದಾಗ ಮಾಡಿದರೆ ಫಲವಿರುವುದಿಲ್ಲ.

೫೪. ವೈಶಾಖಮಾಸದ ತದಿಗೆಯ ದಿನ ನೀರಿನ ಮಧ್ಯದಲ್ಲಿ ಈ ಕೆಲಸವು ಪ್ರಶಸ್ತವಾದುದು.

೫೫. ಕೃಶಾಂಗಕ್ಕೆ ಪುಷ್ಟಿಯನ್ನು ಕೊಡುವ ಈ ಕೆಲಸವನ್ನು ಪ್ರಯತ್ನಪಟ್ಟು ಮಂಡಲದಲ್ಲಿಯಾದರೂ ಮಾಡಬೇಕು.

೫೬-೫೭. ಶ್ರೀಗಂಧ, ಅಗರು, ಮಡಿವಾಳ, ಪಚ್ಚಕರ್ಪೂರ, ಕುಂಕುಮಕೇಸರಿ,

ಜಟಾಮಾಂಸೀ ಮುರಾ ಚೈವ ವಿಷ್ಣೋರ್ಗಂಧೋಷ್ಟಕಂ ವದುಃ ।
ತೈಶ್ಚ ಗಂಧಯುಕ್ತೈಶ್ಚಾಪಿ ವಿಷ್ಣೋರಂಗಾನಿ ಲೇಪಯೇತ್ ॥ ೫೭ ॥

ಘೃಷ್ಟಂ ಚ ತುಲಸೀಕಾಷ್ಠಂ ಕರ್ಪೂರಾಗರುಯೋಗತಃ ।
ಅಥವಾ ಕೇಸರೈರ್ಯೋಜ್ಯಂ ಹರಿಚಂದನಮುಚ್ಯತೇ ॥ ೫೮ ॥

ಯಾತ್ರಾಕಾಲೇ ತು ಯೇ ಕೃಷ್ಣಂ ಭಕ್ತ್ಯಾ ಪಶ್ಯಂತಿ ಮಾನವಾಃ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೫೯ ॥

ಸುಗಂಧಿಮಿಶ್ರಿತೈಸ್ತೋಯೈರ್ದೇವದೇವಂ ಗಳಂತಿ ಯೇ ।
ಅಥವಾ ಪುಷ್ಪಮಧ್ಯೇ ತು ಸ್ಥಾಪಯೇಜ್ಜಗದೀಶ್ವರಂ ॥ ೬೦ ॥

ವೃಂದಾವನಂ ತತ್ವ ಗತ್ವಾ ಹ್ಯುಪಸ್ಕೃತ್ಯ ಫಲಾನಿ ಚ ।
ವಿಷ್ಣುಭಕ್ತೇನ ಯೋಗ್ಯೇನ ಭೋಜಯೇತ್ತದ್ದೇಶಷಃ ॥ ೬೧ ॥

ನಾರಿಕೇಳಫಲಂ ಭೀಜಂ ಕೋಶಂ ಚೋದ್ಧೃತ್ಯ ದಾಪಯೇತ್ ।
ಘೋಂಟಾಫಲಂ ಚ ಪನಸಂ ಕೋಶಮುದ್ಧೃತ್ಯ ದಾಪಯೇತ್ ॥ ೬೨ ॥

---

ಗೋರೋಚನ, ಜಟಾಮಾಂಸಿ, ಮುರಾ ಎಂಬ ಸುವಾಸನೆಯದ್ರವ್ಯ ಇವಿಷ್ಣು ಕೃಷ್ಣನಿಗೆ ಅಷ್ಟಗಂಧಗಳು. ಇವನ್ನು ಸೇರಿಸಿ ವಿಷ್ಣುವಿನ ಅಂಗಕ್ಕೆ ಲೇಪಿಸಬೇಕು.

೫೮. ತುಳಸಿಯ ಕಡ್ಡಿಯ ಗಂಧವನ್ನು ತೇದು ಪಚ್ಚಕರ್ಪೂರ ಅಗರು ಅಥವಾ ಕೇಸರಿಯನ್ನು ಹಾಕಿದರೆ ಅದು ಹರಿಚಂದನವಾಗುತ್ತದೆ.

೫೯. ಜಾತ್ರೆಯ ಕಾಲದಲ್ಲಿ ಕೃಷ್ಣನನ್ನು ಭಕ್ತಿಯಿಂದ ನೋಡಿದರೆ ಕೋಟಿ ಕಲ್ಪಗಳವರೆಗೂ ಅವರು ಹಿಂತಿರುಗುವುದಿಲ್ಲ. ವೈಕುಂಠ ಪ್ರಾಪ್ತಿಯಾಗುತ್ತದೆ.

೬೦-೬೧. ಒಳ್ಳೆಯ ಗಂಧದಿಂದ ಕೂಡಿರುವ ನೀರಿನಲ್ಲಿ ದೇವರನ್ನು ತೊಳೆಯಬೇಕು. ಅದಿಲ್ಲದಿದ್ದರೆ ಹೂವಿನ ಮಧ್ಯದಲ್ಲಿ ದೇವರನ್ನು ಇಡಬೇಕು ವೃಂದಾವನಕ್ಕೆ ಹೋಗಿ ಹಣ್ಣುಗಳನ್ನು ಅಲ್ಲಿಟ್ಟು ಭಕ್ತನು ಅದೆಲ್ಲವನ್ನು ತಿನ್ನಬೇಕು.

೬೨-೬೪. ತೆಂಗಿನಕಾಯನ್ನು ಸಿಪ್ಪೆ ಕರಟಗಳನ್ನು ತೆಗೆದು, ನಿವೇದಿಸಬೇಕು ಅಡಕೆಯನ್ನು ಸಿಪ್ಪೆತೆಗೆದಿಡಬೇಕು. ಹಲಸನ್ನು ಬಿಚ್ಚಿಡಬೇಕು. ಮೊಸರನ್ನಕ್ಕೆ

ದಧ್ನಾ ವಿಮಿಶ್ರಿತಂ ಚಾನ್ನಂ ಘೃತೇನಾಪ್ಲುತ್ಯ ದಾಪಯೇತ್ ।
ಪಾಚಿತಂ ಪಿಷ್ಟಕಂ ಪೂಪಮಷ್ಟಾದಶಘೃತೇನ ಚ ॥ ೬೩ ॥

ತಿಲೈಶ್ಚ ತಿಲಸಂಮಿಶ್ರೈಃ ಫಲಂ ಪಕ್ವಂ ಪ್ರದಾಪಯೇತ್ ।
ಯದ್ಯದೇವಾತ್ಮನಃ ಪ್ರೀತಂ ತತ್ತದೀಶಾಯ ದಾಪಯೇತ್ ॥ ೬೪ ॥

ದತ್ವಾ ನೈವೇದ್ಯವಸ್ತ್ರಾದಿ ನಾದದೀತ ಕಥಂಚನ ।
ತ್ಯಕ್ತಂ ಚ ವಿಷ್ಣುಮುದ್ದಿಶ್ಯ ತದ್ಭಕ್ತೇಭ್ಯೋ ವಿಶೇಷತಃ ॥ ೬೫ ॥

ಇತಿ ತೇ ಕಥಿತಂ ಕಿಂಚಿತ್ಸಮಾಸೇನ ಮಹೇಶ್ವರಿ ।
ಗೋಪ್ತವ್ಯಂ ಚ ಪ್ರಯತ್ನೇನ ಸ್ವಯೋನಿರಿವ ಪಾರ್ವತಿ ॥ ೬೬ ॥

ಶ್ರೀಕೃಷ್ಣರೂಪಗುಣವರ್ಣನಶಾಸ್ತ್ರವರ್ಗೇ ।
ಬೋಧಾಧಿಕಾರ ಇಹ ಚೇದಲಮನ್ಯಪಾಠೈಃ ।
ತತ್ಪ್ರೇಮಭಾವರಸಭಕ್ತಿವಿಲಾಸನಾಮ ।
ಹಾರೇಷು ಚೇತ್ಖಲು ಮನಃ ಕಿಮು ಕಾಮನೀಭಿಃ ॥ ೬೭ ॥

---

ತುಪ್ಪದ ಒಗ್ಗರಣೆ ಹಾಕಿ ನಿವೇದಿಸಬೇಕು. ಬೇಯಿಸಿದ ಒಬ್ಬಟ್ಟುಗಳನ್ನು ತುಪ್ಪದಿಂದ ಬೇಯಿಸಿದ ಕರ್ಜಿಕಾಯಿಗಳನ್ನು ಹದಿನೆಂಟು ಇಡಬೇಕು. ಎಳ್ಳುಂಡೆ ಚಿಗಳಿಗಳನ್ನಿಡಬೇಕು. ಎಳ್ಳನ್ನು ಬೆರಸಿದ ಪದಾರ್ಥಗಳನ್ನಿಡಬೇಕು. ಪೂಜೆಮಾಡತಕ್ಕವನಿಗೆ ಇಷ್ಟವಾದುದೆಲ್ಲವನ್ನೂ ಇಡಬೇಕು.

೬೫. ನಿವೇದನ ಮಾಡಿದ ಪದಾರ್ಥವಸ್ತ್ರಗಳನ್ನು ತೆಗೆದುಕೊಳ್ಳಬಾರದು ಬಿಟ್ಟುಬಿಡಬೇಕು. ವಿಷ್ಣುಭಕ್ತರಿಗೆ ಕೊಟ್ಟರೆ ವಿಶೇಷವು.

೬೬. ಎಲೈ ಪಾರ್ವತಿಯೇ ಇದೆಲ್ಲವನ್ನೂ ಸಂಕ್ಷೇಪವಾಗಿ ಹೇಳಿದ್ದೇನೆ. ನಿನ್ನ ಗುಹ್ಯಸ್ಥಳವನ್ನು ನೀನು ಗುಟ್ಟಾಗಿಡುವಂತೆ ಇದನ್ನು ಗೋಪ್ಯವಾಗಿಡು.

೬೭. ಶ್ರೀಕೃಷ್ಣನ ರೂಪಗುಣಗಳನ್ನು ಬೋಧಿಸುವ ಶಾಸ್ತ್ರದಲ್ಲಿ ಅಧಿಕಾರವಿದ್ದರೆ ಮಿಕ್ಕಪಾಠಗಳಿಂದ ಉಪಯೋಗವೇನು ? ಅವನಲ್ಲಿ ಪ್ರೀತಿ, ಭಾವ, ರಸ ವಿಲಾಸಗಳಿದ್ದರೆ ಹೆಂಗಸರಿಂದೇನು ಪ್ರಯೋಜನ ?

ತಂ ಚೇತಸಾ ಪ್ರಭಜತಾಂ ವ್ರಜಬಾಲಕೇಂದ್ರಂ
ವೃಂದಾವನಂ ಕ್ಷಿತಿತಳಂ ಯಮುನಾಜಲಂ ಚ ।
ತಲ್ಲೋಕನಾಥಪದಪಂಕಜಧೂಳಿಮಿಶ್ರೇ
ಲಿಪ್ತಂ ವಪುಃ ಕಿಲ ವೃಥಾಗುರುಚಂದನಾದ್ಯೈಃ ॥ ೬೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಉಮಾಮಹೇಶ್ವರ ಸಂವಾದೇ ವೃಂದಾವನಮಹಾತ್ಮ್ಯೇ ಅಶೀತಿತಮೋಽಧ್ಯಾಯಃ

---

೬೮. ಆ ಶ್ರೀಕೃಷ್ಣನನ್ನೂ ಬೃಂದಾವನ್ನೂ ಯಮುನಾಜಲವನ್ನೂ ಯಾವಾಗಲೂ ಧ್ಯಾನಿಸುತ್ತಿರಬೇಕು. ಆ ಸ್ವಾಮಿಯ ಪಾದದ ಧೂಳಿಯಿಂದ ಈ ದೇಹವು ಲೇಪಿತವಾದರೆ ಚಂದನ, ಅಗರು ಇವೆಲ್ಲವೂ ವ್ಯರ್ಥವು.

ಇಂತು ಪದ್ಮಮಹಾಪುರಾಣದ ಪಾತಾಳಖಂಡದ ಉಮಾಮಹೇಶ್ವರ ಸಂವಾದದಲ್ಲಿ ವೃಂದಾವನ ಮಹಿಮೆ ಎಂಬ ಎಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಏಕಾಶೀತಿತಮೋಽಧ್ಯಾಯಃ ॥



॥ ಋಷಯ ಊಚುಃ ॥

ಸೂತ ಜೀವ ಚಿರಂ ಸಾಧೋ ಶ್ರೀಕೃಷ್ಣಚರಿತಾವೃತಂ ।
ತ್ವಯಾ ಪ್ರಕಾಶಿತಂ ಸರ್ವಂ ಭಕ್ತಾನಾಂ ಭವತಾರಣಂ ॥ ೧ ॥

ಶ್ರೀಕೃಷ್ಣಲೀಲಾಂ ನಿಖಿಲಾಂ ಬ್ರೂಹಿ ದೈನಂದಿನಂ ವಿಭೋ ।
ಯಯಾ ಕರ್ಣಗತಯಾ ಸಾಧೋ ಕೃಷ್ಣೇ ಭಕ್ತಿರ್ವಿವರ್ಧತೇ ॥ ೨ ॥

ಗುರೋಶ್ಶಿಷ್ಯಸ್ಯ ಮಂತ್ರಸ್ಯ ವಿಧಾನಂ ಲಕ್ಷಣಂ ಪೃಥಕ್ ।
ವದಾಸ್ಮಾಕಂ ಮಹಾಭಾಗ ತ್ವಂ ಹಿ ನಃ ಪರಮಸ್ಸುಹೃತ್ ॥ ೩ ॥

---

### ಎಂಭತ್ತೊಂದನೆಯ ಅಧ್ಯಾಯ

೧. ಋಷಿಗಳು ಹೇಳಿದರು– ಎಲೈ ಸೂತನೇ ಭಕ್ತರಿಗೆ ಜನನ ಮರಣ ನಾಶಕವಾದ ಶ್ರೀಕೃಷ್ಣನ ಚರಿತ್ರೆಯನ್ನು ಹೇಳಿದೆ. ಆದ್ದರಿಂದ ಬಹುಕಾಲ ಬದುಕು.

೨. ಯಾವ ಶ್ರೀಕೃಷ್ಣನ ಚರಿತ್ರೆಯನ್ನು ಕೇಳಿದುದರಿಂದ ಕೃಷ್ಣನಲ್ಲಿ ಭಕ್ತಿ ಹೆಚ್ಚುತ್ತದೆಯೋ ಅಂತಹ ಶ್ರೀಕೃಷ್ಣನ ನಿತ್ಯದ ಲೀಲೆಯನ್ನು ಹೇಳು.

೩. ಗುರು, ಶಿಷ್ಯ, ಮಂತ್ರಗಳ ವಿಧಾನವನ್ನೂ ಲಕ್ಷಣಗಳನ್ನೂ ಬೇರೆಬೇರೆಯಾಗಿ ಹೇಳು. ನೀನೇ ನಮಗೆ ಮುಖ್ಯ ಸ್ನೇಹಿತನು,

॥ ಸೂತ ಉವಾಚ ॥

ಏಕದಾ ಯಮುನಾತೀರೇ ಸಮಾಸೀನಂ ಜಗದ್ಗುರುಂ ।
ನಾರದಃ ಪ್ರಣಿಪತ್ಯಾಹ ದೇವದೇವಂ ಸದಾಶಿವಂ ॥ ೪ ॥

॥ ನಾರದ ಉವಾಚ ॥

ದೇವದೇವ ಮಹಾದೇವ ಸರ್ವಜ್ಞ ಜಗದೀಶ್ವರ ।
ಭಗವದ್ಧರ್ಮತತ್ವಜ್ಞ ಕೃಷ್ಣಮಂತ್ರವಿದಾಂ ವರ ॥ ೫ ॥

ಕೃಷ್ಣಮಂತ್ರಾ ಮಯಾ ಲಬ್ಧಾಃ ತ್ವತ್ತೋ ಯೇ ಚ ಪಿತುಃ ಪದೇ ।
ತೇ ಸರ್ವೇ ಸಾಧಿತಾ ಯತ್ನಾನ್ಮಂತ್ರರಾಜಾದಯೋ ಮಯಾ ॥ ೬ ॥

ಬಹುವರ್ಷಸಹಸ್ರೇಷು ಶಾಕಮೂಲಫಲಾಶಿನಾ ।
ಶುಷ್ಕಪರ್ಣಾಂಬುವಾಯ್ವಾದಿ ಭೋಜಿನಾ ಚ ನಿರಾಶಿನಾ ॥ ೭ ॥

ಸ್ತ್ರೀಣಾಂ ಸಂದರ್ಶನಾಲಾಪವರ್ಜಿನಾ ಭೂಮಿಶಾಯಿನಾ ।
ಕಾಮಾದಿಷಡ್ಗುಣಂ ಜಿತ್ವಾ ಬಾಹ್ಯೇಂದ್ರಿಯಂ ನಿಯಮ್ಯ ಚ ॥ ೮ ॥

---

೪. ಸೂತರು ಹೇಳಿದರು— ಒಂದು ಸಾರಿ ಯಮುನಾತೀರದಲ್ಲಿ ಜಗದ್ಗುರುವಾದ ಸದಾಶಿವನನ್ನು ನಾರದನು ನಮಸ್ಕರಿಸಿ ಕೇಳಿದನು.

೫-೬. ನಾರದನು ಹೇಳಿದನು— ದೇವದೇವನೂ ಸರ್ವಜ್ಞನೂ ಆದ ಜಗದೀಶ್ವರನೇ ನಿನ್ನಿಂದಲೂ ನಮ್ಮ ತಂದೆಯಿಂದಲೂ ಅನೇಕವಾದ ಕೃಷ್ಣಮಂತ್ರಗಳು ಹೊಂದಲ್ಪಟ್ಟಿವೆ. ಅದೆಲ್ಲವನ್ನೂ ಪ್ರಯತ್ನದಿಂದ ಸಾಧಿಸಿದ್ದೇನೆ.

೭-೮. ಬಹಳ ವರ್ಷಗಳವರೆಗೂ ಕಾಯಿಪಲ್ಯ ಗೆಡ್ಡೆಗೆಣಸು ಫಲಗಳನ್ನೂ ಒಣಗಿದೆಲೆ ನೀರು ವಾಯುಗಳನ್ನೂ, ಆಹಾರವಾಗಿಟ್ಟುಕೊಂಡೂ ಕೊನೆಗೆ ಆಹಾರವಿಲ್ಲದೆಯೂ, ಸ್ತ್ರೀಯರ ದರ್ಶನ, ಅವರೊಡನೆ ಮಾತು ಇವುಗಳನ್ನು ಬಿಟ್ಟು ಬಾಹ್ಯೇಂದ್ರಿಯವನ್ನು ನಿಯಮಿಸಿಯೂ, ನೆಲದ ಮೇಲೆ ಮಲಗಿಕೊಳ್ಳುತ್ತಾ ಎಲ್ಲವನ್ನೂ ಸಾಧಿಸಿದ್ದೇನೆ.

ಏವಂ ಕೃತೇಽಪಿ ನೈವಾತ್ಮಾ ಸಂತುಷ್ಟೋ ಮಮ ಶಂಕರ ।
ತದ್ಬ್ರೂಹಿ ಯತ್ಪ್ರಸಿದ್ಧ್ಯೇತ ಸಂಸ್ಕಾರಾದ್ಯೈರ್ವಿನಾ ಪ್ರಭೋ ॥ ೯ ॥

ಸಕೃದುಚ್ಚಾರಣಾನ್ನೃಣಾಂ ದದಾತಿ ಫಲಮುತ್ತಮಂ ।
ಯದಿ ಯೋಗ್ಯೋಽಸ್ಮಿ ದೇವೇಶ ತದಾ ಮೇ ಕೃಪಯಾ ವದ ॥ ೧೦ ॥

॥ ಶಿವ ಉವಾಚ ॥

ಸಾಧು ಪೃಷ್ಟಂ ಮಹಾಭಾಗ ತ್ವಯಾ ಲೋಕಹಿತೈಷಿಣಾ ।
ಸುಗೋಪ್ಯಮಪಿ ವಕ್ಷ್ಯಾಮಿ ಮಂತ್ರಚಿಂತಾಮಣಿಂ ತವ ॥ ೧೧ ॥

ರಹಸ್ಯಾನಾಂ ರಹಸ್ಯಂ ಯದ್ಗುಹ್ಯಾನಾಂ ಗುಹ್ಯಮುತ್ತಮಂ ।
ನ ಮಯಾ ಕಥಿತಂ ದೇವ್ಯೈ ನಾಗ್ರಜೇಭ್ಯಃ ಪುರಾ ತವ ॥ ೧೨ ॥

ವಕ್ಷ್ಯಾಮಿ ಯುಗಲಂ ತುಭ್ಯಂ ಕೃಷ್ಣಮಂತ್ರಮನುತ್ತಮಂ ।
ಮಂತ್ರಚಿಂತಾಮಣಿರ್ನಾಮ ಯುಗಳಂ ದ್ವಯಮೇವ ಚ ॥ ೧೩ ॥

ಪರ್ಯಾಯಾ ಅಸ್ಯ ಮಂತ್ರಸ್ಯ ತಥಾ ಪಂಚಪದೀತಿ ಚ ।
ಗೋಪೀಜನಪದಂ ವಲ್ಲಭಾಂತಂ ತು ಚರಣಾನಿ ಚ ॥ ೧೪ ॥

---

೯. ಹೀಗೆ ಮಾಡಿದರೂ ನನ್ನ ಆತ್ಮವು ಸಂತೋಷಗೊಳ್ಳಲಿಲ್ಲ. ಸಂಸ್ಕಾರವಿಲ್ಲದೇನೇ ಆತ್ಮತುಷ್ಟಿಹೊಂದಿ ಸಿದ್ಧಿಸುವ ಮಂತ್ರವನ್ನು ಹೇಳು.

೧೦ ಒಂದೇ ಆವರ್ತಿ ಉಚ್ಚರಿಸಿದ ಮಾತ್ರದಿಂದಲೇ ಉತ್ತಮ ಫಲವನ್ನು ಕೊಡುವ ಮಂತ್ರವನ್ನು ನಾನು ಯೋಗ್ಯನೆಂದು ನಿನಗೆ ತಿಳಿದರೆ ಕೃಪೆಯಿಂದ ಹೇಳು.

೧೧. ಶಿವನು ಹೇಳಿದನು- ಲೋಕಹಿತೈಷಿಯಾದ ನೀನು ಕೇಳಿದುದು ಚೆನ್ನಾಗಿದೆ. ಗೋಪ್ಯವಾದರೂ ಕೂಡ ಮಂತ್ರಚಿಂತಾಮಣಿಯನ್ನು ನಿನಗೆ ಹೇಳುತ್ತೇನೆ.

೧೨-೧೫. ಯಾವುದು ಅತಿರಹಸ್ಯವೋ, ಉತ್ತಮವೋ, ನಿನ್ನ ಹಿರಿಯರಿಗೂ ಕೂಡ ಯಾವುದನ್ನು ಹೇಳಲಿಲ್ಲವೋ ಅದನ್ನು ಈಗ ನಿನಗೆ ಹೇಳುತ್ತೇನೆ. ಕೃಷ್ಣಮಂತ್ರದ ಯುಗಳವನ್ನು ನಿನಗೆ ಹೇಳುತ್ತೇನೆ. ಮಂತ್ರಚಿಂತಾಮಣಿ, ಯುಗಳ, ದ್ವಯ, ಪಂಚಪದಿ ಎಂಬಿವೂ ಈ ಮಂತ್ರದ ಬೇರೆ ಬೇರೆ ಹೆಸರುಗಳು. ಗೋಪೀಜನಪದವೆಂಬುದು ಮೊದಲು, ವಲ್ಲಭವೆಂಬುದು ಕೊನೆ, ಶರಣಂ ಪ್ರಪದ್ಯೇ ಎಂಬುವೂ

ಶರಣಂ ಚ ಪ್ರಪದ್ಯೇಚೇತ್ಯೇಷ ಪಂಚಪದಾತ್ಮಕಃ ।
ಮಂತ್ರಚಿಂತಾಮಣಿಃ ಪ್ರೋಕ್ತಃ ಷೋಡಶಾರ್ಣೋ ಮಹಾಮನುಃ ॥ ೧೫ ॥

ನಮೋ ಗೋಪಿಜನೇತ್ಯುಕ್ತ್ವಾ ವಲ್ಲಭಾಭ್ಯಾಂ ವದೇತ್ತತಃ ।
ಪದದ್ವಯಾತ್ಮಕೋ ಮಂತ್ರೋ ದಶಾರ್ಣಃ ಖಲು ಕಥ್ಯತೇ ॥ ೧೬ ॥

ಏತಾಂ ಪಂಚಪದೀಂ ಜಪ್ತ್ವಾ ಶ್ರದ್ಧಯಾಽಶ್ರದ್ಧಯಾ ಸಕೃತ್ ।
ಕೃಷ್ಣಪ್ರಿಯಾಣಾಂ ಸಾನ್ನಿಧ್ಯಂ ಗಚ್ಛತ್ಯೇವ ನ ಸಂಶಯಃ ॥ ೧೭ ॥

ನ ಪುರಶ್ಚರಣಪ್ರೇಕ್ಷಾ ನಾಸ್ಯನ್ಯಾಸ ವಿಧಿಕ್ರಮಃ ।
ನ ದೇಶಕಾಲನಿಯಮೋ ನಾರಿಮಿತ್ರಾದಿಶೋಧನಂ ॥ ೧೮ ॥

ಸರ್ವೇಽಧಿಕಾರಿಣಶ್ಚಾತ್ರ ಚಂಡಾಲಾಂತಾ ಮುನೀಶ್ವರ ।
ಸ್ತ್ರಿಯಶ್ಶೂದ್ರಾದಯಾಶ್ಚಾಪಿ ಜಡಮೂಕಾದ್ಯಪುಂಗವಾಃ ॥ ೧೯ ॥

ಅನ್ಯೇ ಹೂಣಾ ಕಿರಾತಾಶ್ಚ ಪುಳಿಂದಾಃ ಪುಲ್ಕಸಾಸ್ತಥಾ ।
ಆಭೀರಾ ಯವನಾಃ ಕಂಕಾಃ ಸ್ವಶಾರ್ದ್ಯಾಃ ಪಾಪಯೋನಯಃ ॥ ೨೦ ॥

---

ಸೇರಿ ಐದು ಪದಗಳು. ಇದೇ ಮಂತ್ರ ಚಿಂತಾಮಣಿಯು ಹದಿನಾರಕ್ಷರದ ಮಂತ್ರವು. ("ಓಂ ಗೋಪೀಜನವಲ್ಲಭಂ ಶರಣಂ ಪ್ರಪದ್ಯೇ ಸ್ವಾಹಾ" ಎಂಬುದೇ ಷೋಡಶಾರ್ಣ ಎಂದರೆ ಹದಿನಾರಕ್ಷರದ ಮಂತ್ರವು.)

೧೬. ಗೋಪೀಜನವಲ್ಲಭಾಭ್ಯಾಂ ಎಂಬುದು ಪದದ್ವಯಾತ್ಮಕವಾದ ಮಂತ್ರವು ಇದರ ಹಿಂದಕ್ಕೆ ನಮೋ ಎಂಬುದನ್ನು ಸೇರಿಸಬೇಕು ಆಗ "ನಮೋ ಗೋಪೀಜನ ವಲ್ಲಭಾಭ್ಯಾಂ" ಎಂದಾಗುತ್ತದೆ ಇದು ಹತ್ತಕ್ಷರದ ಮಂತ್ರವು. ಇದಕ್ಕೆ ದಶಾರ್ಣ ವೆಂದು ಹೆಸರು.

೧೭. ಈ ಪಂಚಪದಿಯನ್ನು ಶ್ರದ್ಧೆಯಿಂದಾಗಲಿ ಇಲ್ಲನಾಗಲಿ ಒಂದು ಬಾರಿ ಜಪಿಸಿದರೂ ಕೃಷ್ಣನ ಪ್ರಿಯೆಯರ ಸಾನ್ನಿಧ್ಯವನ್ನು ಹೊಂದುತ್ತಾನೆ. ಸಂಶಯವಿಲ್ಲ

೧೮. ಇದರಲ್ಲಿ ಪುನಶ್ಚರಣೆಯ ಅಪೇಕ್ಷೆಯಿಲ್ಲ. ನ್ಯಾಸದ ವಿಧಿಯಿಲ್ಲ ದೇಶ ಕಾಲಗಳ ನಿಯಮವಿಲ್ಲ. ಅರಿಮಿತ್ರಶೋಧನೆ ಬೇಕಿಲ್ಲ.

೧೯-೨೨. ಸ್ತ್ರೀಯರು, ಶೂದ್ರರು, ಜಡನು ಮೂಕನೇ ಮುಂತಾಗಿ ಚಂಡಾ ಲರೂ ಇದಕ್ಕೆ ಅಧಿಕಾರಿಗಳು. ಮಿಕ್ಕ ಹೂಣರು, ಕಿರಾತರು, ಪುಳಿಂದರು, ಪುಲ್ಕ ಸರು, ಆಭೀರರು, ಯವನರು, ಕಂಕರು, ಸ್ವಶರು ಇವರೇ ಮೊದಲಾದ ಪಾಪಜಾತಿ

ದಂಭಾಹಂಕಾರಪರಮಾಃ ಪಾಪಾಃ ಪೈಶುನ್ಯ ತತ್ಪರಾಃ ।
ಗೋಬ್ರಾಹ್ಮಣಾದಿಹಂತಾರೋ ಮಹೋಪಪಾತಕಾನ್ವಿತಾಃ ॥ ೨೧ ॥

ಜ್ಞಾನವೈರಾಗ್ಯರಹಿತಾಃ ಶ್ರವಣಾದಿವಿವರ್ಜಿತಾಃ ।
ಏತೇ ಚಾನ್ಯೇ ಚ ಸರ್ವೇಷು ಮರ್ನೋರಸ್ಯಾಧಿಕಾರಿಣಃ ॥ ೨೨ ॥

ಯದಿ ಭಕ್ತಿರ್ಭವೇದೇಷಾಂ ಕೃಷ್ಣೇ ಸರ್ವೇಶ್ವರೇಶ್ವರೇ ।
ತದಾಧಿಕಾರಿಣಸ್ಸರ್ವೇ ನಾನ್ಯಥಾ ಮುನಿಸತ್ತಮ ॥ ೨೩ ॥

ಯಾಜ್ಞಿಕೋ ದಾನನಿರತಃ ಸರ್ವತಂತ್ರೋಪಸೇವಕಃ ।
ಸತ್ಯವಾದೀ ಯತಿರ್ವಾಪಿ ವೇದವೇದಾಂಗಪಾರಗಃ ॥ ೨೪ ॥

ಬ್ರಹ್ಮನಿಷ್ಠಃ ಕುಲೀನೋ ವಾ ತಪಸ್ವೀ ವ್ರತತತ್ಪರಃ ।
ಅತ್ರಾಧಿಕಾರೀ ನ ಭವೇತ್ಕೃಷ್ಣಭಕ್ತಿವಿವರ್ಜಿತಃ ॥ ೨೫ ॥

ತಸ್ಮಾದ್ಧರಾವಭಕ್ತಾಯ ಕೃತಘ್ನಾಯ ನ ಮಾನಿನೇ ।
ನ ಚ ಶ್ರದ್ಧಾವಿಹೀನಾಯ ವಕ್ತವ್ಯಂ ನಾಸ್ತಿಕಾಯ ಚ ॥ ೨೬ ॥

---

ಯಾವರು ದಂಭ ಅಹಂಕಾರವನ್ನುಳ್ಳವರೂ, ಪಾಪ, ಚಾಡಿಗಳಲ್ಲಿ ನಿರತರೂ, ಗೋವು ಬ್ರಾಹ್ಮಣರನ್ನು ಕೊಲ್ಲುವವರೂ, ಮಹಾಪಾತಕ ಉಪಪಾತಕಗಳಿಂದ ಕೂಡಿದವರೂ ಜ್ಞಾನ ವೈರಾಗ್ಯವಿಲ್ಲದವರೂ ಇವರೇ ಮುಂತಾದವರೂ ಕೂಡ ಈ ಮಂತ್ರಕ್ಕೆ ಅಧಿಕಾರಿಗಳು.

೨೩. ಸರ್ವೇಶ್ವರನಾದ ಕೃಷ್ಣನಲ್ಲಿ ಭಕ್ತಿಯಿದ್ದರೆ ಆಗ ಇವರೆಲ್ಲರೂ ಆ ಮಂತ್ರಕ್ಕೆ ಅಧಿಕಾರಿಗಳಾಗುತ್ತಾರೆ. ಇಲ್ಲದಿದ್ದರೆ ಇಲ್ಲ.

೨೪-೨೫ ಯಜ್ಞವನ್ನು ಮಾಡಿದವನಾಗಲಿ, ದಾನಿಯಾಗಲಿ, ಸರ್ವತಂತ್ರಗಳನ್ನು ಸೇವಿಸುವವನಾಗಲಿ, ಸತ್ಯವಾದಿಯಾಗಲಿ, ಯತಿಯಾಗಲಿ, ವೇದವೇದಾಂಗಗಳನ್ನು ಬಲ್ಲವನಾಗಲಿ, ಬ್ರಹ್ಮನಿಷ್ಠನಾಗಲಿ, ಕುಲೀನನಾಗಲಿ, ತಪಸ್ವಿಯಾಗಲಿ, ವ್ರತದಲ್ಲಿ ಆಸಕ್ತನಾಗಲಿ, ಯಾರೇ ಆಗಲಿ ಕೃಷ್ಣನಲ್ಲಿ ಭಕ್ತಿಯಿಲ್ಲದಿದ್ದರೆ ಅವರು ಅಧಿಕಾರಿಗಳಲ್ಲ.

೨೬. ಹರಿಯಲ್ಲಿ ಭಕ್ತಿರಹಿತನಾದ ಕೃತಘ್ನನಾದ ಆಸಕ್ತಿಯಿಲ್ಲದ, ಶ್ರದ್ಧೆಯಿಲ್ಲದ ನಾಸ್ತಿಕನಾದವನಿಗೆ ಹೇಳಬಾರದು

ನಾಶುಶ್ರೂಷಂ ಪ್ರತಿಬ್ರೂಯಾನ್ನಾಸಂವತ್ಸರಸೇವಿನಂ ।
ಶ್ರೀಕೃಷ್ಣೇಽನನ್ಯಭಕ್ತಾಯ ದಂಭಲೋಭವಿವರ್ಜಿತೇ ॥ ೨೭ ॥

ಕಾಮಕ್ರೋಧವಿಮುಕ್ತಾಯ ದೇಯಮೇತತ್ಪ್ರಯತ್ನತಃ ।
ಋಷಿಶ್ಚೈವಾಹಮೇವಾಸ್ಯ ಗಾಯತ್ರೀ ಛಂದ ಉಚ್ಯತೇ ॥ ೨೮ ॥

ದೇವತಾ ವಲ್ಲಭೀಕಾನ್ತೋ ಮನ್ತ್ರಸ್ಯ ಪರಿಕೀರ್ತಿತಃ ।
ಸ ಪ್ರಿಯಸ್ಯ ಹರೇರ್ದಾಸ್ಯೇ ವಿನಿಯೋಗ ಉದಾಹೃತಃ ॥ ೨೯ ॥

ಆಚಕ್ರಾದ್ಯೈಸ್ತಥಾ ಮಂತ್ರೈಃ ಪಂಚಾಂಗಾನಿ ಪ್ರಕಲ್ಪಯೇತ್ ।
ಅಥವಾಪಿ ಸ್ವಬೀಜೇನ ಕರಾಂಗನ್ಯಾಸಕೌ ಚರೇತ್ ॥ ೩೦ ॥

ಮಂತ್ರಸ್ಯ ಪ್ರಥಮೋ ವರ್ಣೋ ಬಿಂದುನಾ ಮೂರ್ಧ್ನಿ ಭೂಷಿತಃ ।
ಗಮಿತ್ಯೇವಂ ಭವೇದ್ಬೀಜಂ ನಮಶ್ಶಕ್ತಿರಿಹೋದಿತಾ ॥ ೩೧ ॥

ಅಂತಿಮೂರ್ಣ್ಯೈರ್ದಶಾಂಗಾನಿ ತೈರೇವ ಚ ತಥಾರ್ಚನಂ ।
ಗಂಧಪುಷ್ಪಾಕ್ಷತಾದಿಭಿಸ್ತಚ್ಚ ಜಲೈರೇವಾಪ್ಯಸಂಭವೇ ॥ ೩೨ ॥

---

೨೭–೨೯ ಶುಶ್ರೂಷೆಮಾಡದಿರುವ ಸಂವತ್ಸರಪರ್ಯಂತ ಸೇವಿಸದಿರುವವನಿಗೆ ಹೇಳಬಾರದು. ಕೃಷ್ಣನಲ್ಲಿ ಭಕ್ತನಾಗಿರುವ ದಂಭಲೋಭಗಳಿಲ್ಲದ ಕಾಮಕ್ರೋಧಗಳನ್ನು ಬಿಟ್ಟ ಭಕ್ತರಿಗೆ ಇದನ್ನು ಹೇಳಬೇಕು. ಈ ಮಂತ್ರಕ್ಕೆ ನಾನೇ ಋಷಿಯು. ಗಾಯತ್ರೀಛಂದಸ್ಸು. ದೇವತೆಯು ವಲ್ಲವಿಕಾಂತನು. ಪ್ರಿಯರೊಡನೆ ಕೂಡಿದ ಹರಿಯ ದಾಸ್ಯದಲ್ಲಿ ವಿನಿಯೋಗವು. ಎಂದು ಹೇಳಲ್ಪಟ್ಟಿದೆ.

೩೦. ಚಕ್ರವೇ ಮುಂತಾದ ಮಂತ್ರಗಳಿಂದ ಪಂಚಾಂಗನ್ಯಾಸಗಳನ್ನು ಮಾಡಿಕೊಳ್ಳಬೇಕು. ಅದಿಲ್ಲದಿದ್ದರೆ ಆ ಮಂತ್ರದ ಬೀಜ ಮಂತ್ರದಿಂದಲೇ ಕರನ್ಯಾಸವನ್ನು ಮಾಡಿಕೊಳ್ಳಬೇಕು.

೩೧–೩೨. ಮಂತ್ರದ ಮೊದಲನೆ ವರ್ಣಕ್ಕೆ ಸೊನ್ನೆಯನ್ನು ಸೇರಿಸಿ ತಲೆಯಲ್ಲಿ ನ್ಯಾಸಮಾಡಬೇಕು ಅದು ಗಂ ಎಂದಾಗುತ್ತದೆ. ಅದೇ ಬೀಜವು. ನಮಃ ಎಂಬುದು ಶಕ್ತಿಯು. ಆ ಮೇಲಿನ ವರ್ಣಗಳಿಂದ ಕರನ್ಯಾಸಮಾಡಿಕೊಂಡು ಅವರಿಂದಲೇ ಪೂಜೆ ಮಾಡಬೇಕು ಸಿಕ್ಕಿದಲ್ಲಿ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಸಿಕ್ಕದಿದ್ದರೆ

ನ್ಯಾಸಪೂರ್ವಂ ವಿಧಾನೇನ ಕರ್ತವ್ಯಂ ಹರಿತುಷ್ಟಯೇ ।
ಅತ ಏವಾಸ್ಯ ಮಂತ್ರಸ್ಯ ನ್ಯಾಸಾದ್ಯನ್ಯೇ ವದಂತಿ ಚ ॥ ೩೩ ॥

ಸಕೃದುಚ್ಚಾರಣಾಚ್ಚೈವ ಕೃತಕೃತ್ಯತ್ವದಾಯಿನಃ ।
ತಥಾಪಿ ದಶಧಾ ನಿತ್ಯಂ ಜಪಾದ್ಯರ್ಥಂ ಪ್ರವಿನ್ಯಸೇತ್ ॥ ೩೪ ॥

ಅಥ ಧ್ಯಾನಂ ಪ್ರವಕ್ಷ್ಯಾಮಿ ಮಂತ್ರಸ್ಯಾಸ್ಯ ದ್ವಿಜೋತ್ತಮ ।
ಪೀತಾಂಬರಂ ಘನಶ್ಯಾಮಂ ದ್ವಿಭುಜಂ ವನಮಾಲಿನಂ ॥ ೩೫ ॥

ಬರ್ಹಿಬರ್ಹಕೃತಾಪೀಡಂ ಶಶಿಕೋಟಿನಿಭಾನನಂ ।
ಘೂರ್ಣಾಯಮಾನನಯನಂ ಕರ್ಣಿಕಾರಾವತಂಸಿನಂ ॥ ೩೬ ॥

ಅಭಿತಶ್ಚಂದನೇನಾಥ ಮಧ್ಯೇ ಕುಂಕುಮಬಿಂದುನಾ ।
ರಚಿತಂ ತಿಲಕಂ ಫಾಲೇ ಬಿಭ್ರತಂ ಮಂಡಲಾಕೃತಿಂ ॥ ೩೭ ॥

ತರುಣಾದಿತ್ಯಸಂಕಾಶಂ ಕುಂಡಲಾಭ್ಯಾಂ ವಿರಾಜಿತಂ ।
ಘರ್ಮಾಂಬುಕಣಿಕಾರಾಜದ್ದರ್ಪಣಾಭಕಪೋಲಕಂ ॥ ೩೮ ॥

---

ನೀರಿನಿಂದಲೇ ನ್ಯಾಸಪೂರ್ವಕವಾಗಿ ಪೂಜೆಮಾಡಿದರೂ ಕೃಷ್ಣನು ತೃಪ್ತಿಪಡುತ್ತಾನೆ. ಆದ್ದರಿಂದಲೇ ಈ ಮಂತ್ರಕ್ಕೆ ನ್ಯಾಸವನ್ನು ಕೆಲವರು ಬೇರೆಯಾಗಿ ಹೇಳುತ್ತಾರೆ.

೩೪. ಒಂದುಸಾರಿ ಉಚ್ಚಾರಣೆ ಮಾಡುವುದರಿಂದಲೇ ಕೃತಕೃತ್ಯತ್ವವನ್ನು ಕೊಡುವನು. ಆದರೂ ಆ ಮಂತ್ರಕ್ಕೆ ಜಪಕ್ಕೋಸ್ಕರ ಹತ್ತು ನ್ಯಾಸಮಂತ್ರಗಳನ್ನು ಬೇರೆಯಾಗಿ ಹೇಳುತ್ತಾರೆ.

೩೫-೩೬. ಆಮೇಲೆ ಈ ಮಂತ್ರಕ್ಕೆ ಧ್ಯಾನವನ್ನು ಹೇಳುತ್ತೇನೆ. ಪೀತಾಂಬರವನ್ನು ಹೊದ್ದಿರುವ ಮೋಡದಂತೆ ಕಪ್ಪಗಿರುವ ಎರಡು ಭುಜಗಳುಳ್ಳ ವನಮಾಲೆ ಎಂಬ ಮಾಲೆಯನ್ನು ಧರಿಸಿರುವ, ನವಿಲುಗರಿಯನ್ನು ತಲೆಗೆ ಕಟ್ಟಿಕೊಂಡಿರುವ ಕೋಟಿ ಚಂದ್ರರಂತೆ ಮುಖವುಳ್ಳ, ಕಣ್ಣುಗಳನ್ನು ಮುದದಿಂದ ಅರಳಿಸುತ್ತಿರುವ ಕರ್ಣಿಕಾರ ಹೂವನ್ನು ಮುಡಿದಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೩೭-೪೩. ಎಲ್ಲಾ ಕಡೆಯಲ್ಲೂ ಚಂದನವನ್ನು ಬಳಿದುಕೊಂಡು ಮಧ್ಯೇ ಕುಂಕುಮದ ಬಟ್ಟಿಳ್ಳ ಹಣೆಯನ್ನು ಹೊಂದಿರುವ, ಉದಯಿಸಿದ ಸೂರ್ಯನಂತಿರುವ ಕುಂಡಲಗಳಿಂದ ಪ್ರಕಾಶಿಸುವ ಶಖೆಯಿಂದ ಹಣೆಯಲ್ಲಿ ಬಟ್ಟುಬಟ್ಟಾಗಿ ಬೆವರಿನ ಹನಿ

ಪ್ರಿಯಾಸ್ಯನ್ಯಸ್ತನಯನಂ ಲೀಲಯಾ ಚೋನ್ನತಭ್ರುವಂ ।
ಅಗ್ರಭಾವನ್ಯಸ್ತಮುಕ್ತಾವಿಸ್ಫುರತ್ಪ್ರೋಚ್ಚನಾಸಿಕಂ ॥ ೩೯ ॥

ದಶನಜ್ಯೋತ್ಸ್ನಯಾ ರಾಜತ್ಪಕ್ವಬಿಂಬಫಲಾಧರಂ ।
ಕೇಯೂರಾಂಗದಸದ್ರತ್ನಮುದ್ರಿಕಾಭಿರ್ಲಸತ್ಕರಂ ॥ ೪೦ ॥

ಬಿಭ್ರತಂ ಮುರಳೀಂ ವಾಮೇ ಪಾಣೌ ಪದ್ಮಂ ತಥೈವ ಚ ।
ಕಾಂಚೀದಾಮಸ್ಫುರನ್ಮಧ್ಯಂ ನೂಪುರಾಭ್ಯಾಂ ಲಸತ್ಪದಂ ॥ ೪೧ ॥

ರತಿಕೇಳಿರಸಾವೇಶಚಪಲಂ ಚಪಲೇಕ್ಷಣಂ ।
ಹಸನ್ತಂ ಪ್ರಿಯಯಾ ಸಾರ್ಧಂ ಹಾಸಯಂತಂ ಚ ತಾಂ ಮುಹುಃ ॥ ೪೨ ॥

ಇತ್ಥಂ ಕಲ್ಪತರೋರ್ಮೂಲೆ ರತ್ನಸಿಂಹಾಸನೋಪರಿ ।
ವೃಂದಾರಣ್ಯೇ ಸ್ಮರೇತ್ಕೃಷ್ಣಂ ಸಂಸ್ಥಿತಂ ಪ್ರಿಯಯಾ ಸಹ ॥ ೪೩ ॥

ವಾಮಪಾರ್ಶ್ವೇ ಸ್ಥಿತಾಂ ತಸ್ಯ ರಾಧಿಕಾಂ ಚ ಸ್ಮರೇತ್ತತಃ ।
ನೀಲಚೋಲಕಸಂವೀತಾಂ ತಪ್ತಹೇಮಸಮಪ್ರಭಾಂ ॥ ೪೪ ॥

---

ಯಿರುವ ಕಪೋಲವುಳ್ಳ ಹೆಂಡತಿಯ ಮುಖವನ್ನೇ ನೋಡುತ್ತಿರುವ ಸ್ವಲ್ಪ ಮೇಲ ಕ್ಕೆತ್ತಿಕೊಂಡಿರುವ ಹುಬ್ಬುಳ್ಳ, ಬುಲಾಕನ್ನು ಹಾಕಿಕೊಂಡಿರುವ ಮೂಗುಳ್ಳ, ಹಲ್ಲುಗಳ ಕಾಂತಿಯಿಂದ ಪ್ರಕಾಶಿಸುವ ತೊಂಡೆಯ ಹಣ್ಣಿನಂತಿರುವ ತುಟಿಯುಳ್ಳ, ಭುಜಕೀರ್ತಿ ಯನ್ನು ಹಾಕಿಕೊಂಡಿರುವ, ರತ್ನದ ಉಂಗುರವನ್ನು ಹಾಕಿಕೊಂಡಿರುವ ಎಡದ ಕೈಯಲ್ಲಿ ಕೊಳಲನ್ನು ಹಿಡಿದಿರುವ, ಸೊಂಟಕ್ಕೆ ಉಡುದಾರವನ್ನು ಹಾಕಿಕೊಂಡಿರುವ ಕಾಲುಬಳೆಯನ್ನು ಕಾಲಲ್ಲಿ ಹೊಂದಿರುವ, ರತಿಕ್ರೀಡೆಯಲ್ಲಿರುವುದರಿಂದ ಚಂಚಲವಾದ ಕಣ್ಣುಳ್ಳ ಹೆಂಡತಿಯೊಡನೆ ನಗುತ್ತಿರುವ, ಅವಳನ್ನು ನಗಿಸುತ್ತಿರುವ, ಈ ರೀತಿ ಯಿರುವ ಶ್ರೀಕೃಷ್ಣನನ್ನು ವೃಂದಾರಣ್ಯದಲ್ಲಿ ಕಲ್ಪವೃಕ್ಷದ ಕೆಳಗೆ ರತ್ನಸಿಂಹಾಸನದ ಮೇಲೆ ಹೆಂಡತಿಯೊಡನೆ ಕೂತಿರುವಂತೆ ಧ್ಯಾನಿಸಬೇಕು.

೪೪-೪೯. ಆ ಸ್ವಾಮಿಯ ಎಡಭಾಗದಲ್ಲಿರುವ ರಾಧೆಯನ್ನು ಸ್ಮರಿಸಬೇಕು. ಅವಳ ರೀತಿಯು ಹೀಗಿರಬೇಕು. ನೀಲಿಯಾದ ರವುಕೆಯನ್ನು ತೊಟ್ಟಿರುವ ಪುಟ

ಪಟ್ಟಾಂಚಲೇನಾವೃತಾರ್ಧಸುಸ್ಮೇರಾನನಪಂಕಜಾಂ ।
ಕಾಂತವಕ್ತ್ರೇ ನ್ಯಸ್ತನೇತ್ರಾಂ ಚಕೋರೀವ ಚಲೇಕ್ಷಣಾಂ ॥ ೪೫ ॥

ಅಂಗುಷ್ಠತರ್ಜನೀಭ್ಯಾಂ ಚ ನಿಜಪ್ರಿಯಮುಖಾಂಬುಜೇ ।
ಅರ್ಪಯಂತೀಂ ಪೂಗಫಲೀಂ ಪರ್ಣಚೂರ್ಣಸಮನ್ವಿತಾಂ ॥ ೪೬ ॥

ಮುಕ್ತಾಹಾರಸ್ಫುರಚ್ಚಾರುಪೀನೋನ್ನತಪಯೋಧರಾಂ ।
ಕ್ಷೀಣಮಧ್ಯಾಂ ಪೃಥುಶ್ರೋಣೀಂ ಕಿಂಕಿಣೀಜಾಲಮಂಡಿತಾಂ ॥ ೪೭ ॥

ರತ್ನತಾಟಂಕಕೇಯೂರಮುದ್ರಾವಲಯಧಾರಿಣೀಂ ।
ರಣತ್ಕಟಕಮಂಜೀರರತ್ನಪಾದಾಂಗುಳೀಯಕಾಂ ॥ ೪೮ ॥

ಲಾವಣ್ಯಸಾರಮುಗ್ಧಾಂಗೀಂ ಸರ್ವಾವಯವಸುಂದರೀಂ ।
ಆನಂದರಸಸಂಮುಗ್ನಾಂ ಪ್ರಸನ್ನಾಂ ನವಯೌವನಾಂ ॥ ೪೯ ॥

ಸಖ್ಯಶ್ಚ ತಸ್ಯಾ ವಿಪ್ರೇಂದ್ರ ತತ್ಸಮಾನವಯೋಗುಣಾಃ ।
ತತ್ಸೇವನಪರಾ ಭಾವ್ಯಾಃ ಚಾಮರವ್ಯಜನಾದಿಭಿಃ ॥ ೫೦ ॥

---

ಹಾಕಿದ ಚಿನ್ನದಂತೆ ಬಣ್ಣವುಳ್ಳ, ಉಟ್ಟಸೀರೆಯ ಸೆರಗಿನಿಂದ ಅರ್ಧತಲೆಗೆ ಮುಸುಗು ಹಾಕಿಕೊಂಡು ನಗುತ್ತಿರುವ ಮುಖವುಳ್ಳ, ಗಂಡನ ಮುಖವನ್ನೇ ನೋಡುತ್ತಿರುವ, ಚಕೋರದಂತೆ ಚಂಚಲವಾದ ಕಣ್ಣುಳ್ಳ, ಅಂಗುಷ್ಠತರ್ಜನೀ ಬೆರಳುಗಳಿಂದ ಅಡಕೆಲೆಯನ್ನು ಮಡಿಸಿದುದನ್ನು ಕೊಡುತ್ತಿರುವ, ಮುತ್ತಿನಹಾರದಿಂದ ಪ್ರಕಾಶಿಸುವ ಸ್ತನಗಳುಳ್ಳ, ಸೊಂಟವು ಸಣ್ಣನಾಗಿರುವ, ಕುಂಡೆಗಳು ದಪ್ಪವಾಗಿರುವ ಆ ಸೊಂಟಗಳಿಗೆ ಗೆಜ್ಜೆಯು ಸುತ್ತಿರುವ ಡಾಬನ್ನು ಹಾಕಿಕೊಂಡಿರುವುದರಿಂದ ಆ ಕುಂಡೆಗಳು ಪ್ರಕಾಶಿಸುತ್ತಿರುವ, ರತ್ನದ ಓಲೆ, ಭುಜಕೀರ್ತಿ ಮುದ್ರೆಯುಂಗುರಗಳನ್ನು ಧರಿಸಿರುವ, ಕೈಬಳೆಯನ್ನು ತೊಟ್ಟಿರುವ, ಪ್ರಕಾಶಮಾನವಾದ ಡಾಬು ಸದ್ದುಮಾಡುತ್ತಿರುವ, ಕಾಲುಕಡಗಗಳನ್ನು ಹೊಂದಿರುವ, ಸೌಂದರ್ಯದಿಂದ ಅತಿಶಯವಾದ ಎಲ್ಲ ಅವಯವಗಳೂ ಸುಂದರವಾಗಿರುವ ಆನಂದರಸದಲ್ಲಿ ಮಗ್ನಳಾಗಿ ನವಯೌವನವನ್ನು ಧರಿಸಿ ಸುಮುಖಿಯಾಗಿರುವ ರಾಧೆಯನ್ನು ಸ್ಮರಿಸಬೇಕು.

೫೦. ಅವಳಿಗೆ ಸಮರಾದ ನವಯೌವನವನ್ನು ಹೊಂದಿರುವ ಚಾಮರವ್ಯಜನಗಳನ್ನು ಬೀಸುತ್ತಿರುವ ಅವಳ ಸಖಿಯರನ್ನೂ ಧ್ಯಾನಿಸಬೇಕು.

ಅಥ ತುಭ್ಯಂ ಪ್ರವಕ್ಷ್ಯಾಮಿ ಮನ್ತ್ರಾರ್ಥಂ ಶೃಣು ನಾರದ ।
ಬಹಿರಂಗೈಃ ಪ್ರಪಂಚಸ್ಯ ಸ್ವಾಂಶೈರ್ಮಾಯಾದಿಶಕ್ತಿಭಿಃ ॥ ೫೧ ॥

ಅಂತರಂಗೈಸ್ತಥಾ ನಿತ್ಯಂ ವಿಭೂತ್ಯೈಸ್ತೈಶ್ಚಿದಾದಿಭಿಃ ।
ಗೋಪನಾದುಚ್ಯತೇ ಗೋಪೀ ರಾಧಿಕಾ ಕೃಷ್ಣವಲ್ಲಭಾ ॥ ೫೨ ॥

ದೇವೀ ಕೃಷ್ಣಮಯೀ ಪ್ರೋಕ್ತಾ ರಾಧಿಕಾ ಪರದೇವತಾ ।
ಸರ್ವಲಕ್ಷ್ಮೀಸ್ವರೂಪಾ ಸಾ ಕೃಷ್ಣಾಹ್ಲಾದಸ್ವರೂಪಿಣೀ ॥ ೫೩ ॥

ತತಸ್ಸಾ ಪ್ರೋಚ್ಯತೇ ವಿಪ್ರ ಹ್ಲಾದಿನೀತಿ ಮನೀಷಿಭಿಃ ।
ತತ್ಕಲಾಕೋಟಿಕೋಟ್ಯಂಶಾ ದುರ್ಗಾದ್ಯಾಸ್ತ್ರಿಗುಣಾತ್ಮಿಕಾಃ ॥ ೫೪ ॥

ಸಾ ತು ಸಾಕ್ಷಾನ್ಮಹಾಲಕ್ಷ್ಮೀಃ ಕೃಷ್ಣೋ ನಾರಾಯಣಃ ಪ್ರಭುಃ ।
ನೈತಯೋರ್ವಿದ್ಯತೇ ಭೇದಃ ಸ್ವಲ್ಪೋಽಪಿ ಮುನಿಸತ್ತಮ ॥ ೫೫ ॥

---

೫೧. ಪ್ರಪಂಚಕ್ಕೆಲ್ಲಾ ಗೊತ್ತಿರುವಂತಿರುವ ತನ್ನ ಮಾಯಾಶಕ್ತಿಗಳಿಂದಲೂ ಅಂತರಂಗವಾಗಿರತಕ್ಕ ಚಿದಂಶವೇ ಮುಂತಾದ ತನ್ನ ವಿಭೂತಿಗಳಿಂದಲೂ, ಕೂಡಿರುವ ಮಂತ್ರಾರ್ಥವನ್ನು ಹೇಳುತ್ತೇನೆ ಕೇಳು.

೫೨. ಕೃಷ್ಣನ ವಲ್ಲಭೆಯಾದ ರಾಧಿಕೆಯನ್ನು ಗುಹ್ಯಳಾದುದರಿಂದಲೂ ಕಾಪಾಡುವುದರಿಂದಲೂ ಗೋಪಿ ಎಂದೆನ್ನುತ್ತಾರೆ

೫೩. ರಾಧಿಕೆಯು ಕೃಷ್ಣಸ್ವರೂಪಳೆಂದೂ, ಪರದೇವತೆಯೆಂದೂ, ಲಕ್ಷ್ಮಿಯ ಸ್ವರೂಪಳೆಂದೂ ಹೇಳಲ್ಪಟ್ಟಿದ್ದಾಳೆ

೫೪. ಆದ್ದರಿಂದ ಆಕೆಯನ್ನು ಹ್ಲಾದಿನೀ ಎಂದು ಕರೆಯುತ್ತಾರೆ. ಸತ್ವ ರಜಸ್ತಮೋಗುಣಗಳಿಂದ ಕೂಡಿದ ದುರ್ಗಾದಿಗಳು ಅವಳ ಕಲೆಯ ಕೋಟ್ಯಂಶದಲ್ಲಿ ಕೋಟಿಯ ಒಂದಂಶದವರು.

೫೫. ಆ ರಾಧಿಕೆಯೇ ಮಹಾಲಕ್ಷ್ಮಿಯು. ಕೃಷ್ಣನೇ ಸಾಕ್ಷಾನ್ನಾರಾಯಣನು. ಇವರಿಬ್ಬರಿಗೂ ಸ್ವಲ್ಪವೂ ಭೇದವೆಂಬುದೇ ಇಲ್ಲ.

ಇಯಂ ದುರ್ಗಾ ಹರೀ ರುದ್ರಃ ಕೃಷ್ಣಶ್ಶಕ್ರ ಇಯಂ ಶಚೀ ।
ಸಾವಿತ್ರೀಯಂ ಹರಿಬ್ರ್ರಹ್ಮಾ ಧೂಮೋರ್ಣಾಸೌ ಯಮೋ ಹರಿಃ ॥ ೫೬ ॥

ಬಹುನಾ ಕಿಂ ಮುನಿಶ್ರೇಷ್ಠ ವಿನಾ ತಾಭ್ಯಾಂ ನ ಕಿಂಚನ ।
ಚಿದಚಿಲ್ಲಕ್ಷಣಂ ಸರ್ವಂ ರಾಧಾಕೃಷ್ಣಮಯಂ ಜಗತ್ ॥ ೫೭ ॥

ಇತ್ಥಂ ಸರ್ವಂ ತಯೋರೇವ ವಿಭೂತಿಂ ವಿದ್ಧಿ ನಾರದ ।
ನ ಶಕ್ಯತೇ ಮಯಾ ವಕ್ತುಂ ವರ್ಷಕೋಟಿಶತೈರಪಿ ॥ ೫೮ ॥

ತ್ರೈಲೋಕ್ಯೇ ಪೃಥಿವೀ ಮಾನ್ಯಾ ಜಂಬೂದ್ವೀಪಂ ತತೋ ವರಂ ।
ತತ್ರಾಪಿ ಭಾರತಂ ವರ್ಷಂ ತತ್ರಾಪಿ ಮಥುರಾ ಪುರೀ ॥ ೫೯ ॥

ತತ್ರ ವೃಂದಾವನಂ ನಾಮ ತತ್ರ ಗೋಪೀಕದಂಬಕಂ ।
ತತ್ರ ರಾಧಾಸಖೀವರ್ಗಃ ತತ್ರಾಪಿ ರಾಧಿಕಾ ವರಾ ॥ ೬೦ ॥

---

೫೬. ಆ ರಾಧೆಯು ದುರ್ಗೆಯು. ಹರಿಯೇ ರುದ್ರನು. ಈಕೆಯು ಶಚಿಯು. ಕೃಷ್ಣನೇ ಇಂದ್ರನು. ಈಕೆಯು ಸಾವಿತ್ರಿಯು. ಕೃಷ್ಣನೇ ಬ್ರಹ್ಮನು. ಈಕೆಯು ಧೂಮೋರ್ಣಳು. ಕೃಷ್ಣನೇ ಯಮನು.

೫೭. ಎಲೈ ನಾರದನೇ, ಬಹುವಾಗಿ ಹೇಳಿದುದರಿಂದೇನು? ಅವರಿಬ್ಬರಿಂದ ಹೊರತಾದ ಪ್ರಪಂಚವೇ ಇಲ್ಲ. ಚಿತ್ತು ಅಚಿತ್ತು ಲಕ್ಷಣವಾದ ಸರ್ವವೂ ರಾಧಾಕೃಷ್ಣ ಮಯವಾದುದು

೫೮. ಈ ರೀತಿಯಾಗಿ ಪ್ರಪಂಚವೆಲ್ಲವೂ ಅವರುಗಳ ವಿಭೂತಿಯೆಂದೇ ತಿಳಿ. ಅವರ ವಿಭೂತಿಯನ್ನು ಕೋಟಿ ವರ್ಷಗಳಾದರೂ ನಾನು ಹೇಳಲು ಸಾಧ್ಯವಿಲ್ಲ.

೫೯-೬೦. ಮೂರುಲೋಕಗಳಲ್ಲಿಯೂ ಭೂಮಿಯೇ ಉತ್ತಮವು. ಅದರೊಳಗೆ ಜಂಬೂದ್ವೀಪವು ಶ್ರೇಷ್ಠವಾದುದು ಆ ಜಂಬೂದ್ವೀಪದಲ್ಲಿ ಭಾರತವರ್ಷವು ಶ್ರೇಷ್ಠವು. ಅದರೊಳಗೆ ಮಥುರಾ ಪಟ್ಟಣವು ಮತ್ತೂ ಶ್ರೇಷ್ಠವು. ಆ ಮಥುರಾ ಪಟ್ಟಣದಲ್ಲಿ ವೃಂದಾವನವು ಉತ್ತಮವಾದುದು. ಅದರಲ್ಲಿ ಗೋಪಿಯರ ಗುಂಪು ವರವು. ಆ ಗೋಪಿಯರ ಗುಂಪಿನಲ್ಲಿ ರಾಧೆಯ ಸಖಿಯರು ಉತ್ತಮರು. ಅವರಲ್ಲಿ ರಾಧಿಕೆಯು ಅತ್ಯಂತ ಉತ್ತಮಳು

ಸಾನ್ನಿಧ್ಯಾಧಿಕ್ಯತಸ್ತಸ್ಯಾ ಹ್ಯಾಧಿಕ್ಯಂ ಸ್ಯಾದ್ಯಥೋತ್ತರಂ ।
ಪೃಥಿವೀಪ್ರಭೃತೀನಾಂ ತು ನಾನ್ಯತ್ಕಿಂಚಿದಿಹೋದಿತಂ ॥ ೬೧ ॥

ಸೈಷಾ ಹಿ ರಾಧಿಕಾ ಗೋಪೀ ಜನಸ್ತಸ್ಯಾ ಸಖೀಗಣಃ ।
ತಸ್ಯಾಸ್ಸಖೀಸಮೂಹಸ್ಯ ವಲ್ಲಭೌ ಪ್ರಾಣನಾಯಕೌ ॥ ೬೨ ॥

ರಾಧಾಕೃಷ್ಣೌ ತಯೋಃ ಪಾದಾಃ ಶರಣಂ ಸ್ಯಾದಿಹಾಶ್ರಯಂ ।
ಪ್ರಪದ್ಯೇ ಗತವಾನಸ್ಮಿ ಜೀವೋಽಹಂ ಭೃಶದುಃಖಿತಃ ॥ ೬೩ ॥

ಸೋಽಹಂ ಯಚ್ಛರಣಂ ಪ್ರಾಪ್ತೋ ಮಮ ತಸ್ಯ ಯದಸ್ತಿ ಚ ।
ಸರ್ವಂ ತಾಭ್ಯಾಂ ತದರ್ಥಂ ಹಿ ತದ್ಭೋಗ್ಯಂ ನಚ್ಯಹಂ ಮಮ ॥ ೬೪ ॥

ಇತ್ಯಸೌ ಕಥಿತೋ ವಿಪ್ರ ಮಂತ್ರಸ್ಯಾರ್ಥಸ್ಸಮಾಸತಃ ।
ಯುಗಳಾರ್ಥಸ್ತಥಾ ನ್ಯಾಸಃ ಪ್ರಪತ್ತಿಶ್ಶರಣಾಗತಿಃ ॥ ೬೫ ॥

---

೬೧. ಆಕೆಯು ಎಲ್ಲೆಲ್ಲಿ ಹೆಚ್ಚಾಗಿರುವಳೋ ಅದರಿಂದ ಅವವು ಉತ್ತಮಗಳು. ಅವಳಿರುವುದರಿಂದಲೇ ಈ ಭೂಮಿ ಮುಂತಾದುವುಗಳು ಉತ್ತಮವಾಗಿವೆ. ಮತ್ತೊಂದರಿಂದಲೂ ಅಲ್ಲ.

೬೨. ಆ ಗೋಪಿಯೇ ಇಲ್ಲಿ ಉತ್ತಮಳಾದವಳು. ಅವಳ ಸಖೀಜನರು ಉತ್ತಮರು. ಆ ಸಖಿಯರ ಗುಂಪಿಗೆ ಪ್ರೀತಿಪಾತ್ರರಾಗಿ ಪ್ರಾಣನಾಯಕರಾದವರು ರಾಧೆಕೃಷ್ಣರು. ಅವರ ಪಾದಗಳು ನನಗೆ ಆಶ್ರಯವಾಗಿರಲಿ.

೬೩-೬೪ ಹೆಚ್ಚು ದುಃಖಿತನಾದ ಜೀವನಾದ ನಾನು ಅವರನ್ನು ಶರಣು ಹೊಂದುತ್ತೇನೆ. ನಾನು ಅವರನ್ನು ಶರಣು ಹೊಂದಿದ್ದೇನೆ. ನನಗೇನೇನಿವೆಯೋ ಅವೆಲ್ಲವೂ ಅವನದೇ. ಅವನ ದೆಸೆಯಿಂದಲೇ ನಾನು ಭೋಗಿಸುವುದು. ನನ್ನದೇನೂ ಇಲ್ಲವೇ ಇಲ್ಲ.

೬೫-೬೬. ಈ ರೀತಿಯಾಗಿ ಮಂತ್ರಾರ್ಥವನ್ನು ಸಂಗ್ರಹವಾಗಿ ಹೇಳಿದ್ದೇನೆ

ಆತ್ಮಾರ್ಪಣಮಿಮೇ ಪಂಚ ಪರ್ಯಾಯಾಸ್ತೇ ಮಯೋದಿತಾಃ ।
ಅಯಮೇವ ಚಿಂತನೀಯೋ ದಿವಾನಕ್ತಮತಂದ್ರಿತೈಃ ॥ ೬೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೃಂದಾವನ ಮಾಹಾತ್ಮ್ಯ ಕಥನಂ ನಾಮ ಏಕಾಶೀತಿತಮೋಽಧ್ಯಾಯಃ

---

ಮಂತ್ರಾರ್ಥ, ನ್ಯಾಸ, ಪ್ರಪತ್ತಿ, ಶರಣಾಗತಿ ಆತ್ಮಾರ್ಪಣ ಈ ಐದು ಪರ್ಯಾಯಗಳನ್ನೂ ಹೇಳಿದ್ದೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೃಂದಾವನ ಮಹಿಮೆ ಎಂಬ ಎಂಭತ್ತೊಂದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ದ್ವ್ಯಶೀತಿತಮೋಽಧ್ಯಾಯಃ ॥



॥ ಶಿವ ಉವಾಚ ॥

ಅಥ ದೀಕ್ಷಾವಿಧಿಂ ವಕ್ಷ್ಯೇ ಶೃಣು ನಾರದ ತತ್ತ್ವತಃ ।
ಶ್ರವಣಾದೇವ ಮುಚ್ಯನ್ತೇ ವಿನಾ ತಸ್ಯ ವಿಧಾನತಃ ॥ ೧ ॥

ಆವಿರಿಂಚಾಜ್ಜಗತ್ಸರ್ವಂ ವಿಜ್ಞಾಯ ನಶ್ವರಂ ಬುಧಃ ।
ಆಧ್ಯಾತ್ಮಿಕಾದಿತ್ರಿವಿಧದುಃಖಮೇವಾನುಭೂಯ ಚ ॥ ೨ ॥

ಅನಿತ್ಯತ್ವಾಚ್ಚ ಸರ್ವೇಷಾಂ ಸುಖಾನಾಂ ಮುನಿಸತ್ತಮ ।
ದುಃಖಪಕ್ಷೇ ವಿನಿಕ್ಷಿಪ್ಯ ತಾನಿ ತೇಭ್ಯೋ ವಿವರ್ಜಿತಃ ॥ ೩ ॥

ವಿರಜ್ಯ ಸಂಸೃತೇರ್ಹಾನೌ ಸಾಧನಾನಿ ವಿಚಿಂತಯೇತ್ ।
ಅನುತ್ತಮಸುಖಸ್ಯಾಪಿ ಸಂಪ್ರಾಪ್ತೌ ಭೃಶನಿರ್ವೃತಃ ॥ ೪ ॥

---

## ಎಂಭತ್ತೆರಡನೆಯ ಅಧ್ಯಾಯ

೧. ಶಿವನು ಹೇಳಿದನು— ಇನ್ನು ದೀಕ್ಷಾವಿಧಿಯನ್ನು ಹೇಳುತ್ತೇನೆ. ಅದನ್ನು ಆಚರಿಸದಿದ್ದರೂ ಕೇಳಿದುದರಿಂದಲೇ ಮೋಕ್ಷಬರುತ್ತದೆ.

೨-೫. ಜ್ಞಾನಿಯಾದವನು ಬ್ರಹ್ಮನು ಮೊದಲುಗೊಂಡು ಈ ಪ್ರಪಂಚವೆಲ್ಲವೂ ನಶ್ವರವೆಂದು ತಿಳಿಯಬೇಕು. ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕವೆಂಬ ಮೂರುಬಗೆಯ ದುಃಖಗಳನ್ನು ಅನುಭವಿಸಿ ಈ ಸುಖಗಳೆಲ್ಲವೂ ದುಃಖಗಳೆಂದೂ ಅನಿತ್ಯವೆಂದೂ ತಿಳಿದು ಅವೆಲ್ಲವನ್ನೂ ಬಿಟ್ಟು ಸಂಸಾರವನ್ನು ಕಳೆದುಕೊಳ್ಳುವುದರಲ್ಲಿ ಸಾಧನವನ್ನು ಯೋಚಿಸಬೇಕು. ಉತ್ತಮವಾದ ಸುಖವು ಸಿಕ್ಕಲಿಲ್ಲವಲ್ಲ ಎಂದು ದುಃಖಪ

ನರಾಣಾಂ ದುಷ್ಕರತ್ವಂ ಹಿ ವಿಜ್ಞಾಯ ಚ ಮಹಾಮತಿಃ ।
ಭೃಶಮಾರ್ತಸ್ತತೋ ವಿಪ್ರಃ ಶ್ರೀಗುರುಂ ಶರಣಂ ವ್ರಜೇತ್ ॥ ೫ ॥

ಶಾನ್ತೋ ವಿಮತ್ಸರಃ ಕೃಷ್ಣೇ ಭಕ್ತೋಽನನ್ಯಪ್ರಯೋಜನಃ ।
ಅನನ್ಯಸಾಧನಶ್ಶ್ರೀಮಾನ್ ಕ್ರೋಧಲೋಭವಿವರ್ಜಿತಃ ॥ ೬ ॥

ಶ್ರೀಕೃಷ್ಣರಸತತ್ತ್ವಜ್ಞಃ ಕೃಷ್ಣಮಂತ್ರವಿದಾಂ ವರಃ ।
ಕೃಷ್ಣಮಂತ್ರಾಶ್ರಯೋ ನಿತ್ಯಂ ಮಂತ್ರಭಕ್ತಸ್ಸದಾ ಶುಚಿಃ ॥ ೭ ॥

ಸದ್ಧರ್ಮಶಾಸಕೋ ನಿತ್ಯಂ ಸದಾಚಾರನಿಯೋಜಕಃ ।
ಸಂಪ್ರದಾಯೀ ಕೃಪಾಪೂರ್ಣೋ ವಿರಾಗೀ ಗುರುರುಚ್ಯತೇ ॥ ೮ ॥

ಏವಮಾದಿಗುಣಃ ಪ್ರಾಯಃ ಶುಶ್ರೂಷುರ್ಗುರುಪಾದಯೋಃ ।
ಗುರೌ ನಿತಾಂತಭಕ್ತಶ್ಚ ಮುಮುಕ್ಷುಃ ಶಿಷ್ಯ ಉಚ್ಯತೇ ॥ ೯ ॥

ಯತ್ಸಾಕ್ಷಾತ್ಸೇವನಂ ತಸ್ಯ ಪ್ರೇಮ್ಣಾ ಭಗವತೋ ಭವೇತ್ ।
ಸ ಮೋಕ್ಷಃ ಪ್ರೋಚ್ಯತೇ ಪ್ರಾಜ್ಞೈಃ ವೇದವೇದಾಂಗವೇದಿಭಿಃ ॥ ೧೦ ॥

---

ಟ್ಟುಕೊಂಡು ಜನನಮರಣವನ್ನು ತಪ್ಪಿಸಿಕೊಳ್ಳುವುದು ಕಷ್ಟವೆಂದು ತಿಳಿದು ಬೇಸರವನ್ನು ಹೊಂದಿ ಯೋಗ್ಯನಾದ ಗುರುವನ್ನು ನೋಡಿ ಮರೆಹೋಗಬೇಕು.

೬-೭. ಶಾಂತನಾಗಿ ಮತ್ಸರವನ್ನು ಬಿಟ್ಟು ಕೃಷ್ಣನಲ್ಲಿ ಭಕ್ತನಾಗಿ ಅವನನ್ನೇ ಧ್ಯಾನಿಸುತ್ತಾ ಬೇರೆ ವಿಷಯದಲ್ಲಿ ಆಶೆಬಿಟ್ಟು ಕೋಪಲೋಭಗಳನ್ನು ಬಿಟ್ಟು ಶ್ರೀಕೃಷ್ಣ ರಸವನ್ನೇ ಅನುಭವಿಸುತ್ತಾ ಅವನ ಮಂತ್ರವನ್ನೇ ಜಪಿಸುತ್ತಾ ಮಂತ್ರಭಕ್ತನಾಗಿ ಶುಚಿಯಾಗಿರಬೇಕು.

೮. ಎಲ್ಲರಿಗೂ ಸದ್ಧರ್ಮವನ್ನೇ ಹೇಳುತ್ತಾ ಸದಾಚಾರದಲ್ಲಿಎಲ್ಲರನ್ನೂ ಇಡುತ್ತಾ ಸಂಪ್ರದಾಯಗಳನ್ನು ಬಿಡದೆ ಕೃಪಾವಂತನಾಗಿ ವೈರಾಗ್ಯವಂತನಾಗಿರುವನು ಗುರುವೆನಿಸಿಕೊಳ್ಳುತ್ತಾನೆ.

೯. ಸಾಧಾರಣವಾಗಿ ಈ ಗುರುವಿಗಿರತಕ್ಕ ಗುಣಗಳೇ ಶಿಷ್ಯನಲ್ಲಿಯೂ ಇರಬೇಕು. ಆದರೆ ಗುರುಪಾದವನ್ನು ಶುಶ್ರೂಷೆಮಾಡಲು ಆಸಕ್ತನಾಗಿರಬೇಕು. ಆ ಗುರುವಿನಲ್ಲಿ ಭಕ್ತಿಯಿಟ್ಟಿರಬೇಕು. ಮೋಕ್ಷದಲ್ಲಿ ಅಪೇಕ್ಷೆಯುಳ್ಳವನಾಗಿರಬೇಕು. ಅವನೇ ಶಿಷ್ಯನು.

೧೦. ಯಾವನು ಗುರುವಿನಸೇವೆಯೇ ಭಗವಂತನ ಸೇವೆಯೆಂದು ಪ್ರೇಮದಿಂದ ಮಾಡುತ್ತಾನೋ ಅದೇ ಮೋಕ್ಷವೆಂದು ವೇದವೇದಾಂಗ ಬಲ್ಲವರು ಹೇಳುತ್ತಾರೆ.

ಆಶ್ರಿತ್ಯ ಚ ಗುರೋಃ ಪಾದೌ ನಿಜವೃತ್ತಂ ನಿವೇದಯೇತ್ ।
ಸ ಸಂದೇಹಾನಪಾಕೃತ್ಯ ಬೋಧಯಿತ್ವಾ ಪುನಃ ಪುನಃ ॥ ೧೧ ॥

ಸ್ವಪಾದಪ್ರಣತಂ ಶಾಂತಂ ಶುಶ್ರೂಷುಂ ನಿಜಪಾದಯೋಃ ।
ಅತಿಹೃಷ್ಟಮನಾಶ್ಶಿಷ್ಯಂ ಗುರುರಧ್ಯಾಪಯೇನ್ಮುದಾ ॥ ೧೨ ॥

ಚಂದನೇನ ಮೃದಾ ವಾಽಪಿ ವಿಲಿಖೇದ್ಬಾಹುಮೂಲಯೋಃ ।
ವಾಮದಕ್ಷಿಣಯೋರ್ವಿಪ್ರ ಶಂಖಚಕ್ರೇ ಯಥಾಕ್ರಮಂ ॥ ೧೩ ॥

ಊರ್ಧ್ವಪುಂಡ್ರಂ ತತಃ ಕುರ್ಯಾತ್ಫಾಲಾದಿಷು ವಿಧಾನತಃ ।
ತತೋ ಮಂತ್ರದ್ವಯಂ ತಸ್ಯ ದಕ್ಷಕರ್ಣೇ ವಿನಿರ್ದಿಶೇತ್ ॥ ೧೪ ॥

ಮಂತ್ರಾರ್ಥಂ ಚ ವದೇತ್ತಸ್ಮೈ ಯಥಾವದನುಪೂರ್ವಶಃ ।
ದಾಸಶಬ್ದಯುತಂ ನಾಮ ಧಾರ್ಯಂ ತಸ್ಯ ಪ್ರಯತ್ನತಃ ॥ ೧೫ ॥

ತತೋಽತಿಭಕ್ತ್ಯಾ ಸಸ್ನೇಹಂ ವೈಷ್ಣವಾನ್ಪೂಜಯೇದ್ಬುಧಃ ।
ಶ್ರೀಗುರುಂ ಪೂಜಯೇಚ್ಚಾಪಿ ವಸ್ತ್ರಾಲಂಕರಣಾದಿಭಿಃ ॥ ೧೬ ॥

---

೧೧-೧೨. ಶಿಷ್ಯನಾದವನು ಗುರುವಿನ ಪಾದಗಳನ್ನು ಹೊಂದಿ ತನ್ನ ವಿಷಯವನ್ನು ಹೇಳಿಕೊಳ್ಳಬೇಕು. ಆ ಗುರುವು ಶಿಷ್ಯನ ಸಂದೇಹಗಳನ್ನು ನಾಶಮಾಡಿ ತನ್ನ ಪಾದದಲ್ಲಿ ಬಿದ್ದಿರುವ ಆತನಿಗೆ ಸಂತೋಷದಿಂದ ಮಂತ್ರವನ್ನು ಹೇಳಬೇಕು.

೧೩. ಎಡ ಮತ್ತು ಬಲತೋಳುಗಳ ಬುಡದಲ್ಲಿ ಶಂಖ ಚಕ್ರಗಳನ್ನು ಚಂದನದಿಂದಾಗಲೀ ಮಣ್ಣಿನಿಂದಾಗಲೀ ಬರೆಯಬೇಕು.

೧೪ ಆಮೇಲೆ ಹಣೆಯೇ ಮುಂತಾದ ಸ್ಥಳಗಳಲ್ಲಿ ಊರ್ಧ್ವಪುಂಡ್ರವನ್ನು ಬರೆಯಬೇಕು. ಆಮೇಲೆ ಬಲಗಡೆ ಕಿವಿಯಲ್ಲಿ ಮಂತ್ರವನ್ನುಪದೇಶಿಸಬೇಕು.

೧೫. ಅನಂತರ ಕ್ರಮವಾಗಿ ಮಂತ್ರಾರ್ಥವನ್ನು ಹೇಳಬೇಕು. ಅನಂತರ ದಾಸನೆಂಬ ಹೆಸರನ್ನೊಳಗೊಂಡ ಹೆಸರನ್ನು ಹೇಳಬೇಕು.

೧೬. ಆಮೇಲೆ ಸ್ನೇಹದಿಂದಲೂ, ಭಕ್ತಿಯಿಂದಲೂ ವೈಷ್ಣವರಿಗೆ ಸಂತರ್ಪಣೆಯನ್ನು ಮಾಡಿಸಿ ತೃಪ್ತಿಪಡಿಸಬೇಕು. ಗುರುವನ್ನು ಬಟ್ಟೆಬರೆ ಅಲಂಕಾರಗಳಿಂದ ತೃಪ್ತಿಪಡಿಸಬೇಕು.

ಸರ್ವಸ್ವಂ ಗುರವೇ ದದ್ಯಾತ್ತದರ್ಧಂ ವಾ ಮಹಾಮುನೇ ।
ಸ್ವದೇಹಮಪಿ ನಿಕ್ಷಿಪ್ಯ ಗುರೌ ಸ್ಥೇಯಮಕಿಂಚನೈಃ ॥ ೧೭ ॥

ಯಃ ಸತ್ತ್ವೈಃ ಪಂಚಭಿರ್ವಿದ್ವಾನ್ಸಂಸ್ಕಾರೈಸ್ಸಂಸ್ಕೃತೋ ಭವೇತ್ ।
ದಾಸ್ಯಭಾಗೀ ಸ ಕೃಷ್ಣಸ್ಯ ನಾನ್ಯಥಾ ಕಲ್ಪಕೋಟಿಭಿಃ ॥ ೧೮ ॥

ಅಂಕನಂ ತೂರ್ಧ್ವಪುಂಡ್ರಶ್ಚ ಮಂತ್ರೋ ನಾಮವಿಧಾರಣಂ ।
ಪಂಚಮೋ ಯಾಗ ಇತ್ಯುಕ್ತಾಃ ಸಂಸ್ಕಾರಾಃ ಪೂರ್ವಸೂರಿಭಿಃ ॥ ೧೯ ॥

ಅಂಕನಂ ಶಂಖಚಕ್ರಾದ್ಯೈಃ ಸಚ್ಛಿದ್ರಃ ಪುಂಡ್ರ ಉಚ್ಯತೇ ।
ದಾಸಶಬ್ದಯುತಂ ನಾಮ ಮಂತ್ರೋ ಯುಗಳಸಂಜ್ಞಕಃ ॥ ೨೦ ॥

ಗುರುವೈಷ್ಣವಯೋಃ ಪೂಜಾ ಯಾಗ ಇತ್ಯಭಿಧೀಯತೇ ।
ಏತೇ ಪರಮಸಂಸ್ಕಾರಾ ಮಯಾ ತೇ ಪರಿಕೀರ್ತಿತಾಃ ॥ ೨೧ ॥

---

೧೭. ಆಮೇಲೆ ಗುರುವಿಗೆ ತನ್ನ ಸರ್ವಸ್ವವನ್ನೂ ಕೊಟ್ಟುಬಿಡಬೇಕು. ಹಾಗಿಲ್ಲದಿದ್ದರೆ ಅದರಲ್ಲಿ ಅರ್ಧವಾದರೂ ಕೊಟ್ಟುಬಿಡಬೇಕು. ತಾನೂ ಕೂಡ ಗುರುವಿಗೆ ಅಧೀನನಾಗಿ ಅವನಲ್ಲಿಯೇ ಇದ್ದುಕೊಂಡು ಇರಬೇಕು. ತನ್ನಲ್ಲಿ ಏನೂ ಇರಬಾರದು

೧೮. ಯಾವನು ಈ ಐದು ಸಂಸ್ಕಾರಗಳನ್ನು ಹೊಂದಿರುತ್ತಾನೆಯೋ ಅವನು ಕೃಷ್ಣನ ದಾಸನಾಗಬಲ್ಲನು. ಹಾಗಿಲ್ಲದಿದ್ದರೆ ಕೋಟಿಕಲ್ಪಗಳಾದರೂ ಮೋಕ್ಷವು ಸಿಗದು.

೧೯. ಮುದ್ರೆಹಾಕಿಸಿಕೊಳ್ಳುವುದು, ಊರ್ಧ್ವಪುಂಡ್ರವನ್ನು ಹಚ್ಚಿಕೊಳ್ಳುವುದು, ಮಂತ್ರವನುಪದೇಶಿಸಿಕೊಳ್ಳುವುದು, ಹೆಸರನ್ನಿಟ್ಟುಕೊಳ್ಳುವುದು ಯಾಗ ಪೂಜೆ ಮಾಡುವುದು. ಎಂಬುದಾಗಿ ಐದು (ಪಂಚ) ಸಂಸ್ಕಾರಗಳೆಂದು ಪೂರ್ವಿಕರು ಹೇಳುತ್ತಾರೆ.

೨೦-೨೧. ಅಂಕನವೆಂದರೆ ಶಂಕಚಕ್ರಾದಿಗಳನ್ನು ಬರೆದುಕೊಳ್ಳುವುದು. ರಂಧ್ರಗಳಿಂದ ಕೂಡಿದ ಊರ್ಧ್ವಪುಂಡ್ರವೇ ಪುಂಡ್ರವೆಂದೆನಿಸಿಕೊಳ್ಳುತ್ತದೆ ಹೆಸರಿನ ಜೊತೆಗೆ ದಾಸಶಬ್ಧವನ್ನು ಸೇರಿಸಿಕೊಳ್ಳುವುದೇ ನಾಮ ಧಾರಣವು. ಮಂತ್ರವೆಂಬುದೇ ಹಿಂದೆ ಹೇಳಿದ ಯುಗಳ ಮಂತ್ರವು, ಗುರುವಿಗೂ ವೈಷ್ಣವರಿಗೂ ಪೂಜೆಮಾಡುವುದೇ ಯಾಗವೆನ್ನಿಸಿಕೊಳ್ಳುತ್ತದೆ. ಈ ಪರಮಸಂಸ್ಕಾರಗಳನ್ನು ಹೇಳಿದ್ದೇನೆ.

ಅಥ ತುಭ್ಯಂ ಪ್ರಪನ್ನಾನಾಂ ಧರ್ಮಾನ್ವಕ್ಷ್ಯಾಮಿ ನಾರದ ।
ಯಾನಾಸ್ಥಾಯ ಗಮಿಷ್ಯಂತಿ ಹರೇರ್ಧಾಮ ನರಾಃ ಕಲೌ ॥ ೨೨ ॥

ಇತ್ಥಂ ಗುರೋರ್ಲಬ್ಧಮಂತ್ರೋ ಗುರುಭಕ್ತಿಪರಾಯಣಃ ।
ಸೇವಮಾನೋ ಗುರುಂ ನಿತ್ಯಂ ತತ್ಕೃಪಾಂ ಭಾವಯೇತ್ಸುಧೀಃ ॥ ೨೩ ॥

ಸತಾಂ ಧರ್ಮಾಂಸ್ತತಶ್ಶಿಕ್ಷೇತ್ಪ್ರಪನ್ನಾನಾಂ ವಿಶೇಷತಃ ।
ಸ್ವೇಷ್ಟದೇವಧಿಯಾ ನಿತ್ಯಂ ವೈಷ್ಣವಾನ್ಪರಿತೋಷಯೇತ್ ॥ ೨೪ ॥

ತಾಡನಂ ಭರ್ತ್ಸನಂ ಕಾಮೀ ಭೋಗ್ಯತ್ವೇನ ಯಥಾ ಸ್ತ್ರಿಯಾಃ ।
ಗೃಹ್ಣಾತಿ ವೈಷ್ಣವಾನಾಂ ಚ ತತ್ತದ್ಗ್ರಾಹ್ಯಂ ತಥಾ ಬುಧೈಃ ॥ ೨೫ ॥

ಐಹಿಕಾಮುಷ್ಮಿಕೀ ಚಿಂತಾ ನೈವ ಕಾರ್ಯಾ ಕದಾಚನ ।
ಐಹಿಕಂ ತು ಸದಾ ಭಾವ್ಯಂ ಪೂರ್ವಾಚರಿತಕರ್ಮಣಾ ॥ ೨೬ ॥

---

೨೨. ಯಾವ ಧರ್ಮಗಳನ್ನು ಅನುಸರಿಸಿ ಜನರು ಹರಿಯ ಸ್ಥಾನವಾದ ವೈಕುಂಠವನ್ನು ಹೊಂದುತ್ತಾರೋ ಅಂತಹ ಪ್ರಪನ್ನರ ಧರ್ಮವನ್ನು ನಿನಗೆ ಹೇಳುತ್ತೇನೆ, ಕೇಳು.

೨೩. ಈ ರೀತಿ ಗುರುವಿನಿಂದ ಉಪದೇಶವನ್ನು ಹೊಂದಿ ಗುರುವಿನಲ್ಲಿ ಭಕ್ತಿಯನ್ನಿಟ್ಟಿದ್ದು ಗುರುವನ್ನೇ ಸೇವಿಸುತ್ತಾ ಅವನ ಕೃಪೆಯನ್ನು ಸಂಪಾದಿಸಬೇಕು.

೨೪. ಸತ್ಪುರುಷರ ಧರ್ಮವನ್ನು ಹೇಳಿಕೊಡಬೇಕು. ಪ್ರಪನ್ನರಿಗೆ ಇನ್ನೂ ಆಸ್ಥೆಯಿಂದ ಹೇಳಕೊಡಬೇಕು. ವೈಷ್ಣವರನ್ನು ತನ್ನ ಇಷ್ಟದೇವತೆಯೆಂಬ ರೀತಿಯಿಂದ ಸಂತೋಷಪಡಿಸಬೇಕು.

೨೫. ಕಾಮಿಯಾದವನು ಹೆಂಗಸರಿಂದ ಯಾವ ರೀತಿಯಲ್ಲಿ ಏಟು, ಬೈಗಳು, ಕಾಮಗಳನ್ನು ಅನುಭವಿಸುತ್ತಾನೆಯೋ ಹಾಗೆಯೇ ತಾನೂ ಗುರುವಿನಿಂದ ಅನುಭವಿಸಬೇಕು.

೨೬. ಈಲೋಕ ಪರಲೋಕಗಳ ಚಿಂತೆಯನ್ನು ಮಾಡಲೇಬಾರದು. ಐಹಿಕ ಸುಖವು ಪೂರ್ವಜನ್ಮದ ಕರ್ಮದಿಂದ ಬರತಕ್ಕದ್ದು.

ಆಮುಷ್ಮಿಕಂ ತಥಾ ಕೃಷ್ಣಃ ಸ್ವಯಮೇವ ಕರಿಷ್ಯತಿ ।
ಅತೋ ಹಿ ತತ್ಕೃತೇ ತ್ಯಾಜ್ಯಃ ಪ್ರಯತ್ನಃ ಸರ್ವಥಾ ನರೈಃ ॥ ೨೭ ॥

ಸರ್ವೋಪಾಯಪರಿತ್ಯಾಗಃ ಕೃಷ್ಣಪ್ರೀತ್ಯಾತ್ಮತಯಾರ್ಚನಂ ।
ಸುಚಿರಂ ಪ್ರೋಷಿತೇ ಕಾಂತೇ ಯಥಾ ಪತಿಪರಾಯಣಾ ॥ ೨೮ ॥

ಪ್ರಿಯಾನುರಾಗಿಣೀ ದೀನಾ ತಸ್ಯ ಸಂಗೈಕಕಾಂಕ್ಷಿಣೀ ।
ತದ್ಗುಣಾನ್ಭಾವಯೇನ್ನಿತ್ಯಂ ಗಾಯತ್ಯಭಿಶೃಣೋತಿ ಚ ॥ ೨೯ ॥

ಶ್ರೀಕೃಷ್ಣಗುಣಲೀಲಾದೇಃ ಸ್ಮರಣಾದಿ ತಥಾ ಚರೇತ್ ।
ನ ಪುನಸ್ಸಾಧನತ್ವೇನ ಕಾರ್ಯಂ ತತ್ತು ಕದಾಚನ ॥ ೩೦ ॥

ಚಿರಂ ಪ್ರೋಷಾಗತಂ ಕಾನ್ತಂ ಪ್ರಾಪ್ಯ ಕಾಂತಾ ಧಿಯಾ ಯಥಾ ।
ಚುಂಬತೀ ಚಾಶ್ಲಿಶಂತೀ ಚ ನೇತ್ರಾಂತೇನ ಪಿಬಂತ್ಯಪಿ ॥ ೩೧ ॥

ಬ್ರಹ್ಮಾನಂದೇ ಗತೇ ವಾಮುಂ ಸೇವತೇ ಪರಯಾ ಮುದಾ ।
ಶ್ರೀಮದರ್ಚಾವತಾರೇಣ ತಥಾ ಪರಿಚರೇದ್ಧರಿಂ ॥ ೩೨ ॥

---

೨೭-೨೯. ಪರಲೋಕದ ಸುಖವನ್ನು ಕೃಷ್ಣನು ತಾನೇ ಮಾಡುತ್ತಾನೆ. ಆದ್ದರಿಂದ ಆ ವಿಷಯದಲ್ಲಿ ಪರಲೋಕದ ಸುಖವನ್ನು ಬಿಟ್ಟುಬಿಡಬೇಕು ಎಲ್ಲಾ ಕೆಲಸಗಳನ್ನೂ ಕೃಷ್ಣಪ್ರೀತಿಯಾಗಲೆಂದು ಮಾಡುತ್ತ ಅರ್ಚಿಸಬೇಕು. ಗಂಡನು ಊರು ಬಿಟ್ಟು ಹೋದಾಗ ಹೆಂಡತಿಯು ಗಂಡನ ಗುಣಗಳನ್ನೇ ಹೊಗಳುತ್ತಾ ಅವನ ಬರವನ್ನೇ ನೋಡುತ್ತ, ಅವನ ಸಂಗವನ್ನೇ ಅಪೇಕ್ಷಿಸುತ್ತಾಳೋ ಹಾಗೆ ಕೃಷ್ಣನಗುಣಗಳನ್ನೇ ಗಾನ ಮಾಡುತ್ತ ಅವನ ಗುಣಗಳನ್ನೇ ಕೇಳುತ್ತ ಅವನ ಸಂಗವನ್ನೇ ಅಪೇಕ್ಷಿಸುತ್ತಿರಬೇಕು.

೩೦. ಶ್ರೀಕೃಷ್ಣನ ಗುಣ ಅವನ ಲೀಲೆ, ಅವನ ಸ್ಮರಣಗಳನ್ನು ಮಾಡುತ್ತಿರಬೇಕು. ಅದೇ ಒಂದು ಸಾಧನವೆಂದು ಮಾಡಬಾರದು.

೩೧. ಬಹಳಕಾಲ ಬಿಟ್ಟುಹೋಗಿದ್ದು ಬಂದ ಗಂಡನನ್ನು ಹೊಂದಿ ಹೆಂಡತಿಯು ಆಲಂಗಿಸುತ್ತಾ ಕಡೆಗಣ್ಣುಗಳಿಂದ ಹೇಗೆ ನೋಡುತ್ತಾಳೋ ಆ ರೀತಿಯಲ್ಲಿ ಕೃಷ್ಣನಲ್ಲಿ ಭಕ್ತಿಯಿಟ್ಟಿರಬೇಕು. ಆ ರೀತಿ ಮಾಡುತ್ತಿರಬೇಕು.

೩೨. ಅರ್ಚಾವತಾರದಿಂದ ಹರಿಯನ್ನು ಸೇವಿಸಬೇಕು. ಬ್ರಹ್ಮಾನಂದ ಹೊಂದಿ ಹರಿಯನ್ನು ಸಂತೋಷದಿಂದ ಸೇವಿಸಬೇಕು.

ಅನನ್ಯಶರಣೋ ನಿತ್ಯಂ ತಥೈವಾನನ್ಯಸಾಧನಃ ।
ಅನನ್ಯಸಾಧನಾರ್ಥೀ ಚ ಸ್ಯಾದನನ್ಯಪ್ರಯೋಜನಃ ॥ ೩೩ ॥

ನಾನ್ಯಂ ಚ ಪೂಜಯೇದ್ದೇವಂ ನ ನಮೇತ್ತಂ ಸ್ಮರೇನ್ನ ಚ ।
ನ ಚ ಪಶ್ಯೇನ್ನ ಗಾಯೇಚ್ಚ ನ ಚ ನಿಂದೇತ್ಕದಾಚನ ॥ ೩೪ ॥

ನಾನ್ಯೋಚ್ಛಿಷ್ಟಂ ಚ ಭುಂಜೀತ ನಾನ್ಯಶೇಷಂ ಚ ಧಾರಯೇತ್ ।
ಅವೈಷ್ಣವಾನಾಂ ಸಂಭಾಷಾ ವಂದನಾದಿವಿವರ್ಜಯೇತ್ ॥ ೩೫ ॥

ಈಶವೈಷ್ಣವಯೋರ್ನಿಂದಾ ಶೃಣುಯಾನ್ನ ಕದಾಚನ ।
ಕರ್ಣೌ ಪಿಧಾಯ ಗನ್ತವ್ಯಂ ಶಕ್ತೋ ದಂಡಂ ಸಮಾಚರೇತ್ ॥ ೩೬ ॥

ಆಶ್ರಿತ್ಯ ಚಾತಕೀಂ ವೃತ್ತಿಂ ದೇಹಪಾತಾವಧಿ ದ್ವಿಜ ।
ದ್ವಯಸ್ಯಾರ್ಥಂ ಭಾವಯಿತ್ವಾ ಸ್ಥೇಯಮಿತ್ಯೇವ ಮೇ ಮತಿಃ ॥ ೩೭ ॥

---

೩೩. ಯಾವಾಗಲೂ ಮತ್ತೊಬ್ಬರನ್ನು ಶರಣು ಹೊಂದದೆ ಬೇರೆ ರೀತಿಯ ಉಪಾಯವಿಲ್ಲದೆ ಬೇರೆ ಉಪಾಯವನ್ನು ಹುಡುಕದೇ ಬೇರೆ ಪ್ರಯೋಜನವನ್ನು ಅಪೇಕ್ಷಿಸದೇ ಇರಬೇಕು.

೩೪. ಬೇರೆ ದೇವರನ್ನು ಪೂಜಿಸಬಾರದು ಬೇರೆ ದೇವರಿಗೆ ನಮಸ್ಕಾರಮಾಡ ಕೂಡದು. ಸ್ಮರಿಸಲೂ ಕೂಡದು. ನೋಡಲೂಬಾರದು. ಅವನನ್ನು ಹೊಗಳುವುದಾಗಲಿ ನಿಂದಿಸುವುದಾಗಲಿ ಒಂದೂ ಬಾರದು.

೩೫. ಬೇರೆಯವರ ಎಂಜಲನ್ನೇ ತಿನ್ನಕೂಡದು ಬೇರೆ ದೇವರ ನಿರ್ಮಾಲ್ಯ ವನ್ನು ಧರಿಸಬಾರದು. ವೈಷ್ಣವರಲ್ಲದವರೊಡನೆ ಮಾತು ವಂದನಾದಿಗಳನ್ನು ಬಿಡಬೇಕು.

೩೬. ಭಕ್ತರು ಶಿವವಿಷ್ಣುಗಳ ನಿಂದೆಯನ್ನು ಕೇಳಲೇಬಾರದು. ಆ ರೀತಿ ನಿಂದಿಸುತ್ತಿದ್ದರೆ ಕಿವಿಗಳನ್ನು ಮುಚ್ಚಿಕೊಂಡು ಹೊರಟುಹೋಗಬೇಕು. ಶಿಕ್ಷಿಸುವ ಶಕ್ತಿಯಿದ್ದರೆ ಶಿಕ್ಷಿಸಬೇಕು

೩೭. ಆ ಚಾತಕಪಕ್ಷಿಯು ಮೇಘವನ್ನು ಕಾಯುವಂತೆ ಕಾಯುತ್ತ ಈ ದೇಹವು ಬೀಳುವವರೆಗೂ ಇರಬೇಕು. ಮತ್ತು ಸ್ವಾಮಿಯ ಸೇವೆ ದೇಹಪಾತ ಎರಡನ್ನೂ ನೋಡುತ್ತಲಿರಬೇಕು. ಸ್ವಾಮಿ ಸೇವೆ ಗುರು ಸೇವೆಗಳನ್ನು ನೋಡಿಕೊಂಡಿರಬೇಕೆಂದು ನನ್ನ ಭಾವನೆ.

ಸರಸ್ಸಮುದ್ರನದ್ಯಾದೀನ್ವಿಹಾಯ ಚಾತಕೋ ಯಥಾ ।
ತೃಷಿತೋ ಮ್ರಿಯತೇ ಚಾಪಿ ಯಾ ತೇ ವಾ ಪಯೋಧರಂ ॥ ೩೮ ॥

ಏವಮೇವ ಪ್ರಯತ್ನೇನ ಸಾಧನಾನಿ ವಿಚಿಂತಯೇತ್ ।
ಸ್ವೇಷ್ಟದೇವೌ ಸದಾ ಯಾಚ್ಯೌ ಗತಿಸ್ತ್ವೇ ಮೇ ಭವೇದಿತಿ ॥ ೩೯ ॥

ಸ್ವೇಷ್ಟದೇವತದೀಯಾನಾಂ ಗುರೋರಪಿ ವಿಶೇಷತಃ ।
ಅನುಕೂಲ್ಯೇ ಸದಾ ಸ್ಥೇಯಂ ಪ್ರಾತಿಕೂಲ್ಯಂ ವಿವರ್ಜಯೇತ್ ॥ ೪೦ ॥

ಸಕೃತ್ಪ್ರಪನ್ನೋ ವಕ್ಷ್ಯಾಮಿ ಕಲ್ಯಾಣಗುಣಶಾಂ ತಯೋಃ ।
ವಿಚಿನ್ತ್ಯ ವಿಶ್ವಸೇದೇತೌ ಮಾಮಿಮಾವುದ್ಧರಿಷ್ಯತಃ ॥ ೪೧ ॥

ಸಂಸಾರಸಾಗರಾನ್ನಾಥೌ ಪುತ್ರಮಿತ್ರಗೃಹಾಕುಲಾತ್ ।
ಗೋಪ್ತಾರೌ ಮೇ ಯುವಾಮೇವ ಪ್ರಪನ್ನಭಯಭಂಜನೌ ॥ ೪೨ ॥

ಯೋಹಂ ಮಮಾಸ್ತಿ ಯತ್ಕಿಂಚಿದಿಹಲೋಕೇ ಪರತ್ರ ಚ ।
ತತ್ಸರ್ವಂ ಭವತೋರದ್ಯ ಚರಣೇಷು ಸಮರ್ಪಿತಂ ॥ ೪೩ ॥

---

೩೮. ಚಾತಕವು ಬಾಯಾರಿಕೆಯಿಂದ ಸತ್ತರೂ ಸಮುದ್ರ ನದಿಗಳನ್ನು ಯಾಚಿಸದೆ ಸಾಯುತ್ತದೆ. ಮೇಘವನ್ನೇ ಯಾಚಿಸುತ್ತವೆ.

೩೯. ಹೀಗೆ ಪ್ರಯತ್ನಪಟ್ಟು ಸಾಧನಗಳನ್ನು ಚಿಂತಿಸಬೇಕು. ಆ ಇಷ್ಟದೇವತೆಗಳಾದ ರಾಧಾಕೃಷ್ಣರನ್ನು ನೀವೇ ನನಗೆ ಗತಿಯೆಂದು ಸದಾ ಪ್ರಾರ್ಥಿಸುತ್ತಿರಬೇಕು

೪೦. ತನ್ನ ಇಷ್ಟದೇವತೆ ಅವರ ಸಂಬಂಧಿಗಳು ಗುರುಗಳು ಇವರಿಗೆ ಅನುಕೂಲವಾಗಿದ್ದುಕೊಂಡಿರಬೇಕು. ಪ್ರತಿಕೂಲವಾಗಿರಬಾರದು.

೪೧. ಒಂದಾವರ್ತಿ ನಮಸ್ಕರಿಸಿ ಅವರ ಕಲ್ಯಾಣಗುಣಗಳನ್ನು ಹೇಳುತ್ತೇನೆ ಯೋಚಿಸಿ ಅವರಲ್ಲಿ ವಿಶ್ವಾಸವಿಡಬೇಕು. ನನ್ನನ್ನು ಇವರು ಉದ್ಧರಿಸುತ್ತಾರೆ

೪೨. ಪುತ್ರ, ಮಿತ್ರ, ಗೃಹಗಳಿಂದ ಕೂಡಿದ ಸಂಸಾರದಿಂದ ನನ್ನನ್ನು ಕಾಪಾಡುವವರು ನೀವೇನೆ. ಶರಣಾಗತರ ಭಯವನ್ನು ನೀವೇ ನಾಶಮಾಡುವವರು

೪೩. ನಾನು ಮತ್ತು ಈ ಲೋಕದಲ್ಲಿ ನನ್ನದೇನಿದೆಯೋ ಅವೆಲ್ಲವೂ ನಿನ್ನದೇನೆ ನಿನ್ನ ಪಾದಗಳಲ್ಲಿ ಅರ್ಪಿಸಿದ್ದೇನೆ.

ಅಹಮಸ್ಮ್ಯಪರಾಧಾನಾಂ ಆಲಯಸ್ತ್ಯಕ್ತಸಾಧನಃ ।
ಅಗತಿಶ್ಚ ತತೋ ನಾಥೌ ಭವಂತಾವೇವ ಮೇ ಗತಿಃ　　　　॥ ೪೪ ॥

ತವಾಸ್ಮಿ ರಾಧಿಕಾಕಾನ್ತ ಕರ್ಮಣಾ ಮನಸಾ ಗಿರಾ ।
ಕೃಷ್ಣಕಾನ್ತೇ ತವೈವಾಸ್ಮಿ ಯುವಾಮೇವ ಗತಿರ್ಮಮ　　　　॥ ೪೫ ॥

ಶರಣಂ ವಾಂ ಪ್ರಪನ್ನೋಽಸ್ಮಿ ಕರುಣಾನಿಕರಾಕರೌ ।
ಪ್ರಸಾದಂ ಕುರುತಃ ದಾಸ್ಯಂ ಮಯಿ ದುಷ್ಟೇಽಪರಾಧಿನಿ　　　　॥ ೪೬ ॥

ಇತ್ಯೇವಂ ಜಪತಾಂ ನಿತ್ಯಂ ಸ್ಥಾತವ್ಯಂ ಪದಪಂಕಜಂ ।
ಅಚಿರಾದೇವ ತದ್ದಾಸ್ಯಮಿಚ್ಛತಾ ಮುನಿಸತ್ತಮ　　　　॥ ೪೭ ॥

ಬಾಹ್ಯಧರ್ಮಾ ಮಯಾ ಹ್ಯೇತೇ ಸಂಕ್ಷೇಪೇಣೋಪವರ್ಣಿತಾಃ ।
ಅಂತರಃ ಪರಮೋ ಧರ್ಮಃ ಪ್ರಪನ್ನಾನಾಮಥೋಚ್ಯತೇ　　　　॥ ೪೮ ॥

ಕೃಷ್ಣಪ್ರಿಯಾ ಸಖೀಭಾವಂ ಸಮಾಶ್ರಿತ್ಯ ಪ್ರಯತ್ನತಃ ।
ತಯೋಸ್ಸೇವಾಂ ಪ್ರಕುರ್ವೀತ ದಿವಾನಕ್ತಮತಂದ್ರಿತಃ　　　　॥ ೪೯ ॥

---

೪೪. ನಾನು ನಿನ್ನನ್ನು ಸಾಧಿಸದೆ ಅಪರಾಧಗಳಿಗೆಲ್ಲಾ ಮನೆಯಾಗಿದ್ದೇನೆ. ಬೇರೆ ಗತಿಯೂ ಇಲ್ಲ. ನೀನೇ ನನಗೆ ಗತಿಯು.

೪೫. ಎಲೈ ರಾಧಾಕಾಂತನೇ ಮನೋವಾಕ್ಕಾಯಗಳಿಂದ ನಿನ್ನವನಾಗಿದ್ದೇನೆ. ರಾಧಿಕೆಯೇ ನಿನ್ನವನಾಗಿದ್ದೇನೆ. ನೀವೇ ನನಗೆ ಗತಿಯು.

೪೬. ಕರುಣಾಸಾಗರರೇ ನಿಮ್ಮನ್ನು ಶರಣು ಹೊಂದಿದ್ದೇನೆ. ದುಷ್ಟನೂ, ಅಪರಾಧಿಯೂ ಆದ ನನಗೆ ದಾಸ್ಯವನ್ನನುಗ್ರಹಿಸಿರಿ.

೪೭. ಸ್ವಲ್ಪಕಾಲದಲ್ಲಿಯೇ ಅವನ ದಾಸ್ಯವನ್ನು ಅಪೇಕ್ಷಿಸುವವನು ಈ ರೀತಿ ಹೇಳುತ್ತಾ ಆ ಸ್ವಾಮಿಯ ಪಾದಕಮಲವನ್ನು ಚಿಂತಿಸುತ್ತಿರಬೇಕು.

೪೮. ಹೊರಗಿನ ಧರ್ಮಗಳನ್ನು ಸಂಕ್ಷೇಪವಾಗಿ ತಿಳಿಸಿದೆನು. ಅನಂತರ ಪ್ರಪನ್ನರ ಅಂತರ ಧರ್ಮವನ್ನು ಹೇಳುತ್ತೇನೆ.

೪೯. ತಾನು ಕೃಷ್ಣನ ಪ್ರಿಯೆಯಾದ ರಾಧೆಯ ಸಖಿಯಾಗಿರುವಿಕೆಯನ್ನು ಹೊಂದಿ ಆ ರಾಧಾಕೃಷ್ಣರ ಸೇವೆಯನ್ನು ಹಗಲೂ ರಾತ್ರಿ ಮಾಡಬೇಕು.

ಉಕ್ತೋ ಮಂತ್ರಸ್ತದಂಗಾನಿ ತಥಾ ತಸ್ಯಾಧಿಕಾರಿಣಃ ।
ತದ್ಧರ್ಮಾಶ್ಚ ತಥಾ ತೇಭ್ಯಃ ಫಲಂ ಮಂತ್ರಸ್ಯ ನಾರದ ॥ ೫೦ ॥

ಅನುತಿಷ್ಠ ತ್ವಮಪ್ಯೇತತ್ತಯೋರ್ದಾಸ್ಯಮವಾಪ್ಸ್ಯಸಿ ।
ಸ್ವಾಧಿಕಾರಕ್ಷಯೇ ವಿಪ್ರ ಸಂದೇಹೋ ನಾತ್ರ ಕಶ್ಚನ ॥ ೫೧ ॥

ಸಕೃನ್ನಾತ್ರಪ್ರಪನ್ನಾಯ ತವಾಸ್ಮೀತ್ಯಭಿಯಾಚತೇ ।
ನಿಜದಾಸ್ಯಂ ಹರಿರ್ದದ್ಯಾನ್ನ ಮೇಽತ್ರಾಸ್ತಿ ವಿಚಾರಣಾ ॥ ೫೨ ॥

ಅತ್ರ ತೇ ವರ್ಣಯಿಷ್ಯಾಮಿ ರಹಸ್ಯಂ ಪರಮಾದ್ಭುತಂ ।
ಶ್ರುತಂ ಪೂರ್ವಂ ಮಯಾ ಕೃಷ್ಣಾತ್ಸಾಕ್ಷಾದ್ಭಗವತಃ ಕಿಲ । ೫೩ ॥

ಏಷ ತೇ ಕಥಿತೋ ಧರ್ಮೋ ಹ್ಯಾಂತರೋ ಮುನಿಸತ್ತಮ ।
ಗುಹ್ಯಾದ್ಗುಹ್ಯತಮೋ ಹ್ಯೇಷ ಗೋಪನೀಯಃ ಪ್ರಯತ್ನತಃ ॥ ೫೪ ॥

ಮಂತ್ರರತ್ನಮಹಂ ಪೂರ್ವಂ ಜಪನ್ಕೈಲಾಸಮೂರ್ಧನಿ ।
ಧ್ಯಾಯನ್ನಾರಾಯಣಂ ದೇವಮುಪಸಂಗಹನೇ ವನೇ ॥ ೫೫ ॥

---

೫೦. ಮಂತ್ರವನ್ನೂ ಅದರ ಅಂಗಗಳನ್ನೂ ಅದಕ್ಕೆ ಅಧಿಕಾರಿಯನ್ನೂ ಅವರ ಧರ್ಮಗಳನ್ನೂ ಅವರಿಗೆ ಬರುವ ಫಲವನ್ನೂ ಹೇಳಿದೆನು.

೫೧. ಎಲೈ ನಾರದನೇ, ನೀನೂ ಈ ದಾಸ್ಯಭಾವವನ್ನು ಅನುಸರಿಸು. ನಿನ್ನ ಅಧಿಕಾರವನ್ನು ನೀನು ಬಿಟ್ಟು ಸ್ವಾಮಿಗೆ ಅರ್ಪಿಸಿ ಅದನ್ನು ಕಳೆದುಕೊಂಡಾಗ ನಿಶ್ಚಯ ನಾಗಿಯೂ ಅವರ ದಾಸ್ಯವನ್ನು ಹೊಂದುತ್ತೀಯೆ.

೫೨ ಒಂದಾವರ್ತಿ ಪ್ರಪನ್ನನಾಗಿ ನಿನ್ನ ದಾಸನೆಂದು ಹೇಳಿ ಯಾಚಿಸುವವ ನಿಗೆ ಹರಿಯು ತನ್ನ ದಾಸ್ಯಭಾವವನ್ನು ಕೊಡುತ್ತಾನೆ ಇದರಲ್ಲಿ ಸಂದೇಹವಿಲ್ಲ.

೫೩. ಪ್ರತ್ಯಕ್ಷವಾಗಿ ಭಗವಂತನಾದ ಕೃಷ್ಣನಿಂದಲೇ ನಾನು ಪೂರ್ವದಲ್ಲಿ ಕೇಳಿದ ಒಂದು ಅದ್ಭುತವಾದ ರಹಸ್ಯವನ್ನು ಹೇಳುತ್ತೇನೆ. ಕೇಳು.

೫೪. ಈ ಆಂತರ ಧರ್ಮವನ್ನು ನಿನಗೆ ಹೇಳಿದ್ದೇನೆ. ಇದು ಬಹು ಗುಟ್ಯಾದುದು. ಪ್ರಯತ್ನದಿಂದ ಕಾಪಾಡು ಹೊರಗೆಡವಬೇಡ

೫೫. ಹಿಂದೆ ಈ ಮಂತ್ರರತ್ನದಿಂದ ನಾರಾಯಣನನ್ನು ಧ್ಯಾನಮಾಡುತ್ತಾ ಕೈಲಾಸ ಬೆಟ್ಟದ ಮೇಲೆ ಜಪಪರನಾಗಿದ್ದೆನು.

ತತಸ್ತು ಭಗವಾಂಸ್ತುಷ್ಟಃ ಪ್ರಾದುರಾಸೀನ್ಮಮಾಗ್ರತಃ ।
ಪ್ರಿಯತಾಂ ವರ ಇತ್ಯುಕ್ತೇ ಮಯಾಪ್ಯುದ್ಘಾಟ್ಯ ಲೋಚನೇ ॥ ೫೬ ॥

ದೃಷ್ಟೋ ದೇವಃ ಪ್ರಿಯಾಸಾರ್ಧಂ ಸಂಸ್ಥಿತೋ ಗರುಡೋಪರಿ ।
ಪ್ರಣಿಪತ್ಯ ಮುಹುಶ್ಚೈವಮವದಂ ಚ ಶ್ರಿಯಃ ಪತಿಂ ॥ ೫೭ ॥

ಯದ್ರೂಪಂ ತೇ ಕೃಪಾಸಿಂಧೋ ಪರಮಾನಂದದಾಯಕಂ ।
ಸರ್ವಾನಂದಾಶ್ರಯಂ ನಿತ್ಯಂ ಮೂರ್ತಿಮತ್ಸರ್ವತೋಧಿಕಂ ॥ ೫೮ ॥

ನಿರ್ಗುಣಂ ನಿಷ್ಕ್ರಿಯಂ ಶಾಂತಂ ತದ್ಬ್ರಹ್ಮೇತಿ ವಿದುರ್ಬುಧಾಃ ।
ತದಹಂ ದ್ರಷ್ಟುಮಿಚ್ಛಾಮಿ ಚಕ್ಷುರ್ಭ್ಯಾಂ ಪರಮೇಶ್ವರ ॥ ೫೯ ॥

ತತೋ ಮಾಮಾಹ ಭಗವಾನ್ಪ್ರಸನ್ನಂ ಕಮಲಾಪತಿಃ ।
ತದದ್ಯ ದ್ರಕ್ಷ್ಯಸೇ ರೂಪಂ ಯತ್ತೇ ಮನಸಿ ಕಾಂಕ್ಷಿತಂ ॥ ೬೦ ॥

ಯಮುನಾಪಶ್ಚಿಮೇ ಕೂಲೇ ಗಚ್ಛ ವೃಂದಾವನಂ ಮಮ ।
ಇತ್ಯುಕ್ತ್ವಾಂತರ್ದಧೇ ದೇವಃ ಪ್ರಿಯಾಸಾರ್ಧಂ ಜಗತ್ಪತಿಃ ॥ ೬೧ ॥

---

೫೬-೫೭. ಆ ಮೇಲೆ ಸಂತುಷ್ಟನಾದ ಸ್ವಾಮಿಯು ಪ್ರತ್ಯಕ್ಷನಾಗಿ ವರವನ್ನು ಕೇಳಿಕೋ ಎಂದನು. ಆಗ ನಾನು ಕಣ್ಣುಬಿಟ್ಟು ನೋಡಲು ಹೆಂಡತಿಯೊಡನೆ ಗರುಡನ ಮೇಲೆ ಕುಳಿತಿರುವ ಸ್ವಾಮಿಯನ್ನು ಕಂಡು ನಮಸ್ಕರಿಸಿ ಆ ಸ್ವಾಮಿಗೆ ಇಂತೆಂದೆನು.

೫೮-೫೯. ಎಲೈ ಕೃಪಾನಿಧಿಯೇ, ನಿನ್ನ ಯಾವ ರೂಪವನ್ನು ಆನಂದವನ್ನು ಕೊಡುವುದನ್ನಾಗಿಯೂ, ಸರ್ವಾನಂದಕ್ಕೆ ಆಶ್ರಯವನ್ನಾಗಿಯೂ, ನಿತ್ಯವನ್ನಾಗಿಯೂ ಮೂರ್ತಿಯಿರುವುದನ್ನಾಗಿಯೂ, ಎಲ್ಲದಕ್ಕಿಂತ ಅಧಿಕವನ್ನಾಗಿಯೂ, ನಿರ್ಗುಣ, ನಿಷ್ಕ್ರಿಯ, ಶಾಂತವನ್ನಾಗಿಯೂ, ಹೇಳುತ್ತಾರೆಯೋ, ಅದನ್ನೇ ತಿಳಿದವರು ಬ್ರಹ್ಮ ವೆಂದೆನ್ನುತ್ತಾರೆ. ಅದನ್ನು ಈ ಕಣ್ಣುಗಳಿಂದ ನೋಡಲೆಳಸುತ್ತೇನೆ, ಎಂದೆನು.

೬೦. ಆಗ ಸ್ವಾಮಿಯು ನೀನು ಮನಸ್ಸಿನಲ್ಲಿ ಅಪೇಕ್ಷಿಸಿದ ರೂಪವನ್ನು ನೋಡ ಬಹುದೆಂದನು.

೬೧. ಯಮುನೆಯ ಪಶ್ಚಿಮದಲ್ಲಿರುವ ನನ್ನ ವೃಂದಾವನಕ್ಕೆ ಹೋಗೆಂದು ಹೇಳಿ ಸ್ವಾಮಿಯು ಹೆಂಡತಿಯೊಡನೆ ಅಂತರ್ಧಾನನಾದನು.

ಅಹಮಪ್ಯಾಗತಸ್ತತ್ರ ಯಮುನಾಯಾಸ್ತಟಂ ಶುಭಂ ।
ತತ್ರ ಕೃಷ್ಣಂ ಪಶ್ಯಂ ಚ ಸರ್ವದೇವೇಶ್ವರೇಶ್ವರಂ ॥ ೬೨ ॥

ಗೋಪವೇಷಧರಂ ಕಾನ್ತಂ ಕಿಶೋರವಯಸಾನ್ವಿತಂ ।
ಪ್ರಿಯಾಸ್ಕನ್ಧೇ ಸುವಿನ್ಯಸ್ತವಾಮಹಸ್ತಮನೋಹರಂ ॥ ೬೩ ॥

ಹಸನ್ತಂ ತಾಂ ಹಾಸಯನ್ತಂ ಮಧ್ಯೇ ಗೋಪೀಕದಂಬಕೇ ।
ಸ್ನಿಗ್ಧಮೇಘಸಮಾಭಾಸಂ ಕಲ್ಯಾಣಗುಣಮಂದಿರಂ ॥ ೬೪ ॥

ಪ್ರಹಸ್ಯ ಚ ತತೋ ಕೃಷ್ಣೋ ಮಾಮಾಹಾಮೃತಭಾಷಣಃ ।
ಅಹಂ ತೇ ದರ್ಶನಂ ಯಾತೋ ಜ್ಞಾತ್ವಾ ರುದ್ರ ತವೇಪ್ಸಿತಂ ॥ ೬೫ ॥

ಯದದ್ಯ ಮೇ ತ್ವಯಾ ದೃಷ್ಟಮಿದಂ ರೂಪಮಲೌಕಿಕಂ ।
ಘನೀಭೂತಾಮಲಪ್ರೇಮಸಚ್ಚಿದಾನಂದವಿಗ್ರಹಂ ॥ ೬೬ ॥

ನೀರೂಪಂ ನಿರ್ಗುಣಂ ವ್ಯಾಪಿ ಕ್ರಿಯಾಹೀನಂ ಪರಾತ್ಪರಂ ।
ವದಂತ್ಯುಪನಿಷತ್ಸಂಘಾ ಇದಮೇವ ಮಮಾನಘ ॥ ೬೭ ॥

---

೬೨-೬೪. ನಾನೂ ಕೂಡ ಒಡನೆಯೇ ಆ ವೃಂದಾವನಕ್ಕೆ ಹೋಗಿ ಸರ್ವ ದೇವತೆಗಳಿಗೂ ಒಡೆಯನಾದ ಗೋಪವೇಷವನ್ನು ಧರಿಸಿ ಮನೋಹರನಾಗಿರುವ ಕಿಶೋರವಯಸ್ಸುಳ್ಳ ಎಡಗೈಯನ್ನು ಹೆಂಡತಿಯ ಹೆಗಲಮೇಲೆ ಹಾಕಿಕೊಂಡು ಅವಳನ್ನು ನಗಿಸಿ ತಾನೂ ನಗುತ್ತಲಿರುವ ಮೇಘಶ್ಯಾಮನಾದ ಕಲ್ಯಾಣಗುಣಗಳುಳ್ಳ ಆ ಸ್ವಾಮಿಯನ್ನು ನೋಡಿದೆನು.

೬೫. ಆಗ ಕೃಷ್ಣನು ನನ್ನನ್ನು ನೋಡಿ ನಾನು ನಿನಗೆ ದರ್ಶನವನ್ನು ಕೊಟ್ಟಿದ್ದೇನೆ. ಇಷ್ಟದಂತೆ ಆಯಿತು. ಎಂದು ನನ್ನೊಡನೆ ಹೇಳಿದನು.

೬೬-೬೭. ಈಗ ನೀನು ನೋಡಿದ ಈ ನನ್ನ ರೂಪವೇ ಅಲೌಕಿಕವಾದುದು. ಗುಣರೂಪಗಳನ್ನುಳಿದುದು. ಇದನ್ನೇ ಉಪನಿಷತ್ತುಗಳು ಹೇಳುತ್ತವೆ. ಇದೇ ಉತ್ತಮವಾದುದು ಎಂದನು.

ಪ್ರಕೃತ್ಯುತ್ಥಗುಣಾಭಾವಾದನಂತತ್ವಾತ್ತಥೇಶ್ವರಂ ।
ತೇ ಸಿದ್ಧಾತ್ವಾನ್ಮದ್ಗುಣಾನಾಂ ನಿರ್ಗುಣಂ ಮಾಂ ವದಂತಿ ಹಿ ॥ ೬೮ ॥

ಅದೃಶ್ಯತ್ವಾನ್ಮಮೈತಸ್ಯ ರೂಪಸ್ಯ ಚರ್ಮಚಕ್ಷುಷಾ ।
ಅರೂಪಂ ಮಾಂ ವದಂತ್ಯೇತೇ ದೇವಾಸ್ಸರ್ವೇ ಮಹೇಶ್ವರ ॥ ೬೯ ॥

ವ್ಯಾಪಕತ್ವಾಚ್ಚಿದಂಶೇನ ಬ್ರಹ್ಮೇತಿ ಚ ವಿದುರ್ಬುಧಾಃ ।
ಅಕರ್ತೃತ್ವಾತ್ಪ್ರಪಂಚಸ್ಯ ನಿಷ್ಕ್ರಿಯಂ ಮಾಂ ವದಂತಿ ಹಿ ॥ ೭೦ ॥

ಮಾಯಾಗುಣೈರ್ಯತೋ ಮೇಂಶಾಃ ಕುರ್ವಂತಿ ಸರ್ಜನಾದಿಕಂ ।
ನ ಕರೋಮಿ ಸ್ವಯಂ ಕಿಂಚಿತ್ಸೃಷ್ಟ್ಯಾದಿಕಮಹಂ ಶಿವ ॥ ೭೧ ॥

ಅಹಮಾಸಾಂ ಮಹಾದೇವ ಗೋಪೀನಾಂ ಪ್ರೇಮವಿಹ್ವಲಃ ।
ಕ್ರಿಯಾಂತರಂ ನ ಜಾನಾಮಿ ನಾತ್ಮಾನಮಪಿ ನಾರದ ॥ ೭೨ ॥

ವಿಹರಾಮ್ಯನಯಾ ನಿತ್ಯಮಸ್ಯಾಃ ಪ್ರೇಮವಶೀಕೃತಃ ।
ಇಮಾಂ ತು ಮತ್ಪ್ರಿಯಾಂ ವಿದ್ಧಿ ರಾಧಿಕಾಂ ಪರದೇವತಾಂ ॥ ೭೩ ॥

---

೬೮. ಹೊಸದಾಗಿ ಹುಟ್ಟಿದ ಗುಣಗಳಿಲ್ಲದುದರಿಂದ ಪ್ರಕೃತಿಯೆಂದೂ, ಅನಂತ ಗುಣಗಳಿರುವುದರಿಂದ ಈಶ್ವರನೆಂದೂ, ನನ್ನಲ್ಲಿರುವ ಗುಣಗಳು ಸಿದ್ಧವಲ್ಲದುದರಿಂದ ನಿರ್ಗುಣನೆಂದೂ, ನನ್ನನ್ನು ಹೇಳುತ್ತಾರೆ.

೬೯. ಈ ನನ್ನ ರೂಪವನ್ನೇ ಚರ್ಮಚಕ್ಷುಸ್ಸಿನಿಂದ ನೋಡಲಾರದುದರಿಂದ ರೂಪರಹಿತನೆಂದು ನನ್ನನ್ನು ಎಲ್ಲರೂ ಹೇಳುತ್ತಾರೆ.

೭೦. ಚಿದಂಶವೇ ನನ್ನಲ್ಲಿ ವ್ಯಾಪಿಸಿರುವುದರಿಂದ ಬ್ರಹ್ಮನೆಂದೆನ್ನುತ್ತಾರೆ. ಪ್ರಪಂಚಕ್ಕೆ ನಾನು ಕರ್ತೃವಲ್ಲದುದರಿಂದ ನಿಷ್ಕ್ರಿಯನೆಂದೆನ್ನುತ್ತಾರೆ

೭೧. ಮಾಯಾಂಶವಾದ ನನ್ನಂಶಗಳೇ ಉತ್ಪತ್ತಿ ಮುಂತಾದುವನ್ನು ಮಾಡುತ್ತವೆ. ಸೃಷ್ಟ್ಯಾದಿಗಳೊಂದನ್ನೂ ನಾನು ಸ್ವಂತವಾಗಿ ಮಾಡುವುದಿಲ್ಲ.

೭೨ ನಾನು ಈ ಗೋಪಿಯರಿಗೆ ಪ್ರಿಯನು. ಬೇರೆ ಕೆಲಸವೇ ನನಗಿಲ್ಲ. ನನ್ನ ಆತ್ಮನೇ ನನಗೆ ಗೊತ್ತಿರುವುದಿಲ್ಲ.

೭೩. ಇವರಲ್ಲಿ ಪ್ರೇಮವಶದಿಂದ ಪರಾಧೀನನಾಗಿ ವಿಹರಿಸುತ್ತೇನೆ. ಈ ರಾಧಿಕೆಯು ನನ್ನ ಪ್ರಿಯಳು. ಈಕೆಯೇ ಪರದೇವತೆಯು.

ಆಸ್ಯಾಶ್ಚ ಪರಿತಃ ಪಶ್ಚಾತ್ಸಖ್ಯಃ ಶತಸಹಸ್ರಶಃ ।
ನಿತ್ಯಾಸ್ಸರ್ವಾ ಇಮಾ ರುದ್ರಾ ಯಥಾಽಹಂ ನಿತ್ಯವಿಗ್ರಹಃ ॥ ೭೪ ॥

ಸಖಾಯಃ ಪಿತರೋ ಗೋಪಾ ಗಾವೋ ವೃಂದಾವನಂ ಮಮ ।
ಸರ್ವಮೇತನ್ನಿತ್ಯಮೇವ ಚಿದಾನಂದರಸಾತ್ಮಕಂ ॥ ೭೫ ॥

ಇದಮಾನಂದಕಂದಾಖ್ಯಂ ವಿದ್ಧಿ ವೃಂದಾವನಂ ಮಮ ।
ಯಸ್ಮಿನ್ಪ್ರವೇಶಮಾತ್ರೇಣ ನ ಪುನಃ ಸಂಸೃತಿಂ ವಿಶೇತ್ ॥ ೭೬ ॥

ಮದ್ವನಂ ಪ್ರಾಪ್ಯ ಯೋ ಮೂಢಾಃ ಪುನರನ್ಯತ್ರ ಗಚ್ಛತಿ ।
ಸ ಆತ್ಮಹಾ ಮಹಾದೇವ ಸತ್ಯಂ ಸತ್ಯಂ ಮಯೋದಿತಂ ॥ ೭೭ ॥

ವೃಂದಾವನಂ ಪರಿತ್ಯಜ್ಯ ನೈವ ಗಚ್ಛಾಮ್ಯಹಂ ಕ್ವಚಿತ್ ।
ನಿವಸಾಮ್ಯನಯಾ ಸಾರ್ಧಮಹಮತ್ರೈವ ಸರ್ವದಾ ॥ ೭೮ ॥

ಇತ್ಯೇವಂ ಸರ್ವಮಾಖ್ಯಾತಂ ಯತ್ತೇ ರುದ್ರ ಹೃದಿಸ್ಥಿತಂ ।
ಕಥಯಸ್ವ ಮಮೇದಾನೀಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೭೯ ॥

---

೭೪. ಈಕೆಯ ಸುತ್ತಲೂ ಇರುವ ಸಾವಿರಾರು ಜನ ಸಖಿಯರೂ ನನ್ನಂತೆಯೇ ಶಾಶ್ವತವಾದ ದೇಹವುಳ್ಳವರು.

೭೫. ಈ ಸ್ನೇಹಿತರು, ಈ ತಾಯಿತಂದೆಗಳಾದ ಗೋಪರು, ಈ ಹಸುಗಳು, ವೃಂದಾವನ ಇವೆಲ್ಲವೂ ನಿತ್ಯವಾದುವು, ಚಿದಾನಂದದಿಂದ ಕೂಡಿರುವುವು.

೭೬. ಈ ನನ್ನ ವೃಂದಾವನವನ್ನು ಆನಂದಕಂದವೆಂದು ತಿಳಿ. ಇದರಲ್ಲಿ ಪ್ರವೇಶಿಸಿದ ಮಾತ್ರದಿಂದಲೇ ಜನನ ಮರಣಗಳಿಂದ ವರ್ಜಿಸುತ್ತಾನೆ.

೭೭. ನನ್ನ ವನವನ್ನು ಪ್ರವೇಶಿಸಿದ ಮೇಲೆ ಬೇರೆ ಕಡೆಗೆ ಹೋಗುವ ಮೂಢನು ಆತ್ಮದ್ರೋಹಮಾಡಿಕೊಂಡಂತಾಗುತ್ತದೆ ಇದು ಸತ್ಯವು.

೭೮. ಈ ವೃಂದಾವನವನ್ನು ಬಿಟ್ಟು ನಾನೆಲ್ಲೂ ಹೋಗುವುದೇ ಇಲ್ಲ. ನಾನು ಈ ರಾಧಿಕೆಯೊಡನೆ ಯಾವಾಗಲೂ ಇಲ್ಲೇ ಇರುತ್ತೇನೆ.

೭೯. ನಿನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ಹೇಳಿದೆನು. ಇನ್ನೇನು ಕೇಳಬೇಕು. ಹೇಳು.

ತತಸ್ತಮಬ್ರವಂ ದೇವಮಹಂ ಚ ಮುನಿಸತ್ತಮ ।
ಈದೃಶಸ್ತ್ವಂ ಕಥಂ ಲಭ್ಯಸ್ತಮುಪಾಯಂ ವದಸ್ವ ಮೇ ॥ ೮೦ ॥

ತತೋ ಮಾಮಾಹ ಭಗವಾನ್ಸಾಧು ರುದ್ರ ತವೋದಿತಂ ।
ಅತಿಗುಹ್ಯತಮಂ ಹ್ಯೇತದ್ಗೋಪನೀಯಂ ಪ್ರಯತ್ನತಃ ॥ ೮೧ ॥

ಸಕೃದಾವಾಂ ಪ್ರಪನ್ನೋ ಯಸ್ತ್ಯಕ್ತೋಪಾಯ ಉಪಾಸತೇ ।
ಗೋಪೀಭಾವೇನ ದೇವೇಶ ಸ ಮಾಮೇತಿ ನ ಚೇತರಃ ॥ ೮೨ ॥

ಸಕೃದಾವಾಂ ಪ್ರಪನ್ನೋ ವಾ ಮತ್ಪ್ರಿಯಾಮೇಕಿಕಾಂ ಸುತ ।
ಸೇವತೇಽನನ್ಯಭಾವೇನ ಸ ಮಾಮೇತಿ ನ ಸಂಶಯಃ ॥ ೮೩ ॥

ಯೋ ಮಾಮೇವ ಪ್ರಪನ್ನಶ್ಚ ಮತ್ಪ್ರಿಯಾಂ ನ ಮಹೇಶ್ವರ ।
ನ ಕದಾಪಿ ಸ ಚಾಪ್ನೋತಿ ಮಾಮೇವಂ ತೇ ಮಯೋದಿತಂ ॥ ೮೪ ॥

ಸಕೃದೇವ ಪ್ರಪನ್ನೋ ಯಸ್ತವಾಸ್ಮೀತಿ ವದೇದಪಿ ।
ಸಾಧನೇನ ವಿನಾಪ್ಯೇವ ಮಾಮಾಪ್ನೋತಿ ನ ಸಂಶಯಃ ॥ ೮೫ ॥

---

೮೦. ಎಲೈ ಸ್ವಾಮಿಯೇ ಈರೀತಿಯಾದ ನೀನು ಹೇಗೆ ಲಭ್ಯವಾಗುತ್ತೀ ? ಆದರ ಉಪಾಯವನ್ನು ಹೇಳು. ಎಂದು ಕೇಳಿದೆನು.

೮೧. ಎಲೈ ರುದ್ರನೇ, ನೀನು ಕೇಳಿದುದು ಸರಿ, ಹೇಳುತ್ತೇನೆ ಇದು ಬಹು ಗುಹ್ಯವಾದುದು. ಪ್ರಯತ್ನಪಟ್ಟು ಗುಟ್ಟಾಗಿಟ್ಟಿರು.

೮೨. ರಾಧಿಕಾಕೃಷ್ಣರಾದ ನಮಗೆ ಪ್ರಪನ್ನರಾಗಿ ಬೇರೆಯ ಉಪಾಯಗಳನ್ನು ಬಿಟ್ಟು ಗೋಪಿಭಾವದಿಂದ ಉಪಾಸನೆ ಮಾಡುತ್ತಾನೋ ಅವನು ನನ್ನನ್ನು ಹೊಂದುತ್ತಾನೆ. ಉಳಿದವರು ಇಲ್ಲ.

೮೩. ನಮ್ಮಿಬ್ಬರನ್ನೂ ಪ್ರಪನ್ನರಾದರೂ ಸರಿ. ಅಥವಾ ನನ್ನ ಪ್ರಿಯಳೊಬ್ಬಳನ್ನೇ ಪ್ರಪನ್ನನಾದರೂ ಸರಿ. ಹೀಗೆ ಅನನ್ಯಭಾವದಿಂದ ಸೇವಿಸಿದರೆ ನನ್ನನ್ನು ಹೊಂದುತ್ತಾನೆ.

೮೪. ನನ್ನನ್ನೇ ಪ್ರಪತ್ತಿಹೊಂದಿ ನನ್ನ ಹೆಂಡತಿಯನ್ನು ಬಿಟ್ಟರೆ ಅವನು ನನ್ನನ್ನು ಹೊಂದುವುದೇ ಇಲ್ಲ

೮೫. ಒಂದುಸಾರಿ ಪ್ರಪನ್ನನಾಗಿದ್ದೇನೆ. ನಿನ್ನವನು ಎಂದು ಯಾಚಿಸಿದರೂ ಅವನು ಸಾಧಿಸದಿದ್ದರೂ ನನ್ನನ್ನು ಹೊಂದುತ್ತಾನೆ. ಸಂಶಯವಿಲ್ಲ.

ತಸ್ಮಾತ್ಸರ್ವಪ್ರಯತ್ನೇನ ಮತ್ಪ್ರಿಯಾಂ ಶರಣಂ ವ್ರಜೇತ್ ।
ಆಶ್ರಿತ್ಯ ಮತ್ಪ್ರಿಯಾಂ ರುದ್ರ ಮಾಂ ವಶೀಕರ್ತುಮರ್ಹಸಿ ॥ ೮೬ ॥

ಇದಂ ರಹಸ್ಯಂ ಪರಮಂ ಮಯಾ ತೇ ಪರಿಕೀರ್ತಿತಂ ।
ತ್ವಯಾಪ್ಯೇತನ್ಮಹಾದೇವ ಗೋಪನೀಯಂ ಪ್ರಯತ್ನತಃ ॥ ೮೭ ॥

ತ್ವಮಪ್ಯೇತಾಂ ಸಮಾಶ್ರಿತ್ಯ ರಾಧಿಕಾಂ ಮಮ ವಲ್ಲಭಾಂ ।
ಜಪನ್ಮೇ ಯುಗಳಂ ಮಂತ್ರಂ ಸದಾ ತಿಷ್ಠ ಮದಾಲಯೇ ॥ ೮೮ ॥

॥ ಶಿವ ಉವಾಚ ॥

ಇತ್ಯುಕ್ತ್ವಾ ದಕ್ಷಿಣೇ ಕರ್ಣೇ ಮಮ ಕೃಷ್ಣೋ ದಯಾನಿಧಿಃ ।
ಉಪವಿಶ್ಯ ಸ್ವಯಂ ಹ್ಯೇತತ್ಸಂಸ್ಕಾರಾಂಶ್ಚ ವಿಧಾಯ ಹಿ ॥ ೮೯ ॥

ಸಗಣೋಽನ್ತರ್ದಧೇ ವಿಪ್ರ ತತ್ರೈವ ಮಮ ಪಶ್ಯತಃ ।
ಅಹಮಪ್ಯತ್ರ ತಿಷ್ಠಾಮಿ ತದಾರಭ್ಯ ನಿರಂತರಂ ॥ ೯೦ ॥

---

೮೬. ಆದ್ದರಿಂದ ಮೊದಲು ನನ್ನ ಹೆಂಡತಿಗೆ ಪ್ರಪನ್ನನಾಗಬೇಕು. ಆಮೇಲೆ ನನ್ನನ್ನು ವಶಮಾಡಿಕೊಳ್ಳಲು ಪ್ರಯತ್ನಪಟ್ಟರೆ ಸಾರ್ಥಕವಾಗುತ್ತದೆ.

೮೭. ಈ ರಹಸ್ಯವನ್ನು ನಿನಗೆ ನಾನು ಹೇಳಿದ್ದೇನೆ. ನೀನು ಇದನ್ನು ರಹಸ್ಯವಾಗಿಟ್ಟುಕೋ.

೮೮. ನೀನೂ ಕೂಡ ಈ ನನ್ನ ಪ್ರಿಯಳಾದ ರಾಧಿಕೆಯನ್ನು ಸೇವಿಸುತ್ತಾ ಯುಗಳ ಮಂತ್ರವನ್ನು ಜಪಿಸುತ್ತ ನನ್ನ ವೃಂದಾವನದಲ್ಲಿರು

೮೯-೯೦. ಈಶ್ವರನು ಹೇಳಿದನು—ಹೀಗೆಂದು ಹೇಳಿ ಕೃಷ್ಣನು ಕುಳಿತುಕೊಂಡು ನನ್ನ ಬಲದ ಕಿವಿಯಲ್ಲಿ ಯುಗಳ ಮಂತ್ರವನ್ನುಪದೇಶಿಸಿ ಸಂಸ್ಕಾರಗಳನ್ನೂ ಮಾಡಿ ಎಲ್ಲರೊಡನೆಯೂ ಅಂತರ್ಧಾನನಾದನು. ಅದು ಮೊದಲು ನಾನು ಇಲ್ಲಿಯೇ ಇದ್ದೇನೆ.

**ಸರ್ವಮೇತನ್ಮಯಾ ತುಭ್ಯಂ ಸಾಂಗನೇವ ಪ್ರಕೀರ್ತಿತಂ ।**
**ಅಧುನಾ ವದ ವಿಪ್ರೇಂದ್ರ ಕಿಂ ಭೂಯಶ್ಶ್ರೋತುಮಿಚ್ಛಸಿ ॥ ೯೧ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೃಂದಾವನ ಮಾಹಾತ್ಮ್ಯೇ ದ್ವ್ಯಶೀತಿತಮೋಽಧ್ಯಾಯಃ**

---

೯೧. ನಿನಗೆ ನಾನು ಎಲ್ಲವನ್ನೂ ಕ್ರಮವಾಗಿ ಹೇಳಿದ್ದೇನೆ. ಇನ್ನೇನು ಕೇಳಬೇಕು. ಈಗ ಹೇಳು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೃಂದಾವನಮಹಿಮೆಯಲ್ಲಿ ಎಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ತ್ರ್ಯಶೀತಿತಮೋಽಧ್ಯಾಯಃ ॥



॥ ನಾರದ ಉವಾಚ ॥

ಭಗವನ್ಸರ್ವಮಾಖ್ಯಾತಂ ಯದ್ಯತ್ಪೃಷ್ಟಂ ಮಯಾ ಗುರೋ ।
ಅಧುನಾ ಶ್ರೋತುಮಿಚ್ಛಾಮಿ ಭವಮಾರ್ಗಮನುತ್ತಮಂ ॥ ೧ ॥

॥ ಸದಾಶಿವ ಉವಾಚ ॥

ಸಾಧು ಪೃಷ್ಟಂ ತ್ವಯಾ ವಿಪ್ರ ಸರ್ವಲೋಕಹಿತೈಷಿಣಾ ।
ರಹಸ್ಯಮಪಿ ವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೨ ॥

ದಾಸಾಃ ಸಖಾಯಃ ಪಿತರೌ ಪ್ರೇಯಸ್ಯಶ್ಚ ಹರೇರಿಹ ।
ಸರ್ವೇ ನಿತ್ಯಾ ಮುನಿಶ್ರೇಷ್ಠ ತತ್ತುಲ್ಯಾ ಗುಣಶಾಲಿನಃ ॥ ೩ ॥

---

## ಎಂಭತ್ತಮೂರನೆಯ ಅಧ್ಯಾಯ

೧. ನಾರದನು ಹೇಳಿದನು— ಸ್ವಾಮಿ ನಾನು ಕೇಳಿದುದನ್ನೆಲ್ಲಾ ಹೇಳಿದೆ. ಆದರೆ ಉತ್ತಮಮಾರ್ಗವಾವುದು ? ಹೇಳು.

೨. ಸದಾಶಿವನು ಹೇಳಿದನು— ಎಲೈ ಬ್ರಾಹ್ಮಣನೇ ಲೋಕದ ಹಿತೈಷಿಯಾದ ನೀನು ಕೇಳಿದುದು ಒಳ್ಳೆಯದಾಯಿತು ರಹಸ್ಯವಾದರೂ ಕೂಡ ಹೇಳುತ್ತೇನೆ. ಕೇಳು.

೩. ದಾಸರು, ಸ್ನೇಹಿತರು, ತಾಯಿತಂದೆಗಳು, ಹೆಂಡತಿಯರು, ಹರಿಯಸಂಬಂಧಿಗಳು, ಇನ್ನು ಇಲ್ಲಿ ಯಾರುಂಟೋ ಅವರೆಲ್ಲರೂ ಇಲ್ಲಿ ನಿತ್ಯವಾಗಿರತಕ್ಕವರು. ಆ ಕೃಷ್ಣನಿಗೆ ಸಮಾನವಾದ ಗುಣವುಳ್ಳವರು

ಯಥಾ ಪ್ರಕಟಲೀಲಾಯಾಂ ಪುರಾಣೇಷು ಪ್ರಕೀರ್ತಿತಾಃ ।
ತಥಾ ತೇ ನಿತ್ಯಲೀಲಾಯಾಂ ಸಂತಿ ವೃಂದಾವನೇ ಭುವಿ ॥ ೪ ॥

ಗಮನಾಗಮನೇ ನಿತ್ಯಂ ಕರೋತಿ ವನಗೋಷ್ಠಯೋಃ ।
ಗೋಚಾರಣಂ ವಯಸ್ಯೈಶ್ಚ ವಿನಾ ಸುರವಿಘಾತಿನಂ ॥ ೫ ॥

ಪರಕೀಯಾಭಿಮಾನಿನ್ಯಸ್ತಥಾ ತಸ್ಯ ಪ್ರಿಯಾ ಜನಾಃ ।
ಪ್ರಚ್ಛನ್ನೇನೈವ ಭಾವೇನ ರಮಯಂತಿ ನಿಜಪ್ರಿಯಂ ॥ ೬ ॥

ಆತ್ಮಾನಂ ಚಿಂತಯೇತ್ತತ್ರ ತಾಸಾಂ ಮಧ್ಯೇ ಮನೋರಮಾಂ ।
ರೂಪಯೌವನಸಂಪನ್ನಾಂ ಕಿಶೋರೀಂ ಪ್ರಮದಾಕೃತಿಂ ॥ ೭ ॥

ನಾನಾಶಿಲ್ಪಕಲಾಭಿಜ್ಞಾಂ ಕೃಷ್ಣಭೋಗಾನುರೂಪಿಣೀಂ ।
ಪ್ರಾರ್ಥಿತಾಮಪಿ ಕೃಷ್ಣೇನ ತತ್ರ ಭೋಗಪರಾಙ್ಮುಖೀಂ ॥ ೮ ॥

---

೪. ಪುರಾಣದಲ್ಲಿ ಪ್ರಕಟಲೀಲೆಯಲ್ಲಿ ಯಾರು ಯಾರನ್ನು ಹೇಳಿದೆಯೋ ಯಾರ್ಯಾರು ಇದ್ದಾರೋ ಅವರೆಲ್ಲರೂ ನಿತ್ಯವಾದ ಈ ಲೀಲೆಯಲ್ಲ ವೃಂದಾವನದಲ್ಲಿದ್ದಾರೆ

೫-೬. ಅವರೆಲ್ಲರೂ ಅಲ್ಲಿರುವ ವನಕ್ಕೂ ಗುಂಪಿಗೂ ಬಂದು ಹೋಗುತ್ತಿರುತ್ತಾರೆ. ಸ್ನೇಹಿತರೊಡನೆ ದನಗಳನ್ನೂ ಕಾಯುತ್ತಾರೆ. ರಾಕ್ಷಸರನ್ನು ಕೊಲ್ಲುವುದು ಮಾತ್ರ ಇಲ್ಲ. ಪರರಲ್ಲೂ ಸ್ವಕೀಯರಲ್ಲೂ ಅಭಿಮಾನವುಳ್ಳವರು. ಪ್ರಿಯನಾದ ಕೃಷ್ಣನನ್ನು ಗುಟ್ಟಾಗಿ ರಮಿಸುತ್ತಾರೆ.

೭. ಅವರ ಮಧ್ಯದಲ್ಲಿ ಮನೋರಮಳಾದ, ಆತ್ಮರೂಪಳಾದ, ರೂಪಯೌವನಗಳಿಂದ ಕೂಡಿದ ಹೆಂಗಸಿನ ಆಕಾರವನ್ನು ಹೊಂದಿರುವ, ಕಿಶೋರ ವಯಸ್ಸನ್ನು ಹೊಂದಿರುವ, ಆತ್ಮನನ್ನು ಧ್ಯಾನಿಸಬೇಕು.

೮. ಬಗೆಬಗೆಯ ಶಿಲ್ಪಕಲೆಗಳನ್ನು ಬಲ್ಲ ಕೃಷ್ಣನ ಭೋಗಕ್ಕೆ ಅನುರೂಪಳಾದ ಕೃಷ್ಣನು ಪ್ರಾರ್ಥಿಸಿದರೂ ಕೂಡ ಭೋಗದಲ್ಲಿ ಅಪೇಕ್ಷೆಪಡದಿರುವ ಆ ಆತ್ಮನನ್ನು ಸ್ಮರಿಸಬೇಕು.

ರಾಧಿಕಾನುಚರೀಂ ನಿತ್ಯಂ ತತ್ಸೇವನಪರಾಯಣಾಂ ।
ಕೃಷ್ಣಾದಪ್ಯಧಿಕಂ ಪ್ರೇಮ ರಾಧಿಕಾಯಾಂ ಪ್ರಕುರ್ವತೀಂ ॥ ೯ ॥

ಪ್ರೀತ್ಯಾನುದಿವಸಂ ಯತ್ನಾತ್ತಯೋಃ ಸಂಗಮಕಾರಿಣೀಂ ।
ತತ್ಸೇವನಸುಖಾಹ್ಲಾದಭಾವೇನಾತಿಸುನಿರ್ವೃತಾಂ ॥ ೧೦ ॥

ಇತ್ಯಾತ್ಮಾನಂ ವಿಚಿಂತ್ಯೈವ ತತ್ರ ಸೇವಾಂ ಸಮಾಚರೇತ್ ।
ಬ್ರಾಹ್ಮಂ ಮುಹೂರ್ತಮಾರಭ್ಯ ಯಾವತ್ಸ್ಯಾತ್ತು ಮಹಾನಿಶಾ ॥ ೧೧ ॥

॥ ನಾರದ ಉವಾಚ ॥

ಹರೇರ್ದೈನಂದಿನೀಂ ಲೀಲಾಂ ಶ್ರೋತುಮಿಚ್ಛಾಮಿ ತತ್ವತಃ ।
ಲೀಲಾಮಜಾನತಾ ಸೇವ್ಯೋ ಮನಸಾ ತು ಕಥಂ ಹರಿಃ ॥ ೧೨ ॥

॥ ಶ್ರೀ ಸದಾಶಿವ ಉವಾಚ ॥

ನಾಹಂ ಜಾನಾಮಿ ತಾಂ ಲೀಲಾಂ ಹರೇರ್ನಾರದ ತತ್ವತಃ ।
ವೃಂದಾದೇವೀ ಮಿತೋ ಗಚ್ಛ ಸಾ ತೇ ಲೀಲಾಂ ಪ್ರವಕ್ಷ್ಯತಿ ॥ ೧೩ ॥

---

೯. ರಾಧಿಕೆಯನ್ನು ಯಾವಾಗಲೂ ಅನುಸರಿಸುತ್ತಿರುವ ಅವಳನ್ನೇ ಸೇವಿಸುತ್ತಿರುವ ಕೃಷ್ಣನು ಮಾಡುವ ಪ್ರೇಮಕ್ಕಿಂತಲೂ ರಾಧಿಕೆಯಲ್ಲಿ ಹೆಚ್ಚು ಪ್ರೇಮವನ್ನಿಟ್ಟಿರುವ ಆತ್ಮನನ್ನು ಸ್ಮರಿಸಬೇಕು.

೧೦. ನಿತ್ಯವೂ ಪ್ರೀತಿಯಿಂದ ರಾಧಿಕಾಕೃಷ್ಣರಿಗೆ ಸಂಗಮವನ್ನು ಮಾಡಿಸುವ ಅವರು ಸೇರುವುದರಿಂದ ತಾನು ತೃಪ್ತಿಪಡುವ ಆತ್ಮನನ್ನು ಸ್ಮರಿಸಬೇಕು.

೧೧. ಬ್ರಾಹ್ಮೀ ಮುಹೂರ್ತದಲ್ಲಿ (ಬೆಳಗಿನ ಜಾವದಲ್ಲಿ) ಆರಂಭಿಸಿ ಮಹಾರಾತ್ರಿಯಾಗುವವರೆಗೂ ಆತ್ಮನನ್ನು ಚಿಂತಿಸುತ್ತಾ ಸೇವೆಯನ್ನು ಮಾಡಬೇಕು.

೧೨, ನಾರದನು ಹೇಳಿದನು– ಕೃಷ್ಣನ ಲೀಲೆಯನ್ನು ತಿಳಿಯದೆ ಹರಿಯನ್ನು ಮನಸ್ಸಿನಿಂದ ಹೇಗೆ ಸೇವಿಸಬೇಕು ? ಆದ್ದರಿಂದ ಕೃಷ್ಣನ ದಿನದಿನದ ಲೀಲೆಯನ್ನು ಹೇಳು. ಕೇಳಬೇಕು.

೧೩. ಸದಾಶಿವನು ಹೇಳಿದನು– ಎಲೈ ನಾರದನೇ ಆ ಹರಿಯ ಲೀಲೆಯನ್ನು ನಾನು ಸರಿಯಾಗಿ ತಿಳಿಯೆನು. ಇಲ್ಲಿಂದ ವೃದಾವನಕ್ಕೆ ಹೋಗಿ ವೃಂದಾ ದೇವಿಯನ್ನು ಕೇಳು. ಆಕೆಯು ಹೇಳುತ್ತಾಳೆ.

ಅವಿದೂರ ಇತಸ್ಥಾನಾತ್ಕೇಶೀತೀರ್ಥಸಮೀಪತಃ ।
ಸಖೀಸಂಘುವೃತಾ ಸಾಸ್ತೇ ಗೋವಿಂದಪರಿಚಾರಿಕಾ ॥ ೧೪ ॥

॥ ಸೂತ ಉವಾಚ ॥

ಇತ್ಯುಕ್ತಸ್ತಂ ಪರಿಕ್ರಮ್ಯ ಹೃಷ್ಟೋ ನತ್ವಾ ಪುನಃ ಪುನಃ ।
ವೃಂದಾಶ್ರಮಂ ಜಗಾಮಾಥ ನಾರದೋ ಮುನಿಸತ್ತಮಃ ॥ ೧೫ ॥

ವೃಂದಾಪಿ ನಾರದಂ ದೃಷ್ಟ್ವಾ ಪ್ರಣಮ್ಯ ಚ ಪುನಃ ಪುನಃ ।
ಉವಾಚ ಚ ಮುನಿಶ್ರೇಷ್ಠ ಕುಥಮತ್ರಾಗತಿಸ್ತವ ॥ ೧೬ ॥

॥ ನಾರದ ಉವಾಚ ॥

ತ್ವತ್ತೋ ವೇದಿತುಮಿಚ್ಛಾಮಿ ನೈತ್ಯಕಂ ಚರಿತಂ ಹರೇಃ ।
ತದಾದಿತೋ ಮಮ ಬ್ರೂಹಿ ಯದಿ ಯೋಗ್ಯೋಽಸ್ಮಿ ಶೋಭನೇ ॥ ೧೭ ॥

॥ ವೃಂದೋವಾಚ ॥

ರಹಸ್ಯಮಪಿ ವಕ್ಷ್ಯಾಮಿ ಕೃಷ್ಣಭಕ್ತೋಽಸಿ ನಾರದ ।
ನ ಪ್ರಕಾಶ್ಯಂ ತ್ವಯಾ ಹ್ಯೇತದ್ಗುಹ್ಯಾದ್ಗುಹ್ಯತರಂ ಮಹತ್ ॥ ೧೮ ॥

---

೧೪. ಇಲ್ಲಿಗೆ ಹತ್ತಿರದಲ್ಲಿಯೇ ಕೇಶೀತೀರ್ಥವಿದೆ. ಅದರ ಹತ್ತಿರದಲ್ಲಿ ಈ ವೃಂದೆಯು ಸಖಿಯರಿಂದ ಕೂಡಿಕೊಂಡು ಗೋವಿಂದನಸೇವೆಯನ್ನು ಮಾಡುತ್ತಿದ್ದಾಳೆ.

೧೫. ಸೂತನು ಹೇಳಿದನು- ಹೀಗೆನ್ನಲು ನಾರದನು ಆ ಶಿವನಿಗೆ ನಮಸ್ಕರಿಸಿ ಸಂತೋಷದಿಂದ ಹೊಗಳುತ್ತ ವೃಂದಾಶ್ರಮವನ್ನು ಹೊಂದಿದನು.

೧೬. ವೃಂದೆಯೂ ನಾರದನನ್ನು ಕಂಡು ನಮಸ್ಕರಿಸಿ ಎಲೈ ನಾರದನೇ ! ಇಲ್ಲೇಕೆ ಬಂದೆ ? ಎಂದು ಕೇಳಿದಳು.

೧೭. ನಾರದನು ಹೇಳಿದನು- ಹರಿಯ ನಿತ್ಯದ ಚರಿತ್ರೆಯನ್ನು ನಿನ್ನಿಂದ ತಿಳಿಯಬೇಕೆಂದಿದ್ದೇನೆ. ನಾನು ಯೋಗ್ಯನೆಂದು ತಿಳಿದಿದ್ದರೆ ಮೊದಲಿನಿಂದ ನನಗೆ ಹೇಳು. ಎಂದನು.

೧೮. ನಾರದನೇ ನೀನು ಕೃಷ್ಣಭಕ್ತನಾಗಿದ್ದೀಯೆ. ರಹಸ್ಯವಾದರೂ ಅದನ್ನು ನಿನಗೆ ಹೇಳುತ್ತೇನೆ. ಇದು ಬಹು ಗುಹ್ಯವು. ಯಾರಿಗೂ ಹೇಳಕೂಡದು.

ಮಧ್ಯೇವೃಂದಾವನೇ ರಮ್ಯೇ ಪಂಚಾಶತ್ಕುಂಜಮಂಡಿತೇ ।
ಕಲ್ಪವೃಕ್ಷನಿಕುಂಜೇ ತು ದಿವ್ಯರತ್ನಮಯೇ ಗೃಹೇ ॥ ೧೯ ॥

ನಿದ್ರಿತೌ ತಿಷ್ಠತಸ್ತಲ್ಪೇ ನಿಬಿಡಾಲಿಂಗಿತೌ ಮಿಥಃ ।
ಮದಾಜ್ಞಾಕಾರಿಭಿಃ ಪಶ್ಚಾತ್ಪಕ್ಷಿಭಿರ್ಬೋಧಿತಾವಪಿ ॥ ೨೦ ॥

ಗಾಢಾಲಿಂಗನಜಾನಂದಮಾಪ್ತೌ ತದ್ಭಂಗಕಾತರೌ ।
ನೋ ಮನಃ ಕುರ್ವತಸ್ತಲ್ಪಾತ್ಸಮುತ್ಥಾತುಂ ಮನಾಗಪಿ ॥ ೨೧ ॥

ತತಶ್ಚ ಸಾರಿಕಾ ಸಂಘೈಃ ಶುಕಾದ್ಯೈರಪಿ ತೌ ಮುಹುಃ ।
ಬೋಧಿತೌ ವಿವಿಧೈರ್ವಾಕ್ಯೈಃ ಸ್ವತಲ್ಪಾದುದತಿಷ್ಠತಾಂ ॥ ೨೨ ॥

ಉಪವಿಷ್ಟೌ ತತೋ ದೃಷ್ಟ್ವಾ ಸಖ್ಯಸ್ತಲ್ಪೇ ಮುದಾನ್ವಿತೌ ।
ಪ್ರವಿಶ್ಯ ಸೇವಾಂ ಕುರ್ವಂತಿ ತತ್ಕಾಲೇ ಹ್ಯುಚಿತಾಂ ತಯೋಃ ॥ ೨೩ ॥

ಪುನಶ್ಚ ಸಾರಿಕಾವಾಕ್ಯೈಃ ಸ್ವತಲ್ಪಾದುದತಿಷ್ಠತಾಂ ।
ಗಚ್ಛತಃ ಸ್ವಸ್ವಭವನಂ ಭೀಶ್ಯೋತ್ಕಂಠಾಕುಲೌ ತತಃ ॥ ೨೪ ॥

---

೧೯-೨೧. ಐವತ್ತು ವನಗಳ ಮಧ್ಯದಲ್ಲಿ ವೃಂದಾವನ ವನವಿರುವುದು. ಅಲ್ಲಿ ಒಂದು ಕಲ್ಪವೃಕ್ಷದ ಪೊದರಿದೆ. ಅದರಲ್ಲಿ ರತ್ನಗಳಿಂದ ಕೂಡಿದ ದಿವ್ಯವಾದ ರತ್ನದ ಒಂದು ಮನೆಯಿದೆ. ಅಲ್ಲಿ ಹಾಸಿಗೆಯ ಮೇಲೆ ರಾಧಾಕೃಷ್ಣರು ಗಟ್ಟಿಯಾಗಿ ಆಲಂಗಿಸಿಕೊಂಡು ನಿದ್ದೆಮಾಡುತ್ತಿರುವರು. ನನ್ನ ಆಜ್ಞೆಯಂತೆ ಪಕ್ಷಿಗಳು ಕೂಗಿ ಎಚ್ಚರ ಮಾಡಿದರೂ ಗಾಢವಾದ ಆನಂದದ ಸುಖದ ನಾಶದ ಹೆದರಿಕೆಯಿಂದ ಹಾಸಿಗೆಯಿಂದೇಳಲು ಸ್ವಲ್ಪವೂ ಮನಸ್ಸು ಮಾಡುವುದೇ ಇಲ್ಲ.

೨೨. ಆ ಮೇಲೆ ಸಾರಿಕೆ ಹಕ್ಕಿಗಳು ಗಿಳಿಗಳು ನಾನಾಬಗೆಯ ಮಾತುಗಳಿಂದ ಎಬ್ಬಿಸಿದರೆ ಆಗ ಬಹು ಕಷ್ಟದಿಂದ ಹಾಸಿಗೆಯಿಂದೇಳುತ್ತಾರೆ.

೨೩. ಆಮೇಲೆ ಅವರು ಹಾಸಿಗೆಯಲ್ಲಿ ಕುಳಿತುಕೊಂಡುದನ್ನು ನೋಡಿ ಸಂತೋಷದಿಂದ ಸಖಿಯರು ಅಲ್ಲಿಗೆ ಹೋಗಿ ಆ ಕಾಲಕ್ಕೆ ಯೋಗ್ಯವಾದ ಸೇವೆಯನ್ನು ಮಾಡುತ್ತಾರೆ.

೨೪. ಮತ್ತೆ ಸಾರಿಕೆಯ ಮಾತಿನಂತೆ ತಮ್ಮ ಆ ಹಾಸಿಗೆಗಳಿಂದೆದ್ದು ಹೋಗುತ್ತಾರೆ. ಆ ಮೇಲೆ ಭೀತಿಯಿಂದಲೂ, ಆಸೆಯಿಂದಲೂ, ಅವರವರ ಮನೆಗೆ ಹೋಗುತ್ತಾರೆ

ಪ್ರಾತಶ್ಚ ಬೋಧಿತೋ ಮಾತ್ರಾ ತಲ್ಪಾದುತ್ಥಾಯ ಸತ್ವರಃ ।
ಕೃತ್ವಾ ಕೃಷ್ಣೋ ದನ್ತಕಾಷ್ಠಂ ಬಲದೇವಸಮನ್ವಿತಃ ॥ ೨೫ ॥

ಮಾತ್ರಾನುಮೋದಿತೋ ಯಾತಿ ಗೋಶಾಲಾಂ ಸಖಿಭಿರ್ವೃತಃ ।
ರಾಧಾಪಿ ಬೋಧಿತಾ ವಿಪ್ರ ವಯಸ್ಯಾಭಿಸ್ಸ್ವತಲ್ಪತಃ ॥ ೨೬ ॥

ಉತ್ಥಾಯ ದಂತಕಾಷ್ಠಾದಿ ಕೃತ್ವಾಭ್ಯಂಗಂ ಸಮಾಚರೇತ್ ।
ಸ್ನಾನವೇದಿಂ ತತೋ ಗತ್ವಾ ಸ್ನಾಪಿತಾ ಸಾ ನಿಜಾಲಿಭಿಃ ॥ ೨೭ ॥

ಭೂಷಾಗೃಹಂ ವ್ರಜೇತ್ತತ್ರ ವಯಸ್ಯಾ ಭೂಷಯನ್ತ್ಯಪಿ ।
ಭೂಷಣೈರ್ವಿವಿಧೈರ್ದಿವ್ಯೈಃ ಗಂಧಮಾಲ್ಯಾನುಲೇಪನೈಃ ॥ ೨೮ ॥

ತತಸ್ಸಖೀಜನೈಸ್ತಸ್ಯಾಃ ಶ್ವಶ್ರೂಂ ಸಂಪ್ರಾರ್ಥ್ಯ ಯತ್ನತಃ ।
ಪಕ್ತುಮಾಹೂಯತೇ ಸ್ವನ್ನಂ ಸಸಖೀ ಸಾ ಯಶೋದಯಾ ॥ ೨೯ ॥

॥ ನಾರದ ಉವಾಚ ॥

ಕಥಮಾಹೂಯತೇ ದೇವೀ ಪಾಕಾರ್ಥಂ ತು ಯಶೋದಯಾ ।
ಸತೀಷು ಪಾಕಕರ್ತ್ರೀಷು ರೋಹಿಣೀಪ್ರಮುಖಾಸ್ವಪಿ ॥ ೩೦ ॥

---

೨೫. ಬೆಳಗ್ಗೆ ತಾಯಿಯು ಎಬ್ಬಿಸಲು ಕೃಷ್ಣನು ಬೇಗನೆ ಏಳುತ್ತಾನೆ. ಬಲರಾಮನೊಡನೆ ಕೈಯಲ್ಲಿ ಹಲ್ಲುಜ್ಜುವ ಕಡ್ಡಿಯನ್ನು ಹಿಡಿದು ಹೊರಡುತ್ತಾನೆ.

೨೬–೨೭. ತಾಯಿಯು ಹೀಗೆಂದು ಹೇಳಲು ಸ್ನೇಹಿತರೊಡನೆ ಹಸುವಿನ ಕೊಟ್ಟಿಗೆಗೆ ಹೋಗುತ್ತಾನೆ. ರಾಧೆಯು ಎದ್ದು ಗೆಳತಿಯರೊಡನೆ ಹಲ್ಲುಜ್ಜಿಕೊಂಡು ಮೈಗೆಣ್ಣೆ ಹಚ್ಚಿಕೊಂಡು ಸ್ನಾನಕ್ಕೆ ಹೋಗಲು ಸಖಿಯರು ಸ್ನಾನಮಾಡಿಸುತ್ತಾರೆ.

೨೮. ಆ ಮೇಲೆ ಅಲಂಕಾರದ ಮನೆಗೆ ಹೋಗುತ್ತಾಳೆ ಸಖಿಯರು ಅಲಂಕರಿಸಿ ನಾನಾ ಬಗೆಯಾದ ಗಂಧಮಾಲೆಗಳಿಂದಲೂ ಭೂಷಿಸುತ್ತಾರೆ.

೨೯. ಆ ಮೇಲೆ ರಾಧಿಕೆಯು ಸಖಿಯರಿಂದ ತನ್ನ ಅತ್ತೆಯನ್ನು ಬಹುವಾಗಿ ಪ್ರಾರ್ಥಿಸುತ್ತಾಳೆ. ಆ ಪ್ರಾರ್ಥನೆಯಂತೆ ಸಖಿಯರಿಂದ ಕೂಡಿಕೊಂಡು ಅಡಿಗೆ ಮಾಡಬಹುದೆಂದು ಯಶೋದೆಯು ಒಪ್ಪುತ್ತಾಳೆ.

೩೦. ನಾರದನು ಹೇಳುತ್ತಾನೆ– ಅಡಿಗೆಮಾಡುವ ರೋಹಿಣಿಯೇ ಮುಂತಾದವರಿರುವಾಗ ಅಡಿಗೆಗೆ ಈ ರಾಧೆಯನ್ನೇಕೆ ಕರೆಯುತ್ತಾರೆ ?

॥ ವೃಂದೋವಾಚ ॥

ಪೂರ್ವಂ ದುರ್ವಾಸಸಾ ದತ್ತೋ ವರಮುಕ್ತ್ವಾ ಮಹಾಮುನೇ ।
ಇತಿ ಕಾತ್ಯಾಯನೀ ವಕ್ತ್ರಾಚ್ಛ್ರುತಮಾಸೀನ್ಮಯಾ ಪುರಾ ॥ ೩೧ ॥

ತ್ವಯಾ ಯತ್ಪಚ್ಯತೇ ದೇವಿ ತದನ್ನಂ ಮದನುಗ್ರಹಾತ್ ।
ಮಿಷ್ಟಂ ಸ್ಯಾದಮೃತಸ್ಪರ್ಧಿ ಭೋಕ್ತುರಾಯುಷ್ಕರಂ ತಥಾ ॥ ೩೨ ॥

ಇತ್ಯಾಹ್ವಯತಿ ತಾಂ ನಿತ್ಯಂ ಯಶೋದಾ ಪುತ್ರವತ್ಸಲಾ ।
ಆಯುಷ್ಮಾನ್ಮೇ ಭವೇತ್ಪುತ್ರಃ ಸ್ವಾದುಲೋಭಾತ್ತಥಾ ಸತೀ ॥ ೩೩ ॥

ಶ್ವಶ್ರ್ವಾನುಮೋದಿತಾ ಸಾಪಿ ಹೃಷ್ಟಾ ನಂದಾಲಯಂ ವ್ರಜೇತ್ ।
ಸಸಖೀಪ್ರಕರಾ ತತ್ರ ಗತ್ವಾ ಪಾಕಂ ಕರೋತಿ ಚ ॥ ೩೪ ॥

ಕೃಷ್ಣೋಽಪಿ ದುಗ್ಧ್ವಾ ಗಾಃ ಕಾಶ್ಚಿದ್ದೋಹಯಿತ್ವಾ ಜನೈಃ ಪರಾಃ ।
ಆಗಚ್ಛತಿ ಪಿತುರ್ವಾಕ್ಯಾತ್ಸ್ವಗೃಹಂ ಸಖಿಭಿರ್ವೃತಃ ॥ ೩೫ ॥

---

೩೧. ವೃಂದೆಯು ಹೇಳಿದಳು– ದೂರ್ವಾಸ ಮುನಿಯು ಈ ರೀತಿ ವರಕೊಟ್ಟನೆಂದು ಪಾರ್ವತಿಯು ನನಗೆ ಹೇಳಿದ್ದಾಳೆ.

೩೨. ನನ್ನ ಅನುಗ್ರಹದಿಂದ ನೀನು ಮಾಡುವ ಅಡಿಗೆಯು ರುಚಿಯಾಗಿ ಅಮೃತಕ್ಕೆ ಸಮಾನವಾಗಿರುತ್ತದೆ ಊಟಮಾಡುವವನಿಗೆ ಆಯುಸ್ಸನ್ನು ಹೆಚ್ಚಿಸುತ್ತದೆ.

೩೩ ಯಶೋದೆಯು ತನ್ನ ಮಗನು ಆಯುಷ್ಮಂತನಾಗಬೇಕೆಂದೂ ರುಚಿಯಾಗಿರುತ್ತದೆಂಬ ಆಸೆಯಿಂದಲೂ, ಮಗನ ಮೇಲಿನ ಪ್ರೀತಿಯಿಂದ ರಾಧೆಯನ್ನೇ ಕರೆಯುತ್ತಾಳೆ.

೩೪. ಅತ್ತೆಯು ಒಪ್ಪಿದಮೇಲೆ ರಾಧಿಕೆಯು ನಂದನ ಮನೆಗೆ ಸಖಿಯರೊಡನೆಯೂ, ಸಾಮಾನುಗಳೊಡನೆಯೂ, ಹೋಗಿ ಅಡಿಗೆ ಮಾಡುತ್ತಾಳೆ.

೩೫. ಕೃಷ್ಣನೂ ಕೂಡ ತಾನು ಕೆಲವು ಹಸುಗಳನ್ನು ಕರೆದು ಉಳಿದುವನ್ನು ಇತರರಿಂದ ಕರೆಸಿ ತಂದೆಯ ಮಾತಿನಂತೆ ಸ್ನೇಹಿತರೊಂದಿಗೆ ಮನೆಗೆ ಬರುತ್ತಾನೆ.

ಅಭ್ಯಂಗೈರ್ಮರ್ದನಂ ಕೃತ್ವಾ ದಾಸ್ಯೈಸ್ಸಂಸ್ನಾಪಿತೋ ಮುದಾ ।
ಧೌತವಸ್ತ್ರಧರಸ್ಸ್ರಗ್ವೀ ಚಂದನಾಕ್ತಕಳೇಬರಃ ॥ ೩೬ ॥

ದ್ವಿಘಾಲಬದ್ಧಚಿಕುರೈಃ ಗ್ರೀವಾಘಾಲೋಪರಿಸ್ಫುರತ್ ।
ಚಂದ್ರಾಕಾರಸ್ಫುರತ್ಫಾಲತಿಲಕಾಲಕರಂಜಿತಃ ॥ ೩೭ ॥

ಕಂಕಣಾಂಗದಕೇಯೂರರತ್ನಮುದ್ರಾಲಸತ್ಕರಃ ।
ಮುಕ್ತಾಹಾರಸ್ಫುರದ್ವಕ್ಷಾ ಮಕರಾಕೃತಿಕುಂಡಲಃ ॥ ೩೮ ॥

ಮುಹುರಾಕಾರಿತೋ ಮಾತ್ರಾ ಪ್ರವಿಶೇದ್ಭೋಜನಾಲಯಂ ।
ಅವಲಂಬ್ಯ ಕರಂ ಸಖ್ಯುರ್ಬಲದೇವಮನುವ್ರತಃ ॥ ೩೯ ।

ಭುಂಕ್ತೇಥ ವಿವಿಧಾನ್ನಾನಿ ಭ್ರಾತ್ರಾ ಚ ಸಖಿಭಿರ್ವೃತಃ ।
ಹಾಸಯನ್ವಿವಿಧೈರ್ಹಾಸ್ಯೈಃ ಸಖೀಂಸ್ತೈರ್ಹಸತಿ ಸ್ವಯಂ ॥ ೪೦ ॥

---

೩೬–೩೮. ಎಣ್ಣೆ ವತ್ತಿಸಿ ಮರ್ದನಮಾಡಿಸಿಕೊಂಡು ದಾಸರಿಂದ ನೀರನ್ನು ಹಾಕಿಸಿಕೊಂಡು ಅಭ್ಯಂಜನಮಾಡಿಸಿಕೊಳ್ಳುತ್ತಾನೆ. ಆಮೇಲೆ ಮಡಿಯ ವಸ್ತ್ರವನ್ನುಟ್ಟು ಮಾಲೆಯನ್ನು ಹಾಕಿಕೊಂಡು ಮೈಗೆ ಚಂದನವನ್ನು ಪೂಸಿಕೊಂಡು ತಲೆಯನ್ನು ಬೈತಲೆತೆಗೆದುಕೊಂಡು ಎರಡು ಕಡೆಯ ಹಣೆಯ ಮೇಲೂ ಕತ್ತಿನ ಮೇಲೂ ಆ ಕೂದಲು ಜೋಲಾಡುತ್ತಾ ಪ್ರಕಾಶಿಸುತ್ತಿರಲು ಚಂದ್ರಾಕಾರವಾದ ಹಣೆಗೆ ತಿಲಕವನ್ನಿಟ್ಟುಕೊಂಡು ಕಂಕಣ ಭುಜಕೀರ್ತಿ ಮೊದಲಾದ ಒಡವೆಗಳಿಂದಲಂಕೃತನಾಗಿ ಮುತ್ತಿನಹಾರದಿಂದ ಎದೆಯು ಪ್ರಕಾಶಿಸುತ್ತಿರಲು ಕಿವಿಗೆ ಮೊಸಳೆಯಂತಿರುವ ಕುಂಡಲಗಳನ್ನು ಹಾಕಿಕೊಳ್ಳುವನು.

೩೯. ತಾಯಿಯಿಂದ ಪದೇ ಪದೇ ಕರೆಸಿಕೊಂಡು ಸ್ನೇಹಿತರ ಕೈಹಿಡಿದುಕೊಂಡು ಬಲದೇವನೊಡನೆ ಊಟದ ಮನೆಗೆ ಹೋಗುತ್ತಾನೆ.

೪೦. ಸಹೋದರನೊಡನೆಯೂ, ಸ್ನೇಹಿತರೊಡನೆಯೂ, ನಾನಾಬಗೆಯಾದ ಅನ್ನವನ್ನು ಊಟಮಾಡುತ್ತಾನೆ. ಆಗ ನಾನಾ ಬಗೆಯ ಹಾಸ್ಯದ ಮಾತುಗಳಿಂದ ಹಾಸ್ಯಮಾಡುತ್ತಾ ಅವರನ್ನು ನಗಿಸಿ ತಾನೂ ನಗುತ್ತಾನೆ.

ಇತ್ಥಂ ಭುಕ್ತ್ವಾ ತದಾಚಮ್ಯ ದಿವ್ಯಖಟ್ವೋಪರಿ ಕ್ಷಣಂ ।
ವಿಶ್ರಮ್ಯ ಸೇವಕೈರ್ದತ್ತಂ ತಾಂಬೂಲಂ ವಿಭಜನ್ನದನ್ ॥ ೪೧ ॥

ಗೋಪವೇಷಧರಃ ಕೃಷ್ಣೋ ಧೇನುವೃಂದಪುರಸ್ಸರಃ ।
ವ್ರಜವಾಸಿಜನೈಃ ಪ್ರೀತ್ಯಾ ಸರ್ವೈರನುಗತಃ ಪಥಿ ॥ ೪೨ ॥

ಪಿತರಂ ಮಾತರಂ ನತ್ವಾ ನೇತ್ರಾಂತೇನಾಪಿ ತಂ ಗಣಂ ।
ಯಥಾಯೋಗ್ಯಂ ತಥಾ ಚಾನ್ಯಾನ್ಸಿನಿವರ್ತ್ಯ ವನಂ ವ್ರಜೇತ್ ॥ ೪೩ ॥

ವನಂ ಪ್ರವಿಶ್ಯ ಸಖಿಭಿಃ ಕ್ರೀಡಯಿತ್ವಾ ಕ್ಷಣಂ ತತಃ ।
ವಿಹಾರೈರ್ವಿವಿಧೈಸ್ತತ್ರ ವನೇ ವಿಕ್ರೀಡತೋ ಮುದಾ ॥ ೪೪ ॥

ವಂಚಯಿತ್ವಾ ತು ತಾನ್ಸರ್ವಾನ್ದ್ವಿತ್ರೈಃ ಪ್ರಿಯಸಖೈರ್ವೃತಃ ।
ಸಂಕೇತಕಂ ವ್ರಜೇದ್ಧರ್ಷಾತ್ಪ್ರಿಯಾಸಂದರ್ಶನೋತ್ಸುಕಃ ॥ ೪೫ ॥

ಸಾಪಿ ಕೃಷ್ಣಂ ಚ ಸಂಯಾಂತಂ ದೃಷ್ಟ್ವಾ ಸ್ವಂ ಗೃಹಮಾಗತಾ ।
ಸೂರ್ಯಾದಿಪೂಜಾವ್ಯಾಜೇನ ಕುಸುಮಾಹೃತಯೇ ತಥಾ ॥ ೪೬ ॥

---

೪೧-೪೩ ಹೀಗೆ ಊಟಮಾಡಿದನಂತರ ಆಚಮನ ಮಾಡಿ ಉತ್ತಮವಾದ ಮಂಚದ ಮೇಲೆ ಕ್ಷಣಕಾಲ ವಿಶ್ರಮಿಸಿಕೊಂಡು ದಾಸರು ಕೊಟ್ಟ ತಾಂಬೂಲವನ್ನು ಹಾಕಿಕೊಳ್ಳುತ್ತಾನೆ. ಗೋಪವೇಷವನ್ನು ಹಾಕಿಕೊಂಡ ಕೃಷ್ಣನು ಹಸುಗಳ ಮಂದೆಯನ್ನು ಮುಂದೆಬಿಟ್ಟುಕೊಂಡು ಆ ಗೋಪ ಕುಲದ ಜನರು ಪ್ರೀತಿಯಿಂದ ಹಿಂದೆ ಬರುತ್ತಿರಲು ತಾನು ತಾಯಿತಂದೆಯರಿಗೆ ನಮಸ್ಕರಿಸಿ ಉಳಿದವರನ್ನು ಅವರ ಯೋಗ್ಯತೆಗೆ ತಕ್ಕಂತೆ ಸಂಭಾವಿಸಿ ಹಿಂತಿರುಗಿಸುತ್ತಾನೆ. ಅನಂತರ ಅವನು ವನಕ್ಕೆ ಹೋಗುತ್ತಾನೆ.

೪೪-೪೫. ಸ್ನೇಹಿತರೊಂದಿಗೆ ಕಾಡಿಗೆಹೋಗಿ ಅಲ್ಲಿ ಕ್ಷಣಕಾಲ ನಾನಾ ಬಗೆಯ ಆಟಗಳಿಂದ ಕ್ರೀಡಿಸಿ ಅವರೆಲ್ಲರನ್ನೂ ವಂಚಿಸಿ ಇಬ್ಬರು ಮೂವರು ಸ್ನೇಹಿತರೊಡನೆ ಪ್ರಿಯೆಯಾದ ರಾಧೆಯನ್ನು ನೋಡಬೇಕೆಂಬಾಸೆಯಿಂದ ಸಂತೋಷದಿಂದ ಸಂಕೇತ ಸ್ಥಳಕ್ಕೆ ಹೋಗುತ್ತಾನೆ.

೪೬-೪೯. ಆಕೆಯು ಅವನು ಬರುತ್ತಿರುವುದನ್ನು ಕಂಡು ತನ್ನ ಮನೆಗೆ ಬಂದು ಸೂರ್ಯಾರಾಧನೆ ಮುಂತಾದ ನೆಪಗಳಿಂದ ಹೂ ತರುವುದಕ್ಕೆಂದು ತಾಯಿತಂದೆಗಳನ್ನು

ವಂಚಯಿತ್ವಾ ಗುರೂನ್ಯಾತಿ ಪ್ರಿಯಸಂಗೇಚ್ಛಯಾ ವನಂ ।
ಇತ್ಥಂ ತೌ ಬಹುಯತ್ನೇನ ಮಿಳಿತ್ವಾ ಸ್ವಗಣೈಸ್ತತಃ ॥ ೪೭ ॥

ವಂಚಯಿತ್ವಾ ಚ ತಾನ್ಸರ್ವಾನ್ವನೇ ವಿಕ್ರೀಡತೋ ಮುದಾ ।
ಡೋಲಾಂ ಚೈವ ಸಮಾರೂಢೌ ಸಖಿಭಿರ್ದೋಳಿತೌ ಕ್ವಚಿತ್ ॥ ೪೮ ॥

ಕ್ವಚಿದ್ವೇಣುಂ ಕರಸ್ರಸ್ತಂ ಪ್ರಿಯಯಾಪಹ್ನುತಂ ಹರಿಃ ।
ಅನ್ವೇಷಯನ್ನುಪಾಲಬ್ಧೋ ವಿಪ್ರಲಬ್ಧಃ ಪ್ರಿಯಾಗಣೈಃ ॥ ೪೯ ॥

ಹಸಿತೈರ್ಬಹುಧಾ ತಾಭಿರ್ಹಾಸಿತಸ್ತತ್ರ ತಿಷ್ಠತಿ ।
ವಸಂತವಾಯುನಾ ಜುಷ್ಟಂ ವನಖಂಡಂ ಕ್ವಚಿನ್ಮುದಾ ॥ ೫೦ ॥

ಪ್ರವಿಶ್ಯ ಚಂದನಾಂಭೋಭಿಃ ಕುಂಕುಮಾದಿಜಲೈರಪಿ ।
ನಿಷಿಂಚತೋ ಯಂತ್ರಮುಕ್ತೈಃ ತತ್ಪಂಕೈರ್ಲಿಂಪತೋ ಮಿಥಃ ॥ ೫೧ ॥

ಸಖ್ಯೋಪ್ಯೇವಂ ನಿಷಿಂಚಂತಿ ತಾಶ್ಚ ತೌ ಸಿಂಚತಃ ಪುನಃ ।
ವಸಂತವಾಯುಜುಷ್ಟೇಷು ವನಖಂಡೇಷು ಸರ್ವತಃ ॥ ೫೨ ॥

---

ವಂಚಿಸಿ ಪ್ರಿಯನಾದ ಕೃಷ್ಣನ ಸಂಗಮಾಡಲು ಕಾಡಿಗೆ ಹೋಗುತ್ತಾಳೆ. ಹೀಗೇನೇ ಅವರು ಬಹು ಯತ್ನದಿಂದ ಗೋಪರೆಲ್ಲರನ್ನೂ ವಂಚಿಸಿ ತಮ್ಮವರೊಡನೆ ಸೇರಿಕೊಂಡು ಕ್ರೀಡಿಸುತ್ತಾರೆ. ಒಂದು ಜಾಗದಲ್ಲಿ ಉಯ್ಯಾಲೆಯನ್ನು ಹತ್ತಿ ಸ್ನೇಹಿತರಿಂದ ತೂಗಿಸಿಕೊಳ್ಳುತ್ತಾರೆ. ಕೊಳಲು ಕೈಯಿಂದ ಬಿದ್ದುಹೋಗಲು ಪ್ರಿಯೆಯರು ಅದನ್ನು ಮುಚ್ಚಿಟ್ಟುಬಿಡುತ್ತಾರೆ. ಅದನ್ನು ಹುಡುಕುತ್ತಾ ಅದು ಸಿಕ್ಕಲು ಇತ್ತ ನೋಡುವಲ್ಲಿ ಪ್ರಿಯೆಯರು ಅವಿತುಕೊಂಡುಬಿಡುತ್ತಾರೆ. ಹೀಗೆ ಮಾಡಿ ಅವರಿಂದಲೂ ಹಾಸ್ಯಮಾಡಿಸಿಕೊಂಡು ತಾನೂ ಹಾಸ್ಯಮಾಡುತ್ತಾ ನಗುತ್ತಲಿರುತ್ತಾನೆ.

೫೦-೫೯. ವಸಂತಋತುವಿನ ವಾಯುವು ಬೀಸತಕ್ಕ ಕಾಡಿಗೆ ಹೋಗಿ ಸುಖಿಸುತ್ತಾರೆ. ಅಲ್ಲಿ ಗಂಧದನೀರು, ಪನ್ನೀರುಗಳಿಂದ ಒಬ್ಬೊಬ್ಬರಿಗೆ ಚುಮುಕಿಸಿಕೊಳ್ಳುತ್ತಾ ಇರುತ್ತಾರೆ. ಅದರ ಒಳಗಿನ ಬಗ್ಗಡದಿಂದ ಮೈಯ್ಯನ್ನೆಲ್ಲಾ ಬಳಿದುಕೊಳ್ಳುತ್ತಾರೆ. ಅವರ ಸ್ನೇಹಿತೆಯರೂ ಹೀಗೆಯೇ ಎರಚುತ್ತಾರೆ. ಒಬ್ಬರಿಗೊಬ್ಬರು ಹೀಗೆ ಎರಚಾಡುತ್ತ ವಸಂತಕಾಲದ ವಾಯುವು ಬೀಸುವ ಆ ವನಗಳಲ್ಲಿ ಆಯಾ ಕಾಲಕ್ಕೆ

ತತ್ರತ್ಯಾಕಲೋಚಿತ್ರೈಃ ನಾನಾವಿಹಾರೈಃ ಸಗಣೌ ದ್ವಿಜ ।
ಶ್ರಾನ್ತೌ ಕ್ವಚಿದ್ವೃಕ್ಷಮೂಲಮಾಸಾದ್ಯ ಮುನಿಸತ್ತಮ ॥ ೫೩ ॥

ಉಪವಿಶ್ಯಾಸನೇ ದಿವ್ಯೇ ಮಧುಪಾನಂ ಪ್ರಚಕ್ರತುಃ ।
ತತೋ ಮಧುಮದೋನ್ಮತ್ತೌ ನಿದ್ರಯಾ ಮೀಲಿತೇಕ್ಷಣೌ ॥ ೫೪ ॥

ಮಿಥಃ ಪಾಣೀ ಸಮಾಲಂಬ್ಯ ಕಾಮಬಾಣವಶಂಗತೌ ।
ರಿರಂಸೂ ವಿಶತಃ ಕುಂಜಂ ಸ್ಖಲದ್ವಾಙ್ಮನಸೌ ಪಥಿ ॥ ೫೫ ॥

ಕ್ರೀಡತಶ್ಚ ತತಸ್ತತ್ರ ಕರಿಣೀ ಯೂಥಪೌ ಯಥಾ ।
ಸಖ್ಯೋಽಪಿ ಮಧುಭಿರ್ಮತ್ತಾ ನಿದ್ರಯಾ ಮೀಲಿತೇಕ್ಷಣಾಃ ॥ ೫೬ ॥

ಅಭಿತೋ ಮಂಜುಕುಂಜೇಷು ಸರ್ವಾ ಏವಾಪಿ ಶಿಶ್ಯಿರೇ ।
ಪೃಥಗೇಕೇನ ವಪುಷಾ ಕೃಷ್ಣೋಽಪಿ ಯುಗಪತ್ಪ್ರಭುಃ ॥ ೫೭ ॥

ಸರ್ವಾಸಾಂ ಸನ್ನಿಧಂ ಗಚ್ಛೇತ್ಪ್ರಿಯಯಾ ಪ್ರೇರಿತೋ ಮುಹುಃ ।
ರಮಯಿತ್ವಾ ಚ ತಾಸ್ಸರ್ವಾಃ ಕರಿಣೀರ್ಗಜರಾಡಿವ ॥ ೫೮ ॥

ಪ್ರಿಯಯಾ ಚ ತಥಾ ತಾಭಿಃ ಕ್ರೀಡಾರ್ಥಂ ಚ ಸರೋ ವ್ರಜೇತ್ ।
ಜಲಸೇಕೈರ್ಮಿಥಸ್ತತ್ರ ಕ್ರೀಡತಃ ಸಗಣೌ ತತಃ ॥ ೫೯ ॥

---

ತಕ್ಕ ವಿಹಾರಗಳನ್ನು ಗೆಳೆಯರೊಂದಿಗೆ ಆಡುತ್ತಾರೆ. ಶ್ರಾಂತರಾದಾಗ ಒಂದು ಮರದ ಬುಡದಲ್ಲಿ ದಿವ್ಯವಾದ ಆಸನದಲ್ಲಿ ಕುಳಿತು ಮಧುಪಾನವನ್ನು ಮಾಡುತ್ತಾರೆ. ಅನಂತರ ಮಧುವಿನಿಂದ ಮತ್ತರಾಗಿ ತೂಕಡಿಸುವಂತೆ ಕಣ್ಣುಗಳನ್ನು ಬಿಡುತ್ತಾ ಒಬ್ಬರಿಗೊಬ್ಬರು ಕೈಹಿಡಿದುಕೊಂಡು ಕಾಮಬಾಣದಿಂದ ಪೀಡಿತರಾಗಿ ರಮಿಸಬೇಕೆಂಬ ಇಚ್ಛೆಯಿಂದ ತೊದಳುತ್ತ ಎಡವುತ್ತ ಅಲ್ಲಿರುವ ಲತಾಗೃಹಕ್ಕೆ (ಪೊದರಿಗೆ) ಹೋಗುತ್ತಾರೆ. ರಾಧಾಕೃಷ್ಣರು ಅಲ್ಲಿ ಆನೆ ಸಲಗಗಳು ಸೇರಿದಂತೆ ಕ್ರೀಡಿಸುತ್ತಾರೆ. ಸಖಿಯರು ಮಧುವನ್ನು ಸೇವಿಸಿ ನಿದ್ರೆಯಿಂದ ಕೂಡಿ ಅಲ್ಲಲ್ಲಿ ಇರುವ ಲತಾಗೃಹಗಳಲ್ಲಿಯೇ ಮಲಗುತ್ತಾರೆ. ಕೃಷ್ಣನೂ ಕೂಡ ರಾಧೆಯಿಂದ ಪ್ರೇರಿಸಲ್ಪಟ್ಟವನಾಗಿ ಬೇರೆ ಬೇರೆ ದೇಹವನ್ನು ಹೊಂದಿ ಆ ಸಖಿಯರ ಬಳಿಗೆ ಹೋಗುತ್ತಾನೆ ಆನೆಯ ಸಲಗವು ಎಲ್ಲಾ ಆನೆಗಳೊಡನೆಯೂ ಹೇಗೆ ರಮಿಸುತ್ತದೆಯೋ ಹಾಗೆ ರಮಿಸಿ ರಾಧೆಯೊಡನೆಯೂ ಅವಳ ಸಖಿಯರೊಡನೆಯೂ, ಕ್ರೀಡೆಗೋಸ್ಕರ ಸರೋವರಕ್ಕೆ ಹೋಗಿ ಅಲ್ಲಿ ನೀರನ್ನು ಎರಚುತ್ತಾ ಎಲ್ಲರೊಡನೆಯೂ ಕ್ರೀಡಿಸುತ್ತಾನೆ.

ವಾಸಸ್ಸ್ರಕ್ಚಂದನೈರ್ದಿವ್ಯೈಃ ಭೂಷಣೈರಪಿ ಭೂಷಿತೌ ।
ತತ್ರೈವ ಸರಸಸ್ತೀರೇ ದಿವ್ಯರತ್ನಮಯೇ ಗೃಹೇ ॥ ೬೦ ॥

ಪ್ರಾಗೇವ ಫಲಮೂಲಾನಿ ಕಲ್ಪಿತಾನಿ ಮಯಾ ಮುನೇ ।
ಹರಿಸ್ತು ಪ್ರಥಮಂ ಭುಕ್ತ್ವಾ ಕಾಂತಯಾ ಪರಿವೇಷ್ಟಿತಃ ॥ ೬೧ ॥

ದ್ವಿತ್ರಾಭಿಸ್ಸೇವಿತೋ ಗಚ್ಛೇಚ್ಛಯ್ಯಾಂ ಪುಷ್ಪವಿನಿರ್ಮಿತಾಂ ।
ತಾಂಬೂಲೈರ್ವ್ಯಜನೈಸ್ತತ್ರ ಪಾದಸಂವಾಹನಾದಿಭಿಃ ॥ ೬೨ ॥

ಸೇವ್ಯಮಾನೋ ಹಸಂಸ್ತಾಭಿಃ ಮೋದತೇ ಪ್ರೇಯಸೀಂ ಸ್ಮರನ್ ।
ರಾಧಿಕಾಪಿ ಹರೌ ಸುಪ್ತೇ ಸಗಣಾ ಮುದಿತಾಂತರಾ ॥ ೬೩ ॥

ಅಪಿ ತತ್ರ ಗತಪ್ರಾಣಾ ತದುಚ್ಛಿಷ್ಟಂ ಭುನಕ್ತಿ ಚ ।
ಕಿಂಚಿದೇವ ತತೋ ಭುಕ್ತ್ವಾ ವ್ರಜೇಚ್ಛಯ್ಯಾನಿಕೇತನೇ ॥ ೬೪ ॥

ದ್ರಷ್ಟುಂಕಾಂತಮುಖಾಂಭೋಜಂ ಚಕೋರೀವ ನಿಶಾಕರಂ ।
ತಾಂಬೂಲಚರ್ವಿತಂ ತಸ್ಯ ತತ್ರತ್ಯಾಭಿರ್ನಿವೇದಿತಂ ॥ ೬೫ ॥

---

೬೦-೬೪. ಅನಂತರ ಒಳ್ಳೆಯ ಬಟ್ಟೆ ಚಂದನ ಒಡವೆಗಳಿಂದ ಭೂಷಿತನಾಗುತ್ತಾನೆ. ಆಮೇಲೆ ಆ ಸರೋವರದ ತೀರದಲ್ಲಿಯೇ ಉತ್ತಮವಾದ ಮನೆಯಲ್ಲಿ ನಾನು ಮೊದಲೇ ಸಿದ್ಧಮಾಡಿರುವ ಹಣ್ಣುಗೆಡ್ಡೆಗಳನ್ನು ಮೊದಲು ತಾನು ರಾಧೆಯೊಡನೆ ತಿನ್ನುತ್ತಾನೆ ಇಬ್ಬರು ಮೂವರಿಂದ ಸೇವಿಸಲ್ಪಡುತ್ತಾ ಹೂವಿನ ಹಾಸಿಗೆಯನ್ನು ಹೊಂದುತ್ತಾನೆ. ಅಲ್ಲಿ ತಾಂಬೂಲ ಬೀಸಣಿಗೆ ಕಾಲುಒತ್ತುವುದು ಮುಂತಾದ ಸೇವೆಯನ್ನು ಹೊಂದುತ್ತಾ ಹೆಂಡತಿಯನ್ನು ಸ್ಮರಿಸುತ್ತಾ ಸ್ವಲ್ಪ ಮಲಗುತ್ತಾನೆ. ರಾಧಿಕೆಯೂ ಹರಿಯು ಮಲಗಿದ ಮೇಲೆ ಸಖಿಯರೊಡನೆ ಕೂಡಿ ಹರಿಯಿಲ್ಲದುದರಿಂದ ಕಳವಳಪಟ್ಟು ಆ ಕೃಷ್ಣನು ತಿಂದು ಉಳಿದುದನ್ನು ತಿನ್ನುತ್ತಾಳೆ. ಸ್ವಲ್ಪ ತಿಂದು ಆ ಕೃಷ್ಣನು ಮಲಗಿರುವ ಮನೆಗೆ ಹೋಗುತ್ತಾಳೆ.

೬೫-೬೮. ಕಾಂತನ ಮುಖವನ್ನು ನೋಡಬೇಕೆಂಬ ಆಸೆಯಿಂದ ಹಾತೊರೆಯುತ್ತಿದ್ದು ಹೋಗುತ್ತಾಳೆ. ಆ ಶಯನಗೃಹದಲ್ಲಿರುವ ಸಖಿಯರು ತಾಂಬೂಲವನ್ನು ಕೊಟ್ಟು, ಅವನು ಹಾಕಿಕೊಂಡು ಉಳಿದುದನ್ನು ತೆಗೆದುಕೊಂಡು ಎಲ್ಲರಿಗೂ ಹಂಚಿ

ತಾಂಬೂಲಾನ್ಯಪಿ ಚಾಶ್ನಾತಿ ವಿಭಜನ್ತೀ ಪ್ರಿಯಾಲಿಷು ।
ಕೃಷ್ಣೋಽಪಿ ತಾಸಾಂ ಶುಶ್ರೂಷುಃ ಸ್ವಚ್ಛಂದಂ ಭಾಷಿತಂ ಮಿಥಃ ॥ ೬೬ ॥

ಪ್ರಾಪ್ತನಿದ್ರ ಇವಾಭಾತಿ ವಿನಿದ್ರೋಽಪಿ ಪಟಾವೃತಃ ।
ತಾಶ್ಚ ಕೇಳೀಂ ಕ್ಷಣಂ ಕೃತ್ವಾ ಕುತಶ್ಚಿದನುಮಾನತಃ ॥ ೬೭ ॥

ವ್ಯ್ಯವಸ್ಯ ರಸನಾಂ ದದ್ಭಿಃ ಪಶ್ಯನ್ತ್ಯೋಽನ್ಯೋನ್ಯಮಾನನಂ ।
ಲೀನಾ ಇವ ಲಜ್ಜಯಾಸ್ಯುಃ ಕ್ಷಣಮೂಚುರ್ನ ಕಿಂಚನ ॥ ೬೮ ॥

ಕ್ಷಣಾದೇವ ತತೋ ವಸ್ತ್ರಂ ದೂರೀಕೃತ್ಯ ತದಂಗತಃ ।
ಸಾಧು ನಿದ್ರಾಂ ಗತೋಽಸೀತಿ ಹಾಸಯಂತ್ಯೋ ಹಸಂತಿ ಚ ॥ ೬೯ ॥

ಏವಂ ತಾ ವಿವಿಧೈರ್ಹಾಸ್ಯೈಃ ರಮಮಾಣೋ ಗಣೈಸ್ಸಹ ।
ಅನುಭೂಯ ಕ್ಷಣಂ ನಿದ್ರಾಸುಖಂ ಚ ಮುನಿಸತ್ತಮ ॥ ೭೦ ॥

ಉಪವಿಶ್ಯಾಸನೇ ದಿವ್ಯೇ ಸಗಣಾ ವಿಸ್ತೃತೇ ಮುದಾ ।
ಪಣೀಕೃತ್ಯ ಮಿಥೋಽಹಾರಚುಂಬಾಶ್ಲೇಷಪರಿಚ್ಛದಾ ॥ ೭೧ ॥

---

ತಾನೂ ತಿನ್ನುವಳು. ಕೃಷ್ಣನು ಅವರ ಮಾತನ್ನು ಕೇಳಲಿಚ್ಛೆಯಿಂದ ನಿದ್ದೆಯಿಲ್ಲದಿದ್ದರೂ ನಿದ್ದೆ ಬಂದವನಂತೆ ಮುಸುಕು ಹಾಕಿಕೊಂಡು ಮಲಗಿರುತ್ತಾನೆ. ಅವರು ಸ್ವಲ್ಪ ಹೊತ್ತು ಸರಸವಾದ ಮಾತುಗಳನ್ನಾಡಿ ಆಮೇಲೆ ಅನುಮಾನ ಹುಟ್ಟಿ ಹಲ್ಲಿನಿಂದ ನಾಲಗೆಯನ್ನು ಕಚ್ಚಿಕೊಂಡು ಒಬ್ಬರ ಮುಖವನ್ನೊಬ್ಬರು ನೋಡುತ್ತಾರೆ. ಲಜ್ಜೆಯಿಂದ ಕರಗಿಹೋದವರಂತೆ ಆಗಿ ಕ್ಷಣಕಾಲ ಯಾವ ಮಾತನ್ನೂ ಆಡುವುದೇ ಇಲ್ಲ.

೬೯. ಒಂದು ಗಳಿಗೆಯಾಗುತ್ತಲೂ ಕೃಷ್ಣನ ಮುಸುಕಿನ ಬಟ್ಟೆಯನ್ನು ಮೇಲಿನಿಂದ ದೂರಕ್ಕೆ ಬಿಸುಟು ಚೆನ್ನಾಗಿ ನಿದ್ದೆಮಾಡಿದೆಯಲ್ಲವೆ ? ಎಂದು ಹಾಸ್ಯ ಮಾಡಿ ನಗುತ್ತಾರೆ.

೭೦-೭೫. ಈ ರೀತಿ ನಾನಾಬಗೆಯ ಹಾಸ್ಯಗಳಿಂದ ಎಲ್ಲರೂ ಸಂತೋಷದಿಂದಿದ್ದು ನಿದ್ರಾಸುಖವನ್ನು ಕ್ಷಣಕಾಲ ಅನುಭವಿಸಿ ಆಮೇಲೆ ಒಂದು ಅಗಲವಾದ ಉತ್ತಮವಾದ ಆಸನದಲ್ಲಿ ಎಲ್ಲರೂ ಕುಳಿತುಕೊಳ್ಳುತ್ತಾರೆ. ಹಾರ, ಚುಂಬನ, ಆಲಿಂಗನ

ಅಕ್ಷೈರ್ವಿಕ್ರೀಡಿತಃ ಪ್ರೇಮ್ಣಾ ನರ್ಮಾಲಾಪಪುರಸ್ಸರಂ ।
ಪರಾಜಿತೋಽಪಿ ಪ್ರಿಯಯಾ ಜಿತೋಽಹಮಿತಿ ವೈ ಬ್ರುವನ್ ॥ ೭೨ ॥

ಹಾರಾದಿಗ್ರಹಣೇ ತಸ್ಯಾಃ ಪ್ರವೃತ್ತಸ್ತಾಡ್ಯತೇ ತಯಾ ।
ತಯೈವಂ ತಾಡಿತಃ ಕೃಷ್ಣಃ ಕರೇಣಾಸ್ಯಸರೋರುಹೇ ॥ ೭೩ ॥

ವಿಷಣ್ಣಮಾನಸೋ ಭೂತ್ವಾ ಗಂತುಂ ಚ ಕುರತೇ ಮತಿಂ ।
ಜಿತೋಽಸ್ಮಿ ಚೇತ್ತ್ವಯಾ ದೇವಿ ಗೃಹ್ಯತಾಂ ಯತ್ಪಣೀಕೃತಂ ॥ ೭೪ ॥

ಚುಂಬನಾದಿ ಮಯಾ ದತ್ತಮಿತ್ಯುಕ್ತ್ವಾ ಸಾ ತಥಾಚರೇತ್ ।
ಕೌಟಿಲ್ಯಂ ತದ್ಭ್ರುವೋರ್ದ್ರಷ್ಟುಂ ಶ್ರೋತುಂ ತದ್ಭರ್ತ್ಸನಂ ವಚಃ ॥ ೭೫ ॥

ತತಸ್ಸಾರಿಶುಕಾನಾಂ ಚ ಶ್ರುತ್ವಾ ವಾಗಾಹವಂ ಮಿಥಃ ।
ನಿರ್ಗಚ್ಛತಸ್ತತಸ್ಥಾನಾದ್ಗಂತುಕಾಮೌ ಗೃಹಂ ಪ್ರತಿ ॥ ೭೬ ॥

ಕೃಷ್ಣಃ ಕಾಂತಾಮನುಜ್ಞಾಪ್ಯ ಗವಾಮಭಿಮುಖಂ ವ್ರಜೇತ್ ।
ಸಾ ತು ಸೂರ್ಯಗೃಹಂ ಗಚ್ಛೇತ್ಸಖೀಮಂಡಲಸಂಯುತಾ ॥ ೭೭ ॥

---

ಹೊದಿಕೆಗಳನ್ನು ಜೂಜು ಕಟ್ಟಿಕೊಂಡು ಚುಚ್ಚುಮಾತುಗಳನ್ನಾಡುತ್ತಾ ಪಗಡೆಯು ನ್ನಾಡುತ್ತಾರೆ. ಪ್ರಿಯೆಯಿಂದ ಸೋಲಿಸಲ್ಪಟ್ಟರೂ ತಾನೇ ಗೆದ್ದನೆಂದು ಹೇಳುತ್ತಾ ಆಕೆಯ ಹಾರ ಮುಂತಾದುವುಗಳನ್ನು ಕಿತ್ತುಕೊಳ್ಳಲು ಪ್ರಯತ್ನಿಸುತ್ತಾನೆ. ಆಗ ಅವರು ಹೊಡೆಯುತ್ತಾರೆ. ಆಕೆಯು ಕಪಾಲಕ್ಕೆ ಹೊಡೆಯಲು ದುಃಖದಿಂದ ಹೊರ ಟುಹೋಗಲು ಪ್ರಯತ್ನಪಡುತ್ತಾನೆ. ಎಲೈ ! ದೇವಿಯೇ ನಾನು ಸೋತಿರುವ ಪಕ್ಷದಲ್ಲಿ ನನ್ನ ಪಣವನ್ನು ತೆಗೆದುಕೊ ಎಂದು ಚುಂಬನಾದಿಗಳನ್ನು ಕೊಡುತ್ತಾನೆ. ಅವರೂ ತೆಗೆದುಕೊಳುತ್ತಾರೆ. ವಕ್ರವಾದ ಹುಬ್ಬುಗಂಟನ್ನು ನೋಡಲು ಬೈಗುಳನ್ನು ಕೇಳಲು ಆ ರೀತಿ ಮಾಡುತ್ತಾರೆ.

೭೬. ಆ ಮೇಲೆ ಆ ಸಾರಿಕೆ ಗಿಳಿಗಳ ಜಗಳವನ್ನು ಕೇಳಿ ಮನೆಗೆ ಹೋಗಲು ಅಲ್ಲಿಂದ ಹೊರಡುತ್ತಾರೆ.

೭೭. ಕೃಷ್ಣನು ರಾಧಿಕೆಗೆ ಹೇಳಿ ದನಕರುಗಳ ಹತ್ತಿರಕ್ಕೆ ಹೋಗುತ್ತಾನೆ. ರಾಧೆಯು ಸಖಿಯರೊಡನೆ ಸೂರ್ಯದೇವನ ಮನೆಗೆ ಹೋಗುತ್ತಾಳೆ.

ಕಿಯದ್ದೂರಂ ತತೋ ಗತ್ವಾ ಪರಾವೃತ್ಯ ಹರಿಃ ಪುನಃ ।
ವಿಪ್ರವೇಷಂ ಸಮಾಸ್ಥಾಯ ಯಾತಿ ಸೂರ್ಯಗೃಹಂ ಪ್ರತಿ ॥ ೭೮ ॥

ಸೂರ್ಯಂ ಪ್ರಪೂಜಯೇತ್ತತ್ರ ಪ್ರಾರ್ಥಿತಸ್ತತ್ಸಖೀಜನೈಃ ।
ತದೈವ ಕಲ್ಪಿತೈರ್ವೇದೈಃ ಪರಿಹಾಸವಿಗರ್ಭಿತೈಃ ॥ ೭೯ ॥

ತತಸ್ತಾ ಜ್ಞಾಪಿ ತಂ ಕಾಂತಂ ಪರಿಜ್ಞಾಯ ವಿಚಕ್ಷಣಾಃ ।
ಆನಂದಸಾಗರೇ ಲೀನಾ ನ ವಿದುಸ್ಸ್ವಂ ನ ಚಾಪರಂ ॥ ೮೦ ॥

ವಿಹಾರೈರ್ವಿವಿಧೈರೇವಂ ಸಾರ್ಧಯಾಮದ್ವಯಂ ಮುನೇ ।
ನೀತ್ವಾ ಗೃಹಾನ್ವ್ರಜೇಯುಸ್ತಾಃ ಸ ಚ ಕೃಷ್ಣೋ ಗವಾಂ ವ್ರಜೇತ್ ॥ ೮೧ ॥

ಸಂಗಮ್ಯ ಸ್ವಸಖೀನ್ಕೃಷ್ಣೋ ಗೃಹೀತ್ವಾ ಗಾಃ ಸಮಂತತಃ ।
ಆಗಚ್ಛತಿ ವ್ರಜಂ ಹರ್ಷಾದ್ವಾದಯನ್ಮುರಳೀಂ ಮುನೇ ॥ ೮೨ ॥

---

೭೮. ಹರಿಯು ಸ್ವಲ್ಪದೂರ ಹೋಗಿ ಹಿಂತಿರುಗಿ ಬ್ರಾಹ್ಮಣ ವೇಷವನ್ನು ಹಾಕಿಗೊಂಡು ಆ ಸೂರ್ಯಗೃಹಕ್ಕೆ ಹೋಗುತ್ತಾನೆ.

೭೯. ಆ ಬ್ರಾಹ್ಮಣನು ಸಿಕ್ಕಿದುದನ್ನು ನೋಡಿ ಆ ರಾಧೆಯ ಸಖಿಯರು ಸೂರ್ಯನ ಪೂಜೆಮಾಡಲು ಕೇಳಿಕೊಳ್ಳುತ್ತಾರೆ. ಈತನು ಒಪ್ಪಿಕೊಂಡು ಆಗಾಗಲೇ ಕಲ್ಪಿತವಾದ ಹಾಸ್ಯದಿಂದ ಕೂಡಿದ ವೇದಮಂತ್ರಗಳನ್ನು ಹೇಳುತ್ತಾ ಪೂಜಿಸುತ್ತಾನೆ.

೮೦. ಆಗ ಅವರು ಈ ಹಾಸ್ಯವೇದಗಳಿಂದ ಕೃಷ್ಣನನ್ನು ಜ್ಞಾಪಿಸಿಕೊಂಡು ಅವನನ್ನು ತಿಳಿದುಕೊಂಡು ಆನಂದಸಾಗರದಲ್ಲಿ ಮುಳುಗಿ ತಮ್ಮನ್ನೂ ಇತರರನ್ನೂ ತಾವೇ ತಿಳಿಯದೆ ಆನಂದದಲ್ಲಿ ಮುಳುಗುತ್ತಾರೆ.

೮೧. ಈ ರೀತಿ ನಾನಾ ಬಗೆಯಾದ ವಿಹಾರಗಳಿಂದ ಎರಡೂವರೆ ಯಾಮಗಳನ್ನು ಕಳೆದು ಮನೆಗೆ ಹೋಗುತ್ತಾರೆ. ಕೃಷ್ಣನು ದನಗಳ ಬಳಿಗೆ ಹೋಗುತ್ತಾನೆ

೮೨. ಕೃಷ್ಣನು ದನಗಳ ಬಳಿಗೆ ಬಂದು ತನ್ನ ಸ್ನೇಹಿತರೊಡನೆ ದನಗಳನ್ನು ಹೊಡೆದುಕೊಂಡು ಕೊಳಲನ್ನೂದುತ್ತಾ ಸಂತೋಷದಿಂದ ಗೋಕುಲಕ್ಕೆ ಬರುತ್ತಾನೆ.

ತತೋ ನಂದಾದಯಸ್ಸರ್ವೇ ಶ್ರುತ್ವಾ ವೇಣುರವಂ ಹರೇಃ ।
ಗೋಧೂಲೀಪಟಲವ್ಯಾಪ್ತಂ ದೃಷ್ಟ್ವಾ ಚಾಪಿ ನಭಸ್ಥಳಂ ॥ ೮೩ ॥

ವಿಸೃಜ್ಯ ಸರ್ವಕರ್ಮಾಣಿ ಸ್ತ್ರಿಯೋ ಬಾಲಾದಯೋಽಪಿ ಚ ।
ಕೃಷ್ಣಸ್ಯಾಭಿಮುಖಂ ಯಾಂತಿ ತದ್ದರ್ಶನಸಮುತ್ಸುಕಾಃ ॥ ೮೪ ॥

ರಾಜಮಾರ್ಗೇ ವ್ರಜದ್ವಾರಿ ಯತ್ರ ಸರ್ವೇ ವ್ರಜೌಕಸಃ ।
ಕೃಷ್ಣೋಽಪಿ ತಾನ್ಸಮಾಗಮ್ಯ ಯಥಾವದನುಪೂರ್ವಶಃ ॥ ೮೫ ॥

ದರ್ಶನಸ್ಪರ್ಶನೈರ್ವಾಚಾ ಸ್ಮಿತಪೂರ್ವಾವಲೋಕನೈಃ ।
ಗೋಪವೃದ್ಧಾನ್ನಮಸ್ಕಾರೈಃ ಕಾಯಿಕೈರ್ವಾಚಿಕೈರಪಿ ॥ ೮೬ ॥

ಅಷ್ಟಾಂಗಪಾತೈಃ ಪಿತರೌ ರೋಹಿಣೀಮಪಿ ನಾರದ ।
ನೇತ್ರಾಂತಸೂಚಿತೇನೈವ ವಿನಯೇನ ಪ್ರಿಯಾಂ ತಥಾ ॥ ೮೭ ॥

ಏವಂ ಕೈಸ್ತದ್ಯಥಾಯೋಗ್ಯಂ ವ್ರಜೌಕೋಭಿಃ ಪ್ರಪೂಜಿತಃ ।
ಗವಾಲಯೇ ತಥಾ ಗಾಶ್ಚ ಸಂಪ್ರವೇಶ್ಯ ಸಮಂತತಃ ॥ ೮೮ ॥

---

೮೩-೮೪. ಆಗ ನಂದನಾದಿಗಳು ಕೃಷ್ಣನ ಕೊಳಲಿನ ಧ್ವನಿಯನ್ನು ಕೇಳಿ ಆಕಾಶವು ಧೂಳಿನಿಂದ ಕೂಡಿರುವುದನ್ನೂ ನೋಡಿ ಎಲ್ಲಾ ಕೆಲಸಗಳನ್ನೂ ಬಿಟ್ಟು ಅವರೂ ಹೆಂಗಸರೂ ಮಕ್ಕಳೂ ಕೂಡ ಕೃಷ್ಣದರ್ಶನದಲ್ಲಿ ಆಸೆಪಟ್ಟು ಆತನ ಎದುರಿಗೆ ಬರುತ್ತಾರೆ.

೮೫-೮೭. ಹೆದ್ದಾರಿಯಲ್ಲಿ ನಿಂತಿರುವ ಆ ಗೋಕುಲದವರನ್ನು ಕೃಷ್ಣನು ನೋಡಿ ಅವರ ಯೋಗ್ಯತೆಗೆ ತಕ್ಕಂತೆ ನೋಡುವುದು. ಮುಟ್ಟುವುದು. ಮಾತನಾಡಿಸುವುದು. ಮುಗುಳುನಗೆಯಿಂದ ನೋಡುವುದು ಇವುಗಳಿಂದ ಗೌರವಿಸುತ್ತಾನೆ. ಆ ಗೋಪರಲ್ಲಿ ಮುದುಕರಾದವರನ್ನು ಕೆಲವರಿಗೆ ದೇಹದಿಂದ ನಮಸ್ಕಾರ ಮಾಡುತ್ತಲೂ ಕೆಲವರಿಗೆ ಕೈ ಮುಗಿಯುತ್ತಲೂ ಕೆಲವರಿಗೆ ಬಾಯಿನಿಂದಲೇ ನಮಸ್ಕಾರವೆಂದು ಹೇಳುತ್ತಲೂ ಹೋಗುತ್ತಾನೆ. ತಾಯಿತಂದೆಯರನ್ನು ಸಾಷ್ಟಾಂಗ ನಮಸ್ಕಾರದಿಂದ ಗೌರವಿಸುತ್ತಾನೆ. ರೋಹಿಣಿಯನ್ನು ಕಡೆಗಣ್ಣುನೋಟದಿಂದ ವಿನಯದಿಂದ ಗೌರವಿಸುತ್ತಾನೆ.

೮೮. ಈ ರೀತಿ ಗೋಕುಲದವರಿಂದ ಯೋಗ್ಯತೆಗನುಸಾರವಾಗಿ ಗೌರವಿಸಲ್ಪಟ್ಟು ದನಗಳನ್ನು ಕೊಟ್ಟಿಗೆಯಲ್ಲಿ ಸೇರಿಸುತ್ತಾನೆ. ಅನಂತರ ತಾಯಿತಂದೆಗಳು ಕರೆಯಲು ಅಣ್ಣನೊಡನೆ ಮನೆಗೆ ಹೋಗುತ್ತಾನೆ.

ಪಿತೃಭ್ಯಾಮರ್ಥಿತೋ ಯಾತಿ ಭ್ರಾತ್ರಾ ಸಹ ನಿಜಾಲಯಂ ।
ಸ್ನಾತ್ವಾ ಪೀತ್ವಾ ತತಃ ಕಿಂಚಿದ್ಭುಕ್ತ್ವಾ ಮಾತ್ರಾನುಮೋದಿತಃ ॥ ೮೯ ॥

ಗವಾಲಯಂ ಪುನರ್ಯಾತಿ ದೋಗ್ಧುಕಾಮೋ ಗವಾಂ ಪಯಃ ।
ಗಾಶ್ಚ ದುಗ್ಧ್ವಾ ದೋಹಯಿತ್ವಾ ಪಾಯಯಿತ್ವಾ ಚ ಕಾಶ್ಚನ ॥ ೯೦ ॥

ಪಿತ್ರಾ ಸಾರ್ಧಂ ಗೃಹಂ ಯಾತಿ ತತ್ರ ಭಾವಶತಾನುಗಃ ।
ತತ್ರ ಪಿತ್ರಾ ಪಿತೃವ್ಯೈಶ್ಚ ತತ್ಪುತ್ರೈಶ್ಚ ಬಲೇನ ಚ ॥ ೯೧ ॥

ಭುನಕ್ತಿ ವಿವಿಧಾನ್ನಾನಿ ಚರ್ವ್ಯಚೋಷ್ಯಾದಿಕಾನಿಚ ।
ತನ್ಮತಿಃ ಪ್ರಾರ್ಥನಾತ್ಪೂರ್ವಂ ರಾಧಿಕಾಪಿ ತದೈವ ಹಿ ॥ ೯೨ ॥

ಪ್ರಸ್ಥಾಪಯೇತ್ಸಖೀದ್ವಾರಾ ಪಕ್ವಾನ್ನಾನಿ ತದಾಲಯಂ ।
ಶ್ಲಾಘಯಂಶ್ಚ ಹರಿಸ್ತಾನಿ ಭುಕ್ತ್ವಾ ಪಿತ್ರಾದಿಭಿಸ್ಸಹ ॥ ೯೩ ॥

ಸಭಾಗೃಹಂ ವ್ರಜೇತ್ತೈಶ್ಚ ಜುಷ್ಟಂ ವಂದಿಜನಾದಿಭಿಃ ।
ಪಕ್ವಾನ್ನಾನಿ ಗೃಹೀತ್ವಾ ಯಾಃ ಸಖ್ಯಸ್ತತ್ರ ಪುರಾಗತಾಃ ॥ ೯೪ ॥

---

೮೯. ಅಲ್ಲಿ ಸ್ನಾನಪಾನಗಳನ್ನು ಮಾಡಿ ಊಟವನ್ನೂ ಮಾಡಿ ತಾಯಿಯನ್ನು ಕೇಳಿಕೊಂಡು ದನಗಳ ಕೊಟ್ಟಿಗೆಗೆ ಹಾಲು ಕರೆಯಲು ಹೋಗುತ್ತಾನೆ.

೯೦. ಆ ಕೊಟ್ಟಿಗೆಯಲ್ಲಿ ಕೆಲವು ಹಸುಗಳನ್ನು ಕರೆದು ಕೆಲವನ್ನು ಕರೆಸಿ, ಕೆಲವನ್ನು ಕರುಬಿಟ್ಟು ಕುಡಿಸುತ್ತಾನೆ ಅನಂತರ ತಂದೆಯೊಡನೆಯೂ, ಅನೇಕಜನ ಭಾವಂದಿರೊಡನೆಯೂ ಮನೆಗೆ ಹೋಗುತ್ತಾನೆ

೯೧. ಅಲ್ಲಿ ತಂದೆ, ತಂದೆಯ ಸಹೋದರರು, ಅವರ ಮಕ್ಕಳು, ಬಲರಾಮ ಇವರೊಡನೆ ನಾನಾವಿಧವಾದ ಭಕ್ಷ್ಯಭೋಜ್ಯಗಳನ್ನು ಊಟಮಾಡುತ್ತಾನೆ.

೯೨. ಅವನ ಮನಸ್ಸನ್ನು ಬಲ್ಲ ರಾಧಿಕೆಯು ಮೊದಲೇ ಸಖಿಯರ ಮೂಲಕ ಒಳ್ಳೊಳ್ಳೆಯ ಅನ್ನಗಳನ್ನು ಅವಳ ಮನೆಗೆ ಕಳುಹಿಸಿರುವಳು.

೯೩. ಹರಿಯು ಆ ಅನ್ನವನ್ನು ಶ್ಲಾಘಿಸುತ್ತಾ ತಂದೆ ಮೊದಲಾದವರೊಡನೆ ಊಟ ಮಾಡುತ್ತಾನೆ. ಅನಂತರ ಹೊಗಳುಭಟರಿರುವ ಸಭಾಗೃಹಕ್ಕೆ ಹೋಗುತ್ತಾನೆ.

೯೪-೯೫. ಹಿಂದೆ ರಾಧೆಯ ಬಳಿಯಿಂದ ಯಶೋದೆಯ ಮನೆಗೆ ಪಕ್ವಾನ್ನಗಳನ್ನು ತಂದಿದ್ದ ಸಖಿಯರ ಕೈಯಲ್ಲಿ ಯಶೋದೆಯು ಕೃಷ್ಣನು ತಿಂದು ಮಿಕ್ಕದನ್ನು

ಬಹೂನಿ ಚ ಪುನಸ್ತಾನಿ ಪ್ರದತ್ತಾನಿ ಯಶೋದಯಾ ।
ಸಖ್ಯಸ್ತತ್ರ ತಯಾ ದತ್ತಂ ಕೃಷ್ಣೋಚ್ಛಿಷ್ಟಂ ನಯಂತಿ ಚ ॥ ೯೫ ॥

ಸರ್ವಂತಾಭಿಸ್ಸಮಾನೀಯ ರಾಧಿಕಾಯೈ ನಿವೇದ್ಯತೇ ।
ಸಾಪಿ ಭುಕ್ತ್ವಾ ಸಖೀವರ್ಗಯುಕ್ತಾ ತದನುಪೂರ್ವಶಃ ॥ ೯೬ ॥

ಸಖೀಭಿರ್ಮಂಡಿತಾ ತಿಷ್ಠೇದಭಿಸರ್ತುಂ ಸಮುದ್ಯತಾ ।
ಪ್ರಸ್ಥಾಪ್ಯತೇ ಮಯಾ ಕಾಚಿದಿತ ಏವ ತತಸ್ಸಖೀ ॥ ೯೭ ॥

ತಯಾಽಭಿಸಾರಿಕಾ ಸಾಥ ಯಮುನಾಯಾಸ್ಸಮಾಪತಃ ।
ಕಲ್ಪವೃಕ್ಷನಿಕುಂಜೇಸ್ಮಿನ್ದಿವ್ಯರತ್ನಮಯೇ ಗೃಹೇ ॥ ೯೮ ॥

ಸಿತಕೃಷ್ಣನಿಶಾಯೋಗ್ಯವೇಷಾ ಯಾತಿ ಸಖೀಯುತಾ ।
ಕೃಷ್ಣೋಽಪಿ ವಿವಿಧಂ ತತ್ರ ದೃಷ್ಟ್ವಾ ಕೌತೂಹಲಂ ತತಃ ॥ ೯೯ ॥

ಕಾತ್ಯಾಯನ್ಯಾ ಮನೋಜ್ಞಾನಿ ಶ್ರುತ್ವಾ ಚ ಗೀತಿಕಾನ್ಯಪಿ ।
ಧನಧಾನ್ಯಾದಿಭಿಸ್ತಾಶ್ಚ ಪ್ರೀಣಯಿತ್ವಾ ವಿಧಾನತಃ ॥ ೧೦೦ ॥

---

ಇನ್ನೂ ಬಗೆಬಗೆಯಾದ ಪದಾರ್ಥಗಳನ್ನೂ ಕೊಟ್ಟು ಕಳುಹಿಸುತ್ತಾಳೆ. ಅದನ್ನು ಸಖಿಯರು ತರುತ್ತಾರೆ.

೯೬. ಆ ಸಖಿಯರು ಎಲ್ಲವನ್ನೂ ತಂದು ರಾಧಿಕೆಗೆ ಕೊಡುತ್ತಾರೆ. ಅವಳು ಸಖಿಯರೊಡನೆ ಅವೆಲ್ಲವನ್ನೂ ಕ್ರಮವಾಗಿ ತಿನ್ನುತ್ತಾಳೆ.

೯೭-೯೮. ರಾಧಿಕೆಯು ಸಖಿಯರಿಂದ ಅಲಂಕಾರ ಮಾಡಿಸಿಕೊಂಡು ಕೃಷ್ಣನ ಬಳಿಗೆ ಹೋಗಲು ಸಿದ್ಧಳಾಗಿರುತ್ತಾಳೆ. ನಾನೇ ಒಬ್ಬಳು ಸಖಿಯನ್ನು ಅಲ್ಲಿಗೆ ಕಳು ಹಿಸುತ್ತೇನೆ. ಆ ರಾಧೆಯು ಸಖಿಯೊಡನೆ ಮನೆಯ ಬಳಿಗೆ ಬರುತ್ತಾಳೆ. ಆ ರಾಧೆಯು ಶುಕ್ಲಪಕ್ಷ ಮತ್ತು ಕೃಷ್ಣಪಕ್ಷಗಳ ಕತ್ತಲೆಗೆ ಯೋಗ್ಯವಾದ ವೇಷಹಾಕಿ ಕೊಂಡು ಆ ಸಖಿಯೊಡನೆ ಮನೆಯ ಬಳಿ ಇರುವ ಕಲ್ಪವೃಕ್ಷದ ದಿವ್ಯ ರತ್ನಗೃಹಕ್ಕೆ ಬರುತ್ತಾಳೆ.

೯೯-೧೦೦. ಕೃಷ್ಣನು ಆ ಸಭೆಯಲ್ಲಿ ನಾನಾಬಗೆಯಾದ ಆಶ್ಚರ್ಯಗಳನ್ನು ನೋಡುತ್ತಿದ್ದು ಅರ್ಧವಯಸ್ಸು ಕಳೆದಿರುವ ಮುದುಕಿಯರಿಂದ ಅನೇಕ ಗೀತಗಳನ್ನು ಕೇಳಿ ಅವರಿಗೆ ಧನಧಾನ್ಯಗಳನ್ನು ಕೊಟ್ಟು ಸಂತೋಷಪಡಿಸಿ ಜನಗಳಿಂದ ಗೌರವಿ ಸಲ್ಪಟ್ಟು ಸ್ನೇಹಿತರೊಡನೆಯೂ ತಾಯಿಯೊಡನೆಯೂ ಮನೆಗೆ ಹೋಗುತ್ತಾನೆ.

ಜನ್ಯೈರಾರಾಧಿತೋ ಮಾತ್ರಾ ಯಾತಿ ಸಖ್ಯಾನಿಕೇತನಂ ।
ಮಾತ ಪ್ರಸ್ಥಿತಾಯಾಂ ಚ ಭೋಜಯಿತ್ವಾ ತತೋಗೃಹಂ ॥ ೧೦೧ ॥

ಸಂಕೇತಕಂ ಕಾನ್ತಯಾತ್ರ ಸಮಾಗಚ್ಛೇದಲಕ್ಷಿತಃ ।
ಮಿಳಿತ್ವಾ ತಾವುಭಾವತ್ರ ಕ್ರೀಡತೋ ವನರಾಜಿಷು ॥ ೧೦೨ ॥

ವಿಹಾರೈರ್ವಿವಿಧೈರೇಷಾ ಲೀಲಾಗೀತಪುರಸ್ಸರೈಃ ।
ಸಾರ್ಧಯಾಮದ್ವಯಾಂ ನೀತ್ವಾ ರಾತ್ರಿರೇವಂ ವಿಹಾರತಃ ॥ ೧೦೩ ॥

ಸುಷುಪ್ಸೂ ವಿಶತಃ ಕುಂಜಂ ಪಶ್ಯೇತಾಭಿರಲಕ್ಷಿತೌ ।
ನಿಕಾಂತೇ ಕುಸುಮೈಃ ಕ್ಲಪ್ತೇ ಕೇಳಿತಲ್ಪೇ ಮನೋಹರೇ ॥ ೧೦೪ ॥

ಸುಪ್ತಾವಾತಿಷ್ಠತಸ್ತತ್ರ ಸೇವ್ಯಮಾನೌ ನಿಜಾಳಿಭಿಃ ।
ಇತಿ ತೇ ಸರ್ವಮಾಖ್ಯಾತಂ ನೈತ್ಯಕಂ ಚರಿತಂ ಹರೇಃ ॥ ೧೦೫ ॥

ಪಾಪಿನೋಽಪಿ ವಿಮುಚ್ಯಂತೇ ಶ್ರವಣಾದಸ್ಯ ನಾರದ ।

॥ ನಾರದ ಉವಾಚ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ತ್ವಯಾ ದೇವಿ ನ ಸಂಶಯಃ ।
ಹರೇರ್ನೈನಂದಿನೀ ಲೀಲಾ ಯತೋ ಮೇಽದ್ಯ ಪ್ರಕಾಶಿತಾ ॥ ೧೦೬ ॥

---

೧೦೧-೧೦೨ ತಾಯಿಯು ಊಟಮಾಡಿಸಿ ಮನೆಗೆ ಹೋದಮೇಲೆ ಯಾರಿಗೂ ತಿಳಿಯದಂತೆ ಈ ರಾಧೆಯಿರುವ ಸಂಕೇತಸ್ಥಾನಕ್ಕೆ ಬರುತ್ತಾನೆ. ಅಲ್ಲಿ ಅವರಿಬ್ಬರೂ ಸೇರಿ ಆ ವನದಲ್ಲಿ ಕ್ರೀಡಿಸುತ್ತಾರೆ.

೧೦೩. ನಾನಾಬಗೆಯಾದ ಲೀಲೆಗಳಿಂದಲೂ, ವಿಹಾರಗಳಿಂದಲೂ, ಎರಡೂವರೆ ಜಾವಗಳನ್ನು ರಾತ್ರಿಯಲ್ಲಿ ಕಳೆಯುತ್ತಾನೆ.

೧೦೪-೧೦೫. ಅನಂತರ ಮಲಗಲಿಚ್ಛೆಯುಳ್ಳವರಾಗಿ ಯಾರೂ ಕಾಣದಂತೆ ಲತಾಗೃಹಕ್ಕೆ ಹೋಗುತ್ತಾರೆ. ಅಲ್ಲಿ ಗುಟ್ಟಿನಲ್ಲಿ ಹೂವಿನ ಹಾಸಿಗೆಯನ್ನು ಹಾಸಿರುತ್ತಾರೆ ಅಲ್ಲಿ ಸಖಿಯರಿಂದ ಸೇವಿಸಲ್ಪಟ್ಟು ಮಲಗುತ್ತಾರೆ. ಈರೀತಿ ಹರಿಯ ನಿತ್ಯವಾದ ನಡತೆಯನ್ನು ಹೇಳಿದ್ದೇನೆ ಇದನ್ನು ಕೇಳಿದರ ಪಾಪಿಗಳೂ ಕೂಡ ಮೋಕ್ಷವನ್ನು ಹೊಂದುತ್ತಾರೆ

೧೦೬. ನಾರದನು ಹೇಳಿದನು. ಎಲೈ ದೇವಿಯೇ ಧನ್ಯನಾದೆನು. ಹರಿಯ ದಿನಚರ್ಯೆಯನ್ನು ನೀನು ಹೇಳಿದುದರಿಂದ ಅನುಗೃಹೀತನಾದೆನು. ಸಂಶಯವಿಲ್ಲ.

॥ ಸೂತ ಉವಾಚ ॥

ಇತ್ಯುಕ್ತ್ವಾ ತಾಂ ಪರಿಕ್ರಮ್ಯ ತಯಾ ಚಾಪಿ ಪ್ರಪೂಜಿತಃ ।
ಅನ್ತರ್ಧಾನಂ ಗತೋ ಬ್ರಹ್ಮನ್ ನಾರದೋ ಮುನಿಸತ್ತಮಃ ॥ ೧೦೭ ॥

ಮಯಾಪ್ಯೇತಚ್ಚಾನುಪೂರ್ವ್ಯಾತ್ಸರ್ವಂ ತೇ ಪರಿಕೀರ್ತಿತಂ ।
ಜಪೇನ್ನಿತ್ಯಂ ಪ್ರಯತ್ನೇನ ಮಂತ್ರಯುಗ್ಮಮನುತ್ತಮಂ ॥ ೧೦೮ ॥

ಕೃಷ್ಣವಕ್ತ್ರಾದಿದಂ ಲಬ್ಧಂ ಪುರಾ ರುದ್ರೇಣ ಯತ್ನತಃ ।
ತೇನೋಕ್ತಂ ನಾರದಾಯಾಪಿ ನಾರದೇನ ಮಮೋದಿತಂ ॥ ೧೦೯ ॥

ಸಂಸ್ಕಾರಾಂಶ್ಚ ವಿಧಾಯೈವ ಮಯಾಪ್ಯೇತತ್ತವೋದಿತಂ ।
ತ್ವಯಾಪ್ಯೇತದ್ಗೋಪನೀಯಂ ರಹಸ್ಯಂ ಪರಮಾದ್ಭುತಂ ॥ ೧೧೦ ॥

॥ ಶೌನಕ ಉವಾಚ ॥

ಕೃತಕೃತ್ಯೋಽಭವಂ ಸಾಕ್ಷಾತ್ತ್ವತ್ಪ್ರಸಾದಾದಹಂ ಗುರೋ ।
ರಹಸ್ಯಾನಾಂ ರಹಸ್ಯಂ ಯತ್ತ್ವಯಾ ಮಹ್ಯಂ ಪ್ರಕಾಶಿತಂ ॥ ೧೧೧ ॥

॥ ಸೂತ ಉವಾಚ ॥

ಧರ್ಮಾನೇತಾನುಪಾತಿಷ್ಠ ಜಲ್ಪನ್ಮಂತ್ರಮಹರ್ನಿಶಂ ।
ಅಚಿರಾದೇವ ತದ್ದಾಸ್ಯಮವಾಪ್ಸ್ಯಸಿ ನ ಸಂಶಯಃ ॥ ೧೧೨ ॥

---

೧೦೭. ಸೂತನು ಹೇಳಿದನು– ಹೀಗೆಂದು ಹೇಳಿ ಅವಳನ್ನು ಗೌರವಿಸಿ ತಾನೂ ಗೌರವವನ್ನು ಹೊಂದಿ ಹೊರಟುಹೋದನು.

೧೦೮. ಇದನ್ನು ನಾನು ಪೂರ್ತಿಯಾಗಿ ನಿನಗೆ ಹೇಳಿದೆನು. ಈ ಮಂತ್ರಯುಗ್ಮವನ್ನು ಪ್ರಯತ್ನದಿಂದ ಜಪಿಸಬೇಕು.

೧೦೯-೧೧೦. ಶ್ರೀಕೃಷ್ಣನೇ ರುದ್ರನಿಗೆ ಹೇಳಿದನು. ರುದ್ರನು ನಾರದನಿಗೆ ಹೇಳಿದನು. ನಾರದನು ನನಗೆ ಹೇಳಿದನು ನಾನು ಅದಕ್ಕೆ ಬೇಕಾದ ಸಂಸ್ಕಾರಗಳನ್ನು ಮಾಡಿ ನಿನಗೆ ಹೇಳಿದ್ದೇನೆ. ಇದು ರಹಸ್ಯವಾಗಿರತಕ್ಕದ್ದು.

೧೧೧. ಶೌನಕನು ಹೇಳಿದನು- ನೀನೇ ಪ್ರತ್ಯಕ್ಷವಾಗಿ ಅತ್ಯಂತ ರಹಸ್ಯವಾದ ಮಂತ್ರವನ್ನು ಹೇಳಿದುದರಿಂದ ನಾನು ಕೃತಕೃತ್ಯನಾಗಿದ್ದೇನೆ.

೧೧೨. ಸೂತನು ಹೇಳಿದನು– ಈ ಮಂತ್ರವನ್ನು ಅಹರ್ನಿಶೆಯೂ ಜಪಿಸುತ್ತಾ ಮೇಲೆ ಹೇಳಿದ ಧರ್ಮಗಳಂತೆ ನಡೆದರೆ ಸ್ವಲ್ಪ ಕಾಲದಲ್ಲಿಯೇ ಸ್ವಾಮಿಯ ದಾಸ್ಯವನ್ನು ಹೊಂದುತ್ತೀಯೆ. ಸಂಶಯವಿಲ್ಲ.

ಮಯಾಪಿ ಗಮ್ಯತೇ ಬ್ರಹ್ಮನ್ನಿತ್ಯಮಾಯತನಂ ವಿಭೋಃ ।
ಗುರೋರ್ಗುರೋರ್ಭಾನುಜಾಯಾಃ ಕೂಲೇ ಗೋಪೀಶ್ವರಸ್ಯ ಚ ॥ ೧೧೩ ॥

ಇದಂ ಚರಿತ್ರಂ ಪರಮಂ ಪವಿತ್ರಂ
ಪ್ರೋಕ್ತಂ ಮಹೇಶೇನ ಮಹಾನುಭಾವಂ ।
ಶೃಣ್ವಂತಿ ಯೇ ಭಕ್ತಿಯುತಾ ಮನುಷ್ಯಾ
ಸ್ತೇ ಯಾಂತಿ ನೂನಂ ಪದಮಚ್ಯುತಸ್ಯ ॥ ೧೧೪ ॥

ಧನ್ಯಂ ಯಶಸ್ಯಮಾಯುಷ್ಯಂ ಆರೋಗ್ಯಾಭೀಷ್ಟಸಿದ್ಧಿದಂ ।
ಸ್ವರ್ಗಾಪವರ್ಗಸಂಪತ್ತಿಕಾರಣಂ ಪಾಪನಾಶನಂ ॥ ೧೧೫ ॥

ಭಕ್ತ್ಯಾ ಪಠಂತಿ ಯೇ ನಿತ್ಯಂ ಮಾನವಾ ವಿಷ್ಣುತತ್ಪರಾಃ ।
ನ ತೇಷಾಂ ಪುನರಾವೃತ್ತಿಃ ವಿಷ್ಣುಲೋಕಾತ್ಕಥಂಚನ ॥ ೧೧೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶ್ರೀ ವೃಂದಾವನ
ಮಾಹಾತ್ಮ್ಯೇ ತ್ರ್ಯಶೀತಿತಮೋಽಧ್ಯಾಯಃ

---

೧೧೩. ನಾನು ಕೂಡ ಆ ಯಮುನಾ ನದಿಯ ದಡದಲ್ಲಿರುವ ಶ್ರೀಕೃಷ್ಣನ ಸ್ಥಾನಕ್ಕೆ ನಿತ್ಯವೂ ಹೋಗುತ್ತೇನೆ.

೧೧೪. ಈ ಪರಮ ಪವಿತ್ರವಾದ ಚರಿತ್ರೆಯನ್ನು ಮಹಾದೇವನು ಹೇಳಿದನು. ಇದನ್ನು ಯಾರು ಭಕ್ತಿಯಿಂದ ಕೇಳುತ್ತಾರೆಯೋ ಅವರು ಅಚ್ಯುತನ ಪದವನ್ನು ಹೊಂದುತ್ತಾರೆ.

೧೧೫. ಇದು ಧನ್ಯತೆಯನ್ನು ಕೊಡುತ್ತದೆ. ಯಶಸ್ಸನ್ನೂ ಆಯುಷ್ಯವನ್ನೂ ಆರೋಗ್ಯವನ್ನೂ, ಇಷ್ಟಾರ್ಥವನ್ನೂ, ಸ್ವರ್ಗಮೋಕ್ಷ ಸಂಪತ್ತುಗಳನ್ನೂ ಕೊಡುತ್ತದೆ. ಪಾಪನಾಶಕವು

೧೧೬. ವಿಷ್ಣುತತ್ಪರರಾದ ಮಾನವರು ಭಕ್ತಿಯಿಂದ ಪಠಿಸಿದರೆ ಅವರು ವಿಷ್ಣು ಲೋಕವನ್ನು ಹೊಂದುತ್ತಾರೆ ಅಲ್ಲಿಂದ ಪುನರಾವೃತ್ತಿಯೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ವೃಂದಾವನ ಮಹಿಮೆಯಲ್ಲಿ
ಎಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಚತುರಶೀತಿತಮೋಽಧ್ಯಾಯಃ ॥



॥ ಋಷಯ ಊಚುಃ ॥

**ಸೂತಸೂತ ಮಹಾಭಾಗ ಲೋಮಹರ್ಷಣನಂದನ ।**
**ಕಥಾ ರಮ್ಯಾ ತ್ವಯಾ ಪ್ರೋಕ್ತಾ ಲೋಕಸ್ಯಾನಂದದಾಯಿನಿ ॥ ೧ ॥**

**ಶ್ರೀಕೃಷ್ಣಸ್ಯ ಮಹಾಭಾಗ ಚರಿತಂ ಮಹದದ್ಭುತಂ ।**
**ಶ್ರುತಂ ಸರ್ವಂ ತ್ವಯಾ ಪ್ರೋಕ್ತಂ ನಿವೃತ್ತಿಸ್ತೇನ ಚಾಭವತ್ ॥ ೨ ॥**

**ಅಹೋ ಶ್ರೀಕೃಷ್ಣಮಾಹಾತ್ಮ್ಯಂ ಭಕ್ತಾನಾಂ ಗತಿದಾಯಕಂ ।**
**ಯತಸ್ತೇನ ಮಹಾಭಾಗ ನಿವೃತ್ತಿಂ ಕೋನ್ವವಾಪ್ನುಯಾತ್ ॥ ೩ ॥**

**ಅತಃ ಪುನರಪಿ ಶ್ರೀಮತ್ಕೃಷ್ಣಸ್ಯ ಚರಿತಂ ಮಹತ್ ।**
**ಶ್ರೋತುಮಿಚ್ಛಾಮಹೇ ಚಾಸ್ಯ ವ್ರತದಾನಾರ್ಚನಾದಿಕಂ ॥ ೪ ॥**

---

### ಎಂಭತ್ತನಾಲ್ಕನೆಯ ಅಧ್ಯಾಯವು

೧. ಋಷಿಗಳು ಹೇಳಿದರು- ಲೋಮಹರ್ಷಣನ ಮಗನಾದ ಸೂತನೇ ಆನಂದವನ್ನುಂಟುಮಾಡುವ ಕಥೆಗಳನ್ನು ಬಹಳವಾಗಿ ಹೇಳಿದ್ದೀಯೆ.

೨. ಶ್ರೀಕೃಷ್ಣನ ಅದ್ಭುತವಾದ ಚರಿತ್ರೆಗಳನ್ನು ಕೇಳಿದೆನು. ಅದರಿಂದ ಸುಖಿಯಾದೆನು.

೩. ಶ್ರೀಕೃಷ್ಣನ ಮಹಿಮೆಯು ಭಕ್ತರಿಗೆ ಗತಿದಾಯಕವಾದುದು. ಅದರಿಂದ ಯಾವನು ತಾನೆ ಸುಖಿಯಾಗುವುದಿಲ್ಲ.

೪. ಆದ್ದರಿಂದ ಮತ್ತೆಯೂ ಶ್ರೀಕೃಷ್ಣನ ಚರಿತ್ರೆಯನ್ನು ಕೇಳಲು ಅಪೇಕ್ಷಿಸುತ್ತೇನೆ. ಅವನ ವ್ರತದಾನಾದಿಗಳನ್ನು ದಯವಿಟ್ಟು ಹೇಳು.

ಸ್ನಾನಂ ವಾಪಿ ಮಹಾಭಾಗ ಯಥಾ ಯೇನ ಕೃತಂ ಪುರಾ ।
ತತ್ಸರ್ವಂ ವಿಸ್ತರಾದ್ಬ್ರೂಹಿ ಯಥಾ ನೋ ನಿರ್ವೃತಿರ್ಭವೇತ್ ॥ ೫ ॥

॥ ಸೂತ ಉವಾಚ ॥

ಸಾಧು ಪೃಷ್ಟಂ ದ್ವಿಜಶ್ರೇಷ್ಠ ಲೋಕಾನಾಂ ತಾರಣಂ ಪರಂ ।
ಯೂಯಂ ಕೃತಾರ್ಥಾಃ ಕೃಷ್ಣಸ್ಯ ಭಕ್ತ್ಯಾನಾಂ ಪೂರ್ಣಮಾನಸಃ ॥ ೬ ॥

ಕೃಷ್ಣಸ್ಯ ಚರಿತಂ ಪುಣ್ಯಂ ಸಾಧೂನಾಂ ಹರ್ಷದಂ ಪರಂ ।
ಪ್ರವಕ್ಷ್ಯಾಮಿ ದ್ವಿಜಶ್ರೇಷ್ಠಾ ಮಹದಾಖ್ಯಾನಮದ್ಭುತಂ ॥ ೭ ॥

ಏಕದಾ ನಾರದೋ ಲೋಕಾನ್ಪರ್ಯಟನ್ಭಗವತ್ಪ್ರಿಯಃ ।
ಮಧುರಾಯಾಮಂಬರೀಷಂ ಕೃಷ್ಣಾರಾಧನಮಾನಸಂ ॥ ೮ ॥

ಮಹಾಭಾಗಂ ವ್ರತಪರಂ ದದರ್ಶ ಮುನಿಸತ್ತಮಃ ।
ಸಮಾಗತಂ ಮುನಿವರಂ ಸತ್ಕೃತ್ಯ ಮುನಿಸತ್ತಮಃ ।
ಭವಂತ ಇವ ಪಪ್ರಚ್ಛ ಶ್ರದ್ಧಯಾ ಹೃಷ್ಟಮಾನಸಃ ॥ ೯ ॥

---

೫. ಸ್ನಾನದ ವಿಷಯವನ್ನು ಹೇಳು. ಹಿಂದೆ ಯಾರಾದರೂ ಮಾಡಿದರೆ? ಹೇಗೆ ಮಾಡಿದರು? ಅದೆಲ್ಲವನ್ನೂ ವಿಸ್ತಾರವಾಗಿ ಹೇಳು. ಅದರಿಂದ ಸಂತೋಷ ಪಡುತ್ತೇನೆ.

೬. ಸೂತನು ಹೇಳಿದನು– ಎಲೈ ಬ್ರಾಹ್ಮಣರಿರಾ ! ನೀವು ಕೇಳಿದುದು ಚೆನ್ನಾಗಿದೆ. ಇದು ಲೋಕಕ್ಕೆ ಪಾಪಹರವು. ನೀವು ಕೃಷ್ಣನಲ್ಲಿ ಪೂರ್ಣಭಕ್ತಿಯಿಟ್ಟು ಇರುವುದರಿಂದ ಕೃತಾರ್ಥರು.

೭–೯. ಸಾಧುಗಳಿಗೆ ಹರ್ಷವನ್ನುಂಟುಮಾಡುವ ಪುಣ್ಯಪ್ರದವಾದ ಕೃಷ್ಣನ ಚರಿತ್ರೆಯು ಅದ್ಭುತವಾದುದು. ಹೇಳುತ್ತೇನೆ ಕೇಳಿರಿ. ಒಂದು ಸಾರಿ ಭಗವತ್ಪ್ರಿಯನಾದ ನಾರದನು ಲೋಕಗಳನ್ನು ಸುತ್ತುತ್ತಾ ಮಧುರೆಯಲ್ಲಿ ಕೃಷ್ಣನ ಆರಾಧನೆಯಲ್ಲಿ ಆಸಕ್ತನಾಗಿರುವ, ವ್ರತವನ್ನು ಕೈಗೊಂಡಿರುವ, ಅಂಬರೀಷನನ್ನು ನೋಡಿದನು. ಆ ಅಂಬರೀಷನು ನಾರದನನ್ನು ಕಂಡು ಸತ್ಕರಿಸಿ ನಿಮ್ಮಂತೆ ಶ್ರದ್ಧೆಯಿಂದ ಕೇಳಿದನು

॥ ಅಂಬರೀಷ ಉವಾಚ ॥

ಯನ್ಮಾಹುಃ ಪರಮಂ ಬ್ರಹ್ಮ ವೇದವಾದಿಭಿರುಚ್ಯತೇ ।
ಸ ದೇವಃ ಪುಂಡರೀಕಾಕ್ಷಃ ಸ್ವಯಂ ನಾರಾಯಣಃ ಪರಃ ॥ ೧೦ ॥

ಯೋ ಮೂರ್ತೌ ಮೂರ್ತಿಮಾನೀಶೋ ವ್ಯಕ್ತಾವ್ಯಕ್ತಸ್ಸನಾತನಃ ।
ಸರ್ವಭೂತಮಯೋ ಚಿಂತ್ಯೋ ಧ್ಯಾತವ್ಯಸ್ಸ ಕಥಂ ಹರಿಃ ॥ ೧೧ ॥

ಯಸ್ಮಿನ್ಸರ್ವಮಿದಂ ವಿಶ್ವಮೋತಪ್ರೋತಂ ಪ್ರತಿಷ್ಠಿತಂ ।
ಅವ್ಯಕ್ತಮೇಕಂ ಪರಮಂ ಪರಮಾತ್ಮೇತಿ ವಿಶ್ರುತಂ ॥ ೧೨ ॥

ಯತೋ ಜನ್ಮಾದಿಜಗತೋ ಯೋ ನಿರ್ಮಾಯ ಸ್ವಯಂಭುವಂ ।
ದದೌ ತಸ್ಮೈ ಚ ನಿಗಮಾನಾತ್ಮನ್ಯೇವ ವ್ಯವಸ್ಥಿತಾನ್ ॥ ೧೩ ॥

ಕಥಮಾರಾಧ್ಯತೇ ಸೋಽಯಂ ಸಮಸ್ತಪುರುಷಾರ್ಥದಃ ।
ಯೋಗಿನಾಮಪಿ ದುರ್ಗಮ್ಯಃ ತದೇತತ್ಕೃಪಯಾ ವದ ॥ ೧೪ ॥

---

೧೦. ಅಂಬರೀಷನು ಹೇಳಿದನು- ವೇದವಾದಿಗಳು ಯಾವುದನ್ನು ಬ್ರಹ್ಮವೆಂದೆನ್ನುತ್ತಾರೋ ಅವನೇ ಪುಂಡರೀಕಾಕ್ಷನಾದ ನಾರಾಯಣನು. ಅವನೇ ಪರಸ್ವರೂಪನು.

೧೧. ಯಾವನು ಮೂರ್ತಿಯಾದರೂ ಅಮೂರ್ತಿಯೋ, ಕಾಣುತ್ತಿದ್ದರೂ ತಿಳಿಯಲಸಾಧ್ಯನೋ ಮತ್ತು ಸರ್ವಭೂತಗಳಲ್ಲಿಯೂ ಇದ್ದಾನೆಯೋ ಆ ಹರಿಯನ್ನು ಹೇಗೆ ಧ್ಯಾನಮಾಡಬೇಕು ?

೧೨. ಆವನಲ್ಲಿ ಈಪ್ರಪಂಚವು ಹಾಸುಹೊಕ್ಕುಗಳಾಗಿವೆಯೋ ಆವನು ಅವ್ಯಕ್ತನಾಗಿಯೂ, ಏಕನಾಗಿಯೂ, ಪರನಾಗಿಯೂ ಇದ್ದಾನೆಯೋ ಆವನು ಆತ್ಮನೆಂಬುದಾಗಿ ಹೇಳಲ್ಪಟ್ಟಿರುತ್ತಾನೆಯೋ ಆ ಕೃಷ್ಣನನ್ನು ಹೇಗೆ ಧ್ಯಾನಮಾಡುವುದು ?

೧೩-೧೪. ಯಾವನು ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೋ, ಯಾವನು ಬ್ರಹ್ಮನನ್ನು ನಿರ್ಮಿಸಿ ಅವನಿಗೆ ತನ್ನಲ್ಲಿದ್ದ ವೇದಗಳನ್ನು ಕೊಟ್ಟನೋ, ಯಾವನು ಯೋಗಿಗಳಿಗೂ ತಿಳಿಯಲಸಾಧ್ಯನೋ, ಅಂತಹ ಸ್ವಾಮಿಯನ್ನು ಕೃಪೆಯಿಂದ ತಿಳಿಸು.

ಅನಾರಾಧಿತಗೋವಿಂದೋ ನ ವಿಂದತಿ ಯತೋಽಭಯಂ ।
ನ ತಪೋ ಯಜ್ಞದಾನಾನಾಂ ಲಭತೇ ಫಲಮುತ್ತಮಂ ॥ ೧೫ ॥

ಅನಾಸ್ವಾದಿತಗೋವಿಂದಪಾದಾಂಬುಜರಸೋ ನರಃ ।
ಮನೋರಥಕಥಾನೀತಂ ಕಥಮಾಕಲಯೇತ್ಫಲಂ ॥ ೧೬ ॥

ಹರೇರಾರಾಧನಂ ಹಿತ್ವಾ ದುರಿತೌಘನಿವಾರಣಂ ।
ನಾನ್ಯತ್ಪಶ್ಯಾಮಿ ಜನ್ತೂನಾಂ ಪ್ರಾಯಶ್ಚಿತ್ತಂ ಪರಂ ಮುನೇ ॥ ೧೭ ॥

ಯದ್ಭ್ರೂನರ್ತನವರ್ತಿನ್ಯಃ ಶ್ರೂಯನ್ತೇ ಸಿದ್ಧಯೋಽಖಿಲಾಃ ।
ಕಥಮಾರಾಧ್ಯತೇ ಸೋಽಯಂ ಕೇಶವಃ ಕ್ಲೇಶನಾಶನಃ ॥ ೧೮ ॥

ಉಪಾಸ್ಯತೇ ಸ ಭಗವಾನ್ಸರ್ವೈರಾರಾಧ್ಯತೇ ಕಥಂ ।
ಸ್ತ್ರೀಭಿಶ್ಚ ಸರ್ವಮೇತನ್ಮೇ ಹಿತಾಯ ಜಗತಾಂವದ ॥ ೧೯ ॥

---

೧೫. ಗೋವಿಂದನನ್ನು ಆರಾಧಿಸದವನಿಗೆ ಭಯದಿಂದ ಮುಕ್ತಿಯಿಲ್ಲ. ತಪಸ್ಸು, ದಾನ, ಯಜ್ಞಗಳ ಫಲವನ್ನೂ ಹೊಂದುವುದೇ ಇಲ್ಲ.

೧೬. ಗೋವಿಂದನ ಪಾದಕಮಲಗಳನ್ನು ಆರಾಧಿಸದ ನರನು ಮನಸ್ಸಿನಲ್ಲಿರುವ ಫಲಗಳನ್ನು ಹೊಂದಲು ಸಾಧ್ಯನಾಗಲಾರನು.

೧೭. ಪಾಪಶಾಮಕವಾದ ಹರಿಯ ಆರಾಧನೆಯನ್ನು ಬಿಟ್ಟು ಜಂತುಗಳಿಗೆ ಪಾಪನಾಶಕ್ಕೆ ಬೇರೆ ಪ್ರಾಯಶ್ಚಿತ್ತವನ್ನು ತಿಳಿಯೆನು.

೧೮. ಅಣಿಮಾದ್ಯಷ್ಟಸಿದ್ಧಿಗಳೂ ಕೂಡ ಯಾವ ಸ್ವಾಮಿಯ ಹುಬ್ಬಿನ ಕುಣಿತದಂತೆ ನಡೆಯುತ್ತವೆಯೋ ಅಂತಹ ಕ್ಲೇಶನಾಶಕವಾದ ಗೋವಿಂದನನ್ನು ಹೇಗೆ ಆರಾಧಿಸುವುದು?

೧೯. ಹೆಂಗಸರೂ, ಗಂಡಸರೂ ಎಲ್ಲರೂ ಆ ಭಗವಂತನನ್ನು ಹೇಗೆ ಆರಾಧಿಸಬೇಕು? ಹೇಗೆ ಉಪಾಸನೆ ಮಾಡಬೇಕು? ಜಗತ್ತಿನ ಹಿತಕ್ಕೋಸ್ಕರ ಎಲ್ಲವನ್ನೂ ನನಗೆ ಹೇಳು.

ಭಕ್ತಪ್ರಿಯೋಽಸೌ ಭಗವಾನ್ಕಯಾ ಭಕ್ತ್ಯಾ ಪ್ರಸೀದತಿ ।
ಕಥಂ ಭಕ್ತಿರ್ಭವೇದಸ್ಮಿನ್ಸರ್ವೈರಾರಾಧ್ಯತೇ ಕಥಂ ॥ ೨೦ ॥

ವೈಷ್ಣವೋಽಸಿ ಹರೇಸ್ತಸ್ಯ ಪ್ರಿಯೋಽಸಿ ಪರಮಾರ್ಥವಿತ್ ।
ತೇನ ತ್ವಾಮೇವ ಪೃಚ್ಛಾಮಿ ಬ್ರಹ್ಮನ್ಬ್ರಹ್ಮವಿದುತ್ತಮ ॥ ೨೧ ॥

ಶ್ರೋತಾರಮಥ ವಕ್ತಾರಂ ಪ್ರಷ್ಟಾರಂ ಪುರುಷಂ ಹರೇಃ ।
ಪ್ರಶ್ನಃ ಪುನಾತಿ ಕೃಷ್ಣಸ್ಯ ತದಂಘ್ರಿಸಲಿಲಂ ಯಥಾ ॥ ೨೨ ॥

ದುರ್ಲಭೋ ಮಾನುಷೋ ದೇಹೋ ದೇಹಿನಾಂ ಕ್ಷಣಭಂಗುರಃ ।
ತತ್ರಾಪಿ ದುರ್ಲಭಂ ಮನ್ಯೇ ವೈಕುಂಠಪ್ರಿಯದರ್ಶನಂ ॥ ೨೩ ॥

ಸಂಸಾರೇಽಸ್ಮಿನ್ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಂ ।
ಯಸ್ಮಾದವಾಪ್ಯತೇ ಸರ್ವಂ ಪುರುಷಾರ್ಥಚತುಷ್ಟಯಂ ॥ ೨೪ ॥

---

೨೦. ಭಕ್ತಪ್ರಿಯನಾದ ಆ ಸ್ವಾಮಿಯು ಯಾವ ಭಕ್ತಿಯಿಂದ ಪ್ರಸನ್ನನಾಗುತ್ತಾನೆ? ಆ ಸ್ವಾಮಿಯಲ್ಲಿ ಹೇಗೆ ಭಕ್ತಿಯುಂಟಾಗುತ್ತದೆ? ಎಲ್ಲರೂ ಆತನನ್ನು ಆರಾಧಿಸುವುದು ಹೇಗೆ?

೨೧. ಎಲೈ ಬ್ರಹ್ಮನನ್ನು ತಿಳಿದಿರುವ ಬ್ರಾಹ್ಮಣನೇ: ನೀನು ವೈಷ್ಣವನಾಗಿದ್ದೀಯೆ. ಆದುದರಿಂದ ನಿನ್ನನ್ನು ಕೇಳುತ್ತೇನೆ.

೨೨. ಹರಿಯ ಸಂಬಂಧವಾದ ಪ್ರಶ್ನೆಯು ಕೇಳುವವನನ್ನೂ, ಹೇಳುವವನನ್ನೂ ಪ್ರಶ್ನೆಮಾಡುವವನನ್ನೂ, ಕೂಡ ಆ ಸ್ವಾಮಿಯ ಪಾದೋದಕವು ಪವಿತ್ರವನ್ನಾಗಿ ಮಾಡುವಂತೆ, ಪವಿತ್ರವನ್ನಾಗಿ ಮಾಡುತ್ತದೆ.

೨೩. ಕ್ಷಣಕಾಲದಲ್ಲಿ ನಾಶವಾಗುವ ಈ ಮಾನುಷ ದೇಹವು ಸಿಕ್ಕುವುದು ದುರ್ಲಭವು. ಆ ಮನುಷ್ಯ ದೇಹದಲ್ಲಿಯೂ ಕೃಷ್ಣನ ದರ್ಶನವು ಬಹು ಕಷ್ಟವಾದುದು.

೨೪. ಈ ಸಂಸಾರದಲ್ಲಿ ಸಾಧುಸಂಗವು ಒಂದು ಕ್ಷಣಕಾಲ ಸಿಕ್ಕಿದರೂ ಕೂಡ ಅದೇ ಒಂದು ನಿಧಿಯು. ಆದರಿಂದ ಚತುರ್ವಿಧಪುರುಷಾರ್ಥಗಳೂ ಸಿಕ್ಕುತ್ತವೆ.

ಭಗವನ್ಭವತೋ ಯಾತ್ರಾ ಸ್ವಸ್ತಯೇ ಸರ್ವದೇಹಿನಾಂ ।
ಬಾಲಾನಾಂ ಚ ಯಥಾ ಪಿತ್ರೋರುತ್ತಮಶ್ಲೋಕವರ್ತ್ಮನಾಂ ॥ ೨೫ ॥

ಭೂತಾನಾಂ ದೇವಚರಿತಂ ದುಃಖಾಯ ಚ ಸುಖಾಯ ಚ ।
ಸುಖಾಯೈವ ಹಿ ಸಾಧೂನಾಂ ತ್ವಾದೃಶಾಮಚ್ಯುತಾತ್ಮನಾಂ ॥ ೨೬ ॥

ಭಜಂತಿ ಯೇ ಯಥಾ ದೇವಾನ್ದೇವಾ ಅಪಿ ತಥೈವ ತಾನ್ ।
ಛಾಯೇವ ಕರ್ಮಸಚಿವಾಃ ಸಾಧವೋ ದೀನವತ್ಸಲಾಃ ॥ ೨೭ ॥

ತಸ್ಮಾತ್ತ್ವಂ ಭಗವನ್ಮಹ್ಯಂ ವೈಷ್ಣವಂ ಧರ್ಮಮಾದಿಶ ।
ಯಸ್ಯೋಪದೇಶದಾನೇನ ಲಭತೇ ವೇದಜಂ ಫಲಂ ॥ ೨೮ ॥

॥ ನಾರದ ಉವಾಚ ॥

ಸಾಧುಪೃಷ್ಟಂ ಮಹೀಪಾಲ ವಿಷ್ಣುಭಕ್ತಿಮತಾ ತ್ವಯಾ ।
ಜಾನತಾ ಪರಮಂ ಧರ್ಮಮೇಕಂ ಮಾಧವಸೇವನಂ ॥ ೨೯ ॥

---

೨೫. ಸ್ವಾಮಿ ಯಶಸ್ವಿಗಳಾದ ಮಕ್ಕಳಿಗೆ ತಾಯಿತಂದೆಗಳ ಬಳಿಗೆ ಹೋಗುವ ಯಾತ್ರೆಯು ಹೇಗೆ ಶ್ರೇಯಸ್ಕರವೋ ಹಾಗೆ ನಿನ್ನ ಬಳಿಗೆ ಬರುವ ಯಾತ್ರೆಯು ಎಲ್ಲ ದೇಹಿಗಳಿಗೂ ಒಳ್ಳೆಯದನ್ನುಂಟುಮಾಡುವುದು.

೨೬. ದೇವತೆಗಳ ಚರಿತ್ರೆಯು ಪ್ರಾಣಿಗಳಿಗೆ ದುಃಖವನ್ನೂ, ಸುಖವನ್ನೂ, ಉಂಟುಮಾಡುತ್ತದೆ. ನಿನ್ನಂತಹ ಸಾಧುಗಳ, ಅದರಲ್ಲೂ ಅಚ್ಯುತನ ಭಕ್ತರಾದವರ ಚರಿತ್ರೆಯು ಸುಖಕ್ಕೋಸ್ಕರಲೇ ಆಗುತ್ತದೆ.

೨೭. ಯಾರು ದೇವರನ್ನು ಭಜಿಸುತ್ತಾರೆಯೋ ಆ ದೇವರು ಅವರನ್ನು ಭಜಿಸುತ್ತಾನೆ. ಇದು ತನ್ನ ನೆರಳು ತನ್ನನ್ನು ಸೇವಿಸಿಸದಂತಿರುವುದು. ಅವರು ಕರ್ಮಕ್ಕೆ ಅಧೀನರು. ಸಾಧುಗಳು ಹಾಗಲ್ಲ. ಯಾವ ಉಪಕಾರಳನ್ನೂ ಮಾಡಲಾರದ ದೀನರ ಮೇಲೆ ಪ್ರೀತಿಯುಳ್ಳವರು.

೨೮. ಆದ್ದರಿಂದ ಸ್ವಾಮಿ ನೀನು ನನಗೆ ವೈಷ್ಣವಧರ್ಮವನ್ನುಪದೇಶಿಸು ಅದನ್ನು ಉಪದೇಶಮಾಡಿದರೆ ವೇದವನ್ನು ಉವದೇಶಮಾಡಿದ ಫಲ ಬರುತ್ತದೆ.

೨೯. ನಾರದನು ಹೇಳಿದನು- ವಿಷ್ಣುಭಕ್ತಿಯುಳ್ಳ ನೀನು ಚೆನ್ನಾಗಿ ಪ್ರಶ್ನಿಸಿದೆ. ಮಾಧವನ ಸೇವೆಯೊಂದೇ ಉತ್ತಮವೆಂದು ನೀನು ತಿಳಿದಿದ್ದೀಯೆ.

**ಯಸ್ಮಿನ್ನಾರಾಧಿತೇ ವಿಷ್ಣೌ ವಿಶ್ವಮಾರಾಧಿತಂ ಭವೇತ್ ।**
**ತುಷ್ಟಂ ಚ ಸಕಲಂ ತುಷ್ಟೇ ಸರ್ವದೇವಮಯೇ ಹರೌ** ॥ ೩೦ ॥

**ಯಸ್ಯ ಸ್ಮರಣಮಾತ್ರೇಣ ಮಹಾಪಾತಕಸಂಹತಿಃ ।**
**ತತ್ಕ್ಷಣಾತ್ಪ್ರಸಮಾಯಾತಿ ಸ ಸೇವ್ಯೋ ಹರಿರೇವ ಹಿ** ॥ ೩೧ ॥

**ಕೋನುರಾಜನ್ನಿಂದ್ರಿಯವಾನ್ಮುಕುಂದ ಚರಣಾಂಬುಜಂ ।**
**ನ ಭಜೇತ್ಸರ್ವತೋ ಮೃತ್ಯುರುಪಾಸ್ಯಮೃಷಿದೈವತೈಃ** ॥ ೩೨ ॥

**ಶ್ರುತೋನುಪಠಿತೋ ಧ್ಯಾತ ಆದೃತಶ್ಚಾನುಮೋದಿತಃ ।**
**ಸದ್ಯಃ ಪುನಾತಿ ಸದ್ಧರ್ಮೋ ವೀರವಿಶ್ವದ್ರುಹೋಽಪಿ ಹಿ** ॥ ೩೩ ॥

**ಯೋಽಹಂ ಕಾರಣಕಾರ್ಯಾದಿ ಕಾರಣಸ್ಯಾಪಿ ಕಾರಣಂ ।**
**ಅನನ್ಯಕಾರಣಂ ಯೋಗೀ ಜಗಜ್ಜೀವೋ ಜಗನ್ಮಯಃ** ॥ ೩೪ ॥

---

೩೦. ವಿಷ್ಣುವನ್ನಾರಾಧಿಸಿದರೆ ಪ್ರಪಂಚವನ್ನೇ ಆರಾಧಿಸಿದಂತೆ. ಸರ್ವದೇವ ಸ್ವರೂಪನಾದ ಆ ಹರಿಯು ಸಂತುಷ್ಟನಾದರೆ ಸಮಸ್ತವೂ ಸಂತುಷ್ಟವಾದಂತೆಯೇ.

೩೧. ಯಾವನನ್ನು ಸ್ಮರಿಸುವುದರಿಂದ ಮಹಾಪಾಪಗಳ ಗುಂಪೇ ನಾಶವಾಗುತ್ತದೆಯೋ ಅಂತಹ ಹರಿಯನ್ನು ಸೇವಿಸಬೇಕು.

೩೨. ಎಲ್ಲಾ ಕಡೆಯಿಂದಲೂ, ಮೃತ್ಯುವಿನಿಂದ ಆವರಿಸಲ್ಪಟ್ಟ ಯಾವನು ಋಷಿಗಳು, ದೇವತೆಗಳು, ಇವರಿಂದ ಸೇವಿಸಲ್ಪಟ್ಟ ಮುಕುಂದನ ಪಾದಪದ್ಮವನ್ನು ಬುದ್ಧಿ ಪೂರ್ವಕವಾಗಿ ಭಜಿಸುವುದಿಲ್ಲ?

೩೩ ಸದ್ಧರ್ಮವನ್ನು ಕೇಳಿದರೂ. ಓದಿದರೂ, ಧ್ಯಾನಮಾಡಿದರೂ, ಆದರಣೆ ಮಾಡಿದರೂ, ಒಪ್ಪಿಕೊಂಡರೂ, ಅವನು ಪ್ರಪಂಚಕ್ಕೆಲ್ಲಾ ದ್ರೋಹಮಾಡಿದ್ದರೂ ಅವನನ್ನು ಒಡನೆಯೇ ಪವಿತ್ರನನ್ನಾಗಿ ಮಾಡುತ್ತದೆ.

೩೪. ಯಾವನು ಕಾರಣ ಸ್ವರೂಪನೋ, ಮತ್ತು ಕಾರ್ಯಸ್ವರೂಪನೋ ಕಾರಣಕ್ಕೂ ಕಾರಣನೋ, ಅವನಿಗೆ ಬೇರೆ ಕಾರಣವಿಲ್ಲವೋ, ಯೋಗಿಯೋ, ಜಗಜ್ಜೀವನೋ, ಮತ್ತು ಜಗನ್ಮಯನೋ ಅಂತಹ ಹರಿಯನ್ನು ಧ್ಯಾನಿಸಬೇಕು.

ಸಮ್ಯಗೇತದ್ವ್ಯವಸಿತಂ ಭವತಾ ಪುರುಷರ್ಷಭ ।
ಯತ್ಪೃಚ್ಛಸೇ ಭಾವಗತಾನ್ಧರ್ಮಾನ್ಸ್ತ್ವಂ ವಿಶ್ವಭಾವನಾನ್ ॥ ೩೫ ॥

ಪ್ರಸಂಗೇನ ಸತಾಮಾತ್ಮಮನಃ ಕರ್ಣರಸಾಯನಾ ।
ಭವಂತಿ ಕೀರ್ತನೀಯಸ್ಯ ಕಥಾಃ ಕೃಷ್ಣಸ್ಯ ನಿರ್ಮಲಾಃ ॥ ೩೬ ॥

ಭಾವಸಾಧ್ಯಸ್ತ್ವಯಂ ದೇವಃ ಸ್ವಯಂ ಜಾನಾತಿ ತದ್ಭವಾನ್ ।
ತಥಾಪಿ ವಕ್ಷ್ಯೇ ಜಗತಾಂ ಹಿತಾಯ ತವ ಗೌರವಾತ್ ॥ ೩೭ ॥

ಯದಾಹುಃ ಪರಮಂ ಬ್ರಹ್ಮ ಪ್ರಧಾನಂ ಪುರುಷಾತ್ಪರಂ ।
ಯನ್ಮಾಯಯಾ ಸರ್ವಮಿದಂ ವಿಶ್ವಮಸ್ತೀತಿ ಸೋಽಚ್ಯುತಃ ॥ ೩೮ ॥

ಪುತ್ರಾನ್ಕಳತ್ರಂ ದೀರ್ಘಾಯೂ ರಾಜ್ಯಂ ಸ್ವರ್ಗಾಪವರ್ಗಕಂ ।
ಸದವಾರೇಪ್ಸಿತಂ ಸರ್ವಂ ಭಕ್ತ್ಯಾ ಸಂಪೂಜಿತೋಽಚ್ಯುತಃ ॥ ೩೯ ॥

---

೩೫. ನೀನು ಪ್ರಪಂಚವೇ ನಂಬಿರುವ ಭಾಗವತ ಧರ್ಮಗಳನ್ನು ಕೇಳುತ್ತಿರುವುದು ಬಹಳ ಚೆನ್ನಾಗಿರುವುದು.

೩೬. ಕೃಷ್ಣನ ನಿರ್ಮಲವಾದ ಕಥೆಗಳು ಸತ್ಪುರುಷರಿಗೆ ಮನಸ್ಸಿಗೂ, ಕಿವಿಗೂ ರಸಾಯನವಾಗಿರುತ್ತದೆ.

೩೭. ಆ ದೇವನು ಭಾವದಿಂದ ತಿಳಿಯಲು ಸಾಧ್ಯನೆಂಬುದನ್ನು ನೀನು ಬಲ್ಲೆ. ಆದರೂ ಜಗತ್ತಿನ ಹಿತಕ್ಕೋಸ್ಕರಲೂ ನಿನ್ನಲ್ಲಿರುವ ಗೌರವದಿಂದಲೂ ಹೇಳುತ್ತೇನೆ

೩೮. ಯಾವನನ್ನು ಪರಬ್ರಹ್ಮನನ್ನಾಗಿಯೂ, ಪ್ರಧಾನನನ್ನಾಗಿಯೂ, ಪುರುಷನಿಗಿಂತಲೂ, ಬೇರೆಯವನನ್ನಾಗಿಯೂ ಹೇಳುತ್ತಾರೋ ಯಾವನ ಮಾಯೆಯಿಂದ ಈ ವಿಶ್ವವು ವ್ಯಾಪ್ತವಾಗಿದೆಯೋ ಅವನೇ ಈ ಅಚ್ಯುತನು.

೩೯. ಭಕ್ತಿಯಿಂದ ಅಚ್ಯುತನನ್ನು ಪೂಜಿಸಿದರೆ ಅವನು ಮಕ್ಕಳನ್ನೂ, ಹೆಂಡಿರನ್ನೂ ದೀರ್ಘಾಯುಸ್ಸನ್ನೂ, ರಾಜ್ಯವನ್ನೂ, ಸ್ವರ್ಗವನ್ನೂ ಮೋದವನ್ನೂ, ಕೇಳಿದುದೆಲ್ಲವನ್ನೂ ಕೊಡುತ್ತಾನೆ.

ಕರ್ಮಣಾ ಮನಸಾ ವಾಚಾ ತತ್ಪರಾ ಯೇ ಹಿ ಮಾನವಾಃ ।
ತೇಷಾಂ ವ್ರತಾನಿ ವಕ್ಷ್ಯಾಮಿ ಪ್ರೀತಯೇ ತವ ಭೂಪತೇ ॥ ೪೦ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಮಕಲ್ಕತಾ ।
ಏತಾನಿ ಮಾನಸಾನ್ಯಾಹುಃ ವ್ರತಾನಿ ಹರಿತುಷ್ಟಯೇ ॥ ೪೧ ॥

ಏಕಭುಕ್ತಂ ತಥಾ ನಕ್ತಮುಪವಾಸಮಯಾಚಿತಂ ।
ಇತ್ಯೇವಂ ಕಾಯಿಕಂ ಪುಂಸಾಂ ವ್ರತಮುಕ್ತಂ ನರೇಶ್ವರ ॥ ೪೨ ॥

ವೇದಸ್ಯಾಧ್ಯಯನಂ ವಿಷ್ಣೋಃ ಕೀರ್ತನಂ ಸತ್ಯಭಾಷಣಂ ।
ಅಪೈಶುನ್ಯಮಿದಂ ರಾಜನ್ವಾಚಿಕಂ ವ್ರತಮುಚ್ಯತೇ ॥ ೪೩ ॥

ಚಕ್ರಾಯುಧಸ್ಯ ನಾಮಾನಿ ಸದಾ ಸರ್ವತ್ರ ಕೀರ್ತಯೇತ್ ।
ನಾಽಶೌಚಂ ಕೀರ್ತನೇ ತಸ್ಯ ಸದಾ ಶುದ್ಧಿವಿಧಾಯಿನಃ ॥ ೪೪ ॥

---

೪೦. ಮನೋವಾಕ್ಕಾಯ ಕರ್ಮಗಳಿಂದ ಆ ಸ್ವಾಮಿಯನ್ನು ಯಾರು ಪೂಜಿಸುತ್ತಾರೆಯೋ, ಅಂತಹವರು ಮಾಡುವ ವ್ರತವನ್ನು ನಿನ್ನ ಪ್ರೀತಿಗೆ ಹೇಳುತ್ತೇನೆ ಕೇಳು.

೪೧. ಅಹಿಂಸೆ ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಕಲ್ಕತೆ, ಇವು ಹರಿಯನ್ನು ತುಷ್ಟಿಮಾಡುವ ಮಾನಸ ವ್ರತಗಳೆಂದು ಹೇಳುತ್ತಾರೆ

೪೨. ಒಪ್ಪತ್ತು ಊಟ, ಉಪವಾಸ, ನಕ್ತ ಇನ್ನೊಬ್ಬರನ್ನು ಕೇಳದಿರುವುದು ಇವು ಮನುಷ್ಯರಿಗೆ ಕಾಯಿಕವ್ರತಗಳು.

೪೩. ವೇದಾಧ್ಯಯನ, ಹರಿಕೀರ್ತನ, ಸತ್ಯವಾಡುವುದು, ಚಾಡಿಹೇಳದಿರುವುದು ಇವು ವಾಚಿಕವಾದ ವ್ರತಗಳು.

೪೪. ಹರಿಯ ನಾಮಗಳನ್ನು ಎಲ್ಲಾ ಕಡೆಗಳಲ್ಲೂ, ಯಾವಾಗಲೂ ಹೇಳಬಹುದು. ಯಾವಾಗಲೂ ಶುದ್ಧಿಯನ್ನು ಮಾಡುವ ಆವನ ಕೀರ್ತನೆಯಲ್ಲಿ ಅಶುಚಿತ್ವವೆಂಬುದೇ ಇಲ್ಲ.

ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ ।
ವಿಷ್ಣುರಾರಾಧ್ಯತೇ ಪನ್ಥಾಃ ಸೋಽಯಂ ತತ್ತೋಷಕಾರಣಂ ॥ ೪೫ ॥

ಪತಿರೂಪೋ ಹಿತಾಚಾರ್ಯೈಃ ಮನೋವಾಕ್ಕಾಯ ಸಂಯುಮ್ಯೈಃ ।
ವ್ರತೈರಾರಾಧ್ಯತೇ ಸ್ತ್ರೀಭಿಃ ವಾಸುದೇವೋ ದಯಾನಿಧಿಃ ॥ ೪೬ ॥

ಸ್ವಾಗಮೋಕ್ತೇನ ಮಾರ್ಗೇಣ ಸ್ತ್ರೀಶೂದ್ರೈರಪಿ ಪೂಜನಂ ।
ಕರ್ತವ್ಯಂ ಕೃಷ್ಣಚಂದ್ರಸ್ಯ ದ್ವಿಜಾತಿವರರೂಪಿಣಃ ॥ ೪೭ ॥

ತ್ರಯೋ ವರ್ಣಾಸ್ತು ವೇದೋಕ್ತಮಾರ್ಗಾರಾಧನ ತತ್ಪರಾಃ ।
ಸ್ತ್ರೀಶೂದ್ರಾದಯ ಏವ ಸ್ಯುಃ ನಾಮ್ನಾರಾಧನತತ್ಪರಾಃ ॥ ೪೮ ॥

ನ ಪೂಜನೈರ್ನ ಯಜನೈರ್ನ ವ್ರತೈರಪಿ ಮಾಧವಃ ।
ತುಷ್ಯತೇ ಕೇವಲಂ ಭಕ್ತಿಪ್ರಿಯೋಽಸೌ ಸಮುದಾಹೃತಃ ॥ ೪೯ ॥

---

೪೫. ವರ್ಣ, ಆಶ್ರಮ, ಆಚಾರಗಳನ್ನುಳ್ಳ ಮನುಷ್ಯನು ಪರಮಪುರುಷನಾದ ವಿಷ್ಣುವನ್ನು ಆರಾಧಿಸಬೇಕು. ಈ ದಾರಿಯೇ ಸಂತೋಷಕ್ಕೆ ಕಾರಣವು.

೪೬. ಸ್ತ್ರೀಯರು ಮನೋವಾಕ್ಕಾಯಗಳಿಂದ ಹಿತವಾದ ಆಚಾರದಿಂದ ಪತಿಯ ರೂಪವನ್ನು ಹೊಂದಿರುವ ವಾಸುದೇವನನ್ನು ಆರಾಧಿಸುತ್ತಾರೆ.

೪೭. ಶೂದ್ರರೂ, ಹೆಂಗಸರೂ, ತಮ್ಮ ಮತದ ರೀತಿಯಂತೆ ಕೃಷ್ಣನ ಪೂಜೆಯನ್ನು ಮಾಡಬೇಕು.

೪೮. ಬ್ರಹ್ಮ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣಗಳವರು ವೇದೋಕ್ತ ರೀತಿಯಲ್ಲಿ ಸ್ವಾಮಿಯನ್ನು ಪೂಜಿಸಬೇಕು. ಹೆಂಗಸರು ಶೂದ್ರರುಗಳು ಹೆಸರನ್ನು ಹೇಳುತ್ತ ಮಾತ್ರ ಪೂಜಿಸಬೇಕು.

೪೯. ಪೂಜೆ, ಯಾಗ, ವ್ರತಗಳೊಂದರಿಂದಲೂ ಮಾಧವನಿಗೆ ಸಂತೋಷವಾಗುವುದಿಲ್ಲ. ಅವನು ಭಕ್ತಿಪ್ರಿಯನಾದುದರಿಂದ ಅದೊಂದರಿಂದ ಮಾತ್ರ ಸ್ವಾಧೀನನಾಗತಕ್ಕವನು.

ಸ್ತ್ರೀಣಾಂ ಪತಿವ್ರತಾನಾಂ ತು ಪತಿರೇವ ಹಿ ದೈವತಂ ।
ಸ ತು ಪೂಜ್ಯೋ ವಿಷ್ಣುಭಕ್ತ್ಯಾ ಮನೋವಾಕ್ಕಾಯಕರ್ಮಭಿಃ ॥ ೫೦ ॥

ಸ್ತ್ರೀಣಾಮಥಾಧಿಕತಯಾ ವಿಷ್ಣೋರಾರಾಧನಾದಿಕಂ ।
ಪತಿಪ್ರಿಯರತಾನಾಂ ಚ ಶ್ರುತಿರೇಷಾ ಸನಾತನೀ ॥ ೫೧ ॥

ಶೂದ್ರಾಣಾಂ ಚೈವ ಭವತಿ ನಾಮ್ನಾ ವೈ ದೇವತಾರ್ಚನಂ ।
ಸರ್ವೇ ಚಾಗಮಮಾರ್ಗೇಣ ಕುರ್ಯುರ್ವೇದಾನುಸಾರಿಣಃ ॥ ೫೨ ॥

ಪಿಂಡಗ್ರಹಣಧರ್ಮೇಣ ಯದಸ್ಯ ವಿಹಿತಂ ವ್ರತಂ ಃ
ತತ್ತದೇವಾಚರೇದ್ಯಸ್ತು ತೇನ ತುಷ್ಯತಿ ಕೇಶವಃ ॥ ೫೩ ॥

ಹವಿಷಾಗ್ನೌ ಜಲೇ ಪುಷ್ಪೈರ್ಧ್ಯಾನೇನ ಹೃದಯೇ ಹರಿಂ ।
ಯಜಂತಿ ಸೂರಯೋ ನಿತ್ಯಂ ಜಪೇನ ರವಿಮಂಡಲೇ ॥ ೫೪ ॥

ಅಹಿಂಸಾ ಪ್ರಥಮಂ ಪುಷ್ಪಂ ದ್ವಿತೀಯಂ ಕರಣಗ್ರಹಃ ।
ತೃತೀಯಕಂ ಭೂತದಯಾ ಚತುರ್ಥಂ ಕ್ಷಾನ್ತಿರೇವ ಚ ॥ ೫೫ ॥

---

೫೦　ಪತಿವ್ರತೆಯಾದ ಹೆಂಗಸಿಗೆ ಗಂಡನೇ ದೇವರು. ಅವನನ್ನು ವಿಷ್ಣು ಭಕ್ತಿಯಿಂದ ಮನೋವಾಕ್ಕಾಯಗಳಿಂದ ಪೂಜಿಸಬೇಕು.

೫೧. ಹೆಂಗಸರಿಗೆ ಇದೇ ಹೆಚ್ಚಿನ ಪೂಜೆಯು. ಪತಿವ್ರತೆಯರಿಗೂ ಇದಕ್ಕಿಂತ ಉತ್ತಮವಾದುದು ಬೇರೆ ಇಲ್ಲವೆಂದು ವೇದದಲ್ಲಿ ಹೇಳಿದೆ.

೫೨–೫೩. ವೇದದಲ್ಲಿ ಅಧಿಕಾರಿಗಳು ಆ ವೇದೋಕ್ತವಾದ ರೀತಿಯಲ್ಲಿ ಮಾಡಬೇಕು. ಈ ಬಗೆಯ ವ್ರತವನ್ನು ಇಂತಹವರು ಮಾಡಬೇಕೆಂದು ಬೇರೆಯಾಗಿ ಹೇಳಿದ್ದರೆ ಅದನ್ನೇ ಅವರು ಮಾಡಬೇಕು. ಅದರಿಂದ ಕೇಶವನು ಸಂತೋಷ ಹೊಂದುತ್ತಾನೆ.

೫೪. ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವುದರಿಂದಲೂ, ನೀರಿನಲ್ಲಿ ಹೂಗಳಿಂದಲೂ ಹೃದಯದಲ್ಲಿ ಧ್ಯಾನಮಾಡುವುದರಿಂದಲೂ, ಸೂರ್ಯಮಂಡಲದಲ್ಲಿ ಸ್ವಾಮಿಯನ್ನು ಜಪಿಸುವುದರಿಂದಲೂ ತಿಳಿದವರು ಪೂಜಿಸುತ್ತಾರೆ.

೫೫–೫೬. ಅಹಿಂಸೆಯೆಂಬುದು ಮೊದಲನೆಯ ಹೂ, ಇಂದ್ರಿಯ ನಿಗ್ರಹ ಎರಡನೆಯ ಹೂ, ಭೂತದಯೆ ಮೂರನೆಯ ಹೂ, ಕ್ಷಾಂತಿ ನಾಲ್ಕನೆಯ ಹೂ, ಶಮವು

ಶಮಸ್ತು ಪಂಚಮಂ ಪುಷ್ಪಂ ಧ್ಯಾನಂ ಚೈವ ತು ಸಪ್ತಮಂ ।
ಸತ್ಯಂ ಚೈವಾಷ್ಟಮಂ ಪುಷ್ಪಂ ಏತೈಸ್ತುಷ್ಯತಿ ಕೇಶವಃ ॥ ೫೬ ॥

ಏತೈರೇವಾಷ್ಟಭಿಃ ಪುಷ್ಪೈಃ ತುಷ್ಯತೇ ಚಾರ್ಚಿತೋ ಹರಿಃ ।
ಪುಷ್ಪಾಂತರಾಣಿ ಸನ್ತ್ಯೇವ ಬಾಹ್ಯಾನಿ ನೃಪಸತ್ತಮ ॥ ೫೭ ॥

ಏತೈರೇವ ತು ತುಷ್ಯೇತ ಯತೋ ಭಕ್ತಿಪ್ರಿಯೋಽಚ್ಯುತಃ ।
ವಾರುಣಂ ಸಲಿಲಂ ಪುಷ್ಪಂ ಸೌಮ್ಯಂ ಘೃತಪಯೋದಧಿ ॥ ೫೮ ॥

ಪ್ರಾಜಾಪತ್ಯಮಥಾನ್ನಾದಿ ತ್ವಾಗ್ನೇಯಂ ಧೂಪದೀಪಕಂ ।
ಫಲಪುಷ್ಪಾದಿಕಂ ಚೈವ ವಾನಸ್ಪತ್ಯಂ ತು ಪಂಚಮಂ ॥ ೫೯ ॥

ಪಾರ್ಥಿವಂ ಕುಶಮೂಲಾದ್ಯಂ ವಾಯವ್ಯಂ ಗಂಧಚಂದನಂ ।
ಶ್ರದ್ಧಾಖ್ಯಂ ವಿಷ್ಣುಪುಷ್ಪಂ ಚ ವಾದ್ಯಂ ವಿಷ್ಣುಪದಂ ಸ್ಮೃತಂ ॥ ೬೦ ॥

ಏಭಿಸ್ತು ಪೂಜಿತೈಃ ಪುಷ್ಪೈಃ ಸದ್ಯೋ ವಿಷ್ಣುಃ ಪ್ರಸೀದತಿ ।
ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಂ ॥ ೬೧ ॥

---

ಐದನೆಯ ಹೂ, ಧ್ಯಾನವು ಏಳನೆಯ ಹೂ, ಸತ್ಯವು ಎಂಟನೆಯ ಹೂ, (ದಮವು ಆರನೆಯ ಹೂ,) ಈ ಎಂಟು ಹೂಗಳಿಂದ ಹರಿಯನ್ನರ್ಚಿಸಬೇಕು.

೫೭. ಈ ಎಂಟು ಹೂಗಳಿಂದ ಪೂಜಿಸಿದರೆ ಹರಿಯು ಸಂತೋಷಗೊಳ್ಳುತ್ತಾನೆ. ಬಾಹ್ಯವಾದ ಬೇರೆ ಹೂಗಳು ಬೇಕಾದಷ್ಟಿವೆ.

೫೮-೬೬. ಅಚ್ಯುತನು ಭಕ್ತಪ್ರಿಯನಾದುದರಿಂದ ಈ ಹೂಗಳಿಂದಲೇ ತುಷ್ಟನಾಗುತ್ತಾನೆ. ನೀರೆಂಬುದು ವಾರುಣಪುಷ್ಪ, ಹಾಲು, ತುಪ್ಪ, ಮೊಸರುಗಳು ಸೌಮ್ಯಪುಷ್ಪ ಅನ್ನವೇ ಮುಂತಾದುವು ಪ್ರಾಜಾಪತ್ಯಪುಷ್ಪ, ಧೂಪದೀಪಗಳು ಆಗ್ನೇಯಪುಷ್ಪ, ಫಲಪುಷ್ಪಗಳು ವಾನಸ್ಪತ್ಯ ಪುಷ್ಪವು. ಹೂವು, ದರ್ಭೆ, ಗೆಡ್ಡೆಗೆಣಸುಗಳು, ಪಾರ್ಥಿವ ಪುಷ್ಪವು. ಗಂಧ ಚಂದನಗಳು ವಾಯವ್ಯ ಪುಷ್ಪ, ಶ್ರದ್ಧೆಯೆಂಬುದು ವಿಷ್ಣುಪುಷ್ಪವು, ವಾದ್ಯವೆಂಬುದು ಆಕಾಶ ಪುಷ್ಪವು. ಈ ಹೂಗಳಿಂದ ಪೂಜಿಸಿದರೆ ವಿಷ್ಣುವು ಕೂಡಲೇ ಪ್ರಸನ್ನನಾಗುತ್ತಾನೆ ಸೂರ್ಯ, ಅಗ್ನಿ, ಬ್ರಾಹ್ಮಣ, ಗೋವು, ವೈಷ್ಣವರು, ಆಕಾಶ,

ಭೂರಾತ್ಮಾ ಸರ್ವಭೂತಾನಿ ಪೂಜಾಸ್ಥಾನಾನಿ ವೈ ಹರೇಃ ।
ವರ್ಕೇ ತು ವಿದ್ಯಯಾ ತ್ರಯ್ಯಾ ಹವಿಷಾಗ್ನೌ ಜಪೇತ್ತು ತಂ ॥ ೬೨ ॥

ಆತಿಥ್ಯೇನತು ವಿಪ್ರಾಗ್ರ್ಯೇ ಗೋಷು ಗ್ರಾಸರಸಾದಿನಾ ।
ವೈಷ್ಣವೇ ಬಂಧುಸತ್ಕೃತ್ಯಾ ಹೃದಿ ಖೇ ಧ್ಯಾನನಿಷ್ಠಯಾ ॥ ೬೩ ॥

ವಾಯೌ ಮುಖ್ಯಧಿಯಾ ತೋಯೇ ದ್ರವ್ಯೈಃ ತೋಯಪುರಸ್ಸರೈಃ ।
ಸ್ಥಂಡಿಲೇ ಮಂತ್ರಹೃದಯೈಃ ಭೋಗೈರಾತ್ಮಾನಮಾತ್ಮನಿ ॥ ೬೪ ॥

ಕ್ಷೇತ್ರಜ್ಞಂ ಸರ್ವಭೂತೇಷು ಸಮತ್ವೇನಾರ್ಚಯೇದ್ವಿಭುಂ ।
ಧಿಷ್ಣ್ಯೇಷ್ವೇತೇಷು ತದ್ರೂಪಂ ಶಂಖಚಕ್ರಗದಾಂಬುಜೈಃ ॥ ೬೫ ॥

ಯುಕ್ತಂ ಚತುರ್ಭುಜಂ ಶಾಂತಂ ಧ್ಯಾಯನ್ನರ್ಚೇತ್ಸಮಾಹಿತಃ ।
ಬ್ರಾಹ್ಮಣೈಃ ಪೂಜಿತೈರೇವ ಹರಿಸ್ಸಂಪೂಜಿತೋ ಭವೇತ್ ॥ ೬೬ ॥

ನಿರ್ಭರ್ತ್ಸಿತೈಸ್ತು ತೈರ್ಭೂಪ ಭವೇನ್ನಿರ್ಭರ್ತ್ಸಿತೋ ವಿಭುಃ ।
ನಿಗಮೋ ಧರ್ಮಶಾಸ್ತ್ರಂ ಚ ಯದಾಧಾರೇಣ ವರ್ತತೇ ॥ ೬೭ ॥

ಸ ದ್ವಿಜೋ ವೈಷ್ಣವೀಮೂರ್ತಿಃ ಕೀರ್ತಿತಃ ಪಾವನೋ ನೃಣಾಂ ॥ ೬೮ ॥

---

ಗಾಳಿ, ನೀರು, ಭೂಮಿ, ಆತ್ಮಾ, ಸರ್ವಭೂತಗಳು ಇವು ಹರಿಯ ಪೂಜಾಸ್ಥಾನಗಳು. ಸೂರ್ಯನಲ್ಲಿ ತ್ರಯೀಮಯವಾದ ವೇದದಿಂದಲೂ, ಅಗ್ನಿಯಲ್ಲಿ ಹವಿಸ್ಸಿನಿಂದಲೂ, ಯೋಗ್ಯನಾದ ಬ್ರಾಹ್ಮಣನಲ್ಲಿ ಆತಿಥ್ಯಮಾಡುವುದರಿಂದಲೂ, ಗೋವಿನಲ್ಲಿ ಗೋಗ್ರಾಸ ಕೊಡುವುದು, ಒಳ್ಳೆಯ ರುಚಿಯಾದ ಪದಾರ್ಥಗಳನ್ನು ಕೊಡುವುದು ಇವುಗಳಿಂದಲೂ, ವೈಷ್ಣವನಲ್ಲಿ ಬಂಧುವಿನಂತೆ ಆದರಿಸುವುದರಿಂದಲೂ ಹೃದಾಕಾಶದಲ್ಲಿ ಧ್ಯಾನದಿಂದಲೂ, ವಾಯುವಿನಲ್ಲಿ ಪ್ರಾಣಾಯಾಮರೂಪದಿಂದಲೂ, ನೀರಿನಲ್ಲಿ ನೀರೇ ಮುಂತಾದ ಪದಾರ್ಥಗಳ ರೂಪದಿಂದಲೂ, ಮಂಡಲದಲ್ಲಿ ಮಂತ್ರದಿಂದಲೂ, ಆತ್ಮನಲ್ಲಿ ಆತ್ಮನ ಭೋಗದಿಂದಲೂ, ಸರ್ವಭೂತಗಳಲ್ಲಿ ಆ ಸ್ವಾಮಿಯನ್ನು ಸಮತಾದೃಷ್ಟಿಯಿಂದಲೂ ಪೂಜಿಸಬೇಕು. ಈ ಜಾಗಗಳಲ್ಲಿ ಅವನ ರೂಪವನ್ನು ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿ ಚತುರ್ಭುಜನಾಗಿ ಶಾಂತನಾಗಿರುವ ರೀತಿಯಲ್ಲಿ ಏಕಾಗ್ರತೆಯಿಂದ ಧ್ಯಾನಿಸಬೇಕು. ಬ್ರಾಹ್ಮಣರನ್ನು ಪೂಜಿಸಿದುದರಿಂದಲೆ ಹರಿಯು ತೃಪ್ತನಾಗುತ್ತಾನೆ

೬೭-೬೮. ಅವರನ್ನು ನಾವು ಗದರಿಸಿ ಬೈದರೆ ಸ್ವಾಮಿಯನ್ನು ಗದರಿಸಿ ಬೈದಂತಾಗುತ್ತದೆ. ವೇದಗಳೂ, ಧರ್ಮಶಾಸ್ತ್ರಗಳೂ, ಯಾವ ಬ್ರಾಹ್ಮಣನ ಆಧಾರದಿಂದಲೇ ಇವೆಯೋ ಆ ಬ್ರಾಹ್ಮಣನು ವೈಷ್ಣವೀಮೂರ್ತಿಯು. ಪಾವನನು ಎಂದೆಣಿಸಲ್ಪಟ್ಟಿದ್ದಾನೆ.

ಸರ್ವಂ ಶುಭಂ ಜಗತಿ ಧರ್ಮತ ಏವ ಲಭ್ಯಂ ।
ಧರ್ಮೋ ಗತಿರ್ನಿಗಮತೋ ನೃಪ ಧರ್ಮಶಾಸ್ತ್ರಾತ್ ॥
ನೂನಂ ತಯೋರಪಿ ಗತಿರ್ಭುವಿ ಭೂಮಿದೇವಾಃ ।
ತೈರರ್ಚಿತೈರಿಹ ಜಗತ್ಪತಿರರ್ಚಿತಸ್ಸ್ಯಾತ್ ॥ ೬೯ ॥

ನ ಯಜ್ಞದಾನೈರ್ನ ತಪೋಭಿರುಗ್ರೈ
ರ್ನ ಯೋಗಯುಕ್ತ್ಯಾ ನ ಸಪರ್ಯನೇನ ।
ತಥಾ ಹರಿಸ್ತುಷ್ಯತಿ ದೇವದೇವೋ
ಯಥಾ ಮಹೀದೈವತತೋಷಣೇನ ॥ ೭೦ ॥

ಬ್ರಹ್ಮಸ್ಥೋ ಬ್ರಹ್ಮವಿದ್ಬ್ರಹ್ಮಾ ಬ್ರಹ್ಮದೈವಪ್ರವರ್ತಕಃ ।
ಬ್ರಾಹ್ಮಣೈರೇವ ತುಷ್ಯೇತ ತೋಷಿತೈರ್ಬ್ರಹದೇವತಂ ॥ ೭೧ ॥

ನರಕೇಪಿ ಚಿರಂ ಮಗ್ನಾಃ ಪೂರ್ವಜಾ ಯೇ ಕುಲದ್ವಯೇ ।
ತದೈವ ಯಾಂತಿ ತೇ ಸ್ವರ್ಗಂ ಯದಾರ್ಚತಿ ಸುತೋ ಹರಿಂ ॥ ೭೨ ॥

---

೬೯. ಪ್ರಪಂಚದಲ್ಲಿ ಯಾವ ಒಳ್ಳೆಯದನ್ನು ಹೊಂದಬೇಕಾದರೂ, ಧರ್ಮದಿಂದಲೇ ಹೊಂದಬೇಕು. ಆ ಧರ್ಮವು ವೇದಗಳಿಂದಲೂ, ಧರ್ಮಶಾಸ್ತ್ರಗಳಿಂದಲೂ, ನಮಗೆ ಸಿಕ್ಕಬೇಕು. ಆ ವೇದ ಧರ್ಮಶಾಸ್ತ್ರಗಳೆರಡಕ್ಕೂ ಬ್ರಾಹ್ಮಣರೇ ಆಧಾರಭೂತರು. ಅವರನ್ನು ಪೂಜೆಮಾಡಿದರೆ ಜಗತ್ಪತಿಯನ್ನೇ ಪೂಜೆಮಾಡಿದಂತಾಗುತ್ತದೆ.

೭೦. ಬ್ರಾಹ್ಮಣರನ್ನು ಪೂಜಿಸಿದರೆ ಹರಿಯು ತೃಪ್ತನಾಗುವಂತೆ ಯಜ್ಞ, ದಾನ, ತಪಸ್ಸು, ಯೋಗ, ಅರ್ಚನೆಗಳೊಂದರಿಂದಲೂ ತೃಪ್ತನಾಗುವುದಿಲ್ಲ.

೭೧. ಆ ಬ್ರಾಹ್ಮಣನು ಬ್ರಹ್ಮನಲ್ಲಿಯೇ ಇರತಕ್ಕವನು. ಬ್ರಹ್ಮವನ್ನು ಬಲ್ಲವನು. ಬ್ರಹ್ಮನೇ ಆಗಿರುವನು. ಬ್ರಹ್ಮನನ್ನೂ, ದೈವವನ್ನೂ ತನ್ನ ಶಕ್ತ್ಯನುಸಾರ ನಡೆಸಬಲ್ಲನು. ಆದ್ದರಿಂದ ಆ ಬ್ರಹ್ಮವು ಬ್ರಾಹ್ಮಣರನ್ನು ಸಂತೋಷಗೊಳಿಸಿದರೆ ಸಂತುಷ್ಟವಾಗುತ್ತದೆ.

೭೨. ಮಗನಾದವನು ಹರಿಯನ್ನರ್ಚಿಸಿದೊಡನೆಯೇ ತನ್ನ ತಾಯಿತಂದೆಯವರ ವಂಶದವರು ನರಕದಲ್ಲಿದ್ದರೆ ಸ್ವರ್ಗವನ್ನು ಹೊಂದುತ್ತಾರೆ.

ಕಿಂ ತೇಷಾಂ ಜೀವಿತೇನೇಹ ಪಶುವಚ್ಚೇಷ್ಟಿತೇನ ಕಿಂ ।
ಯೇಷಾಂ ನ ಪ್ರವಣಂ ಚಿತ್ತಂ ವಾಸುದೇವೇ ಜಗನ್ಮಯೇ ॥ ೭೩ ॥

ಧ್ಯಾನಂ ತಸ್ಯ ಪ್ರವಕ್ಷ್ಯಾಮಿ ಯನ್ನದೃಷ್ಟಂ ಹಿ ಕೇನ ಚಿತ್ ।
ಶ್ರೂಯತಾಂ ಭೂಪ ಕೈವಲ್ಯಂ ನಿತ್ಯಂ ಮಲವಿವರ್ಜಿತಂ ॥ ೭೪ ॥

ಯಥಾ ದೀಪೋ ನಿವಾತಸ್ಥೋ ನಿಶ್ಚಲೋ ವಹ್ನಿರೂಪಧೃತ್ ।
ಪ್ರಜ್ವಲನ್ನಾಶಯೇತ್ಸರ್ವ ಮಂಧಕಾರಂ ನೃಪೋತ್ತಮ ॥ ೭೫ ॥

ತದ್ವದ್ದೋಷವಿಹೀನಾತ್ಮಾ ಭವತ್ಯೇವ ನಿರಾಮಯಃ ।
ನಿರಾಶೋ ನಿಶ್ಚಲೋ ಭೂಪ ವೈರಿಮೈತ್ರೀವಿವರ್ಜಿತಃ ॥ ೭೬ ॥

ಶೋಕದುಃಖಭಯದ್ವೇಷಲೋಭಮೋಹಭ್ರಮಾದಿಭಿಃ ।
ವಿಷಯೈರಿಂದ್ರಿಯಾಣಾಂ ಚ ಕೃಷ್ಣಧ್ಯಾಯೀ ವಿಮುಚ್ಯತೇ ॥ ೭೭ ॥

ಯಥಾ ಜ್ವಾಲಾಪ್ರಸಂಗೇನ ದೀಪಸ್ತೈಲಂ ಪ್ರಶೋಷಯೇತ್ ।
ತಥಾ ಧ್ಯಾನಪ್ರಸಂಗೇನ ಕರ್ಮಣೋಪಿ ಕ್ಷಯೋ ಭವೇತ್ ॥ ೭೮ ॥

---

೭೩. ಜಗನ್ಮಯನಾದ ವಾಸುದೇವನಲ್ಲಿ ಮನಸ್ಸಿಲ್ಲದವನು ಪಶುವಿನಂತೆ ಚೇಷ್ಟೆಮಾಡಿಕೊಂಡಿದ್ದರೇನು ? ಅವನ ಜೀವಿತದಿಂದ ತಾನೆ ಏನು ಪ್ರಯೋಜನ ?

೭೪. ಯಾರೂ ತಿಳಿಯದಿದ್ದ ನಿತ್ಯಕೈವಲ್ಯವನ್ನು ಕೊಡುವ ಪಾಪರಹಿತನಾದ ಆ ಸ್ವಾಮಿಯ ಧ್ಯಾನವನ್ನು ಹೇಳುತ್ತೇನೆ.

೭೫. ಗಾಳಿಯಿಲ್ಲದಿರುವ ಜಾಗದಲ್ಲಿ ದೊಡ್ಡದಾಗಿರುವ ದೀಪವು ಅಲ್ಲಾಡದೆ ಉರಿಯುತ್ತಿದ್ದು ಪ್ರಕಾಶಿಸುತ್ತಾ ಅಂಧಕಾರವನ್ನು ನಾಶಮಾಡುತ್ತದೆ.

೭೬-೭೭. ಅದರಂತೆ ಈ ವಿಷ್ಣುಪೂಜಕನು ದೋಷರಹಿತನಾಗಿ ರೋಗರಹಿತನೂ ಆಗುವನು. ಮತ್ತು ಆಶೆ, ಲೋಭಗಳಿಂದ ಬಿಡಲ್ಪಟ್ಟು, ಅರಿ ಮಿತ್ರರನ್ನು ಒಂದಾಗಿ ತಿಳಿದು ಶೋಕ, ದುಃಖ, ಭಯ, ದ್ವೇಷ, ಲೋಭ, ಮೋಹ, ಭ್ರಮೆಗಳನ್ನು ಳಿದು ಇಂದ್ರಿಯಗಳನ್ನು ಜಯಿಸಿ ಕೃಷ್ಣಧ್ಯಾನಮಾಡುವವನು ಮುಕ್ತನಾಗುತ್ತಾನೆ.

೭೮. ದೀಪದಲ್ಲಿ ಜ್ವಾಲೆಯು ಉರಿಯುತ್ತಿರುವುದರಿಂದ ಎಣ್ಣೆಯು ನಾಶವಾಗುವಂತೆ ವಿಷ್ಣುಧ್ಯಾನದಿಂದ ಕರ್ಮವು ಕ್ಷಯಿಸುತ್ತದೆ.

ತದ್ಧ್ಯಾನಂ ದ್ವಿವಿಧಂ ತಸ್ಯ ಪ್ರೋಕ್ತಂ ಶಂಕರಪೂರ್ವಕೈಃ ।
ನಿರ್ಗುಣಂ ಸಗುಣಂ ವಾಪಿ ತತ್ರಾದ್ಯಂ ಶೃಣು ಮಾನದ ॥ ೭೯ ॥

ಕೇವಲಂ ಜ್ಞಾನದೃಷ್ಟ್ಯಾಸೌ ದೃಶ್ಯತೇ ಯೋಗಯುಕ್ತಿಭಿಃ ।
ಪರಮಾತ್ಮಪರೈ ರಾಜನ್ ಸತತಂ ಧ್ಯಾನತತ್ಪರೈಃ ॥ ೮೦ ॥

ಹಸ್ತಪಾದವಿಹೀನಶ್ಚ ಸರ್ವಂ ಗೃಹ್ಣಾತಿ ಗಚ್ಛತಿ ।
ಮುಖನಾಸಾವಿಹೀನಶ್ಚ ಭುಂಕ್ತೇ ಜಿಘ್ರತಿ ಭೂಪತೇ ॥ ೮೧ ॥

ಅಕರ್ಣಶ್ಶೃಣುತೇ ಸರ್ವಂ ಸರ್ವಸಾಕ್ಷೀ ಜಗತ್ಪತಿಃ ।
ಅರೂಪೋ ರೂಪಸಂಬದ್ಧಃ ಪಂಚವರ್ಗವಶಂಗತಃ ॥ ೮೨ ॥

ಸರ್ವಲೋಕಸ್ಯ ಯಃ ಪ್ರಾಣಃ ಪೂಜ್ಯತೇ ಸ ಚರಾಚರೈಃ ।
ಅಜಿಹ್ವೋ ವದತೇ ಸರ್ವಂ ವೇದಶಾಸ್ತ್ರಾನುಗಂ ತಥಾ ॥ ೮೩ ॥

---

೭೯. ಶಂಕರನೇ ಮೊದಲಾದವರು ಆ ಸ್ವಾಮಿಯ ಧ್ಯಾನವನ್ನು ನಿರ್ಗುಣವೆಂದೂ. ಸಗುಣವೆಂದೂ ಎರಡು ಬಗೆಯಾಗಿ ಹೇಳಿದ್ದಾರೆ ಅದರಲ್ಲಿ ನಿರ್ಗುಣವನ್ನು ಕೇಳು.

೮೦. ಪರಮಾತ್ಮಪರರೂ, ಧ್ಯಾನಿಗಳೂ ಆದವರು ಯೋಗಯುಕ್ತಿಯಿಂದ ಜ್ಞಾನದೃಷ್ಟಿಯೊಂದರಿಂದಲೇ ಪರಮಾತ್ಮನು ಸಿಕ್ಕುತ್ತಾನೆಂದು ಹೇಳುತ್ತಾರೆ.

೮೧. ಕೈಯ್ಯಿಲ್ಲದಿದ್ದರೂ ಹಿಡಿದುಕೊಳ್ಳುತ್ತಾನೆ. ಕಾಲಿಲ್ಲದಿದ್ದರೂ ನಡೆಯುತ್ತಾನೆ. ಬಾಯಿಲ್ಲದಿದ್ದರೂ ತಿನ್ನುತ್ತಾನೆ. ಮೂಗಿಲ್ಲದಿದ್ದರೂ ಅವನು ವಾಸನೆ ನೋಡುತ್ತಾನೆ.

೮೨-೮೪. ಕಿವಿಯಿಲ್ಲದಿದ್ದರೂ ಎಲ್ಲವನ್ನೂ ಕೇಳುತ್ತಾನೆ. ಅವನೇ ಸರ್ವಸಾಕ್ಷಿಯು. ರೂಪವಿಲ್ಲದಿದ್ದರೂ ರೂಪವುಳ್ಳವನಾಗಿದ್ದಾನೆ. ಪೃಥಿವೀ, ಅಪ್ಪು, ತೇಜಸ್ಸು, ವಾಯು; ಆಕಾಶ ಈ ಪಂಚವರ್ಗದ ದೇಹಧಾರಿಯಾಗಿರುವನು. ಸರ್ವಲೋಕಕ್ಕೂ ಇವನೇ ಪ್ರಾಣಭೂತನು ಚರಾಚರಗಳಿಂದ ಈ ಸ್ವಾಮಿಯೇ ಪೂಜಿಸಲ್ಪಡುವನು. ನಾಲಗೆಯಿಲ್ಲದಿದ್ದರೂ ವೇದಶಾಸ್ತ್ರಗಳನ್ನು ಹೇಳುತ್ತಾನೆ ಚರ್ಮವಿಲ್ಲದಿದ್ದರೂ ಎಲ್ಲವನ್ನೂ ಮುಟ್ಟಿ ಶೀತೋಷ್ಣಾದಿಗಳನ್ನು ತಿಳಿಯುತ್ತಾನೆ. ಇವನು ಸದಾನಂದನು.

ತ್ವಗ್ವಿಹೀನಸ್ಸ್ಪೃಶೇತ್ಸರ್ವಂ ಶೀತೋಷ್ಣಾದಿ ನರಾಧಿಪ ।
ಸದಾನಂದೋ ವಿವಿಕ್ತಾಕ್ಷಃ ಏಕರೂಪೋ ನಿರಾಶ್ರಯಃ ॥ ೮೪ ॥

ನಿರ್ಗುಣೋ ನಿರ್ಮಮೋ ವ್ಯಾಪೀ ಸಗುಣೋ ನಿರ್ಮಲೌಜಸಃ ।
ಅವಶ್ಯಸ್ಸರ್ವವಶ್ಯಾತ್ಮಾ ಸರ್ವದಃ ಸರ್ವವಿತ್ತಮಃ ॥ ೮೫ ॥

ತಸ್ಯ ಮಾತಾ ಚ ನೈವಾಸ್ತಿ ಸ ವೈ ಸರ್ವಮಯೋ ವಿಭುಃ ।
ಏವಂ ಸರ್ವಮಯಂ ಧ್ಯಾನಂ ಯಶ್ಚ ಪಶ್ಯತ್ಯನನ್ಯಧೀಃ ॥ ೮೬ ॥

ಸ ಯಾತಿ ಪರಮಂ ಸ್ಥಾನಮಮೂರ್ತಮಮೃತೋಪಮಂ ।
ದ್ವಿತೀಯಂ ತು ಪ್ರವಕ್ಷ್ಯಾಮಿ ತಚ್ಛೃಣುಷ್ವ ಮಹಾಮತೇ ॥ ೮೭ ॥

ಮೂರ್ತಾಕಾರಂ ತು ಸಾಕಾರಂ ನಿರಾಲಂಬಂ ನಿರಾಮಯಂ ।
ಯಸ್ಯ ವಾಸನಯಾ ಸರ್ವಂ ಬ್ರಹ್ಮಾಂಡಂ ವಾಸಿತಂ ನೃಪ ॥ ೮೮ ॥

---

ಒಬ್ಬರೂ ಇಲ್ಲದಿರುವಲ್ಲಿ ಇರಬೇಕೆಂಬುವನು. ಒಂದೇ ಆಕಾರವುಳ್ಳವನು. ಆಶ್ರಯವಿಲ್ಲದವನು

೮೫. ಗುಣಶೂನ್ಯನು. ಮಮಕಾರ ರಹಿತನು. ವ್ಯಾಪಕನು. ಗುಣದಿಂದ ಕೂಡಿದವನು. ನಿರ್ಮಲವಾದ ಕಾಂತಿಯುಳ್ಳವನು. ಇತರರಿಗೆ ಅಧೀನನಲ್ಲದವನು. ಎಲ್ಲರನ್ನೂ ಅಧೀನಮಾಡಿಕೊಳ್ಳುವವನು. ಎಲ್ಲವನ್ನೂ ಕೊಡತಕ್ಕವನು. ಎಲ್ಲವನ್ನೂ ತಿಳಿದವನು.

೮೬-೮೭. ಅವನನ್ನು ಅಳೆಯುವವರೇ ಇಲ್ಲ. ಅವನು ಎಲ್ಲೆಲ್ಲೂ ಇರುವ ವಿಭುವು. ಇದೇ ಸರ್ವಮಯವಾದ ಧ್ಯಾನವು. ಈರೀತಿ ಏಕಾಗ್ರತೆಯಿಂದ ನೋಡುವವನು. ಆಕಾರರಹಿತವಾದ ಅಮೃತದಂತಿರುವ ಉತ್ತಮಸ್ಥಾನವನ್ನು ಹೋಗುತ್ತಾನೆ. ಎರಡನೆಯದಾದ ಸಗುಣವಾದ ಆಕಾರವನ್ನು ಹೇಳುತ್ತೇನೆ. ಕೇಳು.

೮೮. ಮೂರ್ತಿಮತ್ತಾಗಿ ಕಾಣತಕ್ಕುದೇ ಸಾಕಾರವು. ಅದೂ ಕೂಡ ಅವಲಂಬನೆಯಿಲ್ಲದುದು. ರೋಗರಹಿತವಾದುದು. ಅದರ ಬುದ್ಧಿಯಿಂದಲೇ ಪ್ರಪಂಚವೆಲ್ಲವೂ ಕೂಡಿಕೊಂಡಿರುವುದು. ಅವನ ವಾಸನೆಯೇ ಎಲ್ಲೆಲ್ಲೂ ತುಂಬಿದೆ.

ಸ ತಸ್ಮಾದ್ವಾಸುದೇವೇತಿ ಪ್ರೋಚ್ಯತೇ ವಿಧಿಪೂರ್ವಕೈಃ ।
ಸ್ನಿಗ್ಧಸ್ಪ್ರಾವೃಡ್ಘನಶ್ಯಾಮಂ ಸೂರ್ಯತೇಜಸ್ಸಮಪ್ರಭಂ ॥ ೮೯ ॥

ದಕ್ಷಿಣೇ ಶೋಭತೇ ಶಂಖೋ ಮಹಾಮಣಿವಿಚಿತ್ರಿತಃ ।
ಕೌಮೋದಕೀ ಗದಾ ಚಾಪಿ ಮಹಾಸುರವಿಮರ್ದಿನೀ ॥ ೯೦ ॥

ವಾಮೇಚ ಶೋಭತೇ ವೀರ ಪದ್ಮಂ ಚಕ್ರಂ ಜಗತ್ಪತೇಃ ।
ಚತುರ್ಬಾಹುಂ ಸುರೇಶಾನಂ ಶಾರ್ಙ್ಗಿಣಂ ಕಮಲಾಪತಿಂ ॥ ೯೧ ॥

ಕಂಬುಗ್ರೀವಂ ಸವೃತ್ತಾಸ್ಯಂ ಪದ್ಮಪತ್ರನಿಭೇಕ್ಷಣಂ ।
ರಾಜಮಾನಂ ಹೃಷೀಕೇಶಂ ದಶನೈಃ ಕುಂದಸನ್ನಿಭೈಃ ॥ ೯೨ ॥

ಗುಡಾಕೇಶಸ್ಯ ನೃಪತೇಃ ಹ್ಯಧರೋ ವಿದ್ರುಮಾಕೃತಿಃ ।
ಶೋಭತೇ ಪದ್ಮನಾಭಾಖ್ಯಃ ಕಿರೀಟೇನಾತಿಭಾಸ್ವತಾ ॥ ೯೩ ॥

ವಿಲಾಸೀ ಲಕ್ಷ್ಮ್ಯಾ ಲಕ್ಷ್ಮ್ಯೇ ಚ ಕೇಶವಃ ಕೌಸ್ತುಭಾಂಕಿತಃ ।
ಜನಾರ್ದನಃ ಸೂರತ್ಯೇಜಃ ಕುಂಡಲಾಭ್ಯಾಂ ವಿರಾಜಿತಃ ॥ ೯೪ ॥

---

೮೯-೯೦. ಆದುದರಿಂದಲೇ ಅವನು ವಾಸುದೇವನೆನಿಸಿಕೊಳ್ಳುತ್ತಾನೆ. ಅವನು ಮನೋಹರವಾದ ಮೇಘದ ಬಣ್ಣವುಳ್ಳವನು. ಸೂರ್ಯನ ತೇಜಸ್ಸಿಗೆ ಸಮವಾದ ಕಾಂತಿಯುಳ್ಳವನು. ಬಲಭಾಗದಲ್ಲಿ ಮಹಾಮಣಿಯಿಂದ ಕೂಡಿದ ಶಂಖವಿದೆ. ರಾಕ್ಷಸರನ್ನು ನಾಶಮಾಡುವ ಕೌಮೋದಕಿ ಎಂಬ ಗದೆಯೂ ಇದೆ.

೯೧-೯೨. ಎಡಗಡೆಯ ಕೈಗಳಲ್ಲಿ ಪದ್ಮವೂ, ಚಕ್ರವೂ ಪ್ರಕಾಶಿಸುತ್ತವೆ. ಈ ರೀತಿಯಾದ ಚತುರ್ಬಾಹುವಾದ ದೇವತೆಗಳಿಗೆ ಒಡೆಯನಾದ ಶಾರ್ಙ್ಗವನ್ನೂ ಚಕ್ರವನ್ನೂ ಧರಿಸಿರುವ ಕಮಲಾಪತಿಯಾದ, ಶಂಖದಂತೆ ಕುತ್ತಿಗೆಯುಳ್ಳ ಚೆನ್ನಾಗಿರುವ ಮುಖವುಳ್ಳ, ಪದ್ಮದಂತೆ ಕಣ್ಣುಳ್ಳ, ಪ್ರಕಾಶಮಾನನಾದ ಇಂದ್ರಿಯಗಳಿಗೆ ಒಡೆಯನಾದ ಕುಂದ ಪುಷ್ಪಗಳಂತಿರುವ ಹಲ್ಲುಗಳುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು-

೯೩-೯೪. ಬೆಲ್ಲದಚ್ಚಿನಂತೆ ಗುಂಡಗಿರುವ ತಲೆಗೂದಲುಳ್ಳ, ಆ ಸ್ವಾಮಿಯ ತುಟಿಗಳು ಹವಳದ ಬಣ್ಣಕ್ಕಿವೆ. ಪದ್ಮವೇ ಹೊಕ್ಕುಳಲ್ಲಿರುವ ಆ ಪದ್ಮನಾಭನು ಪ್ರಕಾಶಮಾನವಾದ ಕಿರೀಟದಿಂದ ಶೋಭಿಸುತ್ತಾನೆ. ಅವನು ಒಳ್ಳೆಯ ವಿಲಾಸವುಳ್ಳವನು. ಆ ಕೇಶವನು ಕೌಸ್ತುಭಮಣಿಯಿಂದ ಕೂಡಿದವನು. ಆ ಜನಾರ್ದನನು ಸೂರ್ಯನ ತೇಜಸ್ಸಿನಂತಿರುವ ಕುಂಡಲಗಳಿಂದ ಪ್ರಕಾಶಿಸುತ್ತಾನೆ.

**ಕೇಯೂರಹಾರಕಟಕಕಟಿಸೂತ್ರಾಂಗುಳೀಯಕೈಃ ।**
**ವಿರಾಜತೇ ಭ್ರಾಜಮಾನೋ ವಪುಷಾಲಂಕೃತೇನ ಚ ॥ ೯೫ ॥**

**ವಾಸಸಾ ಹೇಮವರ್ಣೇನ ಪ್ರಾವೃತೋ ಗರುಡಾಸನಃ ।**
**ಧ್ಯಾತವ್ಯಸ್ಸಗುಣೋ ರಾಜನ್ಭಕ್ತಾಘೌಘಹರೋ ಹರಿಃ ॥ ೯೬ ॥**

**ಏವಂ ತೇ ಧ್ಯಾನಮುದ್ದಿಷ್ಟಂ ದ್ವಿವಿಧಂ ನೃಪಸತ್ತಮ ।**
**ಯತ್ಕೃತ್ವಾ ಮುಚ್ಯತೇ ಪಾಪೈರ್ಮನೋವಾಕ್ಕಾಯಸಂಭವೈಃ ॥ ೯೭ ॥**

**ಯಂ ಯಂ ಚಾಭಿಲಷೇತ್ಕಾಮಂ ತಂ ತಂ ಪ್ರಾಪ್ನೋತಿ ನಿಶ್ಚಿತಂ ।**
**ಪೂಜ್ಯತೇ ದೇವವರ್ಗೈಶ್ಚ ವಿಷ್ಣುಲೋಕಂ ಸ ಗಚ್ಛತಿ ॥ ೯೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ನಾರದಾಂಬರೀಷ ಸಂವಾದೇ ವೈಷ್ಣವಧರ್ಮಕಥನೇ ಚತುರಶೀತಿತಮೋಽಧ್ಯಾಯಃ**

---

೯೫. ಆ ಸ್ವಾಮಿಯು ಕೇಯೂರ, ಹಾರ, ಕೈಬಳೆ, ಉಡಿದಾರ, ಉಂಗುರಗಳಿಂದ ಪ್ರಕಾಶಿಸುತ್ತಾನೆ.

೯೬. ಆ ಗರುಡಾಸನನು ಹೊಂಬಣ್ಣದ ಪೀತಾಂಬರವನ್ನು ಹೊಂದಿದ್ದಾನೆ. ಇಂತಹ ಭಕ್ತರ ಪಾಪನಾಶಕನಾದ ಹರಿಯನ್ನು ಸಗುಣನನ್ನಾಗಿ ಧ್ಯಾನಮಾಡಬೇಕು.

೯೭. ಈ ರೀತಿಯಾಗಿ ನಿರ್ಗುಣ ಸಗುಣ ಧ್ಯಾನಗಳನ್ನು ಹೇಳಿದ್ದೇನೆ. ಈ ಧ್ಯಾನವನ್ನು ಮಾಡಿದರೆ ಮನೋವಾಕ್ಕಾಯಗಳ ಪಾಪವೆಲ್ಲವೂ ನಾಶನಾಗುತ್ತವೆ.

೯೮. ಅಂತಹವನು ಏನೇನನ್ನು ಅಪೇಕ್ಷಿಸುವನೋ ಅಂತಹ ಇಷ್ಟಗಳನ್ನು ಹೊಂದುವುದು ಖಂಡಿತವು ದೇವತೆಗಳೂ ಅವನನ್ನು ಗೌರವಿಸುತ್ತಾರೆ. ವಿಷ್ಣುಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ನಾರದ ಅಂಬರೀಷರ ಸಂವಾದದಲ್ಲಿ ವೈಷ್ಣವಧರ್ಮಕಥನವೆಂಬ ಎಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಪಂಚಾಶೀತಿತಮೋಽಧ್ಯಾಯಃ ॥



॥ ಅಂಬರೀಷ ಉವಾಚ ॥

ಸಾಧು ಸಾಧು ಮುನಿಶ್ರೇಷ್ಠ ಲೋಕಾನುಗ್ರಹಕಾರಕ ।
ವಿಷ್ಣೋರ್ಧ್ಯಾನಂ ತ್ವಯಾ ಪ್ರೋಕ್ತಂ ಸಗುಣಂ ನಿರ್ಗುಣಂ ಚ ಯತ್ ॥ ೧ ॥

ಅಧುನಾ ಲಕ್ಷಣಂ ಬ್ರೂಹಿ ಭಕ್ತೇಸ್ಸಾಧು ಕೃಪಾಕರ ।
ಯಾದೃಶೀ ಕ್ರಿಯತೇ ಯೇನ ಯಥಾ ಯತ್ರ ಯದಾ ತಥಾ ॥ ೨ ॥

॥ ಸೂತ ಉವಾಚ ॥

ಇತ್ಯುಕ್ತಮಾಕರ್ಣ್ಯ ನೃಪೋತ್ತಮಸ್ಯ
ಮುನಿಃ ಪ್ರಹೃಷ್ಟೋ ನಿಜಗಾದ ಭೂಪಂ ।
ಶೃಣುಷ್ವ ರಾಜನ್ನಖಿಲಾಘಹಾರಿಣೀಂ
ಭಕ್ತಿಂ ಹರೇಸ್ತೇ ಪ್ರದದಾಮಿ ಸಮ್ಯಕ್ ॥ ೩ ॥

---

## ಎಂಭತ್ತೈದನೆಯ ಅಧ್ಯಾಯವು

೧. ಅಂಬರೀಷನು ಹೇಳಿದನು- ಒಳ್ಳೆಯದು, ಒಳ್ಳೆಯದು. ಲೋಕಾನುಗ್ರಹಕಾರಕನಾದ ಎಲೈ ಮುನಿಯೇ ! ಸಗುಣ ನಿರ್ಗುಣಕವಾದ ವಿಷ್ಣುವಿನ ಧ್ಯಾನಗಳನ್ನು ಹೇಳಿದ್ದೀಯೆ.

೨. ಯಾರು ಎಲ್ಲಿ ಯಾವಾಗ ಯಾವ ರೀತಿಯಲ್ಲಿ ಭಕ್ತಿಯನ್ನು ಮಾಡಿದರೋ ಅಂತಹ ಭಕ್ತಿಯ ಲಕ್ಷಣವನ್ನು ಹೇಳು.

೩. ಸೂತನು ಹೇಳಿದನು– ಅಂಬರೀಷನು ಹೇಳಿದ ಈ ಮಾತನ್ನು ಕೇಳಿ ನಾರದನು ಎಲೈ ರಾಜನೇ ! ಪಾಪವೆಲ್ಲವನ್ನೂ ನಾಶಮಾಡುವ ಹರಿಯ ಭಕ್ತಿಯನ್ನು ಹೇಳುತ್ತೇನೆ ಕೇಳು.

ವಿವಿಧಾ ಭಕ್ತಿರುದ್ದಿಷ್ಟಾ ಮನೋವಾಕ್ಕಾಯಸಂಭವಾ ।
ಲೌಕಿಕೀ ವೈದಿಕೀ ಚಾಪಿ ಭವೇದಾಧ್ಯಾತ್ಮಿಕೀ ತಥಾ ॥ ೪ ॥

ಧ್ಯಾನಧಾರಣಯಾ ಬುದ್ಧ್ಯಾ ವೇದಾನಾಂ ಸ್ಮರಣೇನ ಚ ।
ವಿಷ್ಣುಪ್ರೀತಿಕರೀ ಚೈಷಾ ಮಾನಸೀಭಕ್ತಿರುಚ್ಯತೇ ॥ ೫ ॥

ವೇದಮಂತ್ರಸಮುಚ್ಚಾರೈರವಿಶ್ರಾನ್ತಂ ದಿವಾನಿಶಂ ।
ಜಪ್ಯೈ ಶ್ಚಾರಣ್ಯಕೈಶ್ಚೈವ ವಾಚಿಕೀ ಭಕ್ತಿರುಚ್ಯತೇ ॥ ೬ ॥

ವ್ರತೋಪವಾಸನಿಯಮ್ಯೈಃ ಪಂಚೇಂದ್ರಿಯಜಯೇನ ಚ ।
ಕಾಯಿಕೀಭಕ್ತಿರುದ್ದಿಷ್ಟಾ ಸರ್ವಸಿದ್ಧಿವಿಧಾಯಿನೀ ॥ ೭ ॥

ಪಾದ್ಯಾರ್ಘ್ಯಾದ್ಯುಪಚಾರೈಶ್ಚ ನೃತ್ಯವಾದಿತ್ರಗೀತಕೈಃ ।
ಬಲಿಭಿರ್ಜಾಗರಾರ್ಚಾಭಿರ್ಲೌಕಿಕೀಭಕ್ತಿರುಚ್ಯತೇ ॥ ೮ ॥

---

೪. ಮನೋವಾಕ್ಕಾಯಗಳಿಂದುತ್ಪನ್ನವಾದ ಭಕ್ತಿಯು ಬಹು ಪ್ರಕಾರವಾಗಿದೆ. ಅವುಗಳನ್ನು ಲೌಕಿಕವಾದುವೆಂದೂ, ವೈದಿಕವಾದುವೆಂದೂ, ಆಧ್ಯಾತ್ಮಿಕವಾದುವೆಂದೂ ಹೇಳುತ್ತಾರೆ.

೫. ಧ್ಯಾನಧಾರಣೆಯ ಬುದ್ಧಿಯಿಂದಲೂ, ವೇದಗಳನ್ನು ಸ್ಮರಿಸುವುದರಿಂದಲೂ, ವಿಷ್ಣುವಿನಲ್ಲಿ ಮಾಡತಕ್ಕ ಭಕ್ತಿಯು ಮಾನಸೀ ಭಕ್ತಿ ಎಂದೆನಿಸುತ್ತದೆ.

೬. ಹಗಲು ರಾತ್ರಿ ಎಡಬಿಡದೆ ವೇದಮಂತ್ರಗಳನ್ನು ಹೇಳುತ್ತ ಪೂಜಿಸುವುದೂ ಆರಣ್ಯದಲ್ಲಿ ಜಪಮಾಡುವುದೂ ವಾಚಕವಾದ ಭಕ್ತಿ ಎಂದೆನಿಸಿಕೊಳ್ಳುತ್ತದೆ.

೭. ವ್ರತ ಉಪವಾಸ ಮೊದಲಾದ ನಿಯಮಗಳಿಂದಲೂ, ಇಂದ್ರಿಯನಿಗ್ರಹದಿಂದಲೂ, ಇರುವುದು ಕಾಯಿಕವಾದ ಭಕ್ತಿ ಎನಿಸುತ್ತದೆ. ಇದು ಸರ್ವಸಿದ್ಧಿಯನ್ನು ಕೊಡುತ್ತದೆ.

೮. ಪಾದ್ಯ, ಅರ್ಘ್ಯ, ನೃತ್ಯ, ವಾದ್ಯ, ಗೀತ, ಬಲಿ, ಜಾಗರಣೆ ಪೂಜೆಗಳಿಂದ ಹರಿಯನ್ನು ಸಂತೋಷಪಡಿಸುವುದು ಲೌಕಿಕ ಭಕ್ತಿ ಎಂದೆನಿಸುತ್ತದೆ.

ಋಗ್ಯಜುಸ್ಸಾಮಜಪ್ಯೈಶ್ಚ ಸಂಹಿತಾಧ್ಯಯನಾದಿಭಿಃ ।
ಹವಿರ್ಹೋಮಕ್ರಿಯಾಭಿಶ್ಚ ಯಾ ಭಕ್ತಿಸ್ಸಾತು ವೈದಿಕೀ ॥ ೯ ॥

ದರ್ಶಶ್ಚ ಪೌರ್ಣಮಾಸಶ್ಚ ವಿಷುವಾದಿಷು ಯಃ ಪುನಃ ।
ಯಾಗಸ್ಸಂಕೀರ್ತಿತೋ ವಿಜ್ಞೈಃ ವೈದಿಕೀಭಕ್ತಿಸಾಧಕಃ ॥ ೧೦ ॥

ಚತುರ್ವಿಂಶತಿತತ್ವಾನಿ ಪ್ರಧಾನಾದೀನಿ ಸಂಖ್ಯಯಾ ।
ಅಚೇತನಾನಿ ರಾಜೇಂದ್ರ ಪುರುಷಃ ಪಂಚವಿಂಶಕಃ ॥ ೧೧ ॥

ಚೇತನಸ್ಸಸಮುದ್ದಿಷ್ಟಃ ಕರ್ತಾ ಭೋಕ್ತಾ ಚ ಕರ್ಮಣಾ ।
ಆತ್ಮಾ ನಿತ್ಯೋ ಹ್ಯಸಕ್ತಶ್ಚ ಹ್ಯಧಿಷ್ಠಾತಾ ಪ್ರಯೋಜಕಃ ॥ ೧೨ ॥

ವ್ಯಕ್ತಿಸ್ಥಶ್ಚೇತನೋ ನಿತ್ಯಃ ಕಾರಣಾನಾಂ ಚ ಕಾರಣಂ ।
ತತ್ವಸರ್ಗೋ ಭಾವಸರ್ಗೋ ಭೂತಸರ್ಗಶ್ಚ ತತ್ವತಃ ॥ ೧೩ ॥

---

೯. ಋಕ್, ಯಜಸ್ಸು, ಸಾಮವೇದಗಳ ಸಂಹಿತೆಗಳನ್ನು ಅಧ್ಯಯನಮಾಡುವುದೂ, ಹವಿಸ್ಸನ್ನೂ ಹೋಮಮಾಡುವ ಯಾಗಾದಿಗಳಿಂದಲೂ ಮಾಡುವ ಭಕ್ತಿಯು ವೈದಿಕ ಭಕ್ತಿಯೆನಿಸುವುದು.

೧೦. ದರ್ಶ, ಪೂರ್ಣಮಾಸ ಯಾಗಗಳನ್ನು ಮಾಡುವುದು ವಿಷುವತ್ಪುಣ್ಯ ಕಾಲದ ಕ್ರಿಯೆಗಳನ್ನು ಮಾಡುವುದು ಈ ಯಾಗಗಳು ವೈದಿಕೀಭಕ್ತಿ ಎನ್ನಿಸಿಕೊಳ್ಳುತ್ತವೆ.

೧೧. ಸಾಂಖ್ಯಕಾರರು ತತ್ವಗಳು ಇಪ್ಪತ್ತನಾಲ್ಕೆಂದೂ, ಅವೆಲ್ಲವೂ ಅಚೇತನಗಳೆಂದೂ ಪುರುಷನು ಮಾತ್ರ ಇಪ್ಪತ್ತೈದನೆಯವನೆಂದೂ ಹೇಳುತ್ತಾರೆ.

೧೨. ಅವನು ಚೇತನನೆಂದೂ, ಕರ್ಮಗಳನ್ನು ಭೋಗಿಸುವನೆಂದೂ, ಹೇಳುತ್ತಾರೆ ಆತ್ಮನು ನಿತ್ಯನೆಂದೂ, ಮತ್ತೊಂದರ ಜತೆಯಲ್ಲಿ ಸೇರದವನೆಂದೂ, ಆದರೆ ಮತ್ತೊಂದರಲ್ಲಿದ್ದು ಕೊಂಡಿರುವನೆಂದೂ, ಕೆಲಸಮಾಡಲು ಪ್ರೇರಕನೆಂದೂ, ಹೇಳುತ್ತಾರೆ.

೧೩. ಚೇತನನು, ವ್ಯಕ್ತಿಗಳಲ್ಲಿರುತ್ತಾನೆ. ಅವನೂ ನಿತ್ಯನು. ಕಾರಣಗಳಿಗೂ ಕಾರಣನು. ಅವನೇ ತತ್ವಸರ್ಗ, ಭಾವಸರ್ಗ, ಭೂತಸರ್ಗ ಎಂಬ ಭೇದಗಳುಳ್ಳವನು.

ಸಂಖ್ಯಾಯಾಶ್ಚ ಪ್ರಸಂಖ್ಯಾನಂ ಪ್ರಧಾನಂ ಚ ಗುಣಾತ್ಮಕಂ ।
ಜ್ಞಾತ್ವಾ ಸಾಧರ್ಮ್ಯವೈಧರ್ಮ್ಯೇ ಪ್ರಧಾನಸ್ಯ ಗುಣಾತ್ಮನಃ ॥ ೧೪ ॥

ಕಾರಣತ್ವಂ ಬ್ರಹ್ಮಣಶ್ಚ ಸಾಧರ್ಮ್ಯಮಿದಮುಚ್ಯತೇ ।
ನಾನಾತ್ವಂ ಚಾತ್ರ ವೈಧರ್ಮ್ಯಂ ಪ್ರಧಾನಸ್ಯ ವಿದುರ್ಬುಧಾಃ ॥ ೧೫ ॥

ತತ್ತ್ವಾನ್ತರಂ ಚ ತತ್ವಾನಾಂ ಕಾರ್ಯಕಾರಣಮೇವ ಚ ।
ಪ್ರಯೋಜನಂ ಪ್ರಯೋಜ್ಯತ್ವಂ ಜ್ಞಾತ್ವಾ ತತ್ವಪ್ರಸಂಖ್ಯಯಾ ॥ ೧೬ ॥

ಸಂಖ್ಯಾನಾಂ ಪ್ರೋಚ್ಯತೇ ಪ್ರಾಜ್ಞೈಃ ಸರ್ವತತ್ವಾರ್ಥಚಿಂತಕೈಃ ।
ಇತಿ ಮತ್ವಾಽಸ್ಯ ಸದ್ಭಾವಂ ತತ್ವಸಂಖ್ಯಾ ಚ ತತ್ವತಃ ॥ ೧೭ ॥

ಬ್ರಹ್ಮತತ್ವಾದಿಕಂ ಚಾಪಿ ಜ್ಞಾತ್ವಾ ತತ್ವಂ ವಿದುರ್ಬುಧಾಃ ।
ಸಾಂಖ್ಯೈಃ ಕೃತಾ ಭಕ್ತಿರೇಷಾ ಪ್ರೋಚ್ಯತೇಽಧ್ಯಾತ್ಮಿಕೀ ನೃಪ ॥ ೧೮ ॥

---

೧೪. ಗುಣದೊಡನೆ ಪ್ರಧಾನವು ಸೇರಿರುವುದು. ಪ್ರಧಾನಕ್ಕೂ ಗುಣಿಗೂ ಹೋಲಿಕೆ. ಹೆಚ್ಚಿಕೆಗಳನ್ನೂ ಕಡಮೆಯನ್ನೂ ತಿಳಿಯಬೇಕು. ಇವರಿಂದ ಸಂಖ್ಯೆಗಳು ಹೆಚ್ಚುತ್ತವೆ

೧೫. ಬ್ರಹ್ಮನಿಗೂ, ಪ್ರಧಾನಕ್ಕೂ ಕಾರಣತ್ವವಿರುವುದರಿಂದ ಇದೇ ಸಾಧರ್ಮ್ಯವು. ಬ್ರಹ್ಮನಿಗೆ ನಾನಾತ್ವವಿಲ್ಲ, ಪ್ರಧಾನನು ನಾನಾಬಗೆಯಾಗಿರುತ್ತಾನೆ. ಇದೇ ವೈಧರ್ಮ್ಯವು.

೧೬. ತತ್ವಗಳಿಂದಲೂ, ಬೇರೆ ತತ್ವಗಳು ಹುಟ್ಟುವುದರಿಂದಲೂ, ಅವುಗಳಿಗೆ ಕಾರ್ಯಕಾರಣವನ್ನೂ ಪ್ರಯೋಜನ ಪ್ರಯೋಜ್ಯತ್ವವನ್ನೂ ತಿಳಿಯುವುದರಿಂದಲೂ. ನಾನಾತ್ವವಾದ ಅಸಂಖ್ಯೇಯುವೆಂದೆನಿಸುವುದು.

೧೭. ಹೀಗಿರುವುದರಿಂದ ಸಂಖ್ಯೆಗಳನೇಕವೆಂದೂ ಪ್ರಾಜ್ಞರು ಹೇಳುತ್ತಾರೆ ಈರೀತಿ ಇದರ ಸತ್ತಾತ್ವವನ್ನೂ ತತ್ವಗಳ ಸಂಖ್ಯೆಯನ್ನೂ ತಿಳಿಯಬೇಕು.

೧೮. ಇದರಿಂದಲೇ ಬ್ರಹ್ಮತತ್ವವು ಅಧಿಕವೆಂದು ತಿಳಿಯುತ್ತಾರೆ. ಇದು ಸಾಂಖ್ಯರು ಮಾಡಿರುವ ಭಕ್ತಿ. ಆಧ್ಯಾತ್ಮಿಕವಾದುದು.

ಯೋಗಜಾಮಪಿ ವಕ್ಷ್ಯಾಮಿ ಭಕ್ತಿಮಾಧ್ಯಾತ್ಮಿಕೀಂ ಶೃಣು ।
ಪ್ರಾಣಾಯಾಮಪರೋ ನಿತ್ಯಂ ಧ್ಯಾನವಾನ್ನಿಯತೇಂದ್ರಿಯಃ ॥ ೧೯ ॥

ಭೈಕ್ಷ್ಯಭಕ್ಷ್ಯಪ್ರತೀ ಚಾಪಿ ವಿಷಯೇಭ್ಯೋ ನಿವೃತ್ತಿಮಾನ್ ।
ಪಶ್ಯನ್ನುದ್ಯೋತಿತಮುಖಂ ಬ್ರಹ್ಮಸೂತ್ರಂ ಕಟೇತಟೇ ॥ ೨೦ ॥

ಶ್ವೇತವರ್ಣಂ ಚತುರ್ಬಾಹುಂ ವರದಾಭಯಹಸ್ತಕಂ ।
ಧ್ಯಾಯಮಾನಸ್ಸ್ವಹೃದಯೇ ಯೋಗಯುಕ್ತೋ ಮಹೇಶ್ವರಂ ॥ ೨೧ ॥

ಹೃಷ್ಟಂ ಸಚೇತಸಾ ರಾಜನ್ಪೀತವಸ್ತ್ರಂ ಸುಲೋಚನಂ ।
ಯೋಗಜಾ ಮಾನಸೀ ಸಿದ್ಧಿಃ ವಿಷ್ಣುಭಕ್ತಿಃ ಪರಾಸ್ಮೃತಂ ॥ ೨೨ ॥

ಯಸ್ಯೈವಂ ಭಕ್ತಿಮಾನ್ದೇವೇ ವಿಷ್ಣುಭಕ್ತಸ್ಸ ಉಚ್ಯತೇ ।
ಏವಂ ಭಕ್ತಿಸ್ಸಮುದ್ದಿಷ್ಟಾ ವಿವಿಧಾ ನೃಪನಂದನ ॥ ೨೩ ॥

ಸಾತ್ವಿಕೀ ರಾಜಸೀ ಚೈವ ತಾಮಸೀಭೇದತಸ್ತ್ರಿಮಾಃ ।
ಭಕ್ತಯೋ ವಿವಿಧಾ ಜ್ಞೇಯಾ ವಿಷ್ಣೋರಮಿತತೇಜಸಃ ॥ ೨೪ ॥

---

೧೯. ಯೋಗದಿಂದುಂಟಾಗುವ ಆಧ್ಯಾತ್ಮಿಕವಾದ ಭಕ್ತಿಯನ್ನು ಹೇಳುತ್ತೇನೆ. ಕೇಳು. ಜಿತೇಂದ್ರಿಯನಾಗಿ ನಿತ್ಯವೂ ಪ್ರಾಣಾಯಾಮ ಮಾಡುತ್ತಾ ಧ್ಯಾನಮಾಡು ತ್ತಿರಬೇಕು.

೨೦–೨೧. ಭಿಕ್ಷಾನ್ನವನ್ನು ತಿನ್ನುತ್ತಾ ವಿಷಯಗಳಲ್ಲಿ ನಿಸ್ಪೃಹನಾಗಿ ಪ್ರಕಾಶ ಮಾನನಾದ ಮುಖವುಳ್ಳ, ಜನಿವಾರವು ಸೊಂಟದಲ್ಲಿರುವ ಬೆಳ್ಳಗಿರುವ ನಾಲ್ಕುತೋಳು ಗಳುಳ್ಳ ವರಹಸ್ತ ಅಭಯ ಹಸ್ತಗಳಿಂದ ಕೂಡಿರುವ ಮಹೇಶ್ವರನನ್ನು ಯೋಗಯು ಕ್ತನಾಗಿ ಹೃದಯದಲ್ಲಿ ಧ್ಯಾನಿಸಬೇಕು.

೨೨-೨೪. ಹಳದಿಯ ಬಣ್ಣದ ಬಟ್ಟೆಯುಳ್ಳ, ಒಳ್ಳೆಯ ಕಣ್ಣುಗಳುಳ್ಳ ಸಂತೋಷ ದಿಂದಿರುವ ಸ್ವಾಮಿಯನ್ನು ಧ್ಯಾನಿಸಬೇಕು. ಯೋಗದಿಂದುಂಟಾಗುವ ಮಾನಸಸಿದ್ಧಿಯು ಉತ್ತಮವಾದ ವಿಷ್ಣುಭಕ್ತಿಯು. ಈ ರೀತಿಯಲ್ಲಿ ಭಕ್ತಿಯನ್ನಿಟ್ಟರೆ ಅದೇ ವಿಷ್ಣುಭಕ್ತಿ ಎಂದೆನಿಸುತ್ತದೆ. ಅವನೇ ವಿಷ್ಣು ಭಕ್ತನೆನಿಸುತ್ತಾನೆ. ಈ ರೀತಿಯಾದ ಭಕ್ತಿಯು ನಾನಾಬಗೆಯೆಂದು ಹೇಳಲ್ಪಟ್ಟಿರುತ್ತದೆ ಇವನ್ನೇ ಸಾತ್ವಿಕೀ, ರಾಜಸೀ, ತಾಮಸೀ ಎಂದು ಹೇಳುತ್ತಾರೆ. ಈ ರೀತಿ ಭಕ್ತಿಗಳು ನಾನಾಬಗೆಗಳು.

ಯಥಾಽಗ್ನಿಸ್ಸುಸಮಿದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ ।
ಪಾಪಾನಿ ಭಗವದ್ಭಕ್ತಿಃ ತಥಾ ದಹತಿ ತತ್ಕ್ಷಣಾತ್ ॥ ೨೫ ॥

ಯಾವಜ್ಜನೋ ನ ಶೃಣುತೇ ಭುವಿ ವಿಷ್ಣುಭಕ್ತಿಂ ।
ಸಾಕ್ಷಾತ್ಸುಧಾರಸಮಶೇಷರಸೈಕಸಾರಂ ॥
ತಾವಜ್ಜರಾಮರಣಜನ್ಮಶತಾಭಿಘಾತದುಃಖಾನಿ ।
ತಾನಿ ಲಭತೇ ಬಹುದೋಷಜಾನಿ ॥ ೨೬ ॥

ಸಂಚಿಂತಿತಃ ಕೀರ್ತಿತ ಏವ ನಿತ್ಯಂ ।
ಮಹಾನುಭಾವೋ ಭಗವಾನನಂತಃ ॥
ಸಮಂತತೋಽಘಂ ವಿನಿಹಂತಿ ಮೇಘಂ ।
ವಾಯುರ್ಯಥಾ ಭಾನುರಿವಾಂಧಕಾರಂ ॥ ೨೭ ॥

ನ ಭೂಪ ದೇವಾರ್ಚನ ಯಜ್ಞತೀರ್ಥ ।
ಸ್ನಾನವ್ರತಾಚಾರತಪಃಕ್ರಿಯಾಭಿಃ ॥
ತಥಾ ವಿಶುದ್ಧಿಂ ಲಭತೇಂಽತರಾತ್ಮಾ ।
ಯಥಾ ಹೃದಿಸ್ಥೇ ಭಗವಾನನಂತೇ ॥ ೨೮ ॥

---

೨೫. ಚೆನ್ನಾಗಿ ಉರಿಯುತ್ತಿರುವ ಬೆಂಕಿಯು ಕಟ್ಟಿಗೆಯನ್ನು ಹೇಗೆ ಬೂದಿ ಮಾಡುತ್ತದೆಯೋ ಹಾಗೆ ಭಗವದ್ಭಕ್ತಿಯು ಪಾಪಗಳನ್ನು ಆಕ್ಷಣದಲ್ಲಿಯೇ ಸುಡುತ್ತದೆ.

೨೬. ಎಲ್ಲಾ ರಸಗಳ ಮುಖ್ಯರಸವಾದ ಪ್ರತ್ಯಕ್ಷ ಅಮೃತವಾದ ವಿಷ್ಣುಭಕ್ತಿಯನ್ನು ಎಷ್ಟರವರೆಗೆ ಜನರು ಕೇಳುವುದಿಲ್ಲವೋ ಅಲ್ಲಿಯವರೆಗೂ, ಬಹು ದೇಹೋತ್ಪತ್ತಿಯನ್ನು ತಾಳಿ ಹುಟ್ಟು ಸಾವು ಮುಪ್ಪುಗಳ ದುಃಖವನ್ನು ಹೊಂದುತ್ತಾರೆ. ಕೇಳಿದೊಡನೆಯೇ ಅವೆಲ್ಲವೂ ನಾಶವಾಗುತ್ತವೆ

೨೭. ಮಹಾನುಭಾವನಾದ ಅನಂತನನ್ನು ಚಿಂತಿಸಿದರೆ, ಹೊಗಳಿದರೆ ವಾಯುವು ಮೇಘಗಳನ್ನು ನಾಶಪಡಿಸುವಂತೆಯೂ, ಸೂರ್ಯನು ಕತ್ತಲೆಯನ್ನು ನಾಶಮಾಡುವಂತೆಯೂ, ಪಾಪಗಳನ್ನೆಲ್ಲಾ ನಾಶಮಾಡುತ್ತಾನೆ.

೨೮. ಸ್ವಾಮಿಯಾದ ಅನಂತನು ಅಂತರಂಗದಲ್ಲಿದ್ದರೆ ಆತ್ಮನು ಯಾವ ರೀತಿಯಾದ ಶುದ್ಧಿಯನ್ನು ಹೊಂದುತ್ತಾನೋ ಆ ರೀತಿ ದೇವತಾರ್ಚನೆ, ಯಜ್ಞ, ತೀರ್ಥ ಸ್ನಾನ, ವ್ರತ, ಆಚಾರ, ತಪಸ್ಸು ಇವುಗಳೊಂದರಿಂದಲೂ ಸಹ ಶುದ್ಧಿಯನ್ನು ಹೊಂದುವುದಿಲ್ಲ.

ತಥಾ ವಿಶುದ್ಧಾ ನರನಾಥ ತಥ್ಯಾ
ಸ್ತಾ ಏವ ಪಥ್ಯಾ ಹರಿಭಕ್ತಿಕಥ್ಯಾಃ ।
ಸಂಕೀರ್ತ್ಯತೇ ಯಾಸು ಪವಿತ್ರಕೀರ್ತಿಃ
ವಿಶುದ್ಧಮೂರ್ತಿರ್ನಿಜಪತ್ರಭಕ್ತಿಃ ॥ ೨೯ ॥

ಧನ್ಯೋಽಸಿ ಧೀರಧರಣೀಧರಧರ್ಮಧರ್ಮಧುರ್ಯ-
ಧ್ಯಾನೈಕತಾನಹೃದಯಃ ಪುರುಷೋತ್ತಮಸ್ಯ ।
ಯನ್ನೈಷ್ಠಿಕೀಮತಿರಸೌ ತವ ಸೌಭಗಶ್ರೀಃ
ಶ್ರೀಕೃಷ್ಣಚಂದ್ರಸುಕೃತಿಶ್ಚರಣೇ ಪ್ರವೃತ್ತಾ ॥ ೩೦ ॥

ಅನಾರಾಧ್ಯ ಹರಿಂ ಭಕ್ತ್ಯಾ ವರದಂ ವಿಷ್ಣುಮವ್ಯಯಂ ।
ಕುತಃ ಶ್ರೇಯೋಭವೇದ್ಭೂಪ ಪುರುಷಸ್ಯಾತ್ಮಮಾನಿನಃ ॥ ೩೧ ॥

ಮಾಯಾಜನಿರಮಾಯೋಽಸೌ ಭಕ್ತ್ಯಾ ರಾಜನ್ಯಮಾಯಯಾ ।
ಸಾಧ್ಯತೇ ಸಾಧುಪುರುಷೈಃ ಸ್ವಯಂ ಜಾನಾತಿ ತದ್ಭವಾನ್ ॥ ೩೨ ॥

---

೨೯. ಎಲೈ ರಾಜನೇ ಹರಿಭಕ್ತನಿಂದ ಹೇಳಲ್ಪಟ್ಟ ಕಥೆಗಳೇ ಶುದ್ಧವಾದುವು ನಿಶ್ಚಯವಾದುವು. ಪಾಪರಹಿತವಾದುವು. ಹಿತಕರವಾದುವು. ಅವುಗಳಲ್ಲಿ ಸ್ವಾಮಿಯ ಕೀರ್ತಿಯು ಭಕ್ತಿಯಿಂದ ಕೂಡಿದೆ. ಪವಿತ್ರವಾಗಿದೆ.

೩೦. ಎಲೈ ಧರ್ಮದಲ್ಲಿ ಆಸಕ್ತಿಯುಳ್ಳ ರಾಜನೇ ಪುರುಷೋತ್ತಮನ ಧ್ಯಾನ ದಲ್ಲಿ ಮನಸ್ಸಿರುವುದರಿಂದ ನೀನೇ ಧನ್ಯನು ನಿನ್ನ ಬುದ್ಧಿಯೆಲ್ಲವೂ, ಆ ಸ್ವಾಮಿಯ ಲ್ಲಿಯೇ ಇದೆ. ನಿನ್ನ ಮತಿಯು ಆ ಸ್ವಾಮಿಯ ಪಾದದ ವಿಷಯಗಳನ್ನು ಕೇಳುವು ದರಲ್ಲಿಯೇ ಸ್ಥಿರವಾಗಿದೆ.

೩೧. ಆತ್ಮಾಭಿಮಾನವುಳ್ಳ ಪುರುಷನಿಗೆ ವರದನೂ, ಅವ್ಯಯನೂ ಆದ ಆ ವಿಷ್ಣುವನ್ನಾರಾಧಿಸದಿದ್ದರೆ ಶ್ರೇಯಸ್ಸೆಲ್ಲುಂಟು ? ಇಲ್ಲವೇ ಇಲ್ಲ.

೩೨. ಈ ಸ್ವಾಮಿಯು ಮಾಯೆಯನ್ನು ಹುಟ್ಟಿಸುವನಾದರೂ, ಮಾಯೆ ಯಿಂದ ಕೂಡಿದವನಲ್ಲ. ಆ ಮಾಯೆಯನ್ನೇ ಪ್ರಧಾನವಾಗಿಟ್ಟುಕೊಂಡ ಸಾಧುಪುರು ಷರಿಂದ ಭಕ್ತಿಯಿಂದ ಸಾಧಿಸಲು ಯೋಗ್ಯನು. ನೀನು ಅದನ್ನು ತಿಳಿ.

ನ ವಿದ್ಯತೇ ತೇ ನೃಪಧರ್ಮತತ್ವ-
ಮಜ್ಞಾತಮೇತದ್ವಿಪುಲಂ ಪುನರ್ಮ್ಯಾಂ ।
ಯತ್ಪೃಚ್ಛತೇ ತೀರ್ಥಪದಪ್ರಸಂಗಾ
ತ್ಕಥಾರಸಂ ವೈಷ್ಣವಗೌರವೇಣ　　॥ ೩೩ ॥

ನಾತಃಪರಂ ಪರಮತೋಷವಿಶೇಷಪೋಷಂ
ಪಶ್ಯಾಮಿ ಪುಣ್ಯಮುಚಿತಂ ಚ ಪರಸ್ಪರೇಣ ।
ಸಂತಃ ಪ್ರಸಜ್ಯ ಯದನಂತಗುಣಾನನಂತ-
ಶ್ರೇಯೋನಿಧೀನಧಿಕಭಾವಜುಷೋ ಭಜಂತಿ　　॥ ೩೪ ॥

ಬ್ರಾಹ್ಮಣಾಸ್ಸುರಭೀ ಸತ್ಯಂ ಶ್ರದ್ಧಾ ಯಾಗತಪಾಂಸಿ ಚ ।
ಶ್ರುತಿಸ್ಸ್ಮೃತಿರ್ದಯಾ ದೀಕ್ಷಾ ಸಂತೋಷಾಸ್ತನವೋ ಹರೇಃ　　॥ ೩೫ ॥

ಆದಿತ್ಯಶ್ಚಂದ್ರಮಾವಾಯುರ್ಭೂಮಿರಾಪೋಂಽಬರಂ ದಿಶಃ ।
ಬ್ರಹ್ಮಾ ವಿಷ್ಣುಶ್ಚ ರುದ್ರಾಶ್ಚ ಸರ್ವಭೂತಮಯೋ ವಿಭುಃ　　॥ ೩೬ ॥

---

೩೩. ಎಲೈ ದೊರೆಯೇ ! ನಿನಗೆ ಗೊತ್ತಿಲ್ಲದಿರುವ ಧರ್ಮತತ್ವವಿಲ್ಲ. ಆದರೆ ನಾನು ಯೋಗ್ಯನೆಂಬ ಭಾವನೆಯಿಂದಲೂ, ವೈಷ್ಣವನೆಂಬ ಗೌರವದಿಂದಲೂ, ಕೇಳಿದ್ದೀಯೆ.

೩೪. ಸತ್ಪುರುಷರು ಯಾವ ಸ್ವಾಮಿಯ ಅನಂತಗುಣಗಳನ್ನು ಹೊಗಳಿ ಹೆಚ್ಚಾದ ಭಕ್ತಿಭಾವವನ್ನು ಹೊಂದುತ್ತಾರೆಯೋ ಅದಕ್ಕಿಂತಲೂ ಕೂಡ ಸಂತೋಷ ಕರವಾದ ಯೋಗ್ಯವಾದ ಪುಣ್ಯವೊಂದನ್ನು ಕಾಣೆನು.

೩೫. ಬ್ರಾಹ್ಮಣರು, ಗೋವು, ಸತ್ಯ, ಶ್ರದ್ಧೆ, ಯಾಗ ತಪಸ್ಸು, ಶ್ರುತಿ, ಸ್ಮೃತಿ, ದಯೆ, ದೀಕ್ಷೆ, ಸಂತೋಷ ಇವೇ ಹರಿಯ ದೇಹಗಳು.

೩೬. ಸೂರ್ಯ, ಚಂದ್ರ, ವಾಯು, ಭೂಮಿ, ನೀರು ಆಕಾಶ, ದಿಕ್ಕು, ಬ್ರಹ್ಮ, ವಿಷ್ಣು, ರುದ್ರ, ಇವರಿಂದ ಕೂಡಿದ ಸರ್ವಭೂತಮಯನಾದವನೇ ಆ ಸ್ವಾಮಿಯು.

ವಿಶ್ವರೂಪಸ್ಸ್ವಯಂ ಶಕ್ತೋ ಜಗದೇತಚ್ಚರಾಚರಂ ।
ಸ್ವಯಂ ಬ್ರಾಹ್ಮಣಮಾವಿಶ್ಯ ಸದ್ಯೈಸಾನ್ನಂ ಭುನಕ್ತಿ ಚ ॥ ೩೭ ॥

ತತಸ್ತು ತೀರ್ಥಾಸ್ಪದಪಾದರೇಣೂನ್
ಧರಾಧರಾತ್ಮಾಲಯ ಭೂಮಿರೇಖಾನ್ ।
ಸಂಭಾವ್ಯ ಸಂಪೂಜಯ ಪುಣ್ಯಲಕ್ಷ್ಮೀ
ಸ್ಸರ್ವಸ್ವಭೂತಾನಖಿಲಾತ್ಮಭೂತಾನ್ ॥ ೩೮ ॥

ಬ್ರಾಹ್ಮಣಂ ವಿಷ್ಣುಬುದ್ಧ್ಯಾ ಯೋ ವಿದ್ವಾಂಸಂ ಸಾಧು ಪಶ್ಯತಿ ।
ಸ ಏವ ವೈಷ್ಣವೋ ಯಶ್ಚ ಸ್ವಸ್ಯ ಧರ್ಮೇ ಸಮಾಸ್ಥಿತಃ ॥ ೩೯ ॥

ಏತತ್ತೇ ಸರ್ವಮಾಖ್ಯಾತಂ ಭಕ್ತಿಲಕ್ಷಣಮರ್ಥಿತಂ ।
ಸ್ನಾತುಂ ಗಚ್ಛಾಮಿ ಗಂಗಾಯಾಂ ನ ಕಥಾವಸರೋಽಧಿಕಃ ॥ ೪೦ ॥

ಪ್ರಾಪ್ತೋಽಯಂ ಮಾಧವೋ ಮಾಸೋ ಮಾಧವಸ್ಯಾತಿವಲ್ಲಭಃ ।
ತಸ್ಯಾಪಿ ಸಪ್ತಮೀ ಶುಕ್ಲಾ ಗಂಗಾಯಾಮತಿದುರ್ಲಭಾ ॥ ೪೧ ॥

---

೩೭. ಈ ಹರಿಯು ವಿಶ್ವರೂಪನು. ಸ್ವತಃ ಶಕ್ತನು. ಆತನೇ ಈ ಚರಾಚರವಾದ ಪ್ರಪಂಚವು. ಇವನು ತಾನೇ ಬ್ರಾಹ್ಮಣರಲ್ಲಿದ್ದುಕೊಂಡು ಭೋಗಗಳನ್ನು ಅನುಭವಿಸುತ್ತಾ ಅನ್ನವನ್ನು ತಿನ್ನುತ್ತಾನೆ.

೩೮. ಆದ್ದರಿಂದ ತೀರ್ಥಯಾತ್ರೆಯಲ್ಲಾಸಕ್ತರಾದ ಕಾಡುಗಳಲ್ಲಿ ವಾಸಮಾಡುವ ಪುಣ್ಯವಂತರಾದ ಸರ್ವಭೂತಸ್ವರೂಪರಾದ ಎಲ್ಲದಕ್ಕೂ ಆತ್ಮಭೂತರಾದ ಬ್ರಾಹ್ಮಣರನ್ನು ನೋಡಿ ಪೂಜಿಸು.

೩೯. ವಿದ್ವಾಂಸನಾದ ಬ್ರಾಹ್ಮಣನನ್ನು ವಿಷ್ಣುಭಕ್ತಿಯಿಂದ ಯಾವನು ನೋಡುತ್ತಾನೆಯೋ ಯಾವನು ಸ್ವಧರ್ಮವನ್ನಾಶ್ರಯಿಸಿರುತ್ತಾನೆಯೋ ಅವನೇ ವೈಷ್ಣವನು.

೪೦. ನೀನು ಕೇಳಿದ ಭಕ್ತಿಲಕ್ಷಣವನ್ನು ಹೇಳಿದ್ದೇನೆ. ಗಂಗಾಸ್ನಾನಕ್ಕೆ ಹೋಗಬೇಕು. ಹೆಚ್ಚಾಗಿ ಹೇಳಲು ಸಮಯವಿಲ್ಲ.

೪೧. ಮಾಧವನಿಗೆ ಪ್ರೀತಿಕರವಾದ ವೈಶಾಖಮಾಸವು ಬಂದಿತು. ಅದರಲ್ಲೂ ಆ ವೈಶಾಖದ ಶುದ್ಧಸಪ್ತಮಿಯು ಗಂಗೆಯಲ್ಲಿ ಸಿಕ್ಕುವುದು ದುರ್ಲಭವು.

ವೈಶಾಖಶುಕ್ಲಸಪ್ತಮ್ಯಾಂ ಜಾಹ್ನವೀ ಜುಹ್ನುನಾ ಪುರಾ ।
ಕ್ರೋಧಾತ್ಪೀತಾ ಪುನಸ್ತ್ಯಕ್ತಾ ಕರ್ಣರಂಧ್ರಾತ್ತು ದಕ್ಷಿಣಾತ್ ॥ ೪೨ ॥

ತಸ್ಯಾಂ ಸಮರ್ಚಯೇದ್ದೇವೀಂ ಗಂಗಾಂ ಗಗನಮೇಖಲಾಂ ।
ಸ್ನಾತ್ವಾ ಸಮ್ಯಗ್ವಿಧಾನೇನ ಸಧನ್ಯಸ್ಸುಕೃತೀ ನರಃ ॥ ೪೩ ॥

ತಸ್ಯಾಂ ಯಸ್ತರ್ಪಯೇದ್ದೇವಾನ್ಪಿತ್ರ್ಯಾನ್ಮರ್ತ್ಯಾ ಯಥಾವಿಧಿ ।
ಸಾಕ್ಷಾತ್ಪಶ್ಯತಿ ತಂ ಗಂಗಾ ಸ್ನಾತಕಂ ಗತಪಾತಕಂ ॥ ೪೪ ॥

ನ ಮಾಧವಸಮೋ ಮಾಸೋ ನ ಗಂಗಾಸದೃಶೀ ನದೀ ।
ದುರ್ಲಭಃ ಖಲು ಯೋಗೋಽಯಂ ಹರಿಭಕ್ತ್ಯೈವ ಲಭ್ಯತೇ ॥ ೪೫ ॥

ವಿಷ್ಣುಪಾದಸಮುದ್ಭೂತಾ ಬ್ರಹ್ಮಲೋಕಾದುಪಾಗತಾ ।
ಶ್ರೀಮಹೇಶಜಟಾಜೂಟವಾಸಿನೀ ದುಃಖನಾಶಿನೀ ॥ ೪೬ ॥

---

೪೨. ವೈಶಾಖ ಶುದ್ಧ ಸಪ್ತಮಿಯ ದಿನ ಜಹ್ನು ಋಷಿಯು ಕೋಪದಿಂದ ಗಂಗೆಯನ್ನು ಪಾನಮಾಡಿ ಮತ್ತೆ ಬಲಗಿವಿಯಿಂದ ಬಿಟ್ಟನು

೪೩. ಆದಿನ ಅಂತರಿಕ್ಷಕ್ಕೆ ಡಾಬಿನ ರೂಪದಲ್ಲಿರುವ ಗಂಗೆಯನ್ನು ಪೂಜಿಸಬೇಕು. ವಿಧಿವತ್ತಾಗಿ ಸ್ನಾನಮಾಡಿ ಪೂಜಿಸಿದರೆ ಅವರೇ ಧನ್ಯರು.

೪೪. ಆ ಗಂಗೆಯಲ್ಲಿ ದೇವತೆಗಳನ್ನೂ, ಪಿತೃಗಳನ್ನೂ, ವಿಧಿವತ್ತಾಗಿ ತರ್ಪಿಸಿದರೆ ಆತನು ಪಾಪಗಳಿಂದ ಮುಕ್ತನಾಗುತ್ತಾನೆ. ಅವನನ್ನು ಗಂಗೆಯು ಸಾಕ್ಷಾತ್ತಾಗಿ ನೋಡುತ್ತಾಳೆ.

೪೫. ವೈಶಾಖಮಾಸಕ್ಕೆ ಸಮನಾದ ಮಾಸವಿಲ್ಲ. ಗಂಗೆಗೆ ಸಮನಾದ ನದಿಯಿಲ್ಲ. ಇವೆರಡೂ ಸಿಕ್ಕುವುದು ಬಹು ಕಷ್ಟವು. ಹರಿಭಕ್ತಿಯಿಂದ ಮಾತ್ರ ಸಿಕ್ಕುತ್ತದೆ.

೪೬. ಈ ಗಂಗೆಯು ವಿಷ್ಣುಪಾದದಿಂದ ಹುಟ್ಟಿದವಳು. ಬ್ರಹ್ಮಲೋಕದಿಂದ ಬಂದವಳು. ಮಹೇಶ್ವರನ ಜಟೆಯಲ್ಲಿ ವಾಸಮಾಡಿದವಳು ಇಂತಹ ಶ್ರೇಷ್ಠಳು. ಪಾಪನಾಶಕಳು.

ತ್ರಿಭಿಸ್ಸ್ರೋತೋಭಿರಶ್ರಾನ್ತಂ ಯಾ ಪುನಾತಿ ಜಗತ್ತ್ರಯಂ ।
ಸ್ವರ್ಗಾರೋಹಣನಿಶ್ರೇಣೀ ಸತತಾನಂದಕಾರಿಣೀ ॥ ೪೭ ॥

ಅನೇಕದುರಿತೋದ್ಧಾರಹಾರಿಣೀ ದುರ್ಗತಾರಿಣೀ ।
ಭಜಮಾನಜನಸ್ಯಾನ್ತಃ ಕಾಂತಿ ಕೇಳಿವಿಲಾಸಿನೀ ॥ ೪೮ ॥

ಸಗರಾನ್ವಯ ನಿರ್ವಾಣಕಾರಿಣೀ ಧರ್ಮಚಾರಿಣೀ ।
ತ್ರಿಮಾರ್ಗಚಾರಿಣೀ ದೇವೀ ಲೋಕಾಲಂಕೃತಕಾರಿಣೀ ॥ ೪೯ ॥

ದರ್ಶನಸ್ಪರ್ಶನಸ್ನಾನಕೀರ್ತನ ಧ್ಯಾನಸೇವನೈಃ ।
ಅಪುಣ್ಯಾನ್ಪುಣ್ಯಪುರುಷಾನ್ಪಾವಯಂತೀ ಸಹಸ್ರಶಃ ॥ ೫೦ ॥

ಗಂಗಾ ಗಂಗೇತಿ ಗಂಗೇತಿ ಯೈಸ್ತ್ರಿಸಂಧ್ಯಂ ತ್ರಿರೀರಿತಂ ।
ಸುದೂರಸ್ಥೈಶ್ಚ ತತ್ಪಾಪಂ ಹನ್ತಿ ಜನ್ಮತ್ರಯಾರ್ಜಿತಂ ॥ ೫೧ ॥

---

೪೭. ಈ ಗಂಗೆಯು ಮೂರು ಪ್ರವಾಹಗಳಿಂದ ಪ್ರಪಂಚವೆಲ್ಲವನ್ನೂ ಪವಿತ್ರ ಮಾಡುತ್ತದೆ. ಸ್ವರ್ಗಕ್ಕೆ ಹೋಗಲು ಏಣಿಯಂತಿದೆ ಯಾವಾಗಲೂ ಆನಂದವನ್ನುಂಟುಮಾಡುತ್ತದೆ.

೪೮. ಅನೇಕವಾದ ಪಾಪಗಳನ್ನು ನಾಶಮಾಡುತ್ತದೆ. ಕಷ್ಟಗಳನ್ನು ದಾಟಿಸುತ್ತದೆ. ಸೇವಿಸುವವನ ಮನಸ್ಸಿಗೆ ಕಾಂತಿಯನ್ನೂ, ಶಾಂತಿಯನ್ನೂ ಕೊಡುತ್ತದೆ.

೪೯. ಸಗರವಂಶಕ್ಕೆ ಮೋಕ್ಷಕೊಟ್ಟವಳು. ಧರ್ಮಿಷ್ಠಳು. ಮೂರುಮಾರ್ಗವುಳ್ಳವಳು. ಲೋಕಕ್ಕೆ ಅಲಂಕಾರಪ್ರಾಯಳು.

೫೦. ದರ್ಶನ, ಸ್ಪರ್ಶನ, ಸ್ನಾನ, ಕೀರ್ತನ, ಧ್ಯಾನ, ಸೇವನೆ, ಇವುಗಳಿಂದ ಪಾಪಿಗಳನ್ನೂ ಪುಣ್ಯವಂತರನ್ನೂ ಸಾವಿರಗಟ್ಟಲೆ ಪವಿತ್ರವನ್ನಾಗಿ ಮಾಡತಕ್ಕವಳು.

೫೧. ಗಂಗೆ, ಗಂಗೆ, ಗಂಗೆ ಎಂದು ಮೂರು ಸಂಧ್ಯೆಗಳಲ್ಲಿಯೂ, ಯಾವನು ಗಂಗೆಯನ್ನು ಸ್ಮರಿಸುತ್ತಾನೆಯೋ ಅವನು ಪಾಪಿಯಾದರೂ ಉತ್ತಮಗತಿ ಹೊಂದುತ್ತಾನೆ.

ಯೋಜನಾನಾಂ ಸಹಸ್ರೇಷು ಗಂಗಾಂ ಯ ಸ್ಸ್ಮರತೇ ನರಃ ।
ಅಪಿ ದುಷ್ಕೃತ ಕರ್ಮಾಸೌ ಲಭತೇ ಪರಮಾಂ ಗತಿಂ ॥ ೫೨ ॥

ವೈಶಾಖಶುಕ್ಲ ಸಪ್ತಮ್ಯಾಂ ದುರ್ಲಭಾ ಸಾ ವಿಶೇಷತಃ ।
ಪ್ರಾಪ್ಯತೇ ಜಗತೀಪಾಲ ಹರಿವಿಪ್ರಪ್ರಸಾದತಃ ॥ ೫೩ ॥

ನ ಮಾಧವಸಮೋ ಮಾಸೋ ನಮಾಧವಸಮೋ ವಿಭುಃ ।
ಪೋತೋ ಹಿ ದುರಿತಾಂಭೋಧೌ ಮಜ್ಜಮಾನಜನಸ್ಯ ಯಃ ॥ ೫೪ ॥

ದತ್ತಂ ಜಪ್ತಂ ಹುತಂ ಸ್ನಾತಂ ಯದ್ಭಕ್ತ್ಯಾ ಮಾಸಿ ಮಾಧವೇ ।
ತದಕ್ಷಯಂ ಭವೇದ್ಭೂಪ ಪುಣ್ಯಂ ಕೋಟಿಶತಾಧಿಕಂ ॥ ೫೫ ॥

ಯಥಾ ದೇವೇಷು ವಿಶ್ವಾತ್ಮಾ ದೇವೋ ನಾರಾಯಣೋ ವಿಭುಃ ।
ಯಥಾ ಜಪ್ಯೇಷು ಗಾಯತ್ರೀ ಸರಿತಾಂ ಜಾಹ್ನವೀ ತಥಾ ॥ ೫೬ ॥

ಯಥೋಮಾ ಸರ್ವನಾರೀಣಾಂ ತಪತಾಂ ಭಾಸ್ಕರೋ ಯಥಾ ।
ಆರೋಗ್ಯಲಾಭೋ ಲಾಭಾನಾಂ ದ್ವಿಪದಾನಾಂ ದ್ವಿಜೋ ಯಥಾ ॥ ೫೭ ॥

---

೫೨. ಸಾವಿರ ಯೋಜನಗಳ ದೂರದಲ್ಲಿದ್ದರೂ ಯಾವನು ಗಂಗೆಯನ್ನು ಸ್ಮರಿಸುವನೋ ಅವನು ಪಾಪಿಯಾದರೂ ಮುಕ್ತನಾಗುತ್ತಾನೆ.

೫೩. ವೈಶಾಖಶುದ್ಧ ಸಪ್ತಮಿಯ ದಿನ ಆ ನದಿಯು ಸಿಕ್ಕುವುದು ಕಷ್ಟವು ಅದು ಹರಿ ಬ್ರಾಹ್ಮಣರ ಅನುಗ್ರಹದಿಂದ ಸಿಕ್ಕಬೇಕು. ಅಷ್ಟೆ.

೫೪. ವೈಶಾಖಕ್ಕೆ ಸಮವಾದ ತಿಂಗಳೂ ಇಲ್ಲ. ಮಾಧವನಿಗೆ ಸಮನಾದ ದೇವರೂ ಇಲ್ಲ. ಇವೆರಡೂ ಪಾಪವೆಂಬ ಸಮುದ್ರವನ್ನು ದಾಟಲು ತೆಪ್ಪಗಳು-

೫೫. ವೈಶಾಖಮಾಸದಲ್ಲಿ ದಾನ, ಜಪ, ಹೋಮ, ಸ್ನಾನಗಳನ್ನು ಭಕ್ತಿಯಿಂದ ಮಾಡಿದರೆ ಆ ಪುಣ್ಯವು ನೂರುಕೋಟಿಗಳಷ್ಟು ಅಕ್ಷಯವಾಗಿ ಆಗುತ್ತದೆ

೫೬. ದೇವತೆಗಳಲ್ಲಿ ವಿಷ್ಣುವೂ, ಜಪಗಳಲ್ಲಿ ಗಾಯತ್ರಿಯೂ ಹೇಗೆ ಶ್ರೇಷ್ಠವೋ ಹಾಗೆ ನದಿಗಳಲ್ಲಿ ಗಂಗೆಯು ಶ್ರೇಷ್ಠವು.

೫೭-೫೮. ಹೆಂಗಸರಲ್ಲಿ ಪಾರ್ವತಿಯಂತೆಯೂ, ತೇಜಸ್ಸುಗಳೊಳಗೆ ಸೂರ್ಯನಂತೆಯೂ, ಲಾಭಗಳೊಳಗೆ ಆರೋಗ್ಯಲಾಭದಂತೆಯೂ, ಎರಡುಕಾಲಿನ ಪ್ರಾಣಿ

ಪರೋಪಕಾರಃ ಪುಣ್ಯಾನಾಂ ವಿದ್ಯಾನಾಂ ನಿಗಮೋ ಯಥಾ ।
ಮಂತ್ರಾಣಾಂ ಪ್ರಣವೋ ಯದ್ವಧ್ಯಾನಾನಾಮಾತ್ಮಚಿಂತನಂ ॥ ೫೮ ॥

ಸತ್ಯ ಸ್ವಧರ್ಮವರ್ತಿತ್ವಂ ತಪಸಾಂ ಚ ಯಥಾ ಪರಂ ।
ಶೌಚಾನಾಮಾತ್ಮಶುದ್ಧಿಶ್ಚ ದಾನಾನಾಮಭಯಂ ಯಥಾ ॥ ೫೯ ॥

ಗುಣಾನಾಂ ಚ ಯಥಾ ಲೋಭೋ ಕ್ಷೋಭೋಮುಖ್ಯೋಗುಣಸ್ಸ್ಮೃತಃ ।
ಮಾಸಾನಾಂ ಪ್ರವರೋ ಮಾಸಃ ತಥಾಽಸೌ ಮಾಧವೋ ಮತಃ ॥ ೬೦ ॥

ತತ್ರ ಯತ್ಕ್ರಿಯತೇ ದಾನಂ ಯಜ್ಞಸ್ನಾನಮುಪೋಷಣಂ ।
ತಪೋಽಧ್ಯಯನಪೂಜಾದಿ ತದಕ್ಷಯಫಲಂ ಸ್ಮೃತಂ ॥ ೬೧ ॥

ವೈಶಾಖಾಂತಾನಿ ಪಾಪಾನಿ ಸೂರ್ಯಾಂತಾನಿ ತಮಾಂಸಿ ಚ ।
ಪರೋಪಕಾರಪೈಶುನ್ಯಪ್ರಾಸ್ತಾನಿ ಸುಕೃತಾನಿ ಚ ॥ ೬೨ ॥

---

ಗಳೊಳಗೆ ಬ್ರಾಹ್ಮಣನಂತೆಯೂ, ಪುಣ್ಯಗಳೊಳಗೆ ಪರೋಪಕಾರದಂತೆಯೂ, ವಿದ್ಯೆಗಳೊಳಗೆ ವೇದಗಳಂತೆಯೂ, ಮಂತ್ರಗಳೊಳಗೆ ಓಂಕಾರದಂತೆಯೂ, ಧ್ಯಾನಗಳೊಳಗೆ ಆತ್ಮಧ್ಯಾನದಂತೆಯೂ, ವೈಶಾಖಮಾಸವು ಶ್ರೇಷ್ಠವಾದುದು.

೫೯-೬೦. ತಪಸ್ಸಿಗೆ ಸತ್ಯವೂ, ಸ್ವಧರ್ಮದಲ್ಲಿರುವಿಕೆಯೂ, ಹೇಗೆ ಮುಖ್ಯವೋ, ಶೌಚದಲ್ಲಿ ಆತ್ಮಶುದ್ಧಿತ್ವವು ಹೇಗೆ ಮುಖ್ಯವೋ, ದಾನಗಳೊಳಗೆ ಅಭಯದಾನವು ಹೇಗೋ, ಗುಣಗಳೊಳಗೆ ಲೋಭ ಕ್ಷೋಭಗಳು ಹೇಗೆ ದೊಡ್ಡವೋ ಅವುಗಳಂತೆ ಮಾಸಗಳೊಳಗೆ ವೈಶಾಖಮಾಸವು ಬಹು ಮುಖ್ಯವಾದುದು.

೬೧. ಆ ವೈಶಾಖದಲ್ಲಿ ಮಾಡಿದ ದಾನ, ಯಜ್ಞ, ಸ್ನಾನ, ಉಪವಾಸ, ತಪಸ್ಸು ಅಧ್ಯಯನ, ಪೂಜಾದಿಗಳು ಅಕ್ಷಯ ಫಲವನ್ನು ಕೊಡುತ್ತವೆ.

೬೨. ಸೂರ್ಯನು ಕಾಣುವುದು ಕತ್ತಲಿಗೆ ಹೇಗೆ ಕೊನೆಯೋ ಸುಕೃತಕ್ಕೆ ಪರೋಪಕಾರದಲ್ಲಿ ಚಾಡಿಯನ್ನು ಹೇಳುವುದರಿಂದ ಹೇಗೆ ಕೊನೆಯೋ, ಹಾಗೆ ವೈಶಾಖವೇ ಪಾಪಕ್ಕೆ ಕೊನೆಯು.

ಕಾರ್ತಿಕೇ ಮಾಸಿ ಯತ್ಕಿಂಚಿತ್ತುಲಾಸಂಸ್ಥೇ ದಿವಾಕರೇ ।
ಸ್ನಾನದಾನಾದಿಕಂ ರಾಜನ್ತತ್ಪರಾರ್ಧಗುಣಂ ಭವೇತ್ ॥ ೬೩ ॥

ತಸ್ಮಾತ್ಸಹಸ್ರಗುಣತೋ ಮಾಘೇ ಮಕರಗೇ ರವೌ ।
ತತೋಪಿ ಶತಸಂಖ್ಯಾಕಂ ವೈಶಾಖೇ ಮೇಷಗೇ ರವೌ ॥ ೬೪ ॥

ತೇ ಧನ್ಯಾಸ್ತೇ ಸುಕೃತಿನೋ ನರಾ ವೈಶಾಖಮಾಸಿ ಯೇ ।
ಪ್ರಾತಸ್ನಾತ್ವಾ ವಿಧಾನೇನ ಪೂಜಯಂತಿ ಚ ಮಾಧವಂ ॥ ೬೫ ॥

ಪ್ರಾತಸ್ನಾನಂ ಚ ವೈಶಾಖೇ ಯಜ್ಞದಾನಮುಪೋಷಣಂ ।
ಹವಿಷ್ಯ ಬ್ರಹ್ಮಚರ್ಯಂ ಚ ಮಹಾಪಾತಕನಾಶನಂ ॥ ೬೬ ॥

ಪುನಃ ಕಲಿಯುಗೇ ರಾಜನ್ನತದ್ಗೋಪ್ಯಂ ಭವಿಷ್ಯತಿ ।
ಅಶ್ವಮೇಧಾದಿಕಂ ಯಸ್ಮಾನ್ಮಾಹಾತ್ಮ್ಯಂ ಮಾಧವಸ್ಯ ಯತ್ ॥ ೬೭ ॥

---

೬೩. ಕಾರ್ತಿಕಮಾಸವಾಗಿರಬೇಕು. ತುಲಾಮಾಸವು ಸೇರಿರಬೇಕು ಆಗ ಸ್ನಾನ ದಾನಗಳನ್ನು ಮಾಡಿದರೆ ಯಾವ ಪುಣ್ಯವು ಬರುತ್ತದೋ, ಅದರ ಪರಾರ್ಧದಷ್ಟು ಪುಣ್ಯವು ಈ ವೈಶಾಖಮಾಸದಲ್ಲಿ ಬರುತ್ತದೆ.

೬೪. ಮಾಘಮಾಸದಲ್ಲಿ ಮಕರಕ್ಕೆ ಸೂರ್ಯನು ಸೇರಿದ್ದರೆ ಆ ಕಾರ್ತಿಕಕ್ಕಿಂತ ಸಹಸ್ರದಷ್ಟು ಹೆಚ್ಚು ಫಲ ಬರುವುದು. ವೈಶಾಖದಲ್ಲಿ ಮೇಷಕ್ಕೆ ಸೂರ್ಯನು ಬಂದರೆ ಅದಕ್ಕಿಂತ ನೂರರಷ್ಟು ಹೆಚ್ಚು ಫಲ ಬರುತ್ತದೆ.

೬೫. ವೈಶಾಖಮಾಸದಲ್ಲಿ ಪ್ರಾತಸ್ನಾನಮಾಡಿ ಯಾರು ವಿಷ್ಣುವನ್ನು ಪೂಜಿಸುತ್ತಾರೋ, ಅವರೇ ಧನ್ಯರು. ಅವರೇ ಸುಕೃತಿಗಳು.

೬೬. ವೈಶಾಖದಲ್ಲಿ ಪ್ರಾತಸ್ನಾನವೂ, ಯಜ್ಞ, ದಾನ, ಉಪವಾಸಗಳೂ, ಹವಿಸ್ಸನ್ನು ತಿನ್ನುವಿಕೆಯೂ, ಬ್ರಹ್ಮಚರ್ಯವನ್ನನುಸರಿಸುವಿಕೆಯೂ, ಮಹಾಪಾಪಗಳನ್ನು ನಾಶಮಾಡುತ್ತದೆ.

೬೭. ಅಶ್ವಮೇಧಗಳನ್ನೂ ವೈಶಾಖದ ಪುಣ್ಯವನ್ನೂ ಕಲಿಯುಗದಲ್ಲಿ ಮುಚ್ಚಬಾರದು.

ಅಶ್ವಮೇಧಮುಖಃ ಪುಣ್ಯಃ ಕಲೌ ನೈವ ಪ್ರವರ್ತತೇ ।
ಏಷ ಮಾಧವಮಾಸಸ್ಯ ಹಯಮೇಧಸಮೋ ವಿಧಿಃ ॥ ೬೮ ॥

ಅಶ್ವಮೇಧಸ್ಯ ಯತ್ಪುಣ್ಯಂ ಸ್ವರ್ಗಮೋಕ್ಷಫಲಪ್ರದಂ ।
ನವೇತ್ಸ್ಯಂತಿ ಕಲೌ ಪಾಪಾ ಜನಾದುರಿತಬುದ್ಧಯಃ ॥ ೬೯ ॥

ತಸ್ಮಿನ್ಕೃತೈರ್ನರೈಃ ಪಾಪೈರ್ಗಸ್ತವ್ಯಂ ನರಕಾರ್ಣವೇ ।
ಅತಸ್ತು ವಿರಳಸ್ತಸ್ಯ ಪ್ರಚಾರೋ ಯೇನ ನಿರ್ಮಿತಃ ॥ ೭೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಪಂಚಾಶೀತಿತಮೋಽಧ್ಯಾಯಃ

---

೬೮ ಅಶ್ವಮೇಧಯಾಗವು ಪುಣ್ಯಪ್ರದವಾದುದು. ಅದನ್ನು ಕಲಿಯುಗದಲ್ಲಿ ಮಾಡುವುದೇ ಇಲ್ಲ. ಈ ವೈಶಾಖಮಾಸದ ವಿಧಿಯು ಆ ಅಶ್ವಮೇಧಕ್ಕೆ ಸಮಾನವಾಗಿರುವುದು.

೬೯. ಅಶ್ವಮೇಧವನ್ನು ಮಾಡಿದರೆ ಸ್ವರ್ಗ, ಮೋಕ್ಷಗಳನ್ನು ಕೊಡುವ ಯಾವ ಪುಣ್ಯವು ಬರುತ್ತದೆಯೋ, ಅದನ್ನು ಪಾಪಿಗಳಾದ ಜನರು ಕಲಿಯುಗದಲ್ಲಿ ತಿಳಿದುಕೊಳ್ಳಲಾರರು.

೭೦. ಆದ್ದರಿಂದ ಆ ವೈಶಾಖದಲ್ಲಿ ಮಾಡಿದ ಪಾಪಗಳಿಗೆ ನರಕವೇ ಸಿದ್ಧವು. ಆದ್ದರಿಂದ ಆ ವೈಶಾಖಮಾಸದ ಪ್ರಚಾರವು ವಿರಳವು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೆಂಬ
ಎಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಷಡಶೀತಿತಮೋಽಧ್ಯಾಯಃ ॥



॥ ಸೂತ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ನಾರದಸ್ಯ ಮಹಾತ್ಮನಃ ।
ಅಂಬರೀಷಸ್ತು ರಾಜರ್ಷಿಃ ವಿಸ್ಮಿತೋ ವಾಕ್ಯಮಬ್ರವೀತ್ ॥ ೧ ॥

॥ ಅಂಬರೀಷ ಉವಾಚ ॥

ಮಾರ್ಗಶೀರ್ಷಾದಿಕಾನ್ಮಾಸಾನ್ಹಿತ್ವಾ ಪುಣ್ಯಾನ್ಮಹಾಮುನೇ ।
ಸರ್ವಮಾಸಾಧಿಕಂ ಮಾಸಂ ವೈಶಾಖಂ ಕಿಂ ಪ್ರಶಂಸಸಿ ॥ ೨ ॥

ಸರ್ವೇಭ್ಯೋಽಪ್ಯಧಿಕೋ ಯಸ್ಮಾನ್ಮಾಧವೋ ಮಾಧವಪ್ರಿಯಃ ।
ಕೋ ವಿಧಿಸ್ತತ್ರ ಕಿಂ ದಾನಂ ಕಿಂ ತಪಃ ಕಾಚ ದೇವತಾ ॥ ೩ ॥

---

### ಎಂಭತ್ತಾರನೆಯ ಅಧ್ಯಾಯವು

೧. ಸೂತನು ಹೇಳಿದನು- ಈ ನಾರದನು ಹೀಗೆ ಹೇಳಿದುದನ್ನು ಕೇಳಿ ಅಂಬರೀಷನು ಆಶ್ಚರ್ಯಗೊಂಡು ಇಂತೆಂದನು.

೨. ಅಂಬರೀಷನು ಹೇಳಿದನು- ಮಹಾಪುಣ್ಯಪ್ರದಗಳಾದ ಮಾರ್ಗಶೀರ್ಷಾದಿ ಮಾಸಗಳನ್ನು ಬಿಟ್ಟು ವೈಶಾಖಮಾಸವನ್ನು ಎಲ್ಲಾ ಮಾಸಕ್ಕಿಂತಲೂ ಹೆಚ್ಚೆಂದು ಏಕೆ ಹೇಳುತ್ತೀಯೆ ?

೩. ಎಲೈ ವಿಷ್ಣುಭಕ್ತನೇ ವೈಶಾಖಮಾಸವು ಎಲ್ಲಕ್ಕಿಂತಲೂ ಹೆಚ್ಚೆಂದು ಹೇಳಿದೆಯಲ್ಲ. ಅದರ ವಿಧಿಯೇನು ? ಅದರಲ್ಲಿ ದಾನವಾವುದು ? ತಪಸ್ಸೇನು ? ಅದರಲ್ಲಿ ದೇವತೆಯಾವುದು ?

ತ್ವತ್ಪಾದಾಂಭೋಜರಜಸಾ ಪಾವಿತಸ್ಯ ಚ ಮೇ ಮುನೇ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೪ ॥

ಧರ್ಮಜ್ಞೋ ಧರ್ಮಮಾರ್ಗಾಣಾಮುಪದೇಷ್ಟಾಽಸಿ ವೈ ಮುನೇ ।
ತ್ವಮೇಕೋಽಖಿಲತತ್ವಾರ್ಥಂ ಜಾನಾಸಿ ಮುನಿಸತ್ತಮ ॥ ೫ ॥

ಕರ್ತೋಪದೇಷ್ಟಾ ಧರ್ಮಾಣಾಮನುಮಂತಾ ಪ್ರಯೋಜಕಃ ।
ಶಾಸ್ತ್ರವಿದ್ಭಿರ್ಮುನಿವರ ಸ್ಮರ್ಯನ್ತೇ ಸಮಭಾಗಿನಃ ॥ ೬ ॥

ವ್ರತಸತ್ರತಪೋದಾನೈರ್ಯತ್ಫಲಂ ಸಮವಾಪ್ಯತೇ ।
ಧರ್ಮೋಪದೇಶದಾನೇನ ತತ್ಸರ್ವಮುಪಲಭ್ಯತೇ ॥ ೭ ॥

ತೀರ್ಥಸ್ನಾನಂ ತಪೋ ಯಜ್ಞಕರ್ಮ ಯತ್ಕುರುತೇ ಶುಭಂ ।
ಅಪಿ ತತ್ಫಲಭಾಗೀಸ್ಯಾದ್ಯಃ ಪ್ರವರ್ತಯಿತಾ ಭವೇತ್ ॥ ೮ ॥

---

೪. ತಮ್ಮ ಪಾದದ ಧೂಳಿಯಿಂದ ಪವಿತ್ರನಾಗಿರುವ ನನಗೆ ದಯವಿಟ್ಟು ಉಪದೇಶಮಾಡು.

೪. ನೀನು ಧರ್ಮವನ್ನು ತಿಳಿದಿರುವವನು. ಆದ್ದರಿಂದ ಉಪದೇಶಮಾಡಲು ಯೋಗ್ಯನಾಗಿದ್ದೀಯೆ. ಎಲ್ಲಾ ತತ್ವಗಳ ಅರ್ಥವನ್ನೂ ತಿಳಿದಿರುವವನೂ ನೀನೊಬ್ಬನೇ ಆಗಿದ್ದೀಯೆ.

೬. ಧರ್ಮವನ್ನು ಮಾಡುವವವನು, ಉಪದೇಶಿಸುವನು, ಅನುಮೋದಿಸುವವನು, ಪ್ರೇರಿಸುವವನು, ಇವರು ಎಲ್ಲರೂ ಆ ಧರ್ಮದಲ್ಲಿ ಸಮಾಂಶಭಾಗಿಗಳೆಂದು ಶಾಸ್ತ್ರಗಾರರು ಹೇಳುತ್ತಾರೆ.

೭. ವ್ರತ, ಯಾಗ, ತಪಸ್ಸು, ದಾನಗಳಿಂದ ಯಾವ ಫಲವು ಬರುತ್ತದೆಯೋ, ಧರ್ಮೋಪದೇಶದಿಂದಲೂ ಅವೆಲ್ಲವೂ ಬರುತ್ತವೆ.

೮. ತೀರ್ಥಸ್ನಾನ ತಪಸ್ಸು, ಯಜ್ಞ, ಮತ್ತು ಏನೇನು ಶುಭಕಾರ್ಯಗಳನ್ನು ಮಾಡುತ್ತಾನೆಯೋ, ಅವನ್ನು ಮಾಡುವಂತೆ ಪ್ರೇರಿಸಿದವನಿಗೆ ಅದರ ಫಲವು ಬರುತ್ತದೆ.

ತದರ್ಹಸಿ ಭವಾನ್ಪುಣ್ಯಮುಪದೇಷ್ಟುಂ ಕೃಪಾನಿಧೇ ।
ದುರ್ಲಭೋ ಗುರುಸಂಬೋಧೋ ದೇಶಕಾಲೋಪಪತ್ತಯಃ ॥ ೯ ॥

ನ ಕೇಚನ ತಥಾ ಭಾವಾಃ ಚೇತಃ ಶೀತಳಯಂತಿ ನಃ ।
ರಾಜ್ಯಲಾಭಾದಯೋಪ್ಯೇತೇ ಯಥಾ ತವ ಸಮಾಗಮಃ ॥ ೧೦ ॥

॥ ಸೂತ ಉವಾಚ ॥

ಅಥ ಮಂದಮೃದುಸ್ಮೇರಸ್ಫುರದ್ದಂತಪ್ರಭಾನುಗಃ ।
ಅಂಬರೀಷಂ ಪ್ರತ್ಯುವಾಚ ನಾರದೋ ಮುನಿಸತ್ತಮಃ ॥ ೧೧ ॥

॥ ನಾರದ ಉವಾಚ ॥

ಶೃಣು ರಾಜನ್ಪ್ರವಕ್ಷ್ಯಾಮಿ ಹಿತಾಯ ಜಗತಸ್ತವ ।
ವಿಧಿಂ ಮಾಧಮಾಸಸ್ಯ ಯಃ ಪ್ರೋಕ್ತೋ ಬ್ರಹ್ಮಣಾ ಪುರಾ ॥ ೧೨ ॥

ದುರ್ಲಭಂ ಭಾರತೇ ವರ್ಷೇ ಜನ್ಮ ತಸ್ಮಾನ್ಮನುಷ್ಯತಾ ।
ಮಾನುಷೇ ದುರ್ಲಭಂ ಚಾಪಿ ಸ್ವಸ್ವಧರ್ಮೇ ಪ್ರವರ್ತನಂ ॥ ೧೩ ॥

---

೯. ದೇಶ, ಕಾಲ, ಅನುಕೂಲಗಳಿಗೆ ಅನುಗುಣವಾಗಿ ಗುರೂಪದೇಶವು ದುರ್ಲಭವು. ಆದ್ದರಿಂದ ನೀನು ಪುಣ್ಯವನ್ನು ಉಪದೇಶಮಾಡಲು ಯೋಗ್ಯನಾಗಿದ್ದೀಯೆ.

೧೦. ನೀನು ಬಂದುದರಿಂದ ನನ್ನ ಮನಸ್ಸು ಸಂತೋಷಪಡುವಂತೆ ರಾಜ್ಯಲಾಭಾದಿಗಳಿಂದಾಗಲಿ ಇನ್ನಿತರ ಎಷ್ಟೋ ಸೌಖ್ಯಗಳಿಂದಾಗಲಿ ಸಂತೋಷಪಡುವುದಿಲ್ಲ.

೧೧. ಸೂತನು ಹೇಳಿದನು– ಆಗ ಹುಸಿನಗುವಿನಿಂದ ಕೂಡಿದ ನಾರದನು ಅಂಬರೀಷನಿಗಿಂತೆಂದನು.

೧೨. ನಾರದನು ಹೇಳಿದನು– ಎಲೈ ರಾಜನೇ ನಿನ್ನ ಮತ್ತು ಜಗತ್ತಿನ ಹಿತಕ್ಕೋಸ್ಕರ ಹಿಂದೆ ಬ್ರಹ್ಮನು ಹೇಳಿದ ರೀತಿಯಲ್ಲಿ ವೈಶಾಖಮಾಸದ ವಿಧಿಯನ್ನು ಹೇಳುತ್ತೇನೆ.

೧೩. ಭರತವರ್ಷದಲ್ಲಿ ಜನ್ಮತಾಳುವುದೇ ದುರ್ಲಭವು. ಅವರಲ್ಲೂ ಮನುಷ್ಯನಾಗಿ ಹುಟ್ಟುವುದೂ ಮತ್ತೂ ದುರ್ಲಭವು. ಮನುಷ್ಯನಾಗಿಯೂ ಸ್ವಧರ್ಮದಲ್ಲಿರುವುದು ದುರ್ಲಭವು.

ತತೋಽಪಿ ಭಕ್ತಿರ್ಭೂಪಾಲ ವಾಸುದೇವೇ ಸುದುರ್ಲಭಾ ।
ತತ್ರಾಪಿ ದುರ್ಲಭೋ ಮಾಸೋ ಮಾಧವೋ ಮಾಧವಪ್ರಿಯಃ ॥ ೧೪ ॥

ತಮವಾಪ್ಯ ತತೋ ಮಾಸಂ ಸ್ನಾನದಾನಜಪಾದಿಕಂ ।
ಕುರ್ವಂತಿ ವಿಧಿನಾ ಯೇ ತು ಧನ್ಯಾಸ್ತೇ ಕೃತಿನಾ ನರಾಃ ॥ ೧೫ ॥

ತೇಷಾಂ ದರ್ಶನಮಾತ್ರೇಣ ಪಾಪಿನೋಽಪಿ ವಿಕಲ್ಮಷಾಃ ।
ಭವನ್ತಿ ಭಗವದ್ಭಾವಭಾವಿತಾ ಧರ್ಮಕಾಂಕ್ಷಿಣಃ ॥ ೧೬ ॥

ಮಾಧವೇ ಮಾಸಿ ಯೈಸ್ಸ್ನಾತಂ ಪ್ರಾತರ್ನಿಯಮಸಂಯುತೈಃ ।
ತೇ ಕೋಟಿವರ್ಷಪರ್ಯಂತಂ ಕ್ರೀಡನ್ತೇ ನಂದನೇ ವನೇ ॥ ೧೭ ॥

ಯಥಾ ನ ವಾರಿಧಿಸಮೋ ಲೋಕೇ ಕೋಽಪಿ ಜಲಾಶಯಃ ।
ತಥಾ ಮಾಸೋ ನ ವೈಶಾಖಸದೃಶೋ ಮಾಧವಪ್ರಿಯಃ ॥ ೧೮ ॥

---

೧೪. ಅದಕ್ಕಿಂತಲೂ ವಾಸುದೇವನಲ್ಲಿ ಭಕ್ತಿ ಹುಟ್ಟುವುದು ಇನ್ನೂ ಕಷ್ಟವು. ಅದರಲ್ಲಿಯೂ ವೈಷ್ಣವಪ್ರಿಯವಾದ ವೈಶಾಖಮಾಸ ಸಿಕ್ಕುವುದು ಬಹು ಕಷ್ಟವು.

೧೫. ಆ ತಿಂಗಳು ಬಂದಾಗ ಸ್ನಾನ, ಜಪಾದಿಗಳನ್ನು ಮಾಡುವವರೇ ಧನ್ಯರು.

೧೬. ಅವರ ದರ್ಶನ ಮಾತ್ರದಿಂದಲೇ ಪಾಪಿಗಳೂ ಕೂಡ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಮತ್ತು ಭಗವದ್ಭಕ್ತರಾಗಿ ಧರ್ಮದಲ್ಲಿ ಅಪೇಕ್ಷೆಯುಳ್ಳವರಾಗುತ್ತಾರೆ.

೧೭. ಪ್ರಾತಃಕಾಲದಲ್ಲಿ ವೈಶಾಖಮಾಸದಲ್ಲಿ ವಿಧಿವತ್ತಾಗಿ ಸ್ನಾನಮಾಡಿದವರು ಕೋಟಿವರ್ಷಗಳವರೆಗೂ ನಂದನವನದಲ್ಲಿ ಕ್ರೀಡಿಸುತ್ತಾರೆ.

೧೮. ಲೋಕದಲ್ಲಿ ಸಮುದ್ರಕ್ಕೆ ಸಮವಾದ ಜಲಾಶಯವು ಹೇಗೆ ಮತ್ತೊಂದಿಲ್ಲವೋ ಹಾಗೆ ಮಾಧವನಿಗೆ ಪ್ರಿಯವಾದ ವೈಶಾಖಮಾಸಕ್ಕೆ ಸಮವಾದ ಮಾಸವು ಮತ್ತೊಂದಿಲ್ಲ.

ತಾವತ್ಪಾಪಾನಿ ತಿಷ್ಠಂತಿ ಮನುಷ್ಯಾಣಾಂ ಕಳೇಬರೇ ।
ಯಾವತ್ಕಿಲ ಮಲಧ್ವಂಸೀ ಮಾಸೋ ನಾಯಾತಿ ಮಾಧವಃ ॥ ೧೯ ॥

ಅವಶಿಷ್ಟದಿನಾನ್ಯೇವ ಪಂಚ ಮಾಸಸ್ಯ ತಸ್ಯ ವೈ ।
ಏಕಾದಶೀಂ ಸಮಾರಭ್ಯ ಸರ್ವಮಾಸಸಮಾನಿ ವೈ ॥ ೨೦ ॥

ವೈಶಾಖೇ ಪೂಜಿತೋ ದೇವೋ ಮಾಧವೋ ಮಧುಹಾ ತು ಯೈಃ ।
ನಾನೋಪಚಾರೈರಾಜೇಂದ್ರ ತೈಃ ಪ್ರಾಪ್ತಂ ಜನ್ಮನಃ ಫಲಂ ॥ ೨೧ ॥

ಕಿಂ ಕಿಂ ನ ದುರ್ಲಭತರಂ ಪ್ರಾಪ್ಯತೇ ಮಾಸಿ ಮಾಧವೇ ।
ಸ್ನಾನೇನ ಪರಮೇಶಸ್ಯ ಪೂಜನೇನ ಯಥಾವಿಧಿ ॥ ೨೨ ॥

ನ ದತ್ತಂ ನ ಹುತಂ ಜಪ್ತಂ ನ ತೀರ್ಥೇ ಮರಣಂ ಕೃತಂ ।
ಯೈರ್ಹಿ ನಾರಾಯಣೋ ನೈವ ಧ್ಯಾತೋ ನಿಖಿಲಪಾಪಹಾ ॥ ೨೩ ॥

---

೧೯. ಪಾಪನಾಶಕವಾದ ವೈಶಾಖಮಾಸವು ಬರುವವರೆಗೆ ಮನುಷ್ಯನ ದೇಹದಲ್ಲಿ ಪಾಪಗಳಿರುತ್ತವೆ.

೨೦. ಆ ವೈಶಾಖದ ಕೊನೆಯ ಏಕಾದಶಿ ಮೊದಲು ಮಾಡಿಕೊಂಡು ಐದು ದಿನಗಳೂ ಒಂದೊಂದೂ ಆ ವೈಶಾಖಮಾಸಕ್ಕೆ ಸಮನಾದುವು.

೨೧. ವೈಶಾಖಮಾಸದಲ್ಲಿ ಮಾಧವನನ್ನು ಪೂಜಿಸಿದರೆ ಆಗ ಜನ್ಮ ಹುಟ್ಟಿದುದಕ್ಕೆ ಸಾರ್ಥಕವು.

೨೨. ವೈಶಾಖದಲ್ಲಿ ಸ್ನಾನಮಾಡಿ ಮಾಧವನ ಪೂಜೆಯನ್ನು ಮಾಡಿದರೆ ಅವನಿಗೆ ಯಾವುದು ತಾನೇ ದುರ್ಲಭವು.

೨೩. ಸಮಸ್ತ ಪಾಪಗಳನ್ನೂ ನಾಶಮಾಡುವ ನಾರಾಯಣನನ್ನು ವೈಶಾಖ ಮಾಸದಲ್ಲಿ ಪೂಜಿಸದಿದ್ದರೆ ಅವನು ದಾನಮಾಡಿದರೂ ಉಪಯೋಗವಿಲ್ಲ. ಹೋಮವೂ ಸಾರ್ಥಕವಿಲ್ಲ. ಜಪವೂ ಸಾರ್ಥಕವಿಲ್ಲ. ತೀರ್ಥದಲ್ಲಿ ಮರಣಹೊಂದಿದರೂ ಅವರ ಪ್ರಯೋಜನವನ್ನು ಹೊಂದುವುದಿಲ್ಲ.

ತೇಷಾಂ ಜನ್ಮ ನೃಣಾಂ ಲೋಕೇ ಜ್ಞಾತವ್ಯಂ ನಿಷ್ಫಲಂ ನೃಪ ।
ದ್ರವ್ಯೇಷು ವಿದ್ಯಮಾನೇಷು ಕೃಪಣೋ ಯೋ ಭವೇನ್ನರಃ ॥ ೨೪ ॥

ಅದತ್ವಾ ಮ್ರಿಯತೇ ಯೋऽಹಿ ತಸ್ಯ ದ್ರವ್ಯಂ ನಿರರ್ಥಕಂ ।
ತೀರ್ಥಸ್ನಾನಾದಿತಪಸಾ ಸತ್ಕುಲೇ ಜನ್ಮಲಭ್ಯತೇ ॥ ೨೫ ॥

ನ ದಾನೇನ ವಿನಾ ಭೂಪ ಕಿಂಚಿದಪ್ಯುಪತಿಷ್ಠತಿ ।
ವೈಶಾಖಸ್ನಾನಮಾಹಾತ್ಮ್ಯಾದಪಿ ಪಂಚದಿನಾತ್ಮಕಾತ್ ॥ ೨೬ ॥

ಸತ್ಕುಲೇ ಪ್ರಾಪ್ಯತೇ ಜನ್ಮ ವೈಭವಂ ವಿವಿಧಂ ತಥಾ ।
ಸುಪುತ್ರಸ್ಸುಕುಲಂ ಭೂಪ ಧನಧಾನ್ಯಂ ವರಸ್ತ್ರಿಯಃ ॥ ೨೭ ॥

ಸುಜನ್ಮ ಮರಣಂ ಚಾಪಿ ಸುಭೋಗಾಃ ಸುಖಮೇವ ಚ ।
ಸದಾ ದಾನೇऽಧಿಕಾಪ್ರೀತಿಃ ಔದಾರ್ಯಂ ಧೈರ್ಯಮುತ್ತಮಂ ॥ ೨೮ ॥

ಪ್ರಸಾದಾತ್ತಸ್ಯ ದೇವಸ್ಯ ವಿಷ್ಣೋಶ್ಚೈವ ಮಹಾತ್ಮನಃ ।
ನಾರಾಯಣಸ್ಯ ಜಾಯಂತೆ ಸಿದ್ಧಯೋ ಭೂಪ ವಾಂಛಿತಾಃ ॥ ೨೯ ॥

---

೨೪. ದ್ರವ್ಯವು ಬೇಕಾದಷ್ಟಿದ್ದರೂ, ಅದರಲ್ಲಿ ಜಿಪುಣನಾಗಿ ಪೂಜಾದಿಗಳನ್ನು ಮಾಡಿದರೂ ಲೋಕದಲ್ಲಿ ಅವನ ಜನ್ಮವು ನಿಷ್ಫಲವೆಂದು ತಿಳಿ.

೨೫. ದಾನಮಾಡದೆ ಸತ್ತವನ ದ್ರವ್ಯವೂ ನಿರರ್ಥಕವು. ತೀರ್ಥಸ್ನಾನ, ತಪಸ್ಸು ಇವೇ ಮುಂತಾದುವುಗಳಿಂದ ಒಳ್ಳೆಯ ಕುಲದಲ್ಲಿ ಜನ್ಮವನ್ನು ಹೊಂದುತ್ತಾನೆ.

೨೬-೨೭. ದಾನಮಾಡದಿದ್ದರೆ ಯಾವುದೂ ನಮಗೆ ಸಿಕ್ಕುವುದಿಲ್ಲ. ವೈಶಾಖ ಸ್ನಾನದ ಮಹಿಮೆಯಿಂದಲೂ, ಅದರಲ್ಲೂ ಕೊನೆಯ ಐದು ದಿನದ ಸ್ನಾನದಿಂದಲೂ, ಸತ್ಕುಲದಲ್ಲಿ ಜನ್ಮವೂ, ನಾನಾಬಗೆಯಾದ ಸಂಪತ್ತೂ, ಸುಪುತ್ರ, ಸುಕುಲ, ಧನ, ಧಾನ್ಯ ಉತ್ತಮವಾದ ಹೆಂಡತಿಯರು ಒಳ್ಳೆ ಜನ್ಮ, ಒಳ್ಳೆಯಮರಣ, ಒಳ್ಳೆಯ ಭೋಗ ಸುಖಗಳೆಲ್ಲವೂ ಸಿಕ್ಕುತ್ತವೆ.

೨೮-೨೯. ಯಾವಾಗಲೂ ದಾನದಲ್ಲಿ ಪ್ರೀತಿಯೂ, ಉದಾರತನವೂ, ಧೈರ್ಯವೂ ಆ ವಿಷ್ಣುವಿನ ಪ್ರಸಾದದಿಂದುಂಟಾಗುತ್ತದೆ. ನಾರಾಯಣನ ಅನುಗ್ರಹ ದಿಂದಲೇ ಇಷ್ಟಸಿದ್ಧಿಗಳಾಗುತ್ತವೆ.

ಊರ್ಜೇಮಾಸಿ ತಪೋಮಾಸಿ ಮಾಧವೇ ಮಾಧವಪ್ರಿಯೇ ।
ಸ್ನಾತ್ವಾ ದಾಮೋದರಂ ಭಕ್ತ್ಯಾ ಮಾಧವಂ ಮಧುಸೂದನಂ ॥ ೩೦ ॥

ವಿಶೇಷೇಣ ಸಮಭ್ಯರ್ಚ್ಯ ದತ್ವಾ ದಾನಾನಿ ಭಕ್ತಿತಃ ।
ಐಹಿಕಂಸುಖಮಾಸಾದ್ಯ ನರೋ ಹರಿಪದಂ ವ್ರಜೇತ್ ॥ ೩೧ ॥

ಅನೇಕಜನ್ಮಾರ್ಜಿತಪಾತಕಾವಳೀ
ವಿಲೀಯತೇ ಮಾಧವಮಜ್ಜನೇನ ।
ಸೂರ್ಯೋದಯೇ ಭೂಪ ಯಥಾ ತಮಿಸ್ರಂ
ವಚಸ್ಸ್ವಯಂಭೂರಿದಮಾದಿಶನ್ಮೇ ॥ ೩೨ ॥

ಚಕಾರ ವಿಷ್ಣುರ್ವಿಪುಲಪ್ರಚಾರಂ
ಮಾಸಸ್ಯ ವೈ ಮಾಧವಸಂಜ್ಞಿಕಸ್ಯ ।
ಯಮಸ್ಯ ಗುಪ್ತಂ ವಚಸಾ ವಿಚಿಂತ್ಯ
ಮನುಷ್ಯಲೋಕಂ ಗಮಿತಂ ಚಕಾರ ॥ ೩೩ ॥

ತಸ್ಮಾದಸ್ಮಿನ್ಸಮಾಯಾತೇ ಮಾಧವೇ ಮಾಸಿ ವೈಷ್ಣವೈಃ ।
ಸ್ನಾತ್ವಾ ಪುಣ್ಯಜಲೇ ತೀರ್ಥೇ ಗಂಗಾಯಾಃ ಪಾವನೇ ನೃಣಾಂ ॥ ೩೪ ॥

---

೩೦–೩೧. ವೈಶಾಖ, ಕಾರ್ತಿಕ, ಮಾಘಮಾಸಗಳಲ್ಲಿ ಸ್ನಾನಮಾಡಿ ಭಕ್ತಿಯಿಂದ ದಾಮೋದರನನ್ನು ವಿಶೇಷರೀತಿಯಿಂದ ಅರ್ಚಿಸಿ ದಾನಗಳನ್ನು ಕೊಟ್ಟರೆ ಮನುಷ್ಯನು ಐಹಿಕ ಸುಖಗಳನ್ನು ಹೊಂದಿ ಕೊನೆಯಲ್ಲಿ ಹರಿಯ ಸ್ಥಾನವಾದ ವೈಕುಂಠವನ್ನು ಹೊಂದುತ್ತಾನೆ

೩೨. ವೈಶಾಖಸ್ನಾನದಿಂದ ಸೂರ್ಯನು ಉದಿಸಿದರೆ ಕತ್ತಲೆಯು ನಾಶವಾಗುತ್ತದೆ. ಎಂದು ಬ್ರಹ್ಮನು ತಾನಾಗಿಯೇ ಹೇಳಿದ್ದಾನೆ

೩೩. ವಿಷ್ಣುವು ತಾನೇನೆ ವೈಶಾಖ ಮಾಸದ ವಿಚಾರವನ್ನು ಬಹಳ ಪ್ರಚಾರಮಾಡಿದನು. ಆದರಲ್ಲೂ ಯಮನ ನಿಯಮಗಳನ್ನೂ ಯೋಚಿಸಿ ಅವೆಲ್ಲವನ್ನೂ ಮನುಷ್ಯಲೋಕದಲ್ಲಿ ಪ್ರಚಾರಮಾಡಿದನು

೩೪. ಆದ್ದರಿಂದ ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುವ ಈ ವೈಶಾಖ ಮಾಸದಲ್ಲಿ ಜನರು ಗಂಗೆಯ ನೀರಿನಲ್ಲಿ ಸ್ನಾನಮಾಡಬೇಕು.

ರೇವಾಯಾ ವಾ ಮಹಾರಾಜ ಯಾಮುನೇ ಸಾರದೇಽಥವಾ ।
ಪ್ರಾತಸ್ತ್ವನುದಿತೇ ಭಾನೌ ವಿಧಾನೇನ ನೃಪೋತ್ತಮ ॥ ೩೫ ॥

ಪೂಜಯಿತ್ವಾ ಚ ದೇವೇಶಂ ಮುಕುಂದಂ ಮಧುಸೂದನಂ ।
ಪುತ್ರಪೌತ್ರಧನಶ್ರೇಯೋ ವಾಂಛಿತಾನಿ ಸುಖಾನಿ ಚ ॥ ೩೬ ॥

ಅನುಭೂಯ ತಪಸ್ತ್ವನ್ತೇ ಸ್ವರ್ಗಮಕ್ಷಯಮಾಪ್ನುಯಾತ್ ।
ಏವಂ ಜ್ಞಾತ್ವಾ ಮಹಾಭಾಗ ಮಧುಸೂದನಮರ್ಚಯ ॥ ೩೭ ॥

ಸ್ನಾತ್ವಾ ಸಮ್ಯಗ್ವಿಧಾನೇನ ವೈಶಾಖೇ ತು ವಿಶೇಷತಃ ।
ದೇವಮಾರಾಧ್ಯ ಗೋವಿಂದಂ ನಾರಾಯಣಮನಾಮಯಂ ॥ ೩೮ ॥

ಪ್ರಾಪ್ಸ್ಯಸಿ ತ್ವಂ ಸುಖಂ ಪುತ್ರಂ ಧನಾನಿ ಚ ಹರೇಃ ಪದಂ ।
ದೇವದೇವಂ ನಮಸ್ಕೃತ್ಯ ಮಾಧವಂ ಪಾಪನಾಶನಂ ॥ ೩೯ ॥

ಪ್ರಾರಭೇತ ವ್ರತಮಿದಂ ಪೌರ್ಣಮಾಸ್ಯಾಂ ಮಧೋರ್ನೃಪ ।
ಯಮೈಶ್ಚ ನಿಯಮೈರ್ಯುಕ್ತಃ ಶಕ್ತ್ಯಾ ಕಿಂಚಿತ್ಪ್ರದಾಯ ಚ ॥ ೪೦ ॥

ಹವಿಷ್ಯಭುಗ್ಭೂಮಿಶಾಯೀ ಬ್ರಹ್ಮಚರ್ಯವ್ರತೇ ಸ್ಥಿತಃ ।
ಕೃಚ್ಛ್ರಾದಿತಪಸಾ ಕ್ಷಾಮೋ ಧ್ಯಾಯನ್ನಾರಾಯಣಂ ಹೃದಿ ॥ ೪೧ ॥

---

೩೫. ರೇವಾ, ಯಮುನೆ ಅಥವಾ ಸರಸ್ವತೀ ನದಿಯ ನೀರಿನಲ್ಲಿಯಾಗಲೀ ಸೂರ್ಯನು ಹುಟ್ಟುವುದಕ್ಕೆ ಮುಂಚೆ ವಿಧಿವತ್ತಾಗಿ ಸ್ನಾನಮಾಡಬೇಕು.

೩೬-೩೭. ಅನಂತರ ದೇವೇಶನಾದ ಮಧುಸೂದನನ್ನು ಪೂಜಿಸಬೇಕು. ಆ ರೀತಿ ಪೂಜಿಸಿದರೆ ಪುತ್ರರು, ಪೌತ್ರರು, ಧನ ಶ್ರೇಯಸ್ಸು. ಇಷ್ಟವಾದುವೆಲ್ಲವನ್ನೂ ಹೊಂದಿ ಅನುಭವಿಸಿ ತಪಸ್ಸನ್ನು ಮಾಡಿ ಕೊನೆಯಲ್ಲಿ ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ಈರೀತಿ ತಿಳಿದು ಆ ಸ್ವಾಮಿಯನ್ನು ಪೂಜಿಸು.

೩೮-೪೧. ವೈಶಾಖದಲ್ಲಿ ವಿಧಿವತ್ತಾಗಿ ಪ್ರಾತಃಸ್ನಾನಮಾಡಿ ದೇವದೇವನಾದ ನಾರಾಯಣನನ್ನು ಪೂಜಿಸಿದರೆ ಮಕ್ಕಳು, ಮೊಮ್ಮಕ್ಕಳು, ಧನ, ಧಾನ್ಯಗಳೆಲ್ಲವನ್ನೂ ಹೊಂದುತ್ತೀಯೆ. ಕೊನೆಗೆ ಹರಿಯ ಪದವಾದ ವೈಕುಂಠವು ಸಿಕ್ಕುತ್ತದೆ. ಪಾಪನಾಶಕನಾದ ದೇವದೇವನಾದ ಸ್ವಾಮಿಯನ್ನು ನಮಸ್ಕರಿಸಿ ವೈಶಾಖದ ಪೌರ್ಣಮಾಸ್ಯೆಯದಿನ ಈ ವ್ರತವನ್ನು ಪ್ರಾರಂಭಿಸಬೇಕು. ಯಮನಿಯಮಗಳಿಂದ ಕೂಡಿ ಶಕ್ತ್ಯಾನುಸಾರ ದಾನಮಾಡಿ ಹವಿಸ್ಸನ್ನು ಊಟಮಾಡಿಕೊಂಡಿದ್ದು ನೆಲದಮೇಲೆ ಮಲಗಿರಬೇಕು. ಬ್ರಹ್ಮಚಾರಿಯಾಗಿರಬೇಕು. ನಾರಾಯಣನನ್ನು ಧ್ಯಾನಮಾಡುತ್ತಾ ಕೃಚ್ಛ್ರಾದಿಗಳಿಂದ ದೇಹವನ್ನು ಕ್ಷಯಿಸಬೇಕು.

ಏವಂ ಪ್ರಾಪ್ಯ ಚ ವೈಶಾಖೀಂ ದದ್ಯಾನ್ಮಧುತಿಲಾದಿಕಂ ।
ಭೋಜನಂ ದ್ವಿಜಮುಖ್ಯೇಭ್ಯೋ ಭಕ್ತ್ಯಾ ಧೇನುಂ ಸದಕ್ಷಿಣಾಂ ॥ ೪೨ ॥

ಅಚ್ಛಿದ್ರಂ ಪ್ರಾರ್ಥಯೇಚ್ಚಾಪಿ ತಸ್ಯ ಸ್ನಾನಸ್ಯ ಭೂಸುರಾನ್ ।
ಯಥಾ ಲಕ್ಷ್ಮ್ಯಾಃ ಪ್ರಿಯಾ ಭೂಪ ಮಾಧವಸ್ಯ ಜಗತ್ಪತೇಃ ॥ ೪೩ ॥

ತಥೈವ ಮಾಧವೋ ಮಾಸೋ ಮಧುಸೂದನವಲ್ಲಭಃ ।
ಏವಂ ವಿಧಿಯುತೋ ಮರ್ತ್ಯಃ ಸ್ನಾತ್ವಾ ದ್ವಾದಶವತ್ಸರಂ ॥ ೪೪ ॥

ಉದ್ಯಾಪನಂ ಚರೇಚ್ಛಕ್ತ್ಯಾ ಮಧುಸೂದನತುಷ್ಟಯೇ ।
ಏವಂ ಮಾಧವಮಾಸಸ್ಯ ಮಾಹಾತ್ಮ್ಯಂ ಕಥಿತಂ ತವ ।
ಯತ್ಪುರಾ ಬ್ರಹ್ಮಣೋವಕ್ತ್ರಾಚ್ಛ್ರುತಮಾಸೀನ್ಮಯಾ ನೃಪ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖಮಾಸ
ಮಾಹಾತ್ಮ್ಯೇ ಷಡಶೀತಿತಮೋಽಧ್ಯಾಯಃ

---

೪೨. ವೈಶಾಖಮಾಸದಲ್ಲಿ ಹೀಗೆ ಬೆಲ್ಲ, ಎಳ್ಳು, ಮುಂತಾದ ದಾನಗಳನ್ನು ಮಾಡಬೇಕು. ಬ್ರಾಹ್ಮಣರಿಗೆ ಗೋದಾನಮಾಡಿ ಭೋಜನಮಾಡಿಸಬೇಕು.

೪೩–೪೫. ಅನಂತರ ಆ ವೈಶಾಖ ಸ್ನಾನವು ಅಚ್ಛಿದ್ರವಾಯಿತೆಂದು ಹೇಳುವಂತೆ ಆ ಬ್ರಾಹ್ಮಣರನ್ನು ಕೇಳಿಕೊಳ್ಳಬೇಕು. ಮಾಧವನಿಗೆ ಲಕ್ಷ್ಮಿಯು ಹೇಗೆ ಪ್ರೀತಿ ಪಾತ್ರಳೋ ಆ ರೀತಿಯಲ್ಲಿ ವೈಶಾಖಮಾಸವೂ ಪ್ರೀತಿಕರವಾದುದು. ಮನುಷ್ಯನು ಈರೀತಿಯಾದ ವಿಧಿಯಿಂದ ಹನ್ನೆರಡು ವತ್ಸರಗಳು ಸ್ನಾನ ಮಾಡಿ ಅನಂತರ ಸ್ವಾಮಿಗೆ ತೃಪ್ತಿಯಾಗಲು ಶಕ್ತ್ಯನುಸಾರ ಉದ್ಯಾಪನೆಯನ್ನು ಮಾಡಬೇಕು. ಎಲೈ ರಾಜನೇ ! ನಾನು ಪೂರ್ವದಲ್ಲಿ ಬ್ರಹ್ಮನ ಬಾಯಿಂದ ಕೇಳಿದ್ದಂತೆ ಮಾಧವ ಮಾಸದ ಮಹಿಮೆಯನ್ನು ಹೇಳಿದ್ದೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖಮಾಸ ಮಹಿಮೆ
ಎಂಬ ಎಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-४-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಸಪ್ತಾಶೀತಿತಮೋऽಧ್ಯಾಯಃ ॥



॥ ಸೂತ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ನಾರದಸ್ಯ ಸ ಭೂಪತಿಃ ।
ಪ್ರಣಮ್ಯ ವಿಸ್ಮಿತಃ ಪ್ರಾಹ ಚಿಂತಯನ್ಮನಸಾ ಹರಿಂ ॥ ೧ ॥

॥ ಅಂಬರೀಷ ಉವಾಚ ॥

ಕಥಮೇತದ್ವಿಮುಹ್ಯಾಮಃ ಸ್ವಲ್ಪಾಯಾಸೇನ ಯನ್ಮುನೇ ।
ಪ್ರಾಪ್ಯತೇ ಸ್ನಾನಮಾತ್ರೇಣ ಫಲಂ ಚೈವಾತಿದುರ್ಲಭಂ ॥ ೨ ॥

॥ ನಾರದ ಉವಾಚ ॥

ಸತ್ಯಮುಕ್ತಂ ತ್ವಯಾ ರಾಜನ್ನಲ್ಪಾಯಾಸೇನ ಯನ್ಮಹತ್ ।
ಫಲಂ ಸಂಪ್ರಾಪ್ಯತೇ ತತ್ರ ಶ್ರದ್ಧತ್ಸ್ವ ವಿಧಿಭಾಷಿತಂ ॥ ೩ ॥

---

### ಎಂಭತ್ತೇಳನೆಯ ಅಧ್ಯಾಯವು

೧. ಅಂಬರೀಷನು ಹೇಳಿದನು- ಆ ಅಂಬರೀಷನು ನಾರದನ ಈ ಮಾತನ್ನು ಕೇಳಿ ನಮಸ್ಕರಿಸಿ ಹರಿಯನ್ನು ಸ್ಮರಿಸುತ್ತಾ ಹೀಗೆಂದನು.

೨. ಅಂಬರೀಷನು ಹೇಳಿದನು- ಎಲೈ ಋಷಿಯೇ ಕೇವಲ ಸ್ನಾನಮಾತ್ರದಿಂದ ದುರ್ಲಭವಾದ ಫಲವನ್ನು ಹೊಂದುತ್ತೇವೆಂದು ಹೇಳಿದ ವಿಷಯದಲ್ಲಿ ಸಂದೇಹ ಮುಟ್ಟುತ್ತದೆ. ಅದು ಹೇಗೆ ಎಂಬುದನ್ನು ತಿಳಿಸು.

೩. ನಾರದನು ಹೇಳಿದನು- ಎಲೈ ರಾಜನೇ ನೀನು ಹೇಳಿದುದು ನಿಶ್ಚಯವು. ಸ್ವಲ್ಪಾಯಾಸದಿಂದ ಹೆಚ್ಚು ಫಲ ಬರುತ್ತದೆ ಎಂಬುದರಲ್ಲಿ ಬ್ರಹ್ಮನಮಾತನ್ನು ನಂಬು.

ಧರ್ಮಸ್ಯ ಗತಯಸ್ಸೂಕ್ಷ್ಮಾಃ ದುರ್ಜ್ಞೇಯಾ ಹೀಶ್ವರೈರಪಿ ।
ಮುಹ್ಯಂತೇ ಚಾತ್ರ ವಿದ್ವಾಂಸೋಽಚಿಂತ್ಯಶಕ್ತಿಹರೇಃ ಕೃತೌ ॥ ೪ ॥

ವಿಶ್ವಾಮಿತ್ರಾದಯೋ ರಾಜನ್ಧರ್ಮಾಧಿಕ್ಯೇನ ಬಾಹುಜಾಃ ।
ಬ್ರಾಹ್ಮಣ್ಯಂ ಸಮುಪಾಯಾತಾಃ ಸೂಕ್ಷ್ಮಾ ಧರ್ಮಗತಿಸ್ತ್ವತಃ ॥ ೫ ॥

ಅಜಾಮಿಳೋಽಪಿ ಭೂಪಾಲ ದಾಸೀಪತಿರಿತಿ ಶ್ರುತಃ ।
ಧರ್ಮಪತ್ನೀಪರಿತ್ಯಾಗೀ ನಿತ್ಯಂ ಪಾಪಪಥಿಸ್ಥಿತಃ ॥ ೬ ॥

ಮ್ರಿಯಮಾಣಸ್ಸುತಸ್ನೇಹಾತ್ಪ್ರೋಚ್ಯ ನಾರಾಯಣೇತಿ ಚ ।
ತದ್ಧ್ಯಾನನಾಮಗ್ರಹಣಾತ್ಪದಂ ಲೇಭೇ ಸುದುರ್ಲಭಂ ॥ ೭ ॥

ಅನಿಚ್ಛಯಾಪಿ ದಹತಿ ಸ್ಪೃಷ್ಟೋ ಹುತವಹೋ ಯಥಾ ।
ಶಥಾ ದಹತಿ ಗೋವಿಂದನಾಮ ವ್ಯಾಜಾದಪೀರಿತಂ ॥ ೮ ॥

---

೪. ಧರ್ಮದ ಗತಿಗಳು ಸೂಕ್ಷ್ಮವು. ಈಶ್ವರನಿಗೂ ಇದು ತಿಳಿಯುವುದಿಲ್ಲ. ಯೋಚಿಸಲು ಅಸಾಧ್ಯವಾದ ಹರಿಯ ಕೆಲಸದಲ್ಲಿ ವಿದ್ವಾಂಸರೂ ಮೂಢರಾಗುತ್ತಾರೆ.

೫. ವಿಶ್ವಾಮಿತ್ರನೇ ಮುಂತಾದ ಕ್ಷತ್ರಿಯರೂ ಕೂಡ ಧರ್ಮವನ್ನು ಅಧಿಕವಾಗಿ ಮಾಡಿಕೊಂಡುದರಿಂದ ಬ್ರಾಹ್ಮಣ್ಯವನ್ನು ಹೊಂದಿದರು. ಆದ್ದರಿಂದ ಧರ್ಮದ ಗತಿಯು ಸೂಕ್ಷ್ಮವಾದುದು.

೬-೭. ಎಲ್ಲೈ ಧೊರೆಯೇ ಅಜಾಮಿಳನು ಸೂಳೆಯನ್ನಿಟ್ಟುಕೊಂಡಿದ್ದನು. ಧರ್ಮಪತ್ನಿಯನ್ನು ತ್ಯಾಗಮಾಡಿದ್ದನು. ಯಾವಾಗಲೂ ಪಾಪವರ್ಗದಲ್ಲಿಯೇ ಇದ್ದನು. ಸಾಯುವಾಗ ಮಗನಮೇಲಿನ ಪ್ರೀತಿಯಿಂದ ಅವನ ಹೆಸರಾದ ನಾರಾಯಣನೆಂಬ ನಾಮವನ್ನು ಉಚ್ಚಾರಮಾಡಲು ಆದರಿಂದ ಹರಿಯ ಹೆಸರು ಬಂದಂತಾಗಿ ಉತ್ತಮವಾದ ವೈಕಂಠವನ್ನು ಹೊಂದಿದನು.

೮. ಕಾಣದಿದ್ದರೂ ತಗುಲಿದರೆ ಬೆಂಕಿಯು ಸುಡುವಂತೆ ನೆವದಿಂದ ಹರಿಯ ನಾಮವನ್ನುಚ್ಚರಿಸಿದರೂ ಪಾಪವನ್ನು ದಹಿಸುತ್ತದೆ.

ಕಾನೀನಸ್ಯಮುನೇಃ ಪುತ್ರಾಃ ಭ್ರಾತೃಜಾಯಾಭಿಗಾಮಿನಃ ।
ಗೋಲಕಸ್ಯ ಚ ವೈ ಪಾಂಡೋಃ ಪುತ್ರಾಃ ಕುಂಡಾಃ ಸ್ವಯಂ ತಥಾ ॥ ೯ ॥

ತೇ ಪಂಚಾಪಿ ಚ ಭೂಪಾಲ ಪಾಂಡವಾ ದ್ರೌಪದೀರತಾಃ ।
ತೇಷಾಂ ಚ ಪುಣ್ಯಶ್ಲೋಕತ್ವಂ ಸೂಕ್ಷ್ಮಾ ಧರ್ಮಗತಿಸ್ತ್ವತಃ ॥ ೧೦ ॥

ವಿಚಿತ್ರಾಣಿ ಚ ಕರ್ಮಾಣಿ ವಿಚಿತ್ರಾ ಭೂತಭಾವನಾಃ ।
ವಿಚಿತ್ರಾಣಿ ಚ ಭೂತಾನಿ ವಿಚಿತ್ರಾ ಕರ್ಮಶಕ್ತಯಃ ॥ ೧೧ ॥

ಕದಾಚಿತ್ಸುಕೃತಂ ಕರ್ಮ ಕೂಟಸ್ಥಂ ಯದವಸ್ಥಿತಂ ।
ಕೇನಚಿತ್ಕರ್ಮಣಾ ಭೂಪ ಶುಭೇನ ಪರಿವರ್ಧತೇ ॥ ೧೨ ॥

ಫಲಂ ದದಾತಿ ಸುಮಹತ್ಕಸ್ಮಿನ್ನಪಿ ಚ ಜನ್ಮನಿ ।
ಸೂಕ್ಷ್ಮೋ ಧರ್ಮೋಽತಿಗಹನೋ ಮೀಯತೇ ನ ಯಥಾ ತಥಾ ॥ ೧೩ ॥

---

೯. ಪ್ರಸಿದ್ಧರಾದ ಪಾಂಡವರ ವಿಷಯವನ್ನು ಕೇಳು. ಇವರ ತಾತನಾದ ವ್ಯಾಸನು ಮದುವೆಯಾಗದ ಕನ್ಯೆಯಲ್ಲಿ ಹುಟ್ಟಿದವನು. ಸಾಲದ್ದಕ್ಕೆ ಸೋದರರ ಹೆಂಡಿರಲ್ಲಿ ರಮಿಸಿದನು. ಇವರ ತಂದೆ ಪಾಂಡುವು ಗಂಡ ಸತ್ತಮೇಲೆ ಮುಂಡೆಯ ಹೊಟ್ಟೆಯಲ್ಲಿ ಹಾದರಕ್ಕೆ ಹುಟ್ಟಿದನು. ಅವರ ವಂಶವು ಹೀಗಿರುವುದು. ಆ ಧರ್ಮಾದಿಗಳೂ ಕೂಡ ಕುಂತಿ ಮಾದ್ರಿಯರಲ್ಲಿ ಗಂಡಸಿರುವಾಗಲೇ ಹಾದರಕ್ಕೆ ಹುಟ್ಟಿದವರು.

೧೦ ಅದೂ ಅಲ್ಲದೆ ಒಬ್ಬಳೇ ಆದ ದ್ರೌಪದಿಯಲ್ಲಿ ಐದು ಜನರೂ, ರಮಿಸುತ್ತಿದ್ದರು. ಲೋಕರೀತಿಯಿಂದ ಇವರು ಬಹು ಅಯೋಗ್ಯರು. ಆದರೂ ಅವರು ಪುಣ್ಯಶ್ಲೋಕರಾದರು. ಅವರ ಹೆಸರನ್ನು ಹೇಳಿದರೆ ನೇ ಪುಣ್ಯಬರುವಂತಹವರಾದರು. ಆದ್ದರಿಂದ ಧರ್ಮದ ಗತಿಯು ಸೂಕ್ಷ್ಮವು.

೧೧. ಕರ್ಮಗಳ ವಿಷಯವು ವಿಚಿತ್ರವಾದುದು ಹಿಂದಿನ ಮುಂದಿನ ವಿಷಯಗಳೆಲ್ಲವೂ ವಿಚಿತ್ರವಾದುವು. ಪ್ರಾಣಗಳೂ ವಿಚಿತ್ರವು. ಅವುಗಳ ಕರ್ಮಗಳ ಶಕ್ತಿಗಳು ವಿಚಿತ್ರವಾದುವು.

೧೨. ಕೊನೆಯನ್ನು ತರುವ ಸುಕೃತವಾದ ಕರ್ಮವು ಯಾವುದೋ ಒಂದು ಬಂದು ಕರ್ಮದ ಸಂಯೋಗದಿಂದ ಶುಭವಾಗಿ ಪರಿಣಮಿಸುತ್ತದೆ.

೧೩. ಆ ಪುಣ್ಯಕರ್ಮವು ಯಾವುದೋ ಒಂದು ಜನ್ಮದಲ್ಲಿ ಫಲವನ್ನು ಕೊಡುತ್ತದೆ. ಧರ್ಮಗತಿಯು ಸೂಕ್ಷ್ಮವು ಗಹನವಾದುದು ಅದನ್ನು ಅಳತೆಮಾಡಲಾಗುವುದೇ ಇಲ್ಲ.

ನೈತಸ್ಯ ಫಲದಾನಸ್ಯ ಶ್ರೂಯತೇ ಭೂಪ ನಿಶ್ಚಯಃ ।
ಯತ್ಕಿಂಚಿತ್ಸುಕೃತಂ ಕರ್ಮ ಚ್ಛನ್ನಂ ಪಾಪಾನ್ತರೈರಪಿ ॥ ೧೪ ॥

ತದಾಗತ್ಯ ಕುತಃ ಕ್ವಾಪಿ ಸ್ವಫಲಂ ಚ ಪ್ರಯಚ್ಛತಿ ।
ಕೃತಸ್ಯನೇಹ ನಾಶೋಽಸ್ತಿ ಪುಣ್ಯಸ್ಯ ದುರಿತಸ್ಯ ಚ ॥ ೧೫ ॥

ತಥಾಪಿ ಬಹುಭಿಃ ಪುಣ್ಯೈಃ ದುರಿತಂ ಯಾತಿ ದಾರುಣಂ ।
ಯದುಕ್ತಂ ಭವತಾ ರಾಜನ್ನಾಯಾಸಾಧಿಕ್ಯತೋ ಭವೇತ್ ॥ ೧೬ ॥

ಮಹತ್ಪುಣ್ಯಂ ಚ ತತ್ರಾಪಿ ಕಾರಣಂ ಮೇ ನಿಶಾಮಯ ।
ಸ್ವಲ್ಪಾಯಾಸಮಹಾಯಾಸೌ ಯದ್ಯಲ್ಪತ್ವಮಹತ್ವಯೋಃ ॥ ೧೭ ॥

ಮಹಾಪುಣ್ಯಾಸ್ತತಸ್ತೇಸ್ಯುಃ ಸತತಂ ಕರ್ಷಕಾದಯಃ ।
ಮಂತ್ರೋಚ್ಚಾರಾಚ್ಚ ಸಿಂಹಾದೇಃ ಆಯಾಸಂ ಬಹುಳಂ ತ್ವತಃ ॥ ೧೮ ॥

---

೧೪. ಇದು ಫಲ ಕೊಟ್ಟೇ ಕೊಡುತ್ತದೆ. ಎಂಬುದರ ನಿಶ್ಚಯವೂ ಇಲ್ಲ. ಏಕೆಂದರೆ ಈ ಶುಭಫಲಗಳನ್ನು ಪಾಪಗಳು ಮುಚ್ಚಿಕೊಂಡಿರುತ್ತವೆ.

೧೫. ಆ ಪುಣ್ಯವು ಎಲ್ಲಿಂದಲೋ ಹೇಗೋ ಬಂದು ಅದರ ಫಲವನ್ನು ಕೊಟ್ಟೇ ಕೊಡುತ್ತದೆ. ಇಲ್ಲಿ ಮಾಡಿದ ಪುಣ್ಯಕ್ಕಾಗಲೀ, ಪಾಪಕ್ಕಾಗಲೀ ನಾಶವೆಂಬುದಿಲ್ಲವೇ ಇಲ್ಲ.

೧೬. ಆದರೂ ಕೂಡ ಬಹು ಪುಣ್ಯಗಳಿಂದ ದಾರುಣವಾದ ಪಾಪವು ಹೋಗುತ್ತದೆ. ಎಲೈ ರಾಜನೇ ನೀನು ಹೇಳಿದುದು ಕಷ್ಟವನ್ನು ಸಹಿಸಲಾರದೆ ಮಾಡಿದರೆ ಆ ಪುಣ್ಯವು ಹೆಚ್ಚು ಕಡಿಮೆ ಆಗಿರಬಹುದು.

೧೭–೧೮. ನೀನು ಹೇಳಿದೆಯಲ್ಲ ಬಹಳ ಕಷ್ಟದಿಂದ ಮಹತ್ಪುಣ್ಯ ಬರುತ್ತದೆಂದು. ಆದರೆ ಇದನ್ನು ಕೇಳು. ಸ್ವಲ್ಪಾಯಾಸದಿಂದ ಸ್ವಲ್ಪ ಪುಣ್ಯವೂ, ಮಹಾಯಾಸದಿಂದ ಹೆಚ್ಚು ಪುಣ್ಯವೂ ಬರುತ್ತದೆಂದು ಭಾವಿಸಿದರೆ ಯಾವಾಗಲೂ ಕಷ್ಟಪಡುತ್ತಿರುವ ರೈತರು ಉಳುತ್ತಿರುವುದು ಮಹಾಪುಣ್ಯವಾಗಬೇಕು. ನರಸಿಂಹನು ದೊಡ್ಡ ಪ್ರಾಣಿಯಾದುದರಿಂದ ಅದರ ಮಂತ್ರವನ್ನು ಜಪಿಸಿದರೆ ಆಯಾಸವು ಹೆಚ್ಚಬೇಕಾದೀತು.

ಪಂಚಗವ್ಯಂ ಪ್ರಶಸ್ತಂ ವೈ ವ್ರತಾಂಗತ್ವೇನ ನೋ ಭವೇತ್ ।
ಇತಿಕರ್ತವ್ಯಬಾಹುಲ್ಯಂ ಮಹತ್ವಂ ಚ ತದಲ್ಪತಾ ॥ ೧೯ ॥

ಜಲಾಗ್ನ್ಯಾದಿ ಪ್ರವೇಶಸ್ಯ ಪ್ರಸಜ್ಯೇತ ವ್ರತಾಂತರಂ ।
ಇದಮಲ್ಪಂ ಮಹಚ್ಚೈತದಿತಿ ನೈವ ನಿಯಾಮಕಂ ॥ ೨೦ ॥

ಫಲಂ ಯಚ್ಚೋದಿತಂ ಶಾಸ್ತ್ರೇ ತದೇವಸ್ಯಾನ್ಮಹನ್ನೃಪ !
ಯಥಾಲ್ಪನಾಶೋ ಮಹತಾ ಮಹನ್ನಾಶಸ್ತಥಾಲ್ಪತಃ ।
ಕಿಂತ್ವಲ್ಪವಿಸ್ಫುಲಿಂಗೇನ ತೃಣಾರಾಶಿಃ ಪ್ರದಹ್ಯತೇ ॥ ೨೧ ॥

ಹತ್ಯಾಯುತಂ ಪಾಪಸಹಸ್ರಮುಗ್ರಂ
ಗುರ್ವಂಗನಾಕೋಟಿನಿಷೇವಣಂ ಚ ।
ಸ್ತೇಯಾದಿಪಾಪಾನಿ ಚ ಕೃಷ್ಣಭಕ್ತೇ
ರಜ್ಞಾನಜಾತಾನಿ ಲಯಂ ಪ್ರಿಯನ್ತೇ ॥ ೨೨ ॥

---

೧೦. ಆಯಾಸವು ಅಲ್ಪವಾಗಿರುವ ಪಂಚಗವ್ಯವು ವ್ರತಾಂಗವಾಗಬೇಕಾದದ್ದು ಪ್ರಶಸ್ತವಾಗದೇ ಹೋದೀತು. ಅದರಲ್ಲಿ ನಮ್ಮ ಭಾವನೆಯೂ, ಪುಣ್ಯವೂ ಬಹುವಾಗಿರುತ್ತದೆ. ಅದರ ಯೋಗ್ಯತೆಯೂ ಅದರ ಶ್ರಮವೂ ಅಲ್ಪವಾದುದು.

೨೦ ಹಾಗೆ ನೋಡುತ್ತಾ ಹೋದರೆ ಜಲಪ್ರವೇಶ ಅಗ್ನಿಪ್ರವೇಶಗಳಿಗೂ, ಬೇರೆ ಬೇರೆ ವ್ರತಗಳು ಹುಟ್ಟಬೇಕಾದೀತು. ಆದ್ದರಿಂದ ಇದು ಕಡಿಮೆ ಎಂಬ ನಿಯಮವೇನೂ ಇಲ್ಲ.

೨೧. ಮಹತ್ತಾದುದರಿಂದ ಅಲ್ಪದರನಾಶವೂ, ಅಲ್ಪವಾದುದರಿಂದ ಮಹನ್ನಾಶವೂ, ಶಾಸ್ತ್ರದಲ್ಲಿ ಹೇಳಿದೆ. ಅದೇ ದೊಡ್ಡದು. ಒಂದು ಬೆಂಕಿ ಕಿಡಿಯಿಂದ ಹತ್ತಿಯ ರಾಶಿಯೇ ಸುಡುವುದಿಲ್ಲವೇ ?

೨೨. ಬ್ರಹ್ಮಹತ್ಯೆಗಳ ಹತ್ತುಸಾವಿರವೂ, ಕೋಟಿಸಾವಿರ ಗುರುದಾರಗಮನಗಳೂ, ಸ್ವರ್ಣಸ್ತೇಯಾದಿ ಪಾಪಗಳೂ ಇವು ಕೃಷ್ಣಭಕ್ತಿಯಿದ್ದರೆ ನಾಶವಾಗುತ್ತವೆ.

ವಿಷ್ಣುಭಕ್ತಿಮತಾ ವೀರ ಯತ್ಕಿಂಚಿತ್ಕ್ರಿಯತೇಽಲ್ಪಕಂ ।
ಸುಕೃತಂ ಸಾಧು ವಿದುಷಾ ತದಕ್ಷಯಫಲಂ ಭವೇತ್ ॥ ೨೩ ॥

ಸಂದೇಹೋ ನಾತ್ರ ಕರ್ತವ್ಯೋ ಮಾಧವೇ ಮಾಸಿ ಮಾಧವಂ ।
ಸಮಾರಾಧ್ಯ ನರೋ ಭಕ್ತ್ಯಾ ತತ್ತದ್ವಾಂಛಿತಮಾಪ್ನುಯಾತ್ ॥ ೨೪ ॥

ಅಪತ್ಯಂ ದ್ರವಿಣಂ ರತ್ನಂ ದಾರಾ ಹರ್ಮ್ಯಂ ಹಯಾ ಗಜಾಃ ।
ಸುಖಾನಿ ಸ್ವರ್ಗಮೋಕ್ಷೌ ಚ ನ ದೂರೇ ಹರಿಭಕ್ತಿತಃ ॥ ೨೫ ॥

ಏವಂ ಶಾಸ್ತ್ರೋಕ್ತವಿಧಿನಾ ಸ್ವಲ್ಪೇನಾಪಿ ನ ಸಂಶಯಃ ।
ಪಾಪಸ್ಯ ಮಹತೋಽಪಿ ಸ್ಯಾತ್ಕ್ಷಯೋ ವೃದ್ಧಿಸ್ಸುಕರ್ಮಣಃ ॥ ೨೬ ॥

ಫಲಾಧಿಕ್ಯಂ ಭವೇದ್ಭೂಪ ತ್ವಾಧಿಕ್ಯಾದ್ಭಾವ ಕರ್ಮಣೋಃ ।
ಸೂಕ್ಷ್ಮಾ ಧರ್ಮಸ್ಯ ವಿಜ್ಞೇಯಾ ಗತಿಸ್ತು ವಿವಿಧೈರಪಿ ॥ ೨೭ ॥

---

೨೩. ವಿಷ್ಣುಭಕ್ತಿಯುಳ್ಳವನಿಂದ ಸ್ವಲ್ಪವಾಗಿ ಮಾಡಿದರೂ ಆ ಸುಕೃತವು ಅಕ್ಷಯಫಲವಾಗಿ ಆಗುತ್ತವೆ.

೨೪. ಈ ವಿಷಯದಲ್ಲಿ ಸಂದೇಹಬೇಡ. ವೈಶಾಖಮಾಸದಲ್ಲಿ ಮಾಧವನನ್ನು ಪೂಜಿಸಿದರೆ ಮನುಷ್ಯನು ಇಷ್ಟಸಿದ್ಧಿಯನ್ನು ಹೊಂದುತ್ತಾನೆ

೨೫. ಹರಿಯಲ್ಲಿ ಭಕ್ತಿಯನ್ನು ಮಾಡಿದರೆ, ಮಕ್ಕಳು, ಹಣ, ರತ್ನ, ಹೆಂಡಿರು, ಮನೆ, ಆನೆ, ಕುದುರೆ, ಸ್ವರ್ಗಮೋಕ್ಷಗಳು ದೂರವಿರುವುದಿಲ್ಲ.

೨೬. ಶಾಸ್ತ್ರೋಕ್ತವಿಧಿಯಿಂದ ಮಾಡಿದರೆ ಸ್ವಲ್ಪದರಿಂದಲೂ ಮಹಾಪಾಪದ ಕ್ಷಯವಾಗುತ್ತದೆ ಸಂಶಯವಿಲ್ಲ.

೨೭. ಭಾವ ಮತ್ತು ಕರ್ಮಗಳ ಆಧಿಕ್ಯದಿಂದ ಫಲವೂ ಹೆಚ್ಚುತ್ತದೆ. ನಾನಾ ರೀತಿಗಳಿಂದ ಧರ್ಮಸೂಕ್ಷ್ಮಗಳನ್ನು ನೋಡಬೇಕು.

ಪ್ರಿಯೋ ಮಾಧವಮಾಸೋಽಯಂ ಮಾಧವಸ್ಯ ಮಹಾತ್ಮನಃ ।
ಏಕೋಪ್ಯನುಷ್ಠಿತೋ ಲೋಕೈಃ ಸಮಗ್ರೇಽಪ್ಸಿತದಾಯಕಃ ॥ ೨೮ ॥

ಪುಣ್ಯೇನ ಗಾಂಗೇನ ಜಲೇನ ಕಾಲೇ
ದೇಶೇ ಚ ಯತ್ನಾನ್ನಪರೋಽಪಿ ಭೂಪ ।
ಆಜನ್ಮತೋಭಾವಹತೋಪಿ ದಾತಾ
ನ ಶುದ್ಧಿಮೇತೀತಿಮತಂ ಮಮೈತತ್ ॥ ೨೯ ॥

ಗಂಗಾದಿ ತೀರ್ಥೇಷು ವಸಂತಿ ಜೀವಾ
ದೇವಾಲಯೇ ಪಕ್ಷಿಗಣಾಶ್ಚ ನಿತ್ಯಂ ।
ವಿನಾಶಮಾಯಾಂತಿ ಕೃತೋಪವಾಸಾ
ಭಾವೋಜ್ಝಿತಾ ನೈವ ಗತಿಂ ಲಭಂತೇ ॥ ೩೦ ॥

ಭಾವಂ ತತೋ ಹೃತ್ಕಮಲೇ ನಿಧಾಯ
ಶ್ರೀಮಾಧವಂ ಮಾಧವಮಾಸಿ ಭಕ್ತ್ಯಾ ।
ಯಜೇತ ಯತ್ನಾನ್ನಪರೋ ವಿಶುದ್ಧಃ
ಪುಣ್ಯಂನ ಶಕ್ತಾ ವಯಮಸ್ಯ ವಕ್ತುಂ ॥ ೩೧ ॥

---

೨೮. ಮಾಧವನಿಗೆ ಆ ವೈಶಾಖವು ಪ್ರಿಯವಾದುದು. ಜನರು ಈ ವೈಶಾಖದಲ್ಲಿ ಒಂದನ್ನು ಮಾಡಿದರೂ ಪೂರ್ತಿಮಾಡಿದುದರ ಫಲವನ್ನು ಹೊಂದುತ್ತಾರೆ.

೨೯. ಹುಟ್ಟಿದಾಗಿನಿಂದ ಸರಿಯಾದ ಕಾಲದಲ್ಲಿ ಸರಿಯಾದ ಜಾಗದಲ್ಲಿ ಪುಣ್ಯವಾದ ಗಂಗಾನೀರಿನಲ್ಲಿ ಸ್ನಾನಮಾಡಿದರೂ ಸರಿಯಾದ ಭಾವವಿಲ್ಲದಿದ್ದರೂ ಅವನು ಶುದ್ಧಿ ಹೊಂದುವುದಿಲ್ಲವೆಂದು ನನ್ನ ಮತವು.

೩೦. ಎಷ್ಟೋ ಪ್ರಾಣಿಗಳು ಗಂಗಾತೀರ್ಥದಲ್ಲಿವೆ. ದೇವಸ್ಥಾನದಲ್ಲಿ ಎಷ್ಟೋ ಪಕ್ಷಿಗಳು ವಾಸಮಾಡುತ್ತವೆ. ಅಲ್ಲೇ ಹೊಟ್ಟೆಗಿಲ್ಲದೆ ಎಷ್ಟೋ ಸಾಯುತ್ತಿವೆ. ಆದರೇನು ಅದಕ್ಕೆ ಆ ಭಕ್ತಿ ಭಾವವಿಲ್ಲದುದರಿಂದ ಸದ್ಗತಿಯು ಲಭಿಸುವುದಿಲ್ಲ.

೩೧. ಆದ್ದರಿಂದ ಭಕ್ತಿಯನ್ನಿಟ್ಟು ವೈಶಾಖಮಾಸದಲ್ಲಿ ಮಾಧವನನ್ನು ಶುದ್ಧ ಮನಸ್ಸಿನಿಂದ ಸ್ನಾನಮಾಡಿ ಪೂಜಿಸಿದರೆ ಬರತಕ್ಕ ಪುಣ್ಯವನ್ನು ಹೇಳಲು ನಮಗೆ ಶಕ್ತಿಯು ಸಾಲದು.

ಪ್ರಜ್ವಾಲ್ಯ ವಹ್ನಿಂ ಘೃತತೈಲಸಿಕ್ತಂ
ಪ್ರದಕ್ಷಿಣಾವರ್ತಶಿಖಂ ಸ್ವಕಾಲೇ ।
ಪ್ರವಿಶ್ಯ ದಗ್ಧಃ ಕಿಲ ಭಾವದುಷ್ಟೋ
ನ ಸ್ವರ್ಗಮಾಪ್ನೋತಿ ಫಲಂ ನ ಚಾನ್ಯತ್ ॥ ೩೨ ॥

ಶ್ರದ್ಧತ್ಸ್ವ ಭೂಪ ತಸ್ಮಾತ್ತ್ವಂ ಮಾಧವಸ್ಯ ಫಲಂಪ್ರತಿ ।
ಸ್ವಲ್ಪಂಚಾಪಿ ಶುಭಂ ಕರ್ಮ ವಿಕರ್ಮಶತನಾಶನಂ ॥ ೩೩ ॥

ಯಥಾ ಹರೇರ್ನಾಮಭಯೇನ ಭೂಪ
ನಶ್ಯಂತಿ ಸರ್ವೇ ದುರಿತಸ್ಯ ವೃಂದಾಃ ।
ನೂನಂ ರವೌ ಮೇಷಗತೇ ವಿಭಾತೇ
ಸ್ನಾನೇನ ತೀರ್ಥೇ ಚ ಹರಿಸ್ತವೇನ ॥ ೩೪ ॥

ತೇಜಸಾ ವೈನತೇಯಸ್ಯ ಪಾಪ್ಮಾನಃ ಪನ್ನಗಾ ಇವ ।
ವಿದ್ರವಂತಿ ಚ ವೈಶಾಖಸ್ನಾನೇನೋಷಸಿ ನಿಶ್ಚಿತಂ ॥ ೩೫ ॥

---

೩೨. ಸ್ವಾಮಿಯಲ್ಲಿ ಭಕ್ತಿಯಿಲ್ಲದವನು ಆಯಾ ಕಾಲದಲ್ಲಿ ವಿಧಿವತ್ತಾಗಿ ಹೋಮಮಾಡಿ ಹತ್ತಿಸಿ ಬಲಗಡೆ ಸುತ್ತುತ್ತಿರುವ ಶಿಖಿಯುಳ್ಳ ಬೆಂಕಿಯಲ್ಲಿ ಬಿದ್ದರೂ ಕೂಡ ಅವನಿಗೆ ಸ್ವರ್ಗವೂ ಇಲ್ಲ. ಅದಕ್ಕೆ ಫಲವೂ ಇಲ್ಲ.

೩೩. ಎಲೈರಾಜನೇ ಆದ್ದರಿಂದ ನೀನು ವೈಶಾಖದ ಫಲವನ್ನು ನಂಬು. ಸ್ವಲ್ಪವಾದರೂ ಒಳ್ಳೆಯ ಕೆಲಸವು ಅನೇಕ ದುಷ್ಟಕರ್ಮಗಳನ್ನು ನಾಶಮಾಡುತ್ತದೆ.

೩೪. ಎಲೈ ರಾಜನೇ ಹರಿಸ್ಮರಣೆಯಿಂದ ಪಾಪದ ರಾಶಿಗಳು ಹೇಗೆ ನಾಶವಾಗುತ್ತದೆಯೋ ಹಾಗೆ ಸೂರ್ಯನು ಮೇಷವನ್ನು ಹೊಂದಿರುವಾಗ ಬೆಳಗ್ಗೆ ಸ್ನಾನ ಮಾಡುವುದರಿಂದಲೂ, ಹರಿಸ್ತವದಿಂದಲೂ, ಪಾಪಗಳು ನಾಶವಾಗುತ್ತದೆ.

೩೫. ಗರುಡನ ತೇಜಸ್ಸಿನಿಂದ ಪಾಪಿಗಳಾದ ಸರ್ಪಗಳಂತೆ ಬೆಳಗ್ಗೆ ವೈಶಾಖ ಸ್ನಾನದಿಂದ ಪಾಪಗಳು ಓಡುತ್ತವೆ. ನಿಶ್ಚಯವು.

ಗಂಗಾಯಾಂ ನರ್ಮದಾಯಾಂ ವಾ ಸ್ನಾತ್ವಾ ಮೇಷಗತೇ ರವೌ ।
ಪಾಪಪ್ರಶಮನಂ ಸ್ತೋತ್ರಂ ಯಃ ಪಠೇದ್ಭಕ್ತಿಭಾವತಃ ॥ ೩೬ ॥

ಏಕಕಾಲಂ ದ್ವಿಕಾಲಂ ವಾ ತ್ರಿಸಂಧ್ಯಮಪಿ ಭೂಪತೇ ।
ಸ ಯಾತಿ ಪರಮಂ ಸ್ಥಾನಂ ಸರ್ವಪಾಪವಿವರ್ಜಿತಃ ॥ ೩೭ ॥

ಏತತ್ತೇ ಸರ್ವಮಾಖ್ಯಾತಮಂಬರೀಷ ಸಮಾಸತಃ ।
ವೈಶಾಖಸ್ನಾನಮಾಹಾತ್ಮ್ಯಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೩೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಸಪ್ತಾಶೀತಿತಮೋಽಧ್ಯಾಯಃ

---

೩೬–೩೭. ಗಂಗೆಯಲ್ಲಾಗಲೀ, ನರ್ಮದೆಯಲ್ಲಾಗಲೀ, ಮೇಷಮಾಸದಲ್ಲಿ ಸ್ನಾನಮಾಡಿ ಭಕ್ತಿಯಿಂದ ಪಾಪಪ್ರಶಮನ ಸ್ತೋತ್ರವನ್ನು ಏಕಕಾಲ, ದ್ವಿಕಾಲ, ತ್ರಿಸಂಧ್ಯೆಯಲ್ಲೂ ಹೇಳಿದರೆ ಸರ್ವಪಾಪಗಳೂ ಹೋಗಿ ವೈಕುಂಠವನ್ನು ಹೊಂದುತ್ತಾನೆ.

೩೮. ಎಲೈ ಅಂಬರೀಷನೇ! ಈ ವೈಶಾಖಮಾಸದ ಮಹಿಮೆಯನ್ನು ಸಂಗ್ರಹವಾಗಿ ಹೇಳಿದ್ದೇನೆ. ಇನ್ನೇನು ಕೇಳಬೇಕು? ಹೇಳು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೆಂಬ
ಎಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಅಷ್ಟಾಶೀತಿತಮೋಽಧ್ಯಾಯಃ ॥



॥ ಅಂಬರೀಷ ಉವಾಚ ॥

**ಪಾಪಪ್ರಶಮನಂ ಸ್ತೋತ್ರಂ ಶ್ರೋತುಮಿಚ್ಛಾಮಿ ತೇ ಮುನೇ ।**
**ಯಸ್ಯ ಸ್ಮರಣಮಾತ್ರೇಣ ಪಾಪರಾಶಿರ್ವಿಲೀಯತೇ ॥ ೧ ॥**

**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಶ್ರಾವಿತೋಽಸ್ಮಿ ಶುಭಂ ವಿಧಿಂ ।**
**ವಿಕರ್ಮೋತ್ಪತಿತಂ ಯಸ್ಯ ಶ್ರವಣಾದೇವ ಹೀಯತೇ ॥ ೨ ॥**

**ಚಿತ್ರಂ ಕಿಮತ್ರ ಮಧಸೂದನ ದೈವತಸ್ಯ**
**ಸ್ನಾನಸ್ಯ ಪುಣ್ಯಸವನೈರಿಹ ಮಾಧವಸ್ಯ ।**
**ಸ್ನಾನೈರವಶ್ಯವಿಹಿತೈರಘರಾಶಿನಾಶಃ**
**ಸ್ಯಾದಸ್ಯನಾಮಪಠನಾದಪಿ ತಸ್ಯ ಲೋಕಃ ॥ ೩ ॥**

---

## ಎಂಭತ್ತೆಂಟನೆಯ ಅಧ್ಯಾಯವು

೧. ಅಂಬರೀಷನು ಹೇಳಿದನು— ಎಲೈ ಋಷಿಯೇ ನೀನು ಹೇಳುವ ಪಾಪ ಪ್ರಶಮನ ಸ್ತೋತ್ರವನ್ನು ಕೇಳಬೇಕೆಂದಿದ್ದೇನೆ. ಅದನ್ನು ಸ್ಮರಿಸುವುದರಿಂದ ಪಾಪದ ರಾಶಿಯು ನಾಶವಾಗುತ್ತದೆ.

೨. ಧನ್ಯನಾದೆನು. ಅನುಗೃಹೀತನಾದೆನು. ಶುಭವಾದ ವಿಷಯವನ್ನು ತಿಳಿಸಿದ್ದೀಯೆ. ಇದರ ಶ್ರವಣದಿಂದಲೇ ಪಾಪವು ನಾಶವಾಗುತ್ತದೆ.

೩. ವೈಶಾಖಮಾಸದಲ್ಲಿ ತಾನು ಸ್ನಾನಮಾಡಿ ಮಧುಸೂದನಸ್ವಾಮಿಗೆ ಸ್ನಾನ ಮಾಡಿಸುವುದರಿಂದಲೂ, ಅವನ ಅರ್ಪಣೆಗೆ ಪುಣ್ಯಕೆಲಸವನ್ನು ಮಾಡೋಣದರಿಂದಲೂ ಅವಶ್ಯವಾದ ವಿಶೇಷ ಸ್ನಾನಗಳಿಂದಲೂ ಪಾಪಶಮನವಾಗತ್ತದೆ. ಅದರಂತೆಯೇ ನಾಮಪಠಣದಿಂದಲೂ ಪಾಪನಾಶವಾಗುತ್ತದೆ. ಮತ್ತು ಅವನ ಲೋಕವೂ ಸಿಕ್ಕುತ್ತದೆ.

ತದೇವ ಪುಣ್ಯಂ ಪರಮಂ ಪವಿತ್ರಂ
ಹೃದ್ಯಂ ಚ ಲೋಕೇ ಸುಕೃತೈಕಲಭ್ಯಂ ।
ಯದುಚ್ಯತೇ ಕೇಶವನಾಮಧೇಯಂ
ಮನ್ಯೇ ಮುನೇ ಮಾಧವಮಾಸಿ ಭವ್ಯಂ ॥ ೪ ॥

ಧನ್ಯಾಸ್ತು ತೇ ಮಾಧಮಾಸಿ ನಾಮ
ಸ್ಮರಂತಿ ಯೇಽಹೋ ಮಧುಸೂದನಸ್ಯ ।
ತಸ್ಯೈವ ಮೇ ಕಿಂಚಿದತಶ್ಚರಿತ್ರಂ
ಪುನಃ ಪವಿತ್ರಂ ವದ ಮನ್ಯಸೇ ಚೇತ್ ॥ ೫ ॥

॥ ಸೂತ ಉವಾಚ ॥

ವಚಸ್ಸಮಾಕರ್ಣ್ಯ ಹರಿಪ್ರಿಯಸ್ಯ
ಪ್ರೀತೋಽಮುನಿಸ್ತಸ್ಯ ನೃಪೋತ್ತಮಸ್ಯ ।
ತನ್ಮಾಧವಸ್ನಾನಸಮುತ್ಸುಕೋಪಿ
ತಥಾ ರಸೇನಾಹ ಸ ಮಾಧವಸ್ಯ ॥ ೬ ॥

---

೪. ವೈಶಾಖಮಾಸದಲ್ಲಿ ಕೇಶವನಾಮಧೇಯವನ್ನು ಹೇಳುವುದೇ ಪುಣ್ಯವು. ಪರಮಪವಿತ್ರವು. ಹೃದ್ಯವು. ಸುಕೃತಮಾತ್ರದಿಂದಲೇ ಅದು ಲಭ್ಯವು.

೫. ವೈಶಾಖಮಾಸದಲ್ಲಿ ಶ್ರೀಕೃಷ್ಣನನಾಮಸ್ಮರಣೆ ಮಾಡುವವರು ಧನ್ಯರು. ಅಂತಹವರ ಚರಿತ್ರೆಯು ಪವಿತ್ರವಾದುದು. ಅದನ್ನು ನನಗೆ ಹೇಳು.

೬. ಸೂತನು ಹೇಳಿದನು—ಆ ಹರಿಪ್ರಿಯನಾದ ರಾಜನ ಮಾತನ್ನು ಕೇಳಿ ನಾರದನು ಸಂತೋಷಗೊಂಡನು. ವೈಶಾಖಮಾಸದ ಸ್ನಾನದಲ್ಲಿ ಆಶೆಯುಳ್ಳವನಾದರೂ ಮಾಧವನ ಕಡೆಯ ಭಕ್ತಿರಸದಲ್ಲಿ ಉತ್ಸುಕತೆಯಿಂದ ಹೇಳಿದನು.

॥ ನಾರದ ಉವಾಚ ॥

ಯನ್ಮೇ ಮಹೀಪಾಲ ಮಿಥೋ ಮುಕುಂದ
ಕಥಾರಸಾಲಾಪವಿಧಿರ್ವಿಶುದ್ಧಃ ।
ತ್ವಯಾ ಸಮಂ ಮಾಧವಮಾಸಧರ್ಮ
ಸ್ನಾನಾಧಿಕೋಽಯಂ ಹರಿದೈವತಸ್ಯ ॥ ೭ ॥

ಜೀವಿತಂ ಯಸ್ಯ ಧರ್ಮಾರ್ಥೇ ಧರ್ಮೋ ಹರ್ಯರ್ಥಮೇವ ಚ ।
ಅಹೋರಾತ್ರಾಣಿ ಪುಣ್ಯಾರ್ಥಂ ತಂ ಮನ್ಯೇ ವೈಷ್ಣವಂ ಭುವಿ ॥ ೮ ॥

ಕಿಂಚಿದ್ವಕ್ಷ್ಯಾಮಿ ತೇ ರಾಜನ್ವೈಶಾಖಸ್ನಾನಜಂ ಫಲಂ ।
ಅಸ್ಮತ್ಪಿತಾಪಿ ನೋ ವಕ್ತುಮಲಂವಿಸ್ತರತೋಽಖಿಲಂ ॥ ೯ ॥

ಯತ್ರ ಮಜ್ಜನಮಾತ್ರೇಣ ಪಾಪಾ ಮುಕ್ತಿಮುಪಾಗತಾಃ ।
ಪುರಾ ತೀರ್ಥಪ್ರಸಂಗೇನ ಭ್ರಮನ್ಕೋಽಪಿ ಮುನೀಶ್ವರಃ ॥ ೧೦ ॥

---

೭. ನಾರದನು ಹೇಳಿದನು—ಎಲೈ ರಾಜನೇ, ನೀನು ಮಾಧವನ ಕಥೆಯಲ್ಲಿ ಆಸಕ್ತನಾಗಿ ಶುದ್ಧನಾಗಿರುವುದರಿಂದ ವಿಷ್ಣುಭಕ್ತನಾದ ನಿನ್ನೊಡನೆ ಮಾತನಾಡುವುದು ಆ ವೈಶಾಖಮಾಸಕ್ಕಿಂತಲೂ ಹೆಚ್ಚು.

೮. ಯಾವನ ಜೀವನವು ಧರ್ಮದಲ್ಲಿ ಆಸಕ್ತವಾಗಿದ್ದು ಆ ಧರ್ಮವು ಹರಿಗೆ ಸೇರಿದುದಾಗಿ ಹಗಲೂ ರಾತ್ರಿಯೂ ಪುಣ್ಯವನ್ನೇ ಸಂಪಾದಿಸುತ್ತಾನೆಯೋ ಅಂತಹವನೇ ವೈಷ್ಣವನು.

೯. ಎಲೈ ರಾಜನೇ, ವೈಶಾಖಸ್ನಾನದ ಫಲವನ್ನು ಸ್ವಲ್ಪ ಹೇಳುತ್ತೇನೆ. ಅಂತಹ ಫಲವನ್ನು ಸಮಗ್ರವಾಗಿ ಹೇಳಲು ನಮ್ಮ ತಂದೆಯಾದ ಬ್ರಹ್ಮನೂ ಶಕ್ತನಾಗಲಾರನು.

೧೦. ಆ ವೈಶಾಖದ ಸ್ನಾನದಲ್ಲಿ ಪಾಪಿಗಳೂ ಮುಕ್ತಿಯನ್ನು ಹೊಂದಿದರು. ಅದರಲ್ಲಿ ಒಂದನ್ನು ಹೇಳುತ್ತೇನೆ, ಕೇಳು. ತೀರ್ಥಪ್ರಸಂಗದಿಂದ ಒಬ್ಬ ಋಷಿಯು ಪ್ರಪಂಚವನ್ನು ಸುತ್ತುತ್ತಿದ್ದನು.

ಮುನಿಶರ್ಮೇತಿ ವಿಖ್ಯಾತೋ ಧರ್ಮಾತ್ಮಾ ಸತ್ಯವಾಕ್ಛುಚಿಃ ।
ಯುಕ್ತಶ್ಶಮದಮಾಭ್ಯಾಂ ಚ ಶಾನ್ತಿಧರ್ಮೇಣ ಸಂಯುತಃ ॥ ೧೧ ॥

ಯುಕ್ತಶ್ಚ ಪಿತೃಕಾರ್ಯೇಷು ಶ್ರುತಿಸ್ಮೃತಿವಿಧಾನವಿತ್ ।
ಯುಕ್ತೋ ಮಧುರವಾಕ್ಯೇಷು ಸಂಯುಕ್ತೋ ಹರಿಪೂಜನೇ ॥ ೧೨ ॥

ಯುಕ್ತೋ ವೈಷ್ಣವಸಂಸರ್ಗೇ ತ್ರಿಕಾಲಜ್ಞಾನವಾನ್ಮುನಿಃ ।
ದಯಾಳುರತಿತೇಜಸ್ವೀ ತತ್ವವಿದ್ಬ್ರಾಹ್ಮಣಪ್ರಿಯಃ ॥ ೧೩ ॥

ಮಾಧವೇ ಮಾಸಿ ರೇವಾಯಾಂ ಸ್ನಾನಾರ್ಥಂ ಪ್ರತಿ ಸಂಚರನ್ ।
ಅಗ್ರತಃ ಪಂಚಪುರುಷಾನ್ದದರ್ಶಾತೀವ ದುರ್ಗತಾನ್ ॥ ೧೪ ॥

ಪರಸ್ಪರಸ್ಯಸಂಸರ್ಗಕಾರಿಣಃ ಕೃಷ್ಣವಿಗ್ರಹಾನ್ ।
ವಟಿಚ್ಛಾಯಾಮುಪಾಶ್ರಿತ್ಯ ಸಮಾಸೀನಾನ್ಮಹಾಮತೇ ॥ ೧೫ ॥

ಈಕ್ಷತೋ ದಿಕ್ಷು ಸರ್ವಾಸು ದುರಿತೋದ್ವಿಗ್ನಚೇತಸಃ ।
ತಾನಾಲೋಕ್ಯ ದ್ವಿಜಶ್ರೇಷ್ಠಃ ಚಿಂತಯಾಮಾಸ ವಿಸ್ಮಿತಃ ॥ ೧೬ ॥

---

೧೧. ಧರ್ಮಮಾರ್ಗದಲ್ಲಿ ತತ್ಪರನಾದ ಸತ್ಯವಾಕ್ಕುಳ್ಳ ಶಮದಮಗಳಿಂದ ಕೂಡಿದ ಆ ಋಷಿಯ ಹೆಸರು ಮುನಿಶರ್ಮನೆಂದು.

೧೨ ಪಿತೃಕಾರ್ಯದಲ್ಲಿ ಯುಕ್ತನೂ ಆಗಿದ್ದನು. ಶ್ರುತಿಸ್ಮೃತಿಗಳನ್ನು ಅನುಸರಿಸಿ ನಡೆಯುವವನು. ಅದರಲ್ಲಿ ನಿಪುಣನು. ಒಳ್ಳೆಯ ಮಾತನ್ನಾಡತಕ್ಕವನು. ಹರಿಪೂಜೆಯಲ್ಲಾಸಕ್ತನು.

೧೩. ಅವನು ವೈಷ್ಣವರೊಡನೆಯೇ ಇರುವವನು. ತಾನೂ ವೈಷ್ಣವನು. ತ್ರಿಕಾಲಜ್ಞಾನವುಳ್ಳವನು. ದಯಾವಂತನು. ತೇಜಸ್ವಿಯು. ತತ್ವವನ್ನು ಬಲ್ಲವನು ಬ್ರಾಹ್ಮಣ ಪ್ರಿಯನು.

೧೪. ವೈಶಾಖಮಾಸದಲ್ಲಿ ರೇವಾನದಿಯಲ್ಲಿ ಸ್ನಾನಕ್ಕೋಸ್ಕರ ಸಂಚರಿಸುತ್ತಾ ಎದುರಿನಲ್ಲಿ ಬರುತ್ತಿರುವ ಐದು ಜನ ದುಃಖಿತರನ್ನು ನೋಡಿದನು.

೧೫. ಒಬ್ಬರಿಗೊಬ್ಬರು ಮುಟ್ಟಿಕೊಂಡು ಕಪ್ಪುಶರೀರವುಳ್ಳವರಾಗಿ ಆಲದ ಮರದ ನೆರಳಿನಲ್ಲಿ ಕುಳಿತಿರುವುದನ್ನು ನೋಡಿದನು.

೧೬. ಅವರು ಎಲ್ಲಾಕಡೆಗೂ ನೋಡುತ್ತಿದ್ದರು. ಪಾಪದಿಂದ ದುಃಖಿತವಾದ ಮನಸ್ಸುಳ್ಳವರಾಗಿದ್ದರು. ಅವರನ್ನು ನೋಡಿ ಈ ಬ್ರಾಹ್ಮಣನು ಯೋಚಿಸಿದನು.

ಕುತೋ ಹ್ಯೇತೇ ನರಾ ಭೀಮೇ ವಿಪಿನೇ ದೀನಚೇಷ್ಟಿತಾಃ ।
ಚೌರಾ ವಾ ವಿಕೃತಾಕಾರಾ ದೃಶ್ಯಂತೇ ಪಾಪಭಾಗಿನಃ ॥ ೧೭ ॥

ಪರಸ್ಪರಂ ಚ ಭಾಷನ್ತೋ ಭಿನ್ನಾಂಜನಚಯೋಪಮಾಃ ।
ಯಾವದೇವಂ ಸವಿಪ್ರಾಗ್ರ್ಯೋ ವಿಚಾರಯತಿ ಧೀರಧೀಃ ॥ ೧೮ ॥

ತಾವದಾಗಮ್ಯ ತೇ ಪ್ರೋಚುಃ ಬದ್ಧಾಂಜಲಿಪುಟಾ ಮುನಿಂ ॥ ೧೯ ॥

॥ ಪುರುಷಾ ಊಚುಃ ॥

ಭವ್ಯಂ ಭವನ್ತಂ ಪುರುಷೋತ್ತಮಂ ವೈ
ಮನ್ಯಾಮಹೇ ವಿಪ್ರವರ ಪ್ರಸೀದ ।
ಯದಾತ್ಮದುಃಖಂ ಚ ವಯಂ ವಿಚಾರ್ಯ
ವಿಜ್ಞಾಪಯಾಮ ಶ್ರುಣು ತದ್ದ್ವಿಜೇಂದ್ರ ॥ ೨೦ ॥

ಸಂತಃ ಪ್ರತಿಷ್ಠಾ ದೀನಾನಾಂ ದೈವಾದುದ್ಭೂತಪಾಪ್ಮನಾಂ ।
ಆರ್ತಾನಾಮಾರ್ತಿಹನ್ತಾರೋ ದರ್ಶನಾದೇವ ಸಾಧವಃ ॥ ೨೧ ॥

---

೧೭. ಈ ಭಯಂಕರವಾದ ಕಾಡಿನಲ್ಲಿ ದೀನವಾದ ಮನಸ್ಸಿನಿಂದ ಇವರೇಕೆ ಬಂದಿರುವರು ? ವೇಷವನ್ನು ಬದಲಾಯಿಸಿಕೊಂಡಿರುವ ಪಾಪಕೆಲಸದಲ್ಲಿ ಮನಸ್ಸುಳ್ಳ ಕಳ್ಳರೇ ಏನು ?

೧೮. ಅಂಜನಪರ್ವತವನ್ನು ಒಡೆದರೆ ಒಳಗಿರುವ ಹೊಸಕಪ್ಪಿನಷ್ಟು ಕಪ್ಪಾಗಿದ್ದಾರೆ. ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದಾರೆ. ಈ ರೀತಿ ಬ್ರಾಹ್ಮಣನು ಯೋಚಿಸಿದನು.

೧೯ ಈ ಬ್ರಾಹ್ಮಣನು ಹೀಗೆ ಯೋಚಿಸುತ್ತಿರುವಾಗಲೇ ಅವರು ಬಂದು ಕೈ ಮುಗಿದುಕೊಂಡು ಇಂತೆಂದರು.

೨೦. ಪುರುಷರು ಹೇಳಿದರು– ನೀನು ಯೋಗ್ಯನು. ಪುರುಷೋತ್ತಮ ಎಂದು ತಿಳಿದಿದ್ದೇನೆ. ಎಲೈ ಬ್ರಾಹ್ಮಣನೇ ನೀನು ಪ್ರಸನ್ನನಾಗು. ನಮ್ಮ ದುಃಖವನ್ನು ತಪ್ಪಿಸಲಾರದೆ ನಾವು ನಿನಗೆ ಒಂದು ವಿಷಯವನ್ನು ಹೇಳುತ್ತೇವೆ. ಅದನ್ನು ಕೇಳು.

೨೧. ಸತ್ಪುರುಷರು ದೀನರನ್ನು ಉದ್ಧಾರಮಾಡುವುದಕ್ಕೆ ಇರತಕ್ಕವರು. ಅಕಸ್ಮಾತ್ತಾಗಿ ಪಾಪಮಾಡಿದ ದುಃಖಿಗಳ ದುಃಖವನ್ನು ಹೋಗಲಾಡಿಸತಕ್ಕವರು. ಅಂತಹ ಸಾಧುಗಳನ್ನು ನೋಡಿದೊಡನೆಯೇ ದುಃಖವು ಹೋಗುತ್ತದೆ.

ಅಹಂ ಪಾಂಚಾಲದೇಶೀಯಃ ಕ್ಷತ್ರಿಯೋ ನರವಾಹನಃ ।
ಬ್ರಾಹ್ಮಣಂ ಹತವಾನ್ಮೋಹಾಚ್ಛರೇಣಾಽಧ್ವನಿ ಪಾಪಕೃತ್ ॥ ೨೨ ॥

ಶಿಖಾಸೂತ್ರವಿಹೀನಶ್ಚ ತಿಲಕೇನ ವಿವರ್ಜಿತಃ ।
ಅಟಾಮಿ ಜಗತೀಮೇತಾಂ ಬ್ರಹ್ಮಘ್ನೋಽಹಮಿತಿ ಬ್ರುವನ್ ॥ ೨೩ ॥

ಬ್ರಹ್ಮಘ್ನಾಯಾತಿ ಪಾಪಾಯ ಭಿಕ್ಷಾ ಮಹ್ಯಂ ಪ್ರದೀಯತಾಂ ।
ಏವಂ ಸರ್ವೇಷು ತೀರ್ಥೇಷು ಭ್ರಮನ್ನತ್ರಾಸ್ಮಿ ಚಾಗತಃ ॥ ೨೪ ॥

ಬ್ರಹ್ಮಹತ್ಯಾ ನ ಮೇಽದ್ಯಾಪಿ ಪ್ರಯಾತಿ ಮುನಿಸತ್ತಮ ।
ಏವಂ ಮೇ ವರ್ಷಮೇಕಂ ಹಿ ವ್ಯತೀತಂ ಕುರ್ವತೋಽನಘ ॥ ೨೫ ॥

ದಹ್ಯಮಾನಸ್ಯ ಪಾಪೇನ ಶೋಕಾಕುಲಿತಚೇತಸಃ ।
ಚಂದ್ರಶರ್ಮಾ ಪರೋ ವಿಪ್ರೋ ಯೋಽಯಂ ಸಂಲಕ್ಷ್ಯತೇ ದ್ವಿಜ ॥ ೨೬ ॥

ಗುರುಘಾತೀ ಸ ತು ಬ್ರಹ್ಮನ್ಮೋಹಾಕುಲಿತಮಾನಸಃ ।
ನಿವಸನ್ಮಾಗಧೇ ದೇಶೇ ಸಂತ್ಯಕ್ತಸ್ಸ್ವಜನೈಸ್ತತಃ ॥ ೨೭ ॥

---

೨೨. ನಾನು ಪಾಂಚಾಲದೇಶದವನು. ಕ್ಷತ್ರಿಯನು. ನರರ ಮೇಲೆ ಕುಳಿತು ತಿರುಗಾಡುತ್ತಿದ್ದೆನು. ನಾನು ದಾರಿಯಲ್ಲಿ ತಿಳಿಯದೇ ಬಾಣದಿಂದ ಒಬ್ಬ ಬ್ರಾಹ್ಮಣನನ್ನು ಕೊಂದೆನು.

೨೩. ಜುಟ್ಟುಜನಿವಾರಗಳಿಲ್ಲದೆ ಹಣೆಗಿಟ್ಟುಕೊಳ್ಳದೆ ಬ್ರಹ್ಮಹತ್ಯ ಮಾಡಿದವನೆಂದು ಹೇಳಿಕೊಳ್ಳುತ್ತಾ ಜಗತ್ತನ್ನೇ ಸುತ್ತುತ್ತಿದ್ದೇನೆ

೨೪. ಬ್ರಹ್ಮಘ್ನನಾದ ಪಾಪಿಯಾದ ನನಗೆ ಭಿಕ್ಷೆಯನ್ನು ಕೊಡಿ. ಎಂದು ಹೇಳುತ್ತಾ ಎಲ್ಲಾ ತೀರ್ಥಗಳನ್ನೂ ಸುತ್ತುತ್ತಾ ಇಲ್ಲಿಗೆ ಬಂದಿದ್ದೇನೆ.

೨೫. ಈ ರೀತಿ ಸುತ್ತುತ್ತಿರುವ ನನಗೆ ವರ್ಷವಾಯಿತು. ನನ್ನ ಬ್ರಹ್ಮಹತ್ಯೆಯು ಇನ್ನೂ ಹೋಗಲೇ ಇಲ್ಲ.

೨೬-೩೦. ನಾನೇ ಪಾಪದಿಂದ ದುಃಖಪಡುತ್ತಿದ್ದೇನೆ. ನನ್ನ ಜೊತೆಗೆ ಈ ಗುರುಘಾತಿಯಾದ ಚಂದ್ರಶರ್ಮನು ಮಗಧದೇಶದ ತನ್ನ ಬಂಧುಗಳಿಂದ ಬಿಡಲ್ಪಟ್ಟು

ದ್ವೈವಾದಸಾವಪಿ ಮುನೇ ಭ್ರಮನ್ನಿಹ ಸಮಾಗತಃ ।
ಶಿಖಾಸೂತ್ರವಿಹೀನಶ್ಚ ವಿಪ್ರಲಿಂಗವಿವರ್ಜಿತಃ ॥ ೨೮ ॥

ಪೃಷ್ಟೋ ಮಯಾ ತು ವೃತ್ತಾಂತಂ ಸತ್ಯಮೇವಾವದದ್ದ್ವಿಜ ।
ವಸತಾ ಯದ್ಗುರೋರ್ಗೇಹೇ ಕ್ರೋಧಾಕುಲಿತಚೇತಸಾ ॥ ೨೯ ॥

ಮಹಾಮೋಹಗತೇನಾಪಿ ಯಥಾ ವೈ ಘಾತಿತೋ ಗುರುಃ ।
ತೇನ ಪಾಪೇನ ದಗ್ಧೋಽಸೌ ವರ್ತತೇ ಶೋಕಪೀಡಿತಃ ॥ ೩೦ ॥

ತೃತೀಯೋಽಯಂ ಪುನಃ ಸ್ವಾಮಿನ್ದೇವಶರ್ಮಾ ಶ್ರಮಾರ್ದಿತಃ ।
ಸುರಾಪೋ ಬ್ರಾಹ್ಮಣೋ ಜಾತೋ ಮೋಹಾದ್ವೇಶ್ಯಾಪ್ರಸಂಗತಃ ॥ ೩೧ ॥

ಪೃಷ್ಟೋ ಮಯಾಯಮಪಿ ಮೇ ಯಥಾವೃತ್ತಂ ನ್ಯವೇದಯತ್ ।
ಆತ್ಮನಶ್ಚೇಷ್ಟಿತಂ ಪೂರ್ವಮನ್ತಸ್ತಾಪೇನ ಪೀಡಿತಃ ॥ ೩೨ ॥

ನಿರಸ್ತಸ್ಸರ್ವಲೋಕೈಶ್ಚ ಭಾರ್ಯಾಬಂಧುಜನೈರಪಿ ।
ತೇನ ಪಾಪೇನ ಸಂಯುಕ್ತೋ ಭ್ರಮನ್ನತ್ರಾಯಮಾಗತಃ ॥ ೩೩ ॥

---

ಇಲ್ಲಿ ನನ್ನೊಡನೆ ಸೇರಿದನು. ಜುಟ್ಟು ಜನಿವಾರಗಳೂ ಬ್ರಾಹ್ಮಣಚಿಹ್ನೆಯೂ ಇಲ್ಲದ ಅವನನ್ನು ನಾನು ಕೇಳಲು ತನ್ನ ವೃತ್ತಾಂತವೆಲ್ಲವನ್ನೂ ಹೇಳಿದನು. ನಾನು ಗುರುವಿನ ಮನೆಯಲ್ಲಿದ್ದಾಗ ಕೋಪದಿಂದ ಮೋಹಹೊಂದಿ ಗುರುವನ್ನು ಕೊಂದೆನು. ಆ ಪಾಪದಿಂದ ದುಃಖಿತನಾಗಿದ್ದೇನೆ.

೩೧. ಈ ಮೂರನೆಯವನೂ ದೇವಶರ್ಮನು. ಶ್ರಮದಿಂದ ಕೂಡಿದ್ದಾನೆ ಇವನು ಸುರೆಯನ್ನು ಪಾನಮಾಡುತ್ತಾ ವೇಶ್ಯಾಲಂಪಟನಾಗಿದ್ದನು.

೩೨. ನಾನು ಅವನನ್ನು ಕೇಳಲು ಅವನು ಮಾಡಿದುದನ್ನೆಲ್ಲಾ ದುಃಖದಿಂದ ಹೇಳಿದನು.

೩೩. ಎಲ್ಲಾ ಜನರೂ ಹೆಂಡತಿಮಕ್ಕಳೂ ಬಿಟ್ಟುಬಿಡಲು ಆ ಪಾಪದಿಂದ ಕೂಡಿದವನಾಗಿ ಇಲ್ಲಿಗೆ ಇವನು ಬಂದನು.

ಚತುರ್ಥೋ ವಿಧರೋ ನಾಮ ವೈಶ್ಯೋಯಂ ಗುರುತಲ್ಪಗಃ ।
ಮೋಹಾನ್ಮಾಸತ್ರಯಂ ಯೂವದ್ವೇಶ್ಯಾಭೂತಾಂ ಚ ಮಾತರಂ ॥ ೩೪ ॥

ಬುಭುಜೇ ಸ ವಿದೇಹಸ್ಥಾಂ ಜ್ಞಾತತತ್ತ್ವಸ್ತತಶ್ಚರಿ ।
ದುಃಖಿತೋಽಭ್ಯಾಗತಶ್ಚಾತ್ರ ಭ್ರಮಮಾಣೋ ಮಹೀಂ ಮುನೇ ॥ ೩೫ ॥

ಪಂಚಮೋಽಯಂ ಮಹಾಪಾಪೀ ಪಾಪಿಸಂಸರ್ಗಕಾರಕಃ ।
ಪ್ರತ್ಯಹಂ ಧನಲೋಭೇನ ಚೌರ್ಯಾದಿ ಕೃತವಾನ್ಬಹು ॥ ೩೬ ॥

ವೈಶ್ಯೋಸೌ ಪಾತಕೈಃಕ್ರಾನ್ತಸ್ತತಸ್ತ್ಯಕ್ತೋ ಜನೈಸ್ಸ್ವಯಂ ।
ನಿರ್ವಿಣ್ಣಮಾನಸೋ ದೈವಾನ್ನಂದನಾಮೇಹ ಸಂಗತಃ ॥ ೩೭ ॥

ಏವಂ ಪಂಚಾಪಿ ಪಾಪಿಷ್ಠಾಃ ಸ್ಥಾನಮೇಕಮುಪಾಗತಾಃ ।
ಕಃ ಕಸ್ಯಾಪಿ ನ ಸಂಪರ್ಕಂ ಭೋಜನಾಚ್ಛಾದನಾಮಪಿ ॥ ೩೮ ॥

ಕರೋತಿ ಚ ಮಹಾಭಾಗ ವಿನಾ ವಾರ್ತಾಂ ದ್ವಿಜೋತ್ತಮ ।
ನಿಶಂತ್ಯೇಕಾಸನೇ ನೈವ ನ ಸ್ವಪಂತ್ಯೇಕಸಂಸ್ತರೇ ॥ ೩೯ ॥

---

೩೪-೩೫. ಈ ನಾಲ್ಕನೆಯವನಾದ ವಿಧುರನು ವೈಶ್ಯನು ಗುರುತಲ್ಪಗನು. ಅಜ್ಞಾನದಿಂದ ಹೇರೆ ಊರಿನಲ್ಲಿ ಸೂಳೆತನ ಮಾಡುತ್ತಿದ್ದ ತಾಯಿಯನ್ನು ಮೂರು ತಿಂಗಳು ಅನುಭವಿಸಿದನು. ಆದರೆ ಆ ಮೇಲೆ ಗೊತ್ತಾಯಿತು. ದುಃಖಗೊಂಡು ಎಲ್ಲಡೆಯಲ್ಲೂ ಸುತ್ತುತ್ತಾ ಇಲ್ಲಿಗೆ ಬಂದು ಸೇರಿದ್ದಾನೆ.

೩೬. ಈ ಐದನೆಯವನು ಮಹಾಪಾಪಿಯು. ಹಣದ ಆಸೆಯಿಂದ ನಿತ್ಯವೂ ಕಳ್ಳತನ ಮಾಡುತ್ತಿದ್ದನು. ಅನೇಕರಾದ ಪಾಪಿಗಳ ಸಹವಾಸದಲ್ಲಿದ್ದನು.

೩೭. ಈ ವೈಶ್ಯನು ಪಾತಕಗಳಿಂದ ಕೂಡಿಕೊಂಡಿದ್ದಾನೆ. ಆದ್ದರಿಂದ ಹೆಂಡತಿ ಮುಂತಾದವರು ಬಿಟ್ಟುಬಿಟ್ಟರು. ದುಃಖಗೊಂಡು ಅಕಸ್ಮತ್ತಾಗಿ ಇಲ್ಲಿಗೆ ಬಂದುಸೇರಿದನು ಇವನ ಹೆಸರು ನಂದನೆಂದು.

೩೮. ಈರೀತಿ ಐವರು ಪಾಪಿಷ್ಠರೂ ಒಂದೆಡೆಯಲ್ಲಿ ಸೇರಿದ್ದೇವೆ. ಊಟಉಪಚಾರಗಳಲ್ಲಿ ಒಬ್ಬೊಬ್ಬರಿಗೆ ಏನೂ ಸಂಬಂಧವಿಲ್ಲ.

೩೯. ಈ ನಾವು ಮಾತೊಂದನ್ನು ಬಿಟ್ಟು ಒಂದು ಆಸನದಲ್ಲಿ ಕೂತುಕೊಳ್ಳುವುದಾಗಲೀ ಮಲಗುವುದಾಗಲೀ ಯಾವುದನ್ನೂ ಮಾಡುವುದಿಲ್ಲ.

ಏವಂ ದುಃಖಸಮಾಕ್ರಾನ್ತಾ ನಾನಾತೀರ್ಥೇಷು ವೈ ಗತಾಃ ।
ನಾಸ್ಮಾಕಂ ಪಾತಕಂ ಘೋರಂ ಪ್ರಯಾತಿ ಮುನಿಸತ್ತಮ ॥ ೪೦ ॥

ದೃಷ್ಟ್ವಾ ಭವನ್ತಂ ದೀಪ್ಯಂತಂ ಪ್ರಸನ್ನಾನಿ ಮನಾಂಸಿ ನಃ ।
ವದಂತಿ ದುರಿತಪ್ರಾನ್ತಂ ಸಾಧೋಸ್ತೇ ಪುಣ್ಯದರ್ಶನಾತ್ ॥ ೪೧ ॥

ಉಪಾಯಂ ವದ ನಃ ಸ್ವಾಮಿನ್ಯಥಾ ಪಾಪಕ್ಷಯೋ ಭವೇತ್ ।
ಜ್ಞಾಯಸೇ ಕರ್ಮಣೋಽಸ್ಮಾಭಿಸ್ತ್ವಂತು ವೇದಾರ್ಥವಿತ್ಪ್ರಭೋ ॥ ೪೨ ॥

ಆರ್ತಾನಾಂ ಮಾರ್ಗಮಾಣಾನಾಂ ದುಃಖಚ್ಛೇದಮುಪಾಗತಃ ।
ಮೋಹಾದವಾಪ್ತಪಾಪಾನಾಂ ತ್ವಮುದ್ಧರ್ತಾಸಿ ನಿಶ್ಚಿತಂ ॥ ೪೩ ॥

॥ ನಾರದ ಉವಾಚ ॥

ತೇಷಾಮೇವಂ ವಚಶ್ಶ್ರುತ್ವಾ ಮುನಿಶರ್ಮಾ ದ್ವಿಜೋತ್ತಮಃ ।
ಇದಮಾಹ ವಿಚಾರ್ಯೈತಾನ್ಕರುಣಾವರುಣಾಲಯಃ ॥ ೪೪ ॥

---

೪೦. ಈ ರೀತಿ ದುಃಖಪಡುತ್ತಾ ನಾನಾತೀರ್ಥಗಳಲ್ಲಿ ಸುತ್ತಿದೆವು. ಎಲ್ಲೂ ನಮ್ಮ ಪಾಪವು ಹೋಗಲೇಯಿಲ್ಲ.

೪೧. ನಿನ್ನ ತೇಜಸ್ಸು ಪ್ರಕಾಶವಾಗಿರುವುದನ್ನು ನೋಡಿದರೆ ಪುಣ್ಯದರ್ಶನದಿಂದ ನಮ್ಮಗಳ ಪಾಪದ ಕೊನೆಯಾಗುತ್ತದೆಂನು ತಿಳಿಯುತ್ತದೆ.

೪೨. ಸ್ವಾಮಿ ನಮಗೆ ಪಾಪಕ್ಷಯವಾಗುವ ಉಪಾಯವನ್ನು ಹೇಳು. ನೀನು ವೇದಾರ್ಥ ಬಲ್ಲವನಾಗಿದ್ದೀಯೆ. ಕರುಣವುಳ್ಳವನಂತೆಯೂ ಕಾಣುತ್ತಿದ್ದೀಯೆ

೪೩. ದುಃಖಚ್ಛೇದಮಾರ್ಗವನ್ನು ಹುಡುಕುತ್ತಿರುವ ಅಜ್ಞಾನದಿಂದ ಪಾಪವನ್ನು ಮಾಡಿದ ದೀನರಿಗೆ ನೀನು ಖಂಡಿತವಾಗಿಯೂ ರಕ್ಷಕನಾಗಿ ಸಿಕ್ಕಿದ್ದೀಯೆ.

೪೪. ನಾರದನು ಹೇಳಿದನು– ಮುನಿಶರ್ಮನು ಇವರಮಾತನ್ನು ಕೇಳಿ ಕೃಪಾಕರನಾಗಿ ಯೋಚನೆಮಾಡಿ ಕೃಪೆಯುಳ್ಳವನಾಗಿ ಇಂತೆಂದನು.

॥ ಮುನಿಶರ್ಮೋವಾಚ ॥

ಯೂಯಮಜ್ಞಾನತಃ ಪ್ರಾಪ್ತಾಃ ಪಾಪಾನಿ ಸತ್ಯಭಾಷಿಣಃ ।
ಅನುತಾಪಯುತಾ ಯಸ್ಮಾದನುಗ್ರಾಹ್ಯಾ ಮಯಾ ತತಃ ॥ ೪೫ ॥

ಶೃಣುಧ್ವಂ ಮದ್ವಚಸ್ಸತ್ಯಮೂರ್ಧ್ವಬಾಹುರ್ವದಾಮ್ಯಹಂ ।
ಯನ್ಮಯಾಂಗಿರಸಃ ಪೂರ್ವಂ ಶ್ರುತಂ ಮುನಿಸಮಾಗಮೇ ॥ ೪೬ ॥

ತದ್ದೃಷ್ಟಂ ವೇದಶಾಸ್ತ್ರೇಷು ಸರ್ವೇಷಾಂ ಪ್ರತ್ಯಯಾವಹಂ ।
ವಿಷ್ಣುನಾಽಽರಾಧಿತೇನಾದೌ ಸ್ವಯಮುಕ್ತಂ ಚ ತತ್ವತಃ ॥ ೪೭ ॥

ನ ತೃಪ್ತಿರಶನಾದನ್ಯಾ ನ ಗುರುರ್ಜನಕಾತ್ಪರಃ ।
ನ ಪಾತ್ರಮನ್ಯದ್ವಿಪ್ರೇಭ್ಯೋ ನ ದೇವಃ ಕೇಶವಾತ್ಪರಂ ॥ ೪೮ ॥

ನ ಗಂಗಯಾ ಸಮಂ ತೀರ್ಥಂ ನ ದಾನಂ ಸುರಭೀಸಮಂ ।
ನ ಗಾಯತ್ರ್ಯಾ ಸಮಂ ಜಾಪ್ಯಂ ನೈಕಾದಶ್ಯಾ ಸಮಂ ವ್ರತಂ ॥ ೪೯ ॥

---

೪೫. ಮುನಿಶರ್ಮನು ಹೇಳಿದನು— ನೀವು ಅಜ್ಞಾನದಿಂದ ಈ ಪಾಪಗಳನ್ನು ಮಾಡಿದ್ದೀರಿ. ಸತ್ಯವನ್ನಾಡುತ್ತೀರಿ. ಈಗ ನೀವು ಅದಕ್ಕೆ ಅನುತಾಪಪಡುತ್ತಿದ್ದೀರಿ. ಆದ್ದರಿಂದ ನೀವು ನನ್ನಿಂದ ಸಹಾಯವನ್ನು ಹೊಂದುವಿರಿ.

೪೬. ಶಿಷ್ಯರುಗಳಿರಾ, ನನ್ನ ಮಾತನ್ನು ಕೇಳಿರಿ. ಕೈಯೆತ್ತಿ ಹೇಳುತ್ತೇನೆ. ಪೂರ್ವದಲ್ಲಿ ಮುನಿಗಳು ಸೇರಿದಾಗ ಆಂಗೀರಸನಿಂದ ಕೇಳಿದುದನ್ನು ಹೇಳುತ್ತೇನೆ.

೪೭. ಆ ವಿಷಯಗಳು ವೇದಗಳಲ್ಲೂ ಶಾಸ್ತ್ರಗಳಲ್ಲೂ ಉಕ್ತವಾಗಿವೆ ಪೂಜಿಸಿಕೊಂಡು ಪ್ರಸನ್ನನಾದ ವಿಷ್ಣುವು ತಾನೇ ಮೊದಲಿನಲ್ಲಿ ಹೇಳಿದ್ದಾನೆ.

೪೮. ಊಟಕ್ಕಿಂತಲೂ ಬೇರೆ ತೃಪ್ತಿಯಿಲ್ಲ. ತಂದೆಗಿಂತ ಬೇರೆ ಗುರುವಿಲ್ಲ. ವಿಪ್ರರಿಗಿಂತಲೂ ಬೇರೆ ಪಾತ್ರವಿಲ್ಲ. ಕೇಶವನಿಗಿಂತಲೂ ಬೇರೆ ದೇವರಿಲ್ಲ.

೪೯. ಗಂಗೆಗಿಂತ ಬೇರೆ ತೀರ್ಥವಿಲ್ಲ. ಗೋದಾನಕ್ಕಿಂತ ಬೇರೆ ದಾನವಿಲ್ಲ. ಗಾಯತ್ರಿಗೆ ಸಮವಾದ ಜಪವಿಲ್ಲ. ಏಕಾದಶಿಗೆ ಸಮವಾದ ವ್ರತವಿಲ್ಲ

ನ ಭಾರ್ಯಯಾ ಸಮಂ ಮಿತ್ರಂ ನ ಚ ಧರ್ಮೋ ದಯಾ ಸಮಃ ।
ನ ಸ್ವಾತಂತ್ರ್ಯಸಮಂ ಸೌಖ್ಯಂ ಗಾರ್ಹಸ್ಥ್ಯಾನ್ನಾಶ್ರಮಃ ಪರಃ ॥ ೫೦ ॥

ನ ಸತ್ಯಾತ್ಪರ ವಿಚಾರೋ ನ ಸಂತೋಷಸಮಂ ಸುಖಂ ।
ನ ಮಾಧವಸಮೋ ಮಾಸೋ ಮಹಾಪಾಪಹರಃ ಪರಃ ॥ ೫೧ ॥

ವಿಧಿನಾನುಷ್ಠಿತೋ ಭಕ್ತ್ಯಾ ಮಧುಸೂದನವಲ್ಲಭಃ ।
ಗಂಗಾದಿಷು ಚ ತೀರ್ಥೇಷು ವಿಶೇಷೇಣ ಸುದುರ್ಲಭಃ ॥ ೫೨ ॥

ಪ್ರಾಯಶ್ಚಿತ್ತಾನಿ ಸರ್ವಾಣಿ ವಾಜಿಮೇಧಮುಖಾನ್ಯಪಿ ।
ತಾವದ್ಗರ್ಜನ್ತಿ ಪಾಪಿಷ್ಠಾ ಯಾವನ್ನಾಯಾತಿ ಮಾಧವಃ ॥ ೫೩ ॥

ವೈಶಾಖೇ ಹ್ಯಖಿಲೇ ಮಾಸಿ ಯಸ್ಸ್ನಾಯಾದ್ಧರಿತತ್ಪರಃ ।
ಹರಿಪಾದಸಮುದ್ಭೂತೇ ಸಲಿಲೇ ವಿಮಲಾಶಯಃ ॥ ೫೪ ॥

ಸ ಏವ ಸರ್ವಪಾಪೈಸ್ತು ಮುಕ್ತೋ ಯಾಯಾತ್ಪರಾಂಗತಿಂ । ॥ ೫೫ ॥

---

೫೦. ಹೆಂಡತಿಗೆ ಸಮವಾದ ಸ್ನೇಹಿತರಿಲ್ಲ. ದಯೆಗಿಂತ ಬೇರೆಯಾದ ಧರ್ಮವಿಲ್ಲ. ಸ್ವಾತಂತ್ರ್ಯಕ್ಕೆ ಮಿಗಿಲಾದ ಸುಖವಿಲ್ಲ ಗೃಹಸ್ಥಾಶ್ರಮಕ್ಕಿಂತ ಬೇರೆ ಉತ್ತಮವಾದ ಆಶ್ರಮವಿಲ್ಲ.

೫೧. ಸತ್ಯಕ್ಕಿಂತಲೂ ಮಿಗಿಲಾದ ಆಚಾರವಿಲ್ಲ. ಸಂತೋಷಕ್ಕಿಂತಲೂ ಹೆಚ್ಚಿನ ಸುಖವಿಲ್ಲ. ವೈಶಾಖಕ್ಕಿಂತ ಪಾಪನಾಶಕವಾದ ಮಾಸವು ಮತ್ತೊಂದಿಲ್ಲ.

೫೨. ಆ ಮಾಧವನಿಗೆ ಪ್ರಿಯವಾದ ವೈಶಾಖಮಾಸವನ್ನು ವಿಧಿಪೂರ್ವಕವಾಗಿ ಅನುಷ್ಠಾನಮಾಡಬೇಕು. ಗಂಗಾದಿ ತೀರ್ಥಗಳಲ್ಲಿ ಆ ವೈಶಾಖಮಾಸವು ಸಿಕ್ಕುವುದು ದುರ್ಲಭವು.

೫೩. ಪಾಪಗಳಿಗೆ ಪ್ರಾಯಶ್ಚಿತ್ತರೂಪಗಳಾದ ಅಶ್ವಮೇಧವೇ ಮುಂತಾದುವು ವೈಶಾಖಮಾಸ ಬರುವವರೆಗೂ ಪ್ರಕಾಶಿಸುತ್ತವೆ. ಎಲ್ಲಕ್ಕಿಂತಲೂ, ವೈಶಾಖವೇ ಉತ್ತಮವು.

೫೪-೫೫. ಹರಿಯಲ್ಲಿ ಮನಸ್ಸಿಟ್ಟು ವೈಶಾಖಮಾಸ ಪೂರ್ತಿಯಾಗಿ ಒಳ್ಳೆಯ ಮನಸ್ಸಿನಿಂದ ಗಂಗೆಯಲ್ಲಿ ಸ್ನಾನಮಾಡಿದರೆ ಅವನು ಪಾಪದಿಂದ ಮುಕ್ತನಾಗಿ ಉತ್ತಮ ಗತಿಯನ್ನು ಹೊಂದುತ್ತಾನೆ.

ಮಾಸೇ ತು ವೈ ಮಾಧವಸಂಜ್ಞಿಕೇಸ್ಮಿನ್
ಯಸ್ಸ್ನಾತಿ ಪಾಪೈಸ್ಸ ವಿಮುಚ್ಯತೇ ಹಿ ।
ಮೇಷಸ್ಥಿತೇ ಭಾಸ್ವತಿ ನರ್ಮದಾಯಾಃ
ಶರ್ಮಪ್ರದೇ ವಾರಿಣಿ ವಾರಿತಾಘೇ ॥ ೫೬ ॥

ದುರ್ಲಭಾ ಹಿ ಮಹಾನದ್ಯೋ ಮಾಧವೇ ಮಾಸಿ ಸರ್ವತಃ ।
ತತೋಽಪಿ ದುರ್ಲಭಾ ಗಂಗಾ ಯಮುನಾ ಚಾಪಿ ನರ್ಮದಾ ॥ ೫೭ ॥

ಪಾಪಾಸ್ತ್ವೇತಾಸು ತಿಸೃಷು ಪ್ರಾಪ್ಯೈಕಾಮಪಿ ಸಾದರಂ ।
ಯಸ್ಸ್ನಾತಿ ಮಾಧವೇಮಾಸಿ ವಿಪಾಪಃ ಸ ಹರಿಂ ವ್ರಜೇತ್ ॥ ೫೮ ॥

ತಸ್ಮಾದಹೋ ಸಹ ಮಯಾ ಸುಕೃತೈಕಸಾರೇ
ವೈಶಾಖಮಾಸಿ ಚ ಭವನ್ತ ಉಪೇತ್ಯ ರೇವಾಂ ।
ಮಜ್ಜನ್ತು ಪಾತಕಕೃತೋ ಮುನಿವೃಂದಜುಷ್ಟೇ
ರೇವಾಜಲೇ ನಿಖಿಲಪಾಪಭಯಾಪಹತ್ಯೈ ॥ ೫೯ ॥

ಏವಮುಕ್ತಾಸ್ತತಸ್ಸರ್ವೇ ಮುದಿತಾ ಮುನಿನಾ ಸಹ ।
ಜಗ್ಮುಸ್ತೇ ಪಾಪಿನೋ ರೇವಾಂ ಶಂಸನ್ತೋಽದ್ಭುತಕಾರಿಣೀಂ ॥ ೬೦ ॥

---

೫೬. ವೈಶಾಖಮಾಸದಲ್ಲಿ ಗಂಗೆಯಲ್ಲಿಯೂ, ಮೇಷಮಾಸದಲ್ಲಿ ನರ್ಮದೆಯಲ್ಲಿಯೂ ಸ್ನಾನಮಾಡಿದರೆ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ

೫೭. ವೈಶಾಖಮಾಸದಲ್ಲಿ ಮಹಾನದಿಗಳು ಸಿಕ್ಕುವುದು ದುರ್ಲಭವು. ಅದಕ್ಕಿಂತಲೂ ಗಂಗೆ, ಯಮುನೆ, ನರ್ಮದೆಗಳು ಸಿಕ್ಕುವುದು ಇನ್ನೂ ಕಷ್ಟ.

೫೮, ಪಾಪಿಗಳಾದವರು ಈ ಮೂರರಲ್ಲಿ ಯಾವುದನ್ನಾದರೂ ಹೊಂದಿ ಪ್ರೀತಿಯಿಂದ ಸ್ನಾನಮಾಡಿದರೆ ಪಾಪವು ಹೋಗಿ ಅವನು ಹರಿಪದವನ್ನು ಹೊಂದುವನು.

೫೯. ಆದ್ದರಿಂದ ಈಗ ನೀವು ಪುಣ್ಯಮಯವಾದ ರೇವಾನದಿಗೆ ನನ್ನೊಡನೆ ಬನ್ನಿರಿ. ಪಾಪಿಗಳಾದ ನೀವೆಲ್ಲರೂ ಅದರಲ್ಲಿ ಸ್ನಾನಮಾಡಿರಿ. ಸಮಸ್ತವಾದ ಪಾಪಗಳೂ ಹೋಗುತ್ತವೆ.

೬೦. ಹೀಗೆನ್ನಲು ಅವರೆಲ್ಲರೂ ಸಂತೋಷಪಟ್ಟುಕೊಂಡು ಅದ್ಭುತವಾದ ರೇವಾನದಿಯನ್ನು ಹೊಗಳುತ್ತ ಅಲ್ಲಿಗೆ ಹೋದರು.

ದ್ವಿಜಸ್ತು ನರ್ಮದಾತೀರಂ ಸಂಪ್ರಾಪ್ಯ ಹೃಷ್ಟಮಾನಸಃ ।
ಸಸ್ನೌ ವೇದೋಕ್ತವಿಧಿನಾ ಪ್ರಾತಃಕಾಲೇ ನರಾಧಿಪ ॥ ೬೧ ॥

ತೇ ಪಾಪಿನಃ ಪಂಚ ಯದೈವ ರೇವಾ-
ಜಲೇ ನಿಮಗ್ನಾ ವಚಸೈವ ತಸ್ಯ ।
ಶ್ರೀಮಾಧವೇ ಮಾಸಿ ವಿವರ್ಣದೇಹಾಃ
ಸದ್ಯಸ್ಸುವರ್ಣೈಕರುಚೋ ಬಭೂವುಃ ॥ ೬೨ ॥

ಪಾಪಪ್ರಶಮನಂ ಸ್ತೋತ್ರಂ ಶ್ರಾವಿತಾ ಮುನಿಶರ್ಮಣಾ ।
ಸಮಕ್ಷಂ ಸರ್ವಲೋಕಾನಾಂ ಜಾತಾಸ್ತೇ ವರಕಾನ್ತಯಃ ॥ ೬೩ ॥

ತತ್ರಸ್ಥಾ ಮಾನವಾಸ್ತಾಂಸ್ತು ನಿರಜಾನ್ಸ್ನಾನಮಾತ್ರತಃ ।
ನ ಸ್ಪೃಶಂತಿ ಚ ರಾಜೇಂದ್ರ ಪಾಪಿಸಂಸರ್ಗಶಂಕಯಾ ॥ ೬೪ ॥

ಮುನಿಶರ್ಮಾನುರೋಧೇನ ತತೋ ಧರ್ಮಪ್ರಮಾಣತಃ ।
ಸದ್ಯೋ ದಿವ್ಯಾಭವದ್ವಾಣೀ ಯದೈತೇ ವಿಗತೈನಸಃ ॥ ೬೫ ॥

---

೬೧. ಈ ಬ್ರಾಹ್ಮಣನು ನರ್ಮದೆಯನ್ನು ಹೊಂದಿ ವಿಧಿವತ್ತಾಗಿ ಪ್ರಾತಃಕಾಲದಲ್ಲಿ ಸ್ನಾನಮಾಡಿದನು.

೬೨. ಈ ಬ್ರಾಹ್ಮಣನೊಡನೆ ಆ ಐದುಜನ ಪಾಪಿಗಳೂ ನರ್ಮದೆಯಲ್ಲಿ ವೈಶಾಖಮಾಸದಲ್ಲಿ ಸ್ನಾನಮಾಡಲು ಪ್ರಕಾಶಿಸುವ ದೇಹವುಳ್ಳವರಾದರು.

೬೩. ಆ ಮುನಿಶರ್ಮನು ಪಾಪಶ್ರಮನ ಸ್ತೋತ್ರವನ್ನು ಹೇಳಿದನು. ಅದನ್ನು ಅವರು ಕೇಳಿ ಲೋಕದ ಜನಗಳು ಕಾಣುವಂತೆ ಒಳ್ಳೆಯ ಕಾಂತಿಗಳನ್ನು ಹೊಂದಿದರು.

೬೪. ಸ್ನಾನಮಾಡಿ ಅವರು ಕಾಂತಿಯುಳ್ಳವರಾದರೂ, ಅಲ್ಲಿನವರು ಪಾಪಿಯ ಸಂಸರ್ಗವೆಂಬ ಭಯದಿಂದ ಮುಟ್ಟಲಿಲ್ಲ.

೬೫. ಧರ್ಮಶಾಸ್ತ್ರದ ಮಾತಿನಂತೆಯೂ, ಮುನಿಶರ್ಮನ ಇಷ್ಟದಂತೆಯೂ, ಅವರು ಪಾಪದಿಂದ ಮುಕ್ತರಾಗಲು ಆಕಾಶವಾಣಿಯಾಯಿತು.

ಸ್ನಾತಾನಾಂ ಮಾಧವೇ ಮಾಸಿ ಮುಕುಂದಹೃದಯಾತ್ಮನಾಂ ।
ಪಾಪಪ್ರಶಮನಂ ಸ್ತೋತ್ರಂ ಶೃಣ್ವತಾಮಿಹ ಸಾದರಂ ॥ ೬೬ ॥

ಶೃಣ್ವತಾಂ ಸರ್ವಪಾಪಾನಾಂ ಪ್ರಾಯಶ್ಚಿತ್ತಮಿದಂ ಪರಂ ।
ಯತ್ಪಾರ್ತವರ್ಮಾಧವೇ ಮಾಸಿ ಭಕ್ತ್ಯಾ ತೀರ್ಥಾವಗಾಹನಂ ॥ ೬೭ ॥

ಇತ್ಯೇವಮಾಕರ್ಣ್ಯ ಗಿರಂ ನಭಸ್ಥಾ
ಮತ್ಯದ್ಭುತಾಮಾಶು ತತೋ ಮನುಷ್ಯಾಃ ।
ಶಶಂಸುರೇತಾನಪಿ ಪಂಚಪುಣ್ಯಾ
ನ್ವೈಶಾಖಮಾಸಂ ಚ ಮುನಿಂ ಚ ದೇವಾಂ ॥ ೬೮ ॥

ಅಥಾಽಕರ್ಣಯ ಭೂಪಾಲ ಸ್ತವಂ ದುರಿತನಾಶನಂ ।
ಯಮಾಕರ್ಣ್ಯ ನರೋ ಭಕ್ತ್ಯಾ ಮುಚ್ಯತೇ ಪಾಪರಾಶಿಭಿಃ ॥ ೬೯ ॥

ಯಸ್ಯ ಸ್ಮರಣಮಾತ್ರೇಣ ಪಾಪಿನಃ ಶುದ್ಧಿಮಾಗತಾಃ ।
ಅನ್ಯೇಽಪಿ ಬಹವೋ ಮುಕ್ತಾಃ ಪಾಪಾದಜ್ಞಾನಸಂಭವಾತ್ ॥ ೭೦ ॥

---

೬೬–೬೭. ಮುಕುಂದನನ್ನು ಸ್ಮರಿಸಿ ಈ ನರ್ಮದೆಯಲ್ಲಿ ಸ್ನಾನಮಾಡಿ ಪಾಪಶ್ರಮನ ಸ್ತೋತ್ರವನ್ನು ಆದರದಿಂದ ಕೇಳಿದ ಇವರುಗಳಿಗೆ ಪಾಪವೆಲ್ಲವೂ ಹೋಗಿದೆ. ವೈಶಾಖಮಾಸದಲ್ಲಿ ಭಕ್ತಿಯಿಂದ ತೀರ್ಥಸ್ನಾನಮಾಡುವುದೇ ಈ ಪಾಪಕ್ಕೆ ಪ್ರಾಯಶ್ಚಿತ್ತವು.

೬೮. ಈ ರೀತಿಯಾದ ಅದ್ಭುತವಾದ ಆಕಾಶವಾಣಿಯನ್ನು ಕೇಳಿ ಅಲ್ಲಿದ್ದವರು ಈ ಐವರು ಪುಣ್ಯವಂತರನ್ನೂ ಆಕಾಶವಾಣಿಯನ್ನೂ ಹೊಗಳಿದರು.

೬೯. ಎಲೈ ದೊರೆಯೇ ! ಯಾವ ಸ್ತೋತ್ರವನ್ನು ಕೇಳಿ ಜನರು ಪಾಪದಿಂದ ಮುಕ್ತರಾಗುತ್ತಾರೆಯೋ ಅಂತಹ ಪಾಪನಾಶಕವಾದ ಸ್ತೋತ್ರವನ್ನು ಕೇಳು.

೭೦. ಈ ಸ್ತೋತ್ರದ ಸ್ಮರಣೆಯಿಂದಲೇ ಈ ಪಾಪಿಗಳೆಲ್ಲರೂ ಶುದ್ಧರಾದರು. ಇನ್ನೂ ಎಷ್ಟೋ ಜನರು ಅಜ್ಞಾನದಿಂದ ಹೊಂದಿದ ಪಾಪದಿಂದ ಮುಕ್ತರಾದರು.

ಪರದಾರಪರದ್ರವ್ಯಜೀವಹಾರಾದಿಕೇ ಯದಾ ।
ಪ್ರವರ್ತತೇ ನೃಣಾಂ ಚಿತ್ತಂ ಪ್ರಾಯಶ್ಚಿತ್ತಂ ಸ್ತುತಿಸ್ತದಾ ॥ ೭೧ ॥

ವಿಷ್ಣವೇ ವಿಷ್ಣವೇ ನಿತ್ಯಂ ವಿಷ್ಣವೇ ವಿಷ್ಣವೇ ನಮಃ ।
ನಮಾಮಿ ವಿಷ್ಣುಂ ಚಿತ್ತಸ್ಥಮಹಂಕಾರಗತಂ ಹರಿಂ ॥ ೭೨ ॥

ಚಿತ್ತಸ್ಥಮೀಶಮವ್ಯಕ್ತಮನಂತಮಪರಾಜಿತಂ ।
ವಿಷ್ಣುಮೀಡ್ಯಮಶೇಷಾಣಾಮನಾದಿನಿಧನಂ ಹರಿಂ ॥ ೭೩ ॥

ವಿಷ್ಣುಶ್ಚಿತ್ತಗತೋ ಯನ್ಮೇ ವಿಷ್ಣುರ್ಬುದ್ಧಿಗತಶ್ಚ ಯತ್ ।
ಯೋಽಹಂಕಾರಗತೋ ವಿಷ್ಣುಃ ಯೋ ವಿಷ್ಣುರ್ಮಯಿ ಸಂಸ್ಥಿತಃ ॥ ೭೪ ॥

ಕರೋತಿ ಕರ್ತೃಭೂತೌಸೌ ಸ್ಥಾವರಸ್ಯ ಚರಸ್ಯ ಚ ।
ತತ್ಪಾಪಂ ನಾಶಮಾಯಾತಿ ತಸ್ಮಿನ್ವಿಷ್ಣೌ ವಿಚಿಂತಿತೇ ॥ ೭೫ ॥

---

೭೧. ಪರರ ಹೆಂಡಿರು, ಪರರ ಹಣ, ಪರರ ಜೀವಗಳನ್ನು ಹರಿಸಿದಾಗಲೂ, ಪರರಿಗೆ ಹಿಂಸೆಮಾಡಿದಾಗಲೂ, ಈ ಸ್ತೋತ್ರವನ್ನು ಮಾಡಿದರೆ ಅದೇ ಅವೆಲ್ಲಕ್ಕೂ ಸಹ ಪ್ರಾಯಶ್ಚಿತ್ತವು.

೭೨. ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವ ಯಾವಾಗಲೂ ಶಾಶ್ವತನಾದ ವಿಷ್ಣುವಿಗೆ ನಮಸ್ಕಾರವು. ಅಹಂಕಾರನಾಶಕನಾದ ಮನಸ್ಸಿನಲ್ಲಿಯೇ ಇರುವ ವಿಷ್ಣುವನ್ನು ನಮಸ್ಕರಿಸುತ್ತೇನೆ.

೭೩. ಯಾವಾಗಲೂ ಮನಸ್ಸಿನಲ್ಲಿಯೇ ಇರುವ ಅವ್ಯಕ್ತವಾದ, ಅನಂತನಾದ ಪರಾಜಯವನ್ನು ಹೊಂದದ ಎಲ್ಲರಿಂದಲೂ ಹೊಗಳಿಸಿಕೊಳ್ಳುವ ಆದ್ಯಂತರಹಿತನಾದ ಹರಿಯನ್ನು ಸ್ತುತಿಸುತ್ತೇನೆ.

೭೪. ಚಿತ್ತದಲ್ಲಿ ಯಾವಾಗಲೂ ಇರುವ, ಯಾವಾಗಲೂ ಬುದ್ಧಿಯನ್ನು ಹೊಂದಿರುವ ಆಹಂಕಾರವನ್ನು ಹೊಂದಿರುವ ನನ್ನಲ್ಲಿಯೂ ಇರುವ ವಿಷ್ಣುವನ್ನು ಸ್ತುತಿಸುತ್ತೇನೆ. (ನಮಸ್ಕರಿಸುತ್ತೇನೆ)

೭೫. ಈ ವಿಷ್ಣುವೇ ಕರ್ತೃವಾಗಿ ಸ್ಥಾವರಜಂಗಮಗಳನ್ನೂ ಸೃಷ್ಟಿಸುತ್ತಾನೆ. ಅಂತಹ ವಿಷ್ಣುವನ್ನು ಚಿಂತಿಸಿದರೆ ಪಾಪವು ನಾಶವಾಗುತ್ತದೆ.

ಧ್ಯಾತೋ ಹರತಿ ಯಃ ಪಾಪಂ ಸ್ವಪ್ನೇ ದೃಷ್ಟಶ್ಚ ಪಾಪಿನಾಂ ।
ತಮುಪೇಂದ್ರಮಹಂವಿಷ್ಣುಂ ನಮಾಮಿ ಪ್ರಣತಪ್ರಿಯಂ ॥ ೭೬ ॥

ಜಗತ್ಯಸ್ಮಿನ್ನಿರಾಲಂಬೇ ಹ್ಯಜಮಕ್ಷರಮವ್ಯಯಂ ।
ಹಸ್ತಾವಲಂಬನಂ ಸ್ತೋತ್ರಂ ವಿಷ್ಣುಂ ವಂದೇ ಸನಾತನಂ ॥ ೭೭ ॥

ಸರ್ವೇಶ್ವರೇಶ್ವರ ವಿಭೋ ಪರಮಾತ್ಮನ್ನಧೋಕ್ಷಜ ।
ಹೃಷೀಕೇಶ ಹೃಷೀಕೇಶ ಹೃಷೀಕೇಶ ನಮೋಽಸ್ತುತೇ ॥ ೭೮ ॥

ನೃಸಿಂಹಾನಂತಗೋವಿಂದ ಭೂತಭಾವನಕೇಶವ ।
ದುರುಕ್ತಂ ದುಷ್ಕೃತಂ ಧ್ಯಾತಂ ಶಮಯಾಶು ಜನಾರ್ದನ ॥ ೭೯ ॥

ಯನ್ಮಯಾ ಚಿಂತಿತಂ ದುಷ್ಟಂ ಸ್ವಚಿತ್ತವಶವರ್ತಿನಾ ।
ಆಕರ್ಣಯ ಮಹಾಬಾಹೋ ತಚ್ಛಮಂ ನಯ ಕೇಶವ ॥ ೮೦ ॥

ಬ್ರಹ್ಮಣ್ಯ ದೇವ ಗೋವಿಂದ ಪರಮಾರ್ಥಪರಾಯಣ ।
ಜಗನ್ನಾಥ ಜಗದ್ಧಾತಃ ಪಾಪಂ ಶಮಯ ಮೇಽಚ್ಯುತ ॥ ೮೧ ॥

---

೭೬. ಧ್ಯಾನಮಾಡಿದರೂ, ಸ್ವಪ್ನದಲ್ಲಿ ಕಂಡರೂ, ಪಾಪವನ್ನು ನಾಶಮಾಡುವ ಉಪೇಂದ್ರನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೭೭. ಈ ಆಶ್ರಯರಹಿತವಾದ ಜಗತ್ತಿನಲ್ಲಿ ಅಜನೂ, ಅವ್ಯಯನೂ ಆಗಿರುವ ಎಲ್ಲರಿಗೂ ಆಶ್ರಯನಾದ ಸನಾತನನಾದ ವಿಷ್ಣುವನ್ನು ಸ್ತೋತ್ರಮಾಡುತ್ತೇನೆ.

೭೮. ಸರ್ವೇಶ್ವರನಿಗೂ ಈಶ್ವರನೇ, ಪರಮಾತ್ಮನೇ, ಅಧೋಕ್ಷಜನೇ, ವಿಷಯ ಇಂದ್ರಿಯಗಳಿಗೆ ಈಶನೇ ನಿನಗೆ ನಮಸ್ಕಾರವು.

೭೯. ನರಸಿಂಹನೇ, ಅನಂತನೇ, ಗೋವಿಂದನೇ, ಕೇಶವನೇ ನಿನ್ನನ್ನು ಧ್ಯಾನ ಮಾಡಿದುದರಿಂದ ನಾನು ಆಡಿದ ಕೆಟ್ಟಮಾತುಗಳೂ, ಪಾಪಗಳೂ, ಹೋಗಲಿ.

೮೦. ಇಂದ್ರಿಯಾಧೀನನಾದ ನಾನು ಯೋಚಿಸಿದ ಕೆಟ್ಟದ್ದನ್ನು ಕ್ಷಮಿಸಿ ಮಹಾಬಾಹುವೇ ಅದನ್ನು ನಾಶಮಾಡು.

೮೧. ಬ್ರಹ್ಮನಿಷ್ಠನೇ, ಗೋವಿಂದನೇ ಪರಮಾರ್ಥಸ್ವರೂಪಿಯೇ, ಜಗನ್ನಾಥನೇ ಜಗನ್ನಾಶಕನೇ ಪಾಪವನ್ನು ನಾಶಮಾಡು.

ಯಚ್ಚಾಪರಾಹ್ಣೇ ಸಾಯಾಹ್ನೇ ಮಧ್ಯಾಹ್ನೇ ಚ ತಥಾ ನಿಶಿ ।
ಕಾಯೇನ ಮನಸಾ ವಾಚಾ ಕೃತಂ ಪಾಪಮಜಾನತಾ । ॥ ೮೨ ॥

ಜಾನತಾ ಚ ಹೃಷೀಕೇಶ ಪುಂಡರೀಕಾಕ್ಷಮಾಧವ ।
ನಾಮತ್ರಯೋಚ್ಚಾರಣತಃ ಸರ್ವಂ ಯಾತು ಮಮುಂಕ್ಷಯಂ ॥ ೮೩ ॥

ಶಾರೀರಂ ಮೇ ಹೃಷೀಕೇಶ ಪುಂಡರೀಕಾಕ್ಷ ಮಾನಸಂ ।
ಪಾಪಂ ಪ್ರಶಮಮಾಯಾತು ವಾಕ್ಕೃತಂ ಮಮ ಮಾಧವ ॥ ೮೪ ॥

ಯದ್ಭುಂಜಾನಃ ಪಿಬಂಸ್ತಿಷ್ಠನ್ಸ್ವಪಂಜಾಗ್ರಸ್ಯದಾ ಸ್ಥಿತಃ ।
ಅಕಾರ್ಷಂ ಪಾಪಮರ್ಥಾರ್ಥಂ ಕಾಯೇನ ಮನಸಾ ಗಿರಾ ॥ ೮೫ ॥

ಮಹದಲ್ಪಂ ಚ ಯತ್ಪಾಪಂ ದುರ್ಯೋನಿನರಕಾವಹಂ ।
ತತ್ಸರ್ವಂ ವಿಲಯಂ ಯಾತು ವಾಸುದೇವಸ್ಯ ಕೀರ್ತನಾತ್ ॥ ೮೬ ॥

ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಚ ಯತ್ ।
ಅಸ್ಮಿನ್ಸಂಕೀರ್ತಿತೇ ವಿಷ್ಣೌ ಯತ್ಪಾಪಂ ತತ್ಪ್ರಣಶ್ಯತು ॥ ೮೭ ॥

---

೮೨. ಮನೋವಾಕ್ಕಾಯಗಳಿಂದ ತ್ರಿಕಾಲಗಳಲ್ಲಿಯೂ, ತಿಳಿಯದೆ ಮಾಡಿದ ಪಾಪವನ್ನು ನಾಶಮಾಡು.

೮೩. ತಿಳಿಯದೇ ಆಗಲೀ, ತಿಳಿದಾಗಲೀ ಹೀಗೆ ಮಾಡಿದ್ದರೂ, ಅಂತಹ ಪಾಪಗಳನ್ನೆಲ್ಲಾ, ನಿನ್ನ ಅಚ್ಯುತಾನಂತಕೇಶವನೆಂಬ ನಾಮಗಳನ್ನುಚ್ಚರಿಸುವುದರಿಂದ ನಾಶಮಾಡು.

೮೪. ಹೃಷೀಕೇಶನೇ, ಮಾಧವನೇ ಶಾರೀರಕವಾದ ವಾಕ್ಕೃತವಾದ ನನ್ನ ಪಾಪಗಳನ್ನೆಲ್ಲಾ ನಾಶಮಾಡು.

೮೫-೮೬. ಊಟಮಾಡುತ್ತಾ, ಕುಡಿಯುತ್ತಾ, ನಿಲ್ಲುತ್ತಾ, ಮಲಗುತ್ತಾ, ಎಚ್ಚರವಾಗುತ್ತಾ ಮನೋವಾಕ್ಕಾಯಗಳಿಂದ ಮಾಡಿದ ಅಲ್ಪವಾಗಲಿ, ಹೆಚ್ಚಾಗಲಿ, ಆಗಿ ಕೆಟ್ಟ ಯೋನಿಗೆ ಕಾರಣವಾದ ಅವೆಲ್ಲವೂ ನಿನ್ನ ಕೃಪೆಯಿಂದ ನಾಶವಾಗಲಿ.

೮೭. ಪರಬ್ರಹ್ಮನಾಗಿಯೂ, ಪರಂಧಾಮನಾಗಿಯೂ, ಪವಿತ್ರನಾಗಿಯೂ, ಉತ್ಕೃಷ್ಟನಾಗಿಯೂ, ಇರುವ ಈ ವಿಷ್ಣುವಿನ ಧ್ಯಾನದಿಂದ ಪಾಪವೆಲ್ಲವೂ ಹೋಗಲಿ.

ಯತ್ಪ್ರಾಪ್ಯ ನ ನಿವರ್ತಂತೇ ಗಂಧಸ್ಪರ್ಶವಿವರ್ಜಿತಂ ।
ಸೂರಯಸ್ತತ್ಪದಂ ವಿಷ್ಣೋಸ್ತತ್ಸರ್ವಂ ಮೇಽಭವತ್ಫಲಂ ॥ ೮೮ ॥

ಪಾಪಪ್ರಶಮನಂ ಸ್ತೋತ್ರಂ ಯಃ ಪಠೇಚ್ಛೃಣುಯಾನ್ನರಃ ।
ಶಾರೀರೈರ್ಮಾನಸೈರ್ವಾಚಾ ಕೃತೈಃ ಪಾಪೈಃ ಪ್ರಮುಚ್ಯತೇ ॥ ೮೯ ॥

ಮುಕ್ತಃ ಪಾಪಗ್ರಹಾದಿಭ್ಯೋ ಯಾತಿ ವಿಷ್ಣೋಃ ಪರಂ ಪದಂ ।
ತಸ್ಮಾತ್ಸರ್ವಪ್ರಯತ್ನೇನ ಸ್ತೋತ್ರಂ ಸರ್ವಾಘನಾಶನಂ ॥ ೯೦ ॥

ಪ್ರಾಯಶ್ಚಿತ್ತಮಘೌಘಾನಾಂ ಪಠಿತವ್ಯಂ ನರೋತ್ತಮೈಃ ।
ಪ್ರಾಯಶ್ಚಿತ್ತೈಃ ಸ್ತೋತ್ರಜಪೈಃ ವ್ರತೈರ್ನಶ್ಯತಿ ಪಾತಕಂ ॥ ೯೧ ॥

ತತಃ ಕಾರ್ಯಾಣಿ ಸಂಸಿದ್ಧ್ಯೈ ತಾನಿ ವೈ ಭುಕ್ತಿಮುಕ್ತಯೇ ।
ಪೂರ್ವಜನ್ಮಾರ್ಜಿತಂಪಾಪಮೈಹಿಕಂ ಚ ನರೇಶ್ವರ ॥ ೯೨ ॥

ಸ್ತೋತ್ರಸ್ಯ ಶ್ರವಣಾದಸ್ಯ ಸದ್ಯ ಏವ ವಿಲೀಯತೇ ।
ಪಾಪದ್ರುಮಕುಠಾರೋಽಯೋ ಪಾಪೇಂಧನದವಾನಲಃ ॥ ೯೩ ॥

---

೮೮. ಗಂಧಸ್ಪರ್ಶಗಳಿಂದ ರಹಿತವಾದ ಯಾವಜಾಗವನ್ನು ಹೊಂದಿ, ತಿಳಿದವರು ಹಿಂತಿರುಗುವುದಿಲ್ಲವೋ ಅದನ್ನು ವಿಷ್ಣುಪದವೆನ್ನುತ್ತಾರೆ. ಅದನ್ನು ನನಗೆ ಕೊಡು.

೮೯ ಈ ಪಾಪ ಪ್ರಶಮನ ಸ್ತೋತ್ರವನ್ನು ಹೇಳಿದವರಿಗೂ, ಕೇಳಿದವರಿಗೂ ಮನೋವಾಕ್ಕಾಯಗಳಿಂದ ಮಾಡಿದ ಪಾಪವು ನಾಶವಾಗುತ್ತದೆ.

೯೦ ಆ ಸ್ತೋತ್ರದಿಂದ ಸರ್ವಪಾಪಗಳಿಂದ ಮುಕ್ತನಾಗಿ ವಿಷ್ಣುಪದವನ್ನು ಹೊಂದುತ್ತಾನೆ. ಆದ್ದರಿಂದ ಪ್ರಯತ್ನಪಟ್ಟು ಇದನ್ನು ಪಠಿಸಬೇಕು.

೯೧. ಈ ಸ್ತೋತ್ರವು ಪಾಪಗಳ ಗುಂಪಿಗೆ ಪ್ರಾಯಶ್ಚಿತ್ತವು ಶ್ರೇಷ್ಠವಾದವರು ಇದನ್ನು ಪಠಿಸಬೇಕು. ಪ್ರಾಯಶ್ಚಿತ್ತ ಸ್ತೋತ್ರ, ಜಪ, ವ್ರತಗಳಿಂದಲೂ, ಈ ಪಾಪವು ನಾಶವಾಗುತ್ತದೆ.

೯೨–೯೩. ಆಮೇಲೆ ಮುಂದಿನ ಕೆಲಸಗಳನ್ನು ಮಾಡಬೇಕು. ಅದೇ ಸಿದ್ಧಿಯನ್ನೂ, ಭಕ್ತಿಯನ್ನೂ ಮುಕ್ತಿಯನ್ನೂ ಕೊಡುತ್ತದೆ. ಪೂರ್ವ ಜನ್ಮದ ಪಾಪವು ಈ ಲೋಕದ ಪಾಪವೂ, ಈ ಸ್ತೋತ್ರದ ಪಾಠದಿಂದ ನಾಶವಾಗುತ್ತದೆ.

ಪಾಪರಾಶಿತಮಸ್ತೋಮಭಾನುರೇಷಸ್ತವೋ ನೃಪ ।
ಮಯಾ ಪ್ರಕಾಶಿತಸ್ತುಭ್ಯಂ ತಥಾ ಲೋಕಾನುಕಂಪಯಾ ॥ ೯೪ ॥

ಸ್ತವೋಽಯಂ ಯೋ ಮಯಾ ಪ್ರಾಪ್ತೋ ರಹಸ್ಯಂ ಪಿತುರಾದರಾತ್ ।
ಇತಿ ತೇ ಯನ್ಮಯಾ ಪ್ರೋಕ್ತಂ ಸ್ತೋತ್ರಂ ಪಾಪಪ್ರಣಾಶನಂ ॥ ೯೫ ॥

ಅಸ್ಯಾಪಿ ಪುಣ್ಯಮಾಹಾತ್ಮ್ಯಂ ವಕ್ತುಂ ಶಕ್ತಸ್ಸ್ವಯಂ ಹರಿಃ ।
ಸ್ವಸ್ತಿತೇಽಸ್ತು ಗಮಿಷ್ಯಾಮಿ ಗಂಗಾಯಾಮಥಸತ್ವರಂ ।
ಸ್ನಾತುಂ ಮಾಸಸ್ಸಮಾಯಾತೋ ಮಾಸಾನಾಂ ಮಾಧವೋ ಮಹಾನ್ ॥ ೯೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಅಷ್ಟಾಶೀತಿತಮೋಽಧ್ಯಾಯಃ

---

೯೪-೯೫ ಪಾಪವೆಂಬ ಮರಕ್ಕೆ ಕೊಡಲಿಯು ಪಾಪವೆಂಬ ಸೌದೆಗೆ ಬೆಂಕಿಯು. ಪಾಪರಾಶಿಯೆಂಬ ಕತ್ತಲೆಗೆ ಸೂರ್ಯನು. ಇಂತಹ ಈ ಸ್ತೋತ್ರವನ್ನು ಪಠಿಸಬೇಕು. ನಾನು ನಿನಗೋಸ್ಕರಲೂ, ಲೋಕಾನುಗ್ರಹಕ್ಕೋಸ್ಕರಲೂ, ರಹಸ್ಯವಾದ ಇದನ್ನು ತಂದೆಯಿಂದ ಹೊಂದಿದೆನು. ಈ ರೀತಿಯಾಗಿ ಪಾಪಪ್ರಣಾಶಕವಾದ ಸ್ತೋತ್ರವನ್ನು ಹೇಳಿದೆನು.

೯೬. ಈ ವೈಶಾಖಮಾಸದ ಪುಣ್ಯದ ಮಹಿಮೆಯನ್ನು ಹರಿಯೇ ಹೇಳಲು ಶಕ್ತನು. ನಿನಗೆ ಒಳ್ಳೆಯದಾಗಲಿ. ವೈಶಾಖಮಾಸವು ಬಂದಿತು. ಉತ್ತಮವಾದ ಮಾಸವು. ಗಂಗೆಗೆ ಹೋಗಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖಮಾಸ ಮಹಿಮೆ
ಎಂಬ ಎಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಏಕೋನನವತಿತಮೋಽಧ್ಯಾಯಃ ॥



॥ ಸೂತ ಉವಾಚ ॥

**ಗಂತುಂ ಸಮುದ್ಯತಂ ಜ್ಞಾತ್ವಾ ಮುನಿಂ ರಾಜಾ ತತೋ ಮುದಾ ।**
**ವಿಧಿಂ ಪಪ್ರಚ್ಛ ಸಂಕ್ಷಿಪ್ತಂ ಸ್ನಾನದಾನಕಥೋಚಿತಂ ॥ ೧ ॥**

॥ ಅಂಬರೀಷ ಉವಾಚ ॥

**ಮುನೇ ವೈಶಾಖಮಾಸೇಽಸ್ಮಿನ್ಕೋ ವಿಧಿಃ ಕಿಂ ತಪೋಧಿಕಂ ।**
**ಕಿಂ ಚ ದಾನಂ ಕಥಂ ಸ್ನಾನಂ ಕಥಂ ಕೇಶವಪೂಜನಂ ॥ ೨ ॥**

**ಕೃಪಯಾ ವದ ವಿಪ್ರರ್ಷೇ ಸರ್ವಜ್ಞಸ್ತ್ವಂ ಹರಿಪ್ರಿಯಃ ।**
**ವಿಶೇಷತೋಪಿ ಪೂಜಾಯಾ ವಿಧಿಂ ತೀರ್ಥಪರೋ ವದ ॥ ೩ ॥**

---

## ಎಂಭತ್ತೊಂಭತ್ತನೆಯ ಅಧ್ಯಾಯವು

೧. ಸೂತನು ಹೇಳಿದನು- ನಾರದನು ಹೊರಡುವುದನ್ನು ತಿಳಿದು ರಾಜನು ಅವನನ್ನು ಕುರಿತು ಸ್ನಾನ, ದಾನ, ಕಥೆಗಳಿಗೆ ಉಚಿತವಾದ ವಿಧಿಯನ್ನು ಸಂಕ್ಷಿಪ್ತವಾಗಿ ಹೇಳೆಂದು ಕೇಳಿದನು.

೨-೩. ಅಂಬರೀಷನು ಹೇಳಿದನು. ಎಲೈ ನಾರದನೇ ! ಈ ವೈಶಾಖಮಾಸದ ವಿಧಿಯೇನು ? ತಪಸ್ಸೇನು ? ದಾನವಾವುದು ? ಸ್ನಾನವನ್ನು ಹೇಗೆ ಮಾಡಬೇಕು. ದಯವಿಟ್ಟು ಹೇಳು. ನೀನು ಸರ್ವಜ್ಞನೂ ಹರಿಭಕ್ತನೂ ಆಗಿದ್ದೀಯೆ. ತೀರ್ಥಗಳಲ್ಲಿ ವಿಶೇಷವಾಗಿ ಮಾಡಬೇಕಾದ ಪೂಜೆಗಳನ್ನೂ ಹೇಳು.

## ॥ ನಾರದ ಉವಾಚ ॥

ಮೇಷಸಂಕ್ರಮಣೇ ಭಾನೋರ್ಮಾಧವೇ ಮಾಸಿ ಸತ್ತಮ ।
ಮಹಾನದ್ಯಾಂ ನದೀತೀರ್ಥೇ ನದೇ ಸರಸಿ ನಿರ್ಝರೇ ॥ ೪ ॥

ದೇವಖಾತೇ ತಥಾ ಸ್ನಾಯಾದ್ಯಥಾಪ್ರಾಪ್ತೇ ಜಲಾಶಯೇ ।
ದೀರ್ಘಿಕಾಸು ಚ ಕೂಪಾದೌ ನಿಯಮೇನ ಹರಿಂ ಸ್ಮರನ್ ॥ ೫ ॥

ಮಧುಮಾಸಸ್ಯ ಶುಕ್ಲಾಯಾಮೇಕಾದಶ್ಯಾಮುಪೋಷಯೇತ್ ।
ಪಂಚದಶ್ಯಾಂ ತತೋ ಧೀರೋ ಮೇಷಸಂಕ್ರಮಣೇಽಪಿ ವಾ ॥ ೬ ॥

ವೈಶಾಖಸ್ನಾನನಿಯಮಂ ಬ್ರಾಹ್ಮಣಾನಾಮನುಜ್ಞಯಾ ।
ಮಧುಸೂದನಮಭ್ಯರ್ಚ್ಯ ಕುರ್ಯಾತ್ಸುಸ್ನಾನಪೂರ್ವಕಂ ॥ ೭ ॥

ವೈಶಾಖಮಖಿಲಂ ಮಾಸಂ ಮೇಷಸಂಕ್ರಮಣೇ ರವೇಃ ।
ಪ್ರಾತಸ್ಸನಿಯಮಸ್ಸ್ನಾನಾತ್ಪ್ರೀಯತಾಂ ಮಧುಸೂದನಃ ॥ ೮ ॥

---

೪-೫. ನಾರದನು ಹೇಳಿದನು– ಸೂರ್ಯನು ಮೇಷ ಸಂಕ್ರಮಣ ಗತನಾಗಿ ವೈಶಾಖಮಾಸವೂ ಪ್ರಾಪ್ತವಾಗಿರುವಾಗ ಮಹಾನದಿಗಳಲ್ಲಿಯೂ, ನದಿಗಳಲ್ಲಿಯೂ, ತೀರ್ಥಗಳಲ್ಲಿಯೂ, ಸರೋವರಗಳಲ್ಲಿಯೂ, ಝರಿಗಳಲ್ಲಿಯೂ, ಸ್ವತಸ್ಸಿದ್ಧವಾದ ಸಮುದ್ರವೇ ಮುಂತಾದುವುಗಳಲ್ಲಿಯೂ, ಭಾವಿಗಳಲ್ಲಿಯೂ, ಸಣ್ಣಭಾವಿಗಳಲ್ಲಿಯೂ ಕೊನೆಗೆ ಯಾವುದು ಸಿಕ್ಕಿದರೆ ಅದರಲ್ಲಿ ಹರಿಯನ್ನು ಸ್ಮರಿಸುತ್ತಾ ಸ್ನಾನ ಮಾಡಬೇಕು.

೬-೭. ಜಿತೇಂದ್ರಿಯನಾಗಿ ವೈಶಾಖಮಾಸದ ಶುದ್ಧ ಏಕಾದಶಿಯ ದಿನ ಉಪವಾಸಮಾಡಬೇಕು. ಅನಂತರ ಪೌರ್ಣಿಮೆಯ ದಿನವಾಗಲೀ ಅಥವಾ ಮೇಷಸಂಕ್ರಮಣದ ದಿನವಾಗಲಿ ಮೊದಲು ನಿತ್ಯಸ್ನಾನವನ್ನು ಮಾಡಿ ವಿಷ್ಣುವನ್ನು ಪೂಜಿಸಿ ಅನಂತರ ಬ್ರಾಹ್ಮಣರ ಅನುಜ್ಞೆಯನ್ನು ಹೊಂದಿ ವೈಶಾಖ ಸ್ನಾನದ ನಿಯಮವನ್ನು ಕೈಗೊಳ್ಳಬೇಕು.

೮-೯. ಸೂರ್ಯನು ಮೇಷ ಸಂಕ್ರಮಣವನ್ನು ಹೊಂದಿರುವ, ವೈಶಾಖಮಾಸ ಪ್ರಾತಸ್ನಾನದಿಂದ ವಿಷ್ಣುವು ಪ್ರೀತನಾಗಲಿ.

ಮಧುಹನ್ತುಃಪ್ರಸಾದೇನ ಬ್ರಾಹ್ಮಣಾನಾಮನುಗ್ರಹಾತ್ ।
ನಿರ್ವಿಘ್ನಮಸ್ತು ಮೇ ಪುಣ್ಯಂ ವೈಶಾಖಸ್ನಾನಮನ್ವಹಂ ॥ ೯ ॥

ಮಾಧವೇ ಮೇಷಗೇ ಭಾನೌ ಮುರಾರೇ ಮಧುಸೂದನ ।
ಪ್ರಾತಃಸ್ನಾನೇನ ಮೇ ನಾಥ ಯಥೋಕ್ತಫಲದೋ ಭವ ॥ ೧೦ ॥

ಯಥಾ ತೇ ಮಾಧವೋ ಮಾಸೋ ವಲ್ಲಭೋ ಮಧುಸೂದನ ।
ಪ್ರಾತಸ್ನಾನೇನ ಮೇ ತಸ್ಮಿನ್ಫಲದಃ ಪಾಪಹಾ ಭವ ॥ ೧೧ ॥

ಏವಮುಚ್ಚಾರ್ಯ ತತ್ತೀರ್ಥೇ ಪಾದೌ ಪ್ರಕ್ಷಾಳ್ಯ ವಾಗ್ಯತಃ ।
ಸ್ಮರನ್ನಾರಾಯಣಂ ದೇವಂ ಸ್ನಾನಂಕುರ್ಯಾದ್ವಿಧಾನತಃ ॥ ೧೨ ॥

ತೀರ್ಥಂ ಪ್ರಕಲ್ಪಯೇದ್ವಿದ್ವಾನ್ಮೂಲಮಂತ್ರಮಿಮಂ ವಠ೯ ।
ಓಂ ನಮೋನಾರಾಯಣಾಯ ಮೂಲಮಂತ್ರ ಉದಾಹೃತಃ ॥ ೧೩ ॥

---

೯. ವಿಷ್ಣುವಿನ ಪ್ರಸಾದದಿಂದಲೂ, ಬ್ರಾಹ್ಮಣರ ಅನುಗ್ರಹದಿಂದಲೂ, ವೈಶಾಖಸ್ನಾನವು ನಿರ್ವಿಘ್ನವಾಗಿ ನಡೆಯಲಿ.

೧೦. ಸೂರ್ಯನು ಮೇಷಸಂಕ್ರಮಣವನ್ನು ಹೊಂದಿ ವೈಶಾಖಮಾಸ ಸೇರಿರುವಾಗ ಎಲೈ ಸ್ವಾಮಿಯೇ ಪ್ರಾತಸ್ನಾನದಿಂದ ಅದರ ಯೋಗ್ಯವಾದ ಫಲವನ್ನು ಕೊಡು.

೧೧. ವೈಶಾಖಮಾಸವು ನಿನಗೆ ಎಷ್ಟರಮಟ್ಟಿಗೆ ಪ್ರೀತಿಪ್ರಾತವಾದುದೋ ಈ ಪ್ರಾತಃಸ್ನಾನದಿಂದ ನನ್ನ ಪಾಪವನ್ನು ಕಳೆದು ಅಷ್ಟರಮಟ್ಟಿನ ಫಲವನ್ನು ಕೊಡು.

೧೨. ಆ ತೀರ್ಥದಲ್ಲಿ ಹೀಗೆಂದು ಹೇಳಿ ಕೈಕಾಲುಗಳನ್ನು ತೊಳೆದುಕೊಂಡು ನಾರಾಯಣನನ್ನು ಸ್ಮರಿಸುತ್ತಾ ಹೆಚ್ಚಾಗಿ ಮಾತನಾಡದೆ ವಿಧಿವತ್ತಾಗಿ ಸ್ನಾನವನ್ನು ಮಾಡಬೇಕು.

೧೩. ಈ ಮೂಲಮಂತ್ರವನ್ನು ಹೇಳುತ್ತಾ ವಿದ್ವಾಂಸನು ಆ ನೀರನ್ನು ತೀರ್ಥವನ್ನಾಗಿ ಮಾಡಿಕೊಳ್ಳಬೇಕು. "ಓಂ ನಮೋನಾರಾಯಣಾಯ" ಎಂಬುದೇ ಮೂಲಮಂತ್ರವು.

ದರ್ಭಪಾಣಿಸ್ತು ವಿಧಿವದಾಚಾನ್ತಃ ಪ್ರಣತೋ ಭುವಿ ।
ಚತುರ್ಹಸ್ತಸಮಾಯುಕ್ತಂ ಚತುರಸ್ರಂ ಸಮಂತತಃ ॥ ೧೪ ॥

ಪ್ರಕಲ್ಪ್ಯಾವಾಹಯೇದ್ಗಂಗಾಂ ಮಂತ್ರೇಣಾನೇನ ವೈ ನರಃ ।
ವಿಷ್ಣುಪಾದಪ್ರಸೂತಾಸಿ ವೈಷ್ಣವೀ ವಿಷ್ಣುದೇವತಾ ॥ ೧೫ ॥

ತ್ರಾಹಿ ನಸ್ತ್ವೇನಸಸ್ತಸ್ಮಾದಾಜನ್ಮಮರಣಾಂತಿಕಾತ್ ।
ತಿಸ್ರಃಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್

ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸಂತಿ ಜಾಹ್ನವಿ ।
ನಂದಿನೀತಿ ಚ ತೇ ನಾಮ ವೇದೇಷು ನಳಿನೀತಿ ಚ ॥ ೧೭ ॥

ದಕ್ಷಾ ಪೃಥ್ವೀ ವಿಯದ್ಗಂಗಾ ವಿಶ್ವಕಾಯಾ ಶಿವಾಽಮೃತಾ ।
ವಿದ್ಯಾಧರೀ ಮಹಾದೇವೀ ತಥಾ ಲೋಕಪ್ರಸಾದಿನೀ ॥ ೧೮ ॥

ಕ್ಷೇಮಂಕರೀ ಜಾಹ್ನವೀ ಚ ಶಾನ್ತಾ ಶಾನ್ತಿಪ್ರದಾಯಿನೀ ।
ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಪ್ರಕೀರ್ತಯೇತ್ ॥ ೧೯ ॥

---

೧೪. ವಿಧಿವತ್ತಾಗಿ ಆಚಮನಮಾಡಿ ದರ್ಭೆಯ ಪವಿತ್ರವನ್ನು ಹಾಕಿಕೊಂಡು ಸುತ್ತಲೂ ನಾಲ್ಕುಮಾರುಗಳಷ್ಟು ಮೂಲೆಮೂಲೆಯಾಗಿ ಅಗಲಕ್ಕೆ ತೀರ್ಥವನ್ನುಮಾಡಿ ಕೊಳ್ಳಬೇಕು. ಮುಂದೆ ಹೇಳುವ ಮಂತ್ರದಿಂದ ಅದರಲ್ಲಿ ಗಂಗೆಯನ್ನು ಆವಾಹನೆ ಮಾಡಿಕೊಳ್ಳಬೇಕು.

೧೫-೧೯. ಎಲೈ ಗಂಗೆಯೇ ! ನೀನು ವಿಷ್ಣುವಿನ ಪಾದದಿಂದ ಹುಟ್ಟಿದ್ದೀಯೆ. ವಿಷ್ಣುಭಕ್ತಳು ವಿಷ್ಣುವೇ ದೇವತೆಯಾಗಿ ಉಳ್ಳವಳು. ನೀನು ನನ್ನನ್ನು ಹುಟ್ಟಿದಂದಿನಿಂದ ಸಾಯುವವರೆಗೂ ಮಾಡಿದ ಪಾಪದಿಂದ ಕಾಪಾಡು. ಪ್ರಪಂಚದಲ್ಲಿ ಮೂರುವರೆಕೋಟಿ ತೀರ್ಥಗಳಿವೆಯೆಂದು ವಾಯುವು ಹೇಳಿದ್ದಾನೆ. ಅವುಗಳ ಲೆಕ್ಕದಲ್ಲಿ ಭೂಮ್ಯಾಕಾಶಗಳಲ್ಲಿರುವುವೆಲ್ಲವೂ ಸೇರಿಕೊಂಡಿವೆ. ಎಲೈ ಗಂಗೆಯೇ ! ಅವೆಲ್ಲವೂ ನಿನ್ನಲ್ಲಿವೆ. ವೇದಗಳಲ್ಲಿ ನಿನ್ನ ಹೆಸರು ನಂದಿನಿಯೆಂದೂ, ನಳನಿಯೆಂದೂ, ಪ್ರಸಿದ್ಧವಾಗಿವೆ. ದಕ್ಷೆ, ಪೃಥ್ವಿ, ವಿಯದ್ಗಂಗೆ, ವಿಶ್ವಕಾಯೆ, ಶಿವೆ, ಅಮೃತೆ, ವಿದ್ಯಾಧರಿ, ಮಹಾದೇವೀ, ಲೋಕಪ್ರಸಾದಿನೀ, ಕ್ಷೇಮಂಕರೀ, ಜಾಹ್ನವಿ, ಶಾಂತೆ, ಶಾಂತಿಪ್ರದಾಯಿನಿ, ಇವು ಆ ಜಾಹ್ನವಿಯ ಪುಣ್ಯನಾಮಗಳು. ಇವನ್ನು ಸ್ನಾನಕಾಲದಲ್ಲಿ ಹೇಳಬೇಕು.

ಭವೇತ್ಸನ್ನಿಹಿತಾ ತೇನ ಗಂಗಾ ತ್ರಿಪಥಗಾಮಿನೀ ।
ಸಪ್ತವಾರಾಭಿಜಪ್ತೇನ ಕರಸಂಪುಟಯೋಜಿತಾ ॥ ೨೦ ॥

ಮೂರ್ಧ್ನಿ ಬದ್ಧಾಂಜಲಿರ್ಭೂತ್ವಾ ಚತುರ್ವಾ ಷಷ್ಟ ಸಪ್ತ ವಾ ।
ಸ್ನಾನಂ ಕೃತ್ವಾ ಮೃದಾ ತದ್ವದಾಮಂತ್ರ್ಯ ತು ವಿಧಾನತಃ ॥ ೨೧ ॥

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।
ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ಪೂರ್ವಸಂಚಿತಂ ॥ ೨೨ ॥

ಉದ್ಧೃತಾಸಿ ವರಾಹೇಣ ವಿಷ್ಣುನಾ ಶತಬಾಹುನಾ ।
ನಮಸ್ತೇ ಸರ್ವಲೋಕಾನಾಂ ಪ್ರಭವಾರಿಣಿ ಸುವ್ರತೇ ॥ ೨೩ ॥

ಏವಂ ಸ್ನಾತ್ವಾ ತತಃ ಪಶ್ಚಾದಾಚಮ್ಯ ತು ವಿಧಾನತಃ ।
ಉತ್ಥಾಯ ವಾಸಸೀ ಶುಕ್ಲೇ ಶುದ್ಧೇ ತು ಪರಿಧಾಪಯೇತ್ ॥ ೨೪ ॥

ತತಸ್ತು ತರ್ಪಣಂ ಕುರ್ಯಾತ್ತ್ರೈಲೋಕ್ಯಾಪ್ಯಾಯನಾಯ ವೈ ।
ಬ್ರಹ್ಮಾಣಂ ತರ್ಪಯೇತ್ಪೂರ್ವಂ ವಿಷ್ಣುಂ ರುದ್ರಂ ಪ್ರಜಾಪತಿಂ ॥ ೨೫ ॥

---

೨೦-೨೧. ಈರೀತಿಯಾಗಿ ತಲೆಯ ಮೇಲೆ ಕೈಮುಗಿದುಕೊಂಡು ಏಳು ಬಾರಿ ಜಪಿಸುವುದರಿಂದ ಗಂಗೆ ಅಲ್ಲಿಗೆ ಬರುವಳು ಅನಂತರ ನಾಲ್ಕು, ಆರು, ಅಥವಾ ಏಳು ಬಾರಿ ಸ್ನಾನಮಾಡಿ ವಿಧಿಪೂರ್ವಕವಾಗಿ ಮಣ್ಣನ್ನು ಮಂತ್ರಿಸಿ ಪೂಸಿಕೊಂಡು ಸ್ನಾನ ಮಾಡಬೇಕು.

೨೨. ಕುದುರೆ, ರಥ, ವಿಷ್ಣುಗಳಿಂದ ಆಕ್ರಮಿಸಲ್ಪಟ್ಟ ಎಲೈ ವಸುಂಧರೆಯೇ! ನಿನ್ನ ಮೃತ್ತಿಕೆಯು ನನ್ನ ಪೂರ್ವದ ಪಾಪವೆಲ್ಲವನ್ನೂ ನಾಶಮಾಡಲಿ.

೨೩. ಅನೇಕ ತೋಳುಗಳುಳ್ಳ ವರಾಹವತಾರ (ಹಂದಿ) ಮಾಡಿದ ವಿಷ್ಣುವಿನಿಂದ ಮೇಲಕ್ಕೆ ಎತ್ತಲ್ಪಟ್ಟಿದ್ದೀಯೆ. ಉತ್ತಮವಾದ ನೀರುಳ್ಳ ಎಲೈ ಸುವ್ರತೆಯೇ ನಿನಗೆ ನಮಸ್ಕಾರವು.

೨೪. ಹೀಗೆ ಸ್ನಾನಮಾಡಿ ವಿಧಿವತ್ತಾಗಿ ಆಚಮನಮಾಡಿ ಆ ನೀರಿನಿಂದ ಹೊರಕ್ಕೆ ಬಂದು ಬೆಳ್ಳಗಿರುವ ಮಡಿಬಟ್ಟೆಗಳನ್ನುಟ್ಟುಕೊಳ್ಳಬೇಕು.

೨೫. ಆಮೇಲೆ ಮೂರುಲೋಕಗಳಿಗೆ ತೃಪ್ತಿಗೋಸ್ಕರ ತರ್ಪಣವನ್ನು ಮಾಡಬೇಕು.

ದೇವಾನ್ಯಕ್ಷಾಂಸ್ತಥಾ ನಾಗಾನ್ಗಂಧರ್ವಾಪ್ಸರಸೋಽಸುರಾನ್ ।
ಕ್ರೂರಾನ್ಸರ್ಪಾನ್ಸುಪರ್ಣಾಂಶ್ಚ ತರೂನ್ಸೈ ಜಂತುಕಾನ್ಖಗಾನ್ ॥ ೨೬ ॥

ವಿದ್ಯಾಧರಾ ಜಲಧರಾ ತಥೈವಾಕಾಶಗಾಮಿನಃ ।
ನಿರಾಧಾರಾಶ್ಚ ಯೇ ಜೀವಾಃ ಪಾಪಕರ್ಮಕರಾಶ್ಚ ಯೇ ॥ ೨೭ ॥

ತೇಷಾಮಾಪ್ಯಾಯನಾರ್ಥಾಯ ದೀಯತೇ ಸಲಿಲಂ ಮಯಾ ।
ಕೃತ್ವೋಪವೀತಂ ದೇವೇಷು ನಿವೀತಿ ಚ ಭವೇನ್ನರಃ ॥ ೨೮ ॥

ಮನುಷ್ಯಾಂಸ್ತರ್ಪಯೇದ್ಭಕ್ತ್ಯಾ ಋಷಿಪುತ್ರಾನ್ನೃಷೀಂಸ್ತಥಾ ।
ಸನಕಸ್ಸನಂದನಶ್ಚೈವ ತೃತೀಯಶ್ಚ ಸನಾತನಃ ॥ ೨೯ ॥

ಸನತ್ಕುಮಾರಶ್ಚ ತಥಾ ಕಪಿಲಶ್ಚಾಸುರಿಶ್ಚ ವೈ ।
ವೋಢುಃ ಪಂಚಶಿಖಾಸ್ತದ್ವನ್ಮುಖ್ಯಾ ಋಷಿಸುತಾ ಇಮೇ ॥ ೩೦ ॥

ಸರ್ವೇಪಿ ತೃಪ್ತಿಮಾಯಾನ್ತು ಮಯಾದತ್ತೇನ ವಾರಿಣಾ ।
ಮರೀಚಮತ್ರ್ಯ್ಯಂಗಿರಸೌಪುಲಸ್ತ್ಯಂ ಪುಲಹಂ ಕ್ರತುಂ ॥ ೩೧ ॥

---

೨೬–೩೨. ಮೊದಲು ಬ್ರಹ್ಮ, ಆಮೇಲೆ ವಿಷ್ಣು, ಅನಂತರ ರುದ್ರ, ಪ್ರಜಾಪತಿಗಳು, ದೇವತೆಗಳು, ಯಕ್ಷರು, ನಾಗರು, ಗಂಧರ್ವರು, ಅಪ್ಸರಸ್ಸುಗಳು, ಅಸುರರು, ಸರ್ಪಗಳು, ಸುವರ್ಣರು, ತರುಗಳು, ಜಂತುಗಳು, ಪಕ್ಷಿಗಳು, ವಿದ್ಯಾಧರರು, ಜಲಧರರು, ಆಕಾಶದಲ್ಲಿ ಸಂಚರಿಸುವವರು, (ಗಂಧರ್ವರು) ನಿರಾಧಾರವಾಗಿರುವ ಜೀವಗಳು, ಪಾಪಕರ್ಮಿಗಳು ಇವರಿಗೆ ತೃಪ್ತಿಗೋಸ್ಕರ ತರ್ಪಣವನ್ನು ಕೊಡುತ್ತೇನೆ ಎಂಬುದಾಗಿ ಹೇಳಿಕೊಡಬೇಕು. ಈ ದೇವಯೋನಿಗಳಿಗೆ ತರ್ಪಣಮಾಡುವಾಗ ಉಪವೀತವಾಗಿ ಯಜ್ಞೋಪವೀತವನ್ನು ಹಾಕಿಕೊಂಡಿರಬೇಕು. ಅನಂತರ ನಿವೀತಿಯನ್ನು ಹಾಕಿಕೊಂಡು ಮನುಷ್ಯತರ್ಪಣವನ್ನು ಮಾಡಬೇಕು. ಋಷಿಗಳು, ಋಷಿಪುತ್ರರು, ಸನಕ, ಸನಂದನ,, ಸನಾತನ, ಸನತ್ಕುಮಾರ, ಕಪಿಲ, ಆಸುರಿ, ಪಂಚಶಿಖೆಗಳನ್ನೂ ಹೊಂದಿರುವ ಋಷಿಪುತ್ರರು ಇವರೆಲ್ಲರೂ ನಾನು ಕೊಟ್ಟ ನೀರಿನಿಂದ ತೃಪ್ತಿಯನ್ನು ಹೊಂದಲಿ. ಮರೀಚ, ಅತ್ರಿ, ಅಂಗೀರ, ಪುಲಸ್ತ್ಯ, ಪುಲಹ, ಕ್ರತು,

ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ।
ದೇವಬ್ರಹ್ಮಋಷೀನ್ಸರ್ವಾನ್ತರ್ಪಯೇದಕ್ಷತೋದಕೈಃ ॥ ೩೨ ॥

ಅಪಸವ್ಯಂ ತತಃ ಕುರ್ಯಾತ್ಸವ್ಯಂ ಜಾನ್ವಾಚ್ಯ ಭೂತಳೇ ।
ಅಗ್ನಿಷ್ವಾತ್ತಾಸ್ತಥಾ ಸೌಮ್ಯಾ ಹವಿಷ್ಮಂತಸ್ತಥೋಷ್ಮಪಾಃ ॥ ೩೩ ॥

ಕವ್ಯಾನಲಾನ್ಬರ್ಹಿಷದಸ್ತಥಾ ಮಾತಾಮಹಾನಪಿ ।
ಸಂತರ್ಪ್ಯ ವಿಧಿವತ್ಸರ್ವಾನಿಮಂ ಮಂತ್ರಮುದೀರಯೇತ್ ॥ ೩೪ ॥

ಯೇಽಬಾಂಧವಾ ಬಾಂಧವಾಯೇಽನ್ಯನ್ಯಜನ್ಮನಿ ಬಾಂಧವಾಃ ।
ತೇ ತೃಪ್ತಿಮಖಿಲಾ ಯಾನ್ತು ಯೇಸ್ಮತ್ತಸ್ತೋಯಕಾಂಕ್ಷಿಣಃ ॥ ೩೫ ॥

ಆಚಮ್ಯ ವಿಧಿವತ್ಪಶ್ಚಾದಾಲಿಖೇತ್ಪದ್ಮಮಗ್ರತಃ ।
ಸಾಕ್ಷತೈಶ್ಚ ಸಪುಷ್ಪೈಶ್ಚ ಸಲಿಲಾರುಣಚಂದನೈಃ ॥ ೩೬ ॥

ಅರ್ಘ್ಯಂ ದದ್ಯಾತ್ಪ್ರಯತ್ನೇನ ಸೂರ್ಯನಾಮಾನುಕೀರ್ತನೈಃ ।
ನಮಸ್ತೇ ವಿಷ್ಣುರೂಪಾಯ ನಮಸ್ತೇ ಬ್ರಹ್ಮರೂಪಿಣೇ ॥ ೩೭ ॥

---

ಪ್ರಚೇತಸ್ಸು, ವಸಿಷ್ಠ, ಭೃಗು, ನಾರದ, ಇವರೇ ಮುಂತಾದ ದೇವರ್ಷಿಗಳಿಗೂ ಬ್ರಹ್ಮರ್ಷಿಗಳಿಗೂ ಅಕ್ಷತೆಯೊಡನೆ ನೀರಿನಿಂದ ತರ್ಪಣಕೊಡಬೇಕು.

೩೩–೩೪. ಅನಂತರ ಯಜ್ಞೋಪವೀತವನ್ನು ಎಡಗೈನ ಕೆಳಕ್ಕೂ ಬಲಭುಜದ ಮೇಲುಭಾಗಕ್ಕೂ ಬರುವಂತೆ ಹಾಕಿಕೊಂಡು ಎಡಮಂಡಿಯನ್ನು ಹೂಡಿಕೊಂಡು ಅಗ್ನಿಷ್ವಾತ್ತಾದಿ ಪಿತೃಗಳನ್ನೂ ಅಂತೆಯೇ ಸೌಮ್ಯರನ್ನೂ, ಹವಿಷ್ಮಂತರನ್ನೂ, ಕವ್ಯಾನಲರನ್ನೂ, ಪಿತೃಗಳನ್ನೂ, ಮಾತಾಮಹರನ್ನೂ ಕುರಿತು ತರ್ಪಣಮಾಡಬೇಕು. ಆಗ ಈ ಮಂತ್ರವನ್ನು ಹೇಳಬೇಕು.

೩೫. ಯಾರು ಬಂಧುಗಳಲ್ಲವೋ ಯಾರು ಬಂಧುಗಳಾಗಿರುವರೋ, ಯಾರು ಬೇರೆ ಜನ್ಮದಲ್ಲಿ ಬಂಧುಗಳೋ, ಅವರಲ್ಲದೆ ಇನ್ನೂ ಯಾರು ನನ್ನಿಂದ ನೀರನ್ನು ಅಪೇಕ್ಷಿಸುತ್ತಾರೋ ಅವರೆಲ್ಲರೂ, ನಾನು ಕೊಟ್ಟ ಈ ನೀರಿನಿಂದ ತೃಪ್ತಿಹೊಂದಲಿ.

೩೬-೪೦. ವಿಷ್ಣುರೂಪನೂ ಬ್ರಹ್ಮರೂಪನೂ ಆದ ಎಲೈ ಸೂರ್ಯನೇ ನಿನಗೆ ನಮಸ್ಕಾರವು. ಸಹಸ್ರರಶ್ಮಿಯುಳ್ಳವನೂ, ಸರ್ವತೇಜೋವಂತನೂ, ಆದ ನಿನಗೆ ನಮಸ್ಕಾರವು. ರುದ್ರರೂಪನಾದ ನಿನಗೆ ನಮಸ್ಕಾರವು. ಭಕ್ತವತ್ಸಲನೇ ನಿನಗೆ ನಮ

ಸಹಸ್ರರಶ್ಮಯೇ ನಿತ್ಯಂ ನಮಸ್ತೇ ಸರ್ವತೇಜಸೇ ।
ನಮಸ್ತೇ ರುದ್ರವಪುಷೇ ನಮಸ್ತೇ ಭಕ್ತವತ್ಸಲ ॥ ೩೮ ॥

ಪದ್ಮನಾಭನಮಸ್ತೇಽಸ್ತು ಕುಂಡಲಾಂಗದಭೂಷಿತ ।
ನಮಸ್ತೇ ಸರ್ವಲೋಕಾನಾಂ ಸುಪ್ತಾನಾಮುಪಬೋಧನ ॥ ೩೯ ॥

ಸುಕೃತಂ ದುಷ್ಕೃತಂ ಚೈವ ಸರ್ವಂ ಪಶ್ಯಸಿ ಸರ್ವದಾ ।
ಸತ್ಯದೇವ ನಮಸ್ತೇಽಸ್ತು ಪ್ರಸೀದ ಮಮ ಭಾಸ್ಕರ ॥ ೪೦ ॥

ದಿವಾಕರನಮಸ್ತೇಽಸ್ತು ಪ್ರಭಾಕರ ನಮೋಽಸ್ತು ತೇ ।
ಏವಂ ಸೂರ್ಯಂ ನಮಸ್ಕೃತ್ಯ ಸಪ್ತಧಾ ತು ಪ್ರದಕ್ಷಿಣಂ ॥ ೪೧ ॥

ದ್ವಿಜಂ ಗಾಂ ಕಾಂಚನಂ ಸ್ಪೃಷ್ಟ್ವಾ ಪಶ್ಚಾಚ್ಚ ಸ್ವಗೃಹಂ ವ್ರಜೇತ್ ।
ಆಶ್ರಮಸ್ಥಾಂಶ್ಚ ಸಂಪೂಜ್ಯ ಪ್ರತಿಮಾಂ ಚಾಪಿ ಪೂಜಯೇತ್ ॥ ೪೨ ॥

ಪೂರ್ವಂ ಭಕ್ತ್ಯಾ ಚ ಗೋವಿಂದಂ ಗೃಹೇ ಚ ನಿಯತಾತ್ಮವಾನ್ ।
ಪೂಜಯೇದ್ಭಕ್ತಿತೋ ರಾಜನ್ನುಭಯತ್ರ ಯಥಾವಿಧಿ ॥ ೪೩ ॥

---

ಸ್ಕಾರವು. ಪದ್ಮನಾಭನಾದ ನಿನಗೆ ನಮಸ್ಕಾರವು. ಕುಂಡಲ ಭುಜಕೀರ್ತಿಗಳುಳ್ಳ ನಿನಗೆ ನಮಸ್ಕಾರವು. ನಿದ್ದೆಮಾಡುತ್ತಿರುವ ಪ್ರಪಂಚಕ್ಕೆಲ್ಲಾ ಎಚ್ಚರವನ್ನು ಕೊಡುವ ನಿನಗೆ ನಮಸ್ಕಾರವು. ನಾವು ಮಾಡುವ ಪಾಪವನ್ನಾಗಲೀ, ಪುಣ್ಯವನ್ನಾಗಲೀ ಎಲ್ಲವನ್ನೂ ಸದಾ ನೋಡುತ್ತಿರುತ್ತೀಯೆ. ಎಲೈ ಸತ್ಯದೇವನೇ ನಿನಗೆ ನಮಸ್ಕಾರ. ಎಲೈ ಭಾಸ್ಕರನೇ ನನಗೆ ಪ್ರಸನ್ನನಾಗು.

೪೧–೪೨. ದಿವಾಕರನೇ ನಿನಗೆ ನಮಸ್ಕಾರವು. ಪ್ರಭಾಕರನೇ ನಿನಗೆ ನಮಸ್ಕಾರವು. ಈ ರೀತಿಯಾಗಿ ಹೇಳಿ ಏಳುಬಾರಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಆಮೇಲೆ ಬ್ರಾಹ್ಮಣನನ್ನೂ, ಹಸುವನ್ನೂ, ಚಿನ್ನವನ್ನೂ ಮುಟ್ಟಬೇಕು. ಆಮೇಲೆ ಮನೆಗೆ ಬರಬೇಕು. ಮನೆಯಲ್ಲಿ ಅತಿಥಿಗಳು ಬಂದಿದ್ದರೆ ಅವರ ಆಶ್ರಮಕ್ಕನುಗುಣವಾಗಿ ಅವರನ್ನು ಪೂಜಿಸಬೇಕು. ಅನಂತರ ತನಗೆ ಯುಕ್ತವಾದ ದೇವ ಪ್ರತಿಮಾ ಪೂಜೆಯನ್ನು ಮಾಡಬೇಕು

೪೩. ಮನೆಯಲ್ಲಿ ಮೊದಲು ವಿಷ್ಣುಪ್ರತಿಮೆಯನ್ನು ಭಕ್ತಿಯಿಂದ ಪೂಜಿಸಬೇಕು. ಮನೆಯಲ್ಲಿ ಎಲ್ಲಾ ವಿಷಯದಲ್ಲಿಯೂ ನಿಯಮದಿಂದಿರಬೇಕು.

ವಿಶೇಷಾದಪಿ ವೈಶಾಖೇ ಯೋ೭ರ್ಚಯೇನ್ಮಧುಸೂದನಂ ।
ಸರ್ವಸಂವತ್ಸರಂ ಯಾವದರ್ಚಿತಸ್ತೇನ ಮಾಧವಃ ॥ ೪೪ ॥

ಮಾಧವೇ ಮಾಸಿ ಸಂಪ್ರಾಪ್ತೇ ಮೇಷಸ್ಥೇ ಕರ್ಮಸಾಕ್ಷಿಣೀ ।
ಕೇಶವಪ್ರೀತಯೇ ಕುರ್ಯಾತ್ಕೇಶವವ್ರತಸಂಚಯಂ ॥ ೪೫ ॥

ದದ್ಯಾದನೇಕದಾನಾನಿ ತಿಲಾಜ್ಯಪ್ರಭೃತೀನಿ ಚ ।
ಜನ್ಮಕೋಟಿಸಮುದ್ಭೂತಪಾತಕಾಂತಕರಾಣಿ ಚ ॥ ೪೬ ॥

ಜಲಾನ್ನಶರ್ಕರಾಧೇನು ತಿಲಧೇನು ಮುಖಾನಿ ಚ ।
ವಿತ್ತಶಾಠ್ಯವಿವರ್ಜ್ಯಾನಿ ದಾನಾನೀಪ್ಸಿತಸಿದ್ಧಯೇ ॥ ೪೭ ॥

ವೈಶಾಖಂ ಸಕಲಂ ಮಾಸಂ ನಿತ್ಯಸ್ನಾಯೀ ಜಿತೇಂದ್ರಿಯಃ ।
ಜಪನ್ಹವಿಷ್ಯಂ ಭುಂಜಾನೋ ಸರ್ವಪಾಪೈಃ ಪ್ರಮುಚ್ಯತೇ ॥ ೪೮ ॥

ಏಕಭುಕ್ತಮಥೋನಕ್ತಮಯಾಚಿತಮತಂದ್ರಿತಃ ।
ಮಾಧವೇ ಮಾಸಿ ಯಃ ಕುರ್ಯಾತ್ಸಲಭೇತ್ಸರ್ವಮೀಪ್ಸಿತಂ ॥ ೪೯ ॥

---

೪೪. ವೈಶಾಖಮಾಸದಲ್ಲಿ ವಿಷ್ಣುವನ್ನು ಪೂಜಿಸಿದರೆ ಆ ವರ್ಷವು ಪೂರ್ತಿಯಾಗಿ ಸ್ವಾಮಿಯನ್ನು ಪೂಜಿಸಿದಂತಾಗುತ್ತದೆ.

೪೫. ಸೂರ್ಯನು ಮೇಷದಲ್ಲಿದ್ದು ವೈಶಾಖಮಾಸವು ಪ್ರಾಪ್ತವಾದಾಗ ವಿಷ್ಣು ಪ್ರೀತಿಗೋಸ್ಕರ ವಿಷ್ಣುವಿನ ವ್ರತಗಳನ್ನು ಮಾಡಬೇಕು.

೪೬. ಆ ಕಾಲದಲ್ಲಿ ಕೋಟಿಜನ್ಮಗಳಲ್ಲಿ ಮಾಡಿರುವ ಪಾತಕಗಳನ್ನು ನಾಶ ಮಾಡುವ ಎಳ್ಳು, ತುಪ್ಪ ಮುಂತಾದ ದಾನಗಳನ್ನು ಅನೇಕವಾಗಿ ಮಾಡಬೇಕು.

೪೭. ನೀರು, ಅನ್ನ, ಸಕ್ಕರೆ, ಹಸು, ತಿಲಧೇನು ಇವೇ ಮುಂತಾದುವನ್ನು ದಾನ ಮಾಡಬೇಕು. ಲೋಭಿತನವನ್ನು ಮಾಡಬಾರದು. ಆ ರೀತಿ ಮಾಡಿದರೆ ಇಷ್ಟಾರ್ಥವು ಸಿದ್ಧಿಸುತ್ತದೆ.

೪೮. ವೈಶಾಖಮಾಸ ಪೂರ್ತಿ ಪ್ರಾತಸ್ಸ್ನಾನಮಾಡುತ್ತಾ ಜಿತೇಂದ್ರಿಯನಾಗಿ ಜಪಿಸುತ್ತಾ ಹವಿಷ್ಯಾನ್ನವನ್ನು ತಿಂದುಕೊಂಡಿದ್ದರೆ ಸರ್ವಪಾಪಗಳೂ ಹೋಗುತ್ತವೆ.

೪೯. ನಿಯಮವನ್ನು ಹಿಡಿದು ಒಪ್ಪತ್ತೇ ಊಟಮಾಡಬೇಕು. ಯಾರನ್ನೂ ಯಾಚಿಸಬಾರದು ಈ ರೀತಿ ವೈಶಾಖದಲ್ಲಿ ಮಾಡಿದರೆ ಅವನು ಅಪೇಕ್ಷಿಸಿಸುದೆಲ್ಲವೂ ಹೊಂದುತ್ತವೆ.

ವೈಶಾಖೇ ವಿಧಿವತ್ಸ್ನಾನದ್ವಯಂ ನದ್ಯುದಕೇ ಬಹಿಃ ।
ಹವಿಷ್ಯಂ ಬ್ರಹ್ಮಚರ್ಯಂ ಚ ಭೂಶಯ್ಯಾ ನಿಯಮಸ್ಸ್ಥಿತಿಃ ॥ ೫೦ ॥

ವ್ರತಂ ದಾನಂ ಜಪೋ ಹೋಮೋ ಮಧುಸೂದನಪೂಜನಂ ।
ಅಪಿ ಜನ್ಮಸಹಸ್ರೋತ್ಥಂ ಪಾಪಂ ಹರತಿ ದಾರುಣಂ ॥ ೫೧ ॥

ಯಥೈವ ಮಾಧವೋ ಧ್ಯಾತೋ ವಿನಾಶಯತಿ ಕಿಲ್ಬಿಷಂ ।
ತಥೈವ ಮಾಧವೇ ಸ್ನಾನಂ ನಿಯಮೇನ ವಿನಿರ್ಮಿತಂ ॥ ೫೨ ॥

ತೀರ್ಥೇ ಚಾನುದಿನಂ ಸ್ನಾನಂ ತಿಲೈಶ್ಚ ಪಿತೃತರ್ಪಣಂ ।
ದಾನಂ ಧರ್ಮಘಟಾದೀನಾಂ ಮಧುಸೂದನಪೂಜನಂ ॥ ೫೩ ॥

ಮಾಧವೇ ಮಾಸಿ ಕುರ್ವೀತ ಮಧುಸೂದನತುಷ್ಟಿದಂ ।
ತಿಲೋದಕಸುವರ್ಣಾನ್ನಶರ್ಕರಾಂಬರರೋಹಿಣೀಃ ॥ ೫೪ ॥

ಪಾದತ್ರಾಣಾತಪತ್ರಾಬ್ಜಂ ಕುಂಭಾನ್ದದ್ಯಾದ್ದ್ವಿಜಾತಿಷು ।
ತ್ರಿಸಂಧ್ಯಂ ಪೂಜಯೇದೀಶಂ ಭಕ್ತ್ಯಾ ಚ ಮಧುಸೂದನಂ ॥ ೫೫ ॥

---

೫೦–೫೧. ವೈಶಾಖಮಾಸದಲ್ಲಿ ಹೊರಗೆ ನದಿಯ ನೀರಲ್ಲಿ ಎರಡಾವರ್ತಿ ಎಂದರೆ ಬೆಳಗ್ಗೆ ಮಧ್ಯಾಹ್ನ ಸ್ನಾನಮಾಡಿ ಹವಿಷ್ಯಾನ್ನವನ್ನು ತಿನ್ನುತ್ತಾ ಬ್ರಹ್ಮಚಾರಿಯಾಗಿದ್ದು ನೆಲದ ಮೇಲೆ ಮಲಗುತ್ತಾ ನಿಯಮಗಳನ್ನು ಕಾಪಾಡಿಕೊಂಡು ವ್ರತ, ದಾನ, ಜಪ, ಹೋಮಗಳನ್ನು ಮಾಡುತ್ತಾ ವಿಷ್ಣುವನ್ನೂ ಪೂಜಿಸುತ್ತಿದ್ದರೆ ಸಾವಿರಾರು ಜನ್ಮಗಳ ಕ್ರೂರವಾದ ಪಾಪಗಳಾದರೂ ಹೋಗುತ್ತವೆ.

೫೨. ವಿಷ್ಣುವನ್ನು ಧ್ಯಾನಮಾಡಿದರೆ ಹೇಗೆ ಪಾಪಗಳು ಹೋಗುತ್ತವೆಯೋ, ಹಾಗೇನೇ ವೈಶಾಖದಲ್ಲಿ ನಿಯಮದಿಂದ ಮಾಡಿದ ಸ್ನಾನವು ಪಾಪವನ್ನು ಹರಿಸುತ್ತದೆ

೫೩–೫೮. ವೈಶಾಖಮಾಸದಲ್ಲಿ ತೀರ್ಥದಲ್ಲಿ ಸ್ನಾನಮಾಡಿ ಎಳ್ಳಿನಿಂದ ಪಿತೃತರ್ಪಣವನ್ನು ಮಾಡಬೇಕು. ಧರ್ಮಘಟಗಳನ್ನು ಕಲ್ಪಿಸಿ ದಾನಮಾಡಬೇಕು. ವಿಷ್ಣುವನ್ನೂ ಪೂಜಿಸಬೇಕು. ಹೀಗೆ ಮಾಡಿದರೆ ವಿಷ್ಣುವು ಸುಪ್ರೀತನಾಗುತ್ತಾನೆ. ಎಳ್ಳು, ಉದಕ, ಚಿನ್ನ, ಅನ್ನ, ಸಕ್ಕರೆ, ಬಟ್ಟೆ, ಹಸು, ಕೆರ, ಛತ್ರಿ, ಶಂಖ, ಕುಂಭಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಪೂಜ್ಯಳಾದ ಲಕ್ಷ್ಮಿಯೊಡಗೂಡಿದ ಸ್ವಾಮಿ

ಸಾಕ್ಷಾದ್ವಿಮಲಯಾ ಲಕ್ಷ್ಮ್ಯಾ ಸಮುಪೇತಂ ಸಮಾಹಿತಃ ।
ಸುವರ್ಣತಿಲಪಾತ್ರೈಶ್ಚ ಬ್ರಾಹ್ಮಣಾನ್ ಶಕ್ತಿತೋ ಬಹೂನ್ ॥ ೫೬ ॥

ತರ್ಪಯೇದುಗ್ಧಪಾತ್ರೈರ್ಯೋ ಬ್ರಹ್ಮಹತ್ಯಾಂ ವ್ಯಪೋಹತಿ ।
ವೈಶಾಖೇಮಾಸಿ ಯಸ್ಸ್ನಾತ್ವಾ ಪ್ರಾತರ್ನದ್ಯಾಂ ಸಮಾಹಿತಃ ॥ ೫೭ ॥

ಪೂಜಯಿತ್ವಾ ಹರಿಂ ಭಕ್ತ್ಯಾ ಪುಷ್ಪೈಃ ಕಾಲೋದ್ಭವೈಃ ಫಲೈಃ ।
ಪೂಜಯೇದ್ಬ್ರಾಹ್ಮಣಾನ್ಭಕ್ತ್ಯಾ ಪಾಷಂಡಾಲಾಪವರ್ಜಿತಃ ॥ ೫೮ ॥

ತರ್ಪಯೇದ್ವಸ್ತ್ರಗೋದಾನೈರತ್ನಾದ್ಯೈರ್ಧನಸಂಚಯೈಃ ।
ಯಶ್ಚಾಪಿ ನಿಸ್ಸ್ವಪುರುಷೋ ಮಾಧವೇ ಮಾಸಿ ಮಾಧವಂ ॥ ೫೯ ॥

ಪುಷ್ಪಾರ್ಚನವಿಧಾನೇನ ಪೂಜಯೇನ್ಮಧುಸೂದನಂ ।
ಸರ್ವಪಾಪವಿನಿರ್ಮುಕ್ತೋ ಯಾತಿ ಸೋಽಪಿ ಪರಂ ಪದಂ ॥ ೬೦ ॥

ಆಜ್ಯಂ ವಿತ್ತಂ ಯಥಾಶಕ್ತ್ಯಾ ಸ್ತೋಕಂ ಸ್ತೋಕಂ ಸಮಾಚರೇತ್ ।
ಸ ಜನ್ಮಶತಸಾಹಸ್ರಂ ನ ಶೋಕಫಲಭಾಗ್ಭವೇತ್ ॥ ೬೧ ॥

---

ಯಾದ ವಿಷ್ಣುವನ್ನು ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಮೂರುವೇಳೆಯೂ ಪೂಜಿಸಬೇಕು. ಶಕ್ತಿಗನುಗುಣವಾಗಿ, ಚಿನ್ನದ ಪಾತ್ರೆ, ಎಳ್ಳಿನಪಾತ್ರೆ, ಹಾಲಿನಪಾತ್ರೆಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಹಾಗೆ ಮಾಡಿದರೆ ಬ್ರಹ್ಮಹತ್ಯೆಯೂ ಹೋಗುತ್ತದೆ. ವೈಶಾಖಮಾಸದಲ್ಲಿ ನದಿಯಲ್ಲಿ ಪ್ರಾತಸ್ನಾನಮಾಡಿಕೊಂಡು ನಿಯಮವಂತನಾಗಿ ಹೂಗಳಿಂದಲೂ, ಆ ಕಾಲದಲ್ಲಿ ಬಿಟ್ಟಿರುವ ಹಣ್ಣುಗಳಿಂದಲೂ, ವಿಷ್ಣುವನ್ನು ಭಕ್ತಿಯಿಂದ ಪೂಜಿಸಿ ನಾಸ್ತಿಕವಾದವನ್ನು ಬಿಟ್ಟು ಬ್ರಾಹ್ಮಣರನ್ನು ಶಕ್ತಿಗನುಗುಣವಾಗಿ ಪೂಜಿಸಬೇಕು.

೫೯-೬೦. ಆ ಬ್ರಾಹ್ಮಣನನ್ನು ವಸ್ತ್ರ, ಗೋವು, ರತ್ನಮುಂತಾದ ಧನಗಳನ್ನು ಕೊಟ್ಟು ತೃಪ್ತಿಪಡಿಸಬೇಕು. ಬಡವನಾದ ಮನುಷ್ಯನೂ ಕೂಡ ಹೂವಿನಿಂದ ಸ್ವಾಮಿಯನ್ನು ಪೂಜಿಸಿದರೆ ಸರ್ವಪಾಪಗಳನ್ನೂ ಕಳೆದುಕೊಂಡು ಪರಮಪದವನ್ನು ಹೊಂದುತ್ತಾನೆ.

೬೧. ತುಪ್ಪ, ದ್ರವ್ಯಗಳನ್ನು ಶಕ್ತಿಯಿದ್ದಂತೆ ಸ್ವಲ್ಪಸ್ವಲ್ಪವಾಗಿ ದಾನಮಾಡಬೇಕು. ಹಾಗೆ ಮಾಡಿದರೆ, ಸಾವಿರಜನ್ಮಗಳವರೆಗೂ ಶೋಕವನ್ನು ಹೊಂದುವುದಿಲ್ಲ.

ನ ಚ ವ್ಯಾಧಿಭಯಂ ತಸ್ಯ ನ ಧಾರಿದ್ರ್ಯಂ ನ ಬಂಧನಂ ।
ನ ವಿಷ್ಣುಭಕ್ತೋ ಜಾಯೇತ ಧನ್ಯೋ ಜನ್ಮನಿ ಜನ್ಮನಿ ॥ ೬೨ ॥

ಯಾವದ್ಯುಗಸಹಸ್ರಾಣಿ ಶತಮಷ್ಟೋತ್ತರಂ ಭವೇತ್ ।
ತಾವತ್ಸ್ವರ್ಗೇ ವಸೇದ್ಧೀರೋ ಭೂಪತಿಶ್ಚ ಪುನರ್ಭವೇತ್ ॥ ೬೩ ॥

ಭೂಪತಿರ್ವಿವಿಧಾನ್ಭೋಗಾನ್ಭುಕ್ತ್ವಾ ಚೈವ ಯಥಾಸುಖಂ ।
ಮಾಧವಸ್ಯ ಪ್ರಸಾದೇನ ಮಾಧವೇ ಲೀಯತೇ ತತಃ ॥ ೬೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಏಕೋನನವತಿತಮೋಽಧ್ಯಾಯಃ

---

೬೨. ಆ ಮನುಷ್ಯನಿಗೆ ರೋಗಭಯವಾಗಲೀ, ದಾರಿದ್ರ್ಯಭಯವಾಗಲೀ, ಬಂಧನದ ಭಯವಾಗಲೀ ಇರುವುದಿಲ್ಲ. ಆತನು ಜನ್ಮಜನ್ಮಕ್ಕೂ ವಿಷ್ಣುಭಕ್ತನಾಗಿ ಹುಟ್ಟಿ ಧನ್ಯನಾಗುತ್ತಾನೆ. ದುಡ್ಡುಳ್ಳವನಾಗಿಯೂ ಆಗುತ್ತಾನೆ.

೬೩. ಸಾವಿರದ ನೂರೆಂಟು ಯುಗಗಳವರೆಗೂ, ಆತನು ಸ್ವರ್ಗದಲ್ಲಿದ್ದು ಅನಂತರ ಭೂಮಿಯಲ್ಲಿ ಮತ್ತೆ ರಾಜನಾಗಿ ಜನ್ಮವೆತ್ತುತ್ತಾನೆ.

೬೪. ಅವನು ರಾಜನಾಗಿ ಹುಟ್ಟಿ ನಾನಾಬಗೆಯಾದ ಭೋಗಗಳನ್ನೂ ಸುಖಗಳನ್ನೂ ಅನುಭವಿಸಿ ವಿಷ್ಣುವಿನಲ್ಲಿ ಐಕ್ಯನಾಗುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖಮಾಸ ಮಹಿಮೆ
ಎಂಬ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ನವತಿತಮೋಽಧ್ಯಾಯಃ ॥



॥ ನಾರದ ಉವಾಚ ॥

ಶೃಣು ರಾಜೇಂದ್ರ ವಕ್ಷ್ಯಾಮಿ ಸಮಾಸಾನ್ಮಾಧವಾರ್ಚನಂ ।
ವೈದಿಕಂ ತಾಂತ್ರಿಕಂ ಚಾಪಿ ಮಿಶ್ರಕಂ ಪಾಪನಾಶನಂ ॥ ೧ ॥

ಅನಂತಾನಂತಪಾರಸ್ಯ ನಾಂತಃ ಪೂಜಾವಿಧೇರ್ನೃಪ ।
ಅಥ ಸಂಕ್ಷಿಪ್ಯ ಚೋಚ್ಯೇತ ಯಥಾವದನುಪೂರ್ವಶಃ ॥ ೨ ॥

ವೈದಿಕಸ್ತಾಂತ್ರಿಕೋ ಮಿಶ್ರಃ ಶ್ರೀವಿಷ್ಣೋಸ್ತ್ರಿವಿಧೋ ಮಖಃ ।
ತ್ರಯಾಣಾಮುದಿತೇನೈವ ವಿಧಿನಾ ಹರಿಮರ್ಚಯೇತ್ ॥ ೩ ॥

---

### ತೊಂಭತ್ತನೆಯ ಅಧ್ಯಾಯವು

೧. ನಾರದನು ಹೇಳಿದನು— ಎಲೈ ರಾಜನೇ! ವಿಷ್ಣುಪೂಜೆಯನ್ನು ವೇದೋಕ್ತವಾದ ರೀತಿಯಿಂದಲೂ, ತಾಂತ್ರಿಕವಾದ ರೀತಿಯಿಂದಲೂ, ಮಿಶ್ರವಾದ ರೀತಿಯಿಂದಲೂ, ಸೂಕ್ಷ್ಮವಾಗಿ ಹೇಳುತ್ತೇನೆ ಕೇಳು.

೨. ಬಹು ದೊಡ್ಡದಾದ ಈ ಪೂಜೆಗೆ ಕೊನೆಯೇ ಇರುವುದಿಲ್ಲ. ಆದರೂ ಕ್ರಮವಾಗಿ ಸಂಕ್ಷೇಪದಿಂದ ಹೇಳುತ್ತೇನೆ.

೩. ಶ್ರೀವಿಷ್ಣುವಿನ ಪೂಜೆಯು ವೈದಿಕವೆಂದೂ, ತಾಂತ್ರಿಕವೆಂದೂ ಮಿಶ್ರವೆಂದೂ, ಮೂರುಬಗೆಯಾಗಿರುವುದು. ಈ ಮೂರರಲ್ಲಿ ಕ್ರಮವಾಗಿ ಆಯಾವಿಧಿಯಂತೆ ಮಾಡಬೇಕು.

ವೈದಿಕೋ ಮಿಶ್ರಕೋ ವಾಪಿ ವಿಪ್ರಾದೀನಾಮುದಾಹೃತಃ ।
ತಾಂತ್ರಿಕೋ ವಿಷ್ಣುಭಕ್ತಸ್ಯ ಶೂದ್ರಸ್ಯಾಽಪಿ ಪ್ರಕೀರ್ತಿತಃ ॥ ೪ ॥

ಯಥಾ ಸ್ವನಿಗಮೇನೋಕ್ತಂ ವಿಧಿತ್ವಂ ಪ್ರಾಪ್ಯ ಪೂರುಷಃ ।
ಯಜೇಚ್ಚ ವಿಧಿವದ್ವಿಷ್ಣುಂ ಬ್ರಹ್ಮಚಾರೀ ಸಮಾಹಿತಃ ॥ ೫ ॥

ಅರ್ಚಯೇತ್ಸ್ಥಂಡಿಲೇ ವಾಗ್ನೌ ಸೂರ್ಯೇ ಸ್ವಹೃದಿ ವಾ ದ್ವಿಜೇ ।
ದ್ರವ್ಯೇಣ ಭಕ್ತಿಯುಕ್ತೋಽರ್ಚೇತ್ಸ್ವಗುರುಂ ತದನುಜ್ಞಯಾ ॥ ೬ ॥

ಪೂರ್ವಂ ಸ್ನಾನಂ ಪ್ರಕುರ್ವೀತ ಧೌತದಂತೋಽಂಗಶುದ್ಧಯೇ ।
ಉಭಯೋರಪಿ ಚ ಸ್ನಾನಂ ಮಂತ್ರೈರ್ಮೃದ್ಗ್ರಹಣಾದಿನಾ ॥ ೭ ॥

ಸಂಧ್ಯೋಪಾಸನಕರ್ಮಾಣಿ ವೇದತಂತ್ರೋದಿತಾನಿ ಚ ।
ಪೂಜಾಂತೇ ಕಲ್ಪಯೇತ್ಸಮ್ಯಕ್ಸಂಕಲ್ಪಂ ಕರ್ಮ ಪಾವನಂ ॥ ೮ ॥

---

೪. ದ್ವಿಜರಾದವರು ವೈದಿಕ ಮಿಶ್ರಿತವಾದ ಪೂಜೆಗಳಿಂದ ಪೂಜಿಸಬೇಕು. ವಿಷ್ಣುಭಕ್ತನಾದ ಶೂದ್ರನು ತಾಂತ್ರಿಕವಿಧಿಯಿಂದ ಪೂಜಿಸಬೇಕು.

೫. ದ್ವಿಜನಾದವನು ತನ್ನ ವೇದದಲ್ಲಿ ಹೇಳಿರುವ ರೀತಿಯಿಂದ ನಿಯಮದಿಂದ ವಿಷ್ಣುವನ್ನು ವಿಧಿವತ್ತಾಗಿ ಪೂಜಿಸಬೇಕು.

೬. ಮನುಷ್ಯನು ಮಂಡಲದಲ್ಲಾಗಲೀ, ಅಗ್ನಿಯಲ್ಲಾಗಲೀ, ಸೂರ್ಯನಲ್ಲಾಗಲೀ, ತನ್ನ ಮನಸ್ಸಿನಲ್ಲಾಗಲೀ, ಭಕ್ತಿಯಿಂದಲೂ, ದುಡ್ಡಿನಿಂದಲೂ, ಸ್ವಾಮಿಯನ್ನು ಆವಾಹನೆ ಮಾಡಿ ಪೂಜಿಸಬೇಕು. ಮೊದಲು ಭಕ್ತಿಯಿಂದಲೂ, ದ್ರವ್ಯದಿಂದಲೂ ಗುರುವನ್ನು ಪೂಜಿಸಬೇಕು. ಅವನ ಅನುಜ್ಞೆಯನ್ನು ಪಡೆದು ಮುಂದಿನ ಕೆಲಸಮಾಡಬೇಕು.

೭. ಮೊದಲು ಹಲ್ಲನ್ನು ತಿಕ್ಕಿಕೊಂಡು ಅಂಗಶುದ್ಧಿಮಾಡಿಕೊಂಡು ಸ್ನಾನವನ್ನು ಮಾಡಬೇಕು. ಗುರುಶಿಷ್ಯರಿಬ್ಬರೂ ಮಂತ್ರಗಳಿಂದಲೂ ಮೃತ್ತಿಕೆಗಳಿಂದಲೂ, ಶಾಸ್ತ್ರೋಕ್ತವಾಗಿ ಸ್ನಾನಮಾಡಬೇಕು.

೮. ವೇದದಲ್ಲಿಯೂ, ತಂತ್ರದಲ್ಲಿಯೂ ಹೇಳಿರುವಂತೆ ಸಂಧ್ಯಾವಂದನೆಯನ್ನು ಮಾಡಬೇಕು. ಅನಂತರ ಸಂಕಲ್ಪಮಾಡಿಕೊಂಡು ಕೊನೆಯವರೆಗೂ ಕ್ರಮವಾಗಿ ಹಾಗೆ ಮಾಡಿದರೆ ಪಾವನವು.

ಶೈಲೀ ಧಾತುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ।
ಮನೋಮಯೀ ಮಣಿಮಯೀ ಪ್ರತಿಮಾಷ್ಟವಿಧಾ ಮತಾ ॥ ೯ ॥

ಚರಾಚರೇತಿ ದ್ವಿವಿಧಾ ಪ್ರತಿಷ್ಠಾ ಜೀವಮಂದಿರಂ ।
ಉದ್ವಾಸಾವಾಹನೇ ನ ಸ್ತಃ ಸ್ಥಿರಾಯಾಂ ಕೇಶವಾರ್ಚನೇ ।
ಅಸ್ಥಿರಾಯಾಂ ವಿಕಲ್ಪಃ ಸ್ಯಾತ್ಸ್ಥಂಡಿಲೇ ತು ಭವೇದ್ದ್ವಯಂ ॥ ೧೦ ॥

ಸ್ನಾಪನಂ ತ್ವವಿಲೇಖ್ಯಾಯಾಂ ಅನ್ಯತ್ರ ಪರಿಮಾರ್ಜನಂ ।
ದ್ರವ್ಯೈಃ ಪ್ರಸಿದ್ಧೈರ್ದೇವಾರ್ಚಾ ಪ್ರತಿಮಾದಿಷ್ವಮಾಯಯಾ ॥ ೧೧ ॥

ಭಕ್ತಸ್ಯ ಚ ಯಥಾಲಬ್ಧೈರ್ಭಕ್ತಿಭಾವೇನ ಚೈವ ಹಿ ।
ಸ್ನಾನಾಲಂಕರಣಂ ಚೇಷ್ಟಮರ್ಚಾಯಾಮೇವ ಭೂಪತೇ ॥ ೧೨ ॥

ಶ್ರದ್ಧಯೋಪಹೃತಂ ಶ್ರೇಷ್ಠಂ ಕೃಷ್ಣಭಕ್ತೇನ ವಾರ್ಯಪಿ ।
ಗಂಧೋ ಧೂಪಸ್ಸುಮನಸೋ ದೀಪೋಽನ್ನಾದ್ಯಂ ಚ ಕಿಂ ಪುನಃ ॥ ೧೩ ॥

---

೯–೧೦. ಶಿಲೆಯಲ್ಲಿ ನಿರ್ಮಿತವಾದುದು, ಧಾತುವಿನಲ್ಲಿ ಮಾಡಿದುದು. ಲೋಹದ್ದು. ಬಣ್ಣಬಳಿದಿರುವುದು, ಬರೆದಿರುವ, ಚಿತ್ರದ್ದು, ಮರಳಿನದು, ಮನಸ್ಸಿನಲ್ಲಿ ಮಾಡಿಕೊಂಡಿರುವುದು, (ಊಹಿಸಿರುವುದು) ಮಣಿಗಳದು. ಎಂದು ಪ್ರತಿಮೆಯು ಎಂಟು ಬಗೆಯಾಗಿರುವುದು. ಇವುಗಳು ಸಂಚರಿಸಲು (ತೆಗೆದುಕೊಂಡು ಹೋಗಲು) ಯೋಗ್ಯವಾದುವೆಂದೂ, ಇದ್ದಲ್ಲಿಯೇ ಇರತಕ್ಕುದೆಂದೂ ಎರಡು ಬಗೆಯಿರುವುದು ಸ್ಥಿರವಾದ ಪ್ರತಿಮೆಗೆ ಉದ್ವಾಸನೆ ಆವಾಹನೆಗಳು ಕೂಡದು. ಚರವಾದುದಕ್ಕೆ ಮಾಡಿದರೂ ಮಾಡಬಹುದು. ಇಲ್ಲದಿದ್ದರೂ ಇಲ್ಲ. ಮಂಡಲದಲ್ಲಿರುವುದಕ್ಕೆ ಎರಡೂ ಉಂಟು.

೧೧. ಬರೆದಿರುವ ಪ್ರತಿಮೆಗೆ ಸ್ನಾನಮಾಡಿಸಕೂಡದು. ಪ್ರೋಕ್ಷಿಸಬೇಕು. ಪ್ರಸಿದ್ಧವಾದ ದ್ರವ್ಯಗಳಿಂದ ವಂಚನೆಯಿಲ್ಲದೆ ದೇವರನ್ನು ಪೂಜಿಸಬೇಕು.

೧೨. ಪೂಜೆಮಾಡುವಾಗ ಭಕ್ತನು ಭಕ್ತಿಭಾವದಿಂದ ಸಂಪಾದಿಸಿದುದರಲ್ಲೇ ಸ್ನಾನವೂ, ಅಲಂಕಾರವೂ ವಿಹಿತವಾಗಿದೆ.

೧೩. ಕೃಷ್ಣಭಕ್ತನಾದವನು ಶ್ರದ್ಧೆಯಿಂದ ನೀರನ್ನು ತಂದರೂ, ಅದೇ ಶ್ರೇಷ್ಠವಾದುದು. ಹೀಗಿರುವಲ್ಲಿ ಶ್ರದ್ಧೆಯಿಂದ ಗಂಧ, ಧೂಪ, ಹೂ, ದೀಪ, ಅನ್ನ ಮುಂತಾದುವುಗಳನ್ನು ತಂದರೆ ಹೇಳತಕ್ಕದ್ದೇನಿರುವುದು !

**ಶುಚಿಸ್ಸಂಭೃತಸಂಭಾರಃ ಪ್ರಾಗ್ದರ್ಭೈಃ ಕಲ್ಪಿತಾಸನಃ ।**
**ಆಸೀನಶ್ಚ ಹ್ಯುದಗ್ವಕ್ತ್ರೋ ಹ್ಯರ್ಚಾಯಾಮಥ ಸಂಮುಖಃ ॥ ೧೪ ॥**

**ಕೃತನ್ಯಾಸಃ ಕೃತನ್ಯಾಸಾಂ ಹರ್ಯರ್ಚಾಂ ಪಾಣಿನಾ ಸ್ಪೃಶೇತ್ ।**
**ಕಲಶಂ ಪ್ರೋಕ್ಷಣೀಯಂ ಚ ಯಥಾವದುಪಸಾದಯೇತ್ ॥ ೧೫ ॥**

**ತದದ್ಭಿರ್ದೇವಯಜನಂ ದ್ರವ್ಯಾಣ್ಯಾತ್ಮಾನಮೇವ ಚ ।**
**ಪ್ರೋಕ್ಷ್ಯಪಾತ್ರಾಣಿ ತ್ರೀಣ್ಯದ್ಭಿಸ್ತೈಸ್ತೈರ್ದ್ರವ್ಯೈಶ್ಚ ಸಾದಯೇತ್ ॥ ೧೬ ॥**

**ಪಾದ್ಯಾರ್ಘ್ಯಾಚಮನೀಯಾರ್ಥೇ ತ್ರೀಣಿಪಾತ್ರಾಣಿ ದಾಪಯೇತ್ ।**
**ಹೃತಶೀರ್ಷ್ಣಾ ಚ ಶಿಖಯಾ ಗಾಯತ್ರ್ಯಾಚಾಭಿಮಂತ್ರಯೇತ್ ॥ ೧೭ ॥**

**ಪಿಂಡೇ ವಾಯ್ವಗ್ನಿಸಂಶುದ್ಧೇ ಹೃತ್ಪದ್ಮಸ್ಥಾಂ ಪರಾಂ ವಿಭೋ ।**
**ಅಣ್ವೀಂ ಜೀವಕಲಾಂ ಧ್ಯಾಯನ್ನಾದಾಂತೇ ಸಿದ್ಧಭಾವಿತಾಂ ॥ ೧೮ ॥**

---

೧೪. ಶುಚಿಯಾಗಿ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಪೂರ್ವಮುಖವಾದ ಅಗ್ರಗಳುಳ್ಳ ದರ್ಭೆಗಳಿಂದ ಆಸನವನ್ನು ಹಾಕಿಕೊಂಡು ಉತ್ತರಕ್ಕೆ ಮುಖಮಾಡಿಕೊಂಡು ಕುಳಿತು ಸಂಕಲ್ಪಮಾಡಬೇಕು. ಪೂಜೆಮಾಡುವಾಗ ದೇವರೆದುರಿಗೆ ಮುಖಮಾಡಿಕೊಂಡಿರಬೇಕು.

೧೫. ಅಂಗನ್ಯಾಸಗಳನ್ನು ಮಾಡಿಕೊಂಡು ಅಲ್ಲಿಟ್ಟಿರುವ ಹರಿಪೂಜಾ ದ್ರವ್ಯಗಳನ್ನು ಮುಟ್ಟಬೇಕು. ಕಲಶ, ಪ್ರೋಕ್ಷಣಿ ಪಾತ್ರೆಗಳನ್ನು ಕ್ರಮವಾಗಿಟ್ಟುಕೊಳ್ಳಬೇಕು.

೧೬. ಆ ಕಲಶದ ನೀರಿನಿಂದ ದೇವರ ಪೂಜೆಯ ದ್ರವ್ಯಗಳನ್ನೂ ತನ್ನನ್ನೂ ಆ ಜಾಗವನ್ನೂ ಪ್ರೋಕ್ಷಿಸಿ ಅನಂತರ ಮೂರು ಪ್ರೋಕ್ಷಣೀ ಪಾತ್ರೆಗಳನ್ನೂ ಅವುಗಳ ಸ್ಥಳದಲ್ಲಿಟ್ಟು ಪೂಜಾದ್ರವ್ಯಗಳನ್ನು ಸರಿಯಾಗಿಟ್ಟುಕೊಳ್ಳಬೇಕು.

೧೭. ಪಾದ್ಯ, ಅರ್ಘ್ಯ ಆಚಮನೀಯಗಳಿಗೋಸ್ಕರ ಮೂರು ಪಾತ್ರೆಗಳನ್ನೂ ಬೇರೆ ಬೇರೆಯಾಗಿಟ್ಟುಕೊಳ್ಳಬೇಕು. ಹೃತಶೀರ್ಷಾ ಎಂಬ ಋಕ್ಕಿನಿಂದಲೂ, ಗಾಯತ್ರಿಯಿಂದಲೂ ಅಭಿಮಂತ್ರಿಸಬೇಕು.

೧೮ ವಾಯು, ಅಗ್ನಿಗಳಿಂದ ಶುದ್ಧವಾದ ದೇಹರೂಪವಾದ ಪಿಂಡದಲ್ಲಿ ಹೃದಯ ಪದ್ಮದಲ್ಲಿರುವ ಸೂಕ್ಷ್ಮವಾದ, ನಾದದ ಕೊನೆಯಲ್ಲಿದೆ ಎಂದು ಸಿದ್ಧರು ತಿಳಿದಿರುವ ಜೀವಕಳೆಯನ್ನು ಧ್ಯಾನಮಾಡಬೇಕು.

ತಥಾತ್ಮಭೂತಯಾ ಪಿಂಡವ್ಯಾಪ್ತೇ ಸಂಪೂಜ್ಯ ತನ್ಮಯಃ ।
ಆವಾಹ್ಯಾರ್ಚಾದಿಷು ಸ್ಥಾಪ್ಯ ನ್ಯಸ್ತಾಂಗಾಂ ತಾಂ ಪ್ರಪೂಜಯೇತ್ ॥ ೧೯ ॥

ಪಾದ್ಯಾರ್ಘ್ಯಸ್ನಾನಾರ್ಹಣಾದೀನುಪಚಾರಾನ್ಪ್ರಕಲ್ಪಯೇತ್ ।
ಧರ್ಮಾದಿಭಿಶ್ಚ ನವಭಿಃ ಕಲ್ಪಯಿತ್ವಾಸನಂ ಹರೇಃ ॥ ೨೦ ॥

ಪದ್ಮಮಷ್ಟದಳಂ ತತ್ರ ಕರ್ಣಿಕಾಕೇಸರೋಜ್ಜ್ವಲಂ ।
ಉಭಾಭ್ಯಾಂ ವೇದತಂತ್ರಾಭ್ಯಾಂ ಹರೇರುಭಯಸಿದ್ಧಯೇ ॥ ೨೧ ॥

ಸುದರ್ಶನಂ ಪಾಂಚಜನ್ಯಂ ಗದಾಸೀಷುಧನುರ್ಹಲಾನ್ ।
ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಚಾಪಿ ಪೂಜಯೇತ್ ।

ನಂದೋಪನಂದಂ ಗರುಡಂ ಪ್ರಚಂಡಂ ಚಂಡಮೇವ ಹಿ ।
ಬಲಂ ಮಹಾಬಲಂ ಚೈವ ಮುಕುಂದಂ ಕುಮುದೇಕ್ಷಣಂ ॥ ೨೩ ॥

---

೧೯. ಜೀವಕಳೆಯು ಆತ್ಮವಾಗಿ ಪಿಂಡದಲ್ಲಿ ವ್ಯಾಪಿಸಿದನಂತರ ಅದೇ ನಾನೆಂಬ ಭಾವದಿಂದ ಪೂಜಿಸಿ, ಆವಾಹನೆ ಅರ್ಚನೆಗಳಲ್ಲಿಟ್ಟು ಅಂಗಗಳನ್ನು ಕಲ್ಪಿಸಿ ಪೂಜಿಸಬೇಕು.

೨೦. ಪಾದ್ಯ, ಅರ್ಘ್ಯ, ಸ್ನಾನ ಪೂಜೆಗಳೇ ಮುಂತಾದ ಉಪಚಾರಗಳನ್ನು ಮಾಡಬೇಕು. ಧರ್ಮ, ಅಧರ್ಮ ಮುಂತಾದ ಒಂಭತ್ತು ನಾಮಗಳಿಂದ ಆಸನ ವನ್ನು ಮಾಡಬೇಕು.

೨೧. ಆ ಮಧ್ಯದಲ್ಲಿ ಎಂಟು ದಳದಿಂದ ಕೂಡಿದ ಪದ್ಮವನ್ನೂ ಅದರ ಮಧ್ಯ ದಲ್ಲಿ ಕರ್ಣಿಕೆಯನ್ನೂ, ಅದರ ನಡುವೆ ಕೇಸರವನ್ನೂ ಕಲ್ಪಿಸಬೇಕು. ಇಹಪರಗಳು ಸಿದ್ಧಿಸಲು ಹರಿಗೆ ಇವನ್ನು ವೇದ ತಂತ್ರಗಳೆರಡರಿಂದಲೂ ಕಲ್ಪಿಸಬೇಕು.

೨೨. ಚಕ್ರ, ಶಂಖ, ಗದೆ, ಕತ್ತಿ, ಬಾಣ, ಧನುಸ್ಸು, ನೇಗಿಲು, ಮುಸಲ, ಕೌಸ್ತುಭ, ಮಾಲೆ, ಶ್ರೀವತ್ಸಗಳನ್ನೂ ಪೂಜಿಸಬೇಕು.

೨೩-೬೪. ನಂದ, ಉಪನಂದ, ಗರುಡ, ಪ್ರಚಂಡ, ಚಂಡ, ಬಲ, ಮಹಾಬಲ ಮುಕುಂದ, ಕುಮುದೇಕ್ಷಣ, ದುರ್ಗೆ, ವಿನಾಯಕ, ವ್ಯಾಸ, ವಿಷ್ವಕ್ಸೇನ, ಗುರು,

ದುರ್ಗಾಂ ವಿನಾಯಕಂ ವ್ಯಾಸಂ ವಿಷ್ವಕ್ಸೇನಂ ಗುರೂನ್ಸುರಾನ್ ।
ಸ್ವಸ್ವಸ್ಥಾನೇಷ್ವಭಿಮುಖಾನ್ಪೂಜಯೇತ್ಪ್ರೋಕ್ಷಣಾದಿಭಿಃ ॥ ೨೪ ॥

ಚಂದನೋಶೀರಕರ್ಪೂರಕುಂಕುಮಾಗರುವಾಸಿತೈಃ ।
ಸಲಿಲೈಸ್ಸ್ನಾಪಯೇನ್ಮಂತ್ರೈರ್ನಿತ್ಯದಾ ವಿಭವೇ ಸತಿ ॥ ೨೫ ॥

ಸ್ವರ್ಣಘರ್ಮಾನುವಾಕೇನ ಮಹಾಪುರುಷವಿದ್ಯಯಾ ।
ಪೌರುಷೇಣಾಪಿ ಸೂಕ್ತೇನ ಸಾಮನೀರಾಜನಾದಿಭಿಃ ॥ ೨೬ ॥

ವಸ್ತ್ರೋಪವೀತಾಭರಣಸ್ರಗ್ಗಂಧಾದ್ಯನುಲೇಪನೈಃ ।
ಅಲಂಕುರ್ವೀತ ಸಪ್ರೇಮ ವಿಷ್ಣುಭಕ್ತೋ ಯಥೋಚಿತಂ ॥ ೨೭ ॥

ಪಾದ್ಯಮಾಚಮನೀಯಂ ಚ ಗಂಧಂ ಸುಮನಸೋಽಕ್ಷತಾನ್ ।
ಗಂಧಧೂಪೋಪಹಾರಾಂಶ್ಚ ದದ್ಯಾದ್ವೈ ಶ್ರದ್ಧಯಾರ್ಚಕಃ ॥ ೨೮ ॥

ಗುಡಪಾಯಸಸರ್ಪೀಂಷಿ ಶಷ್ಕುಲ್ಯಪೂಪಮೋದಕಾನ್ ।
ನೈವೇದ್ಯಂ ದಧಿ ದುಗ್ಧಾನಿ ನೈಕಸಂಜ್ಞಾನಿ ಕಲ್ಪಯೇತ್ ॥ ೨೯ ॥

---

ದೇವತೆಗಳು ಇಂದ್ರಾದಿ ದಿಕ್ಪಾಲರು ಇವರನ್ನು ಅವರವರಿಗೆ ಉಕ್ತವಾದ ಸ್ಥಾನಗಳಲ್ಲಿ ದೇವರಿಗೆ ಅಭಿಮುಖವಾಗಿ ಆವಾಹನೆ ಮಾಡಿ ಪೂಜಿಸಬೇಕು.

೨೫. ಗಂಧ, ಲಾವಂಚ, ಕರ್ಪೂರ, ಕುಂಕುಮಕೇಸರಿ, ಅಗರುಗಳಿಂದ ವಾಸನೆಯುಳ್ಳ ನೀರಿನಿಂದ ತನ್ನ ಅನುಕೂಲಕ್ಕೆ ಮೀರದಂತೆ ಆ ದೇವತೆಗಳನ್ನು ನಿತ್ಯವೂ ಪೂಜಿಸಬೇಕು.

೨೬-೨೭. ಲಕ್ಷ್ಮೀಸೂಕ್ತ, ಘರ್ಮಸೂಕ್ತ, ನಾರಾಯಣಸೂಕ್ತ, ನೀರಾಜನೀ ಋಕ್ಕುಗಳಿಂದ ಪೂಜಿಸಬೇಕು. ವಸ್ತ್ರ, ಯಜ್ಞೋಪವೀತ, ಆಭರಣ, ಮಾಲೆ, ಗಂಧ ಮುಂತಾದುವುಗಳಿಂದ ತನ್ನ ಯೋಗ್ಯತೆಗೆ ತಕ್ಕಂತೆ ಅಲಂಕರಿಸಬೇಕು.

೨೮ ಪಾದ್ಯ, ಆಚಮನೀಯ, ಗಂಧ, ಹೂ, ಅಕ್ಷತೆ, ಧೂಪ, ನೈವೇದ್ಯ ಗಳನ್ನು ಶ್ರದ್ಧೆಯಿಂದ ಸಮರ್ಪಿಸಬೇಕು.

೨೯. ಪಾನಕ, ಪಾಯಸ, ತುಪ್ಪ, ಚಕ್ಕಲಿ, ಒಬ್ಬಟ್ಟು, ಕಡುಬು, ಹಾಲು, ಮೊಸರು ಮುಂತಾದ ನೈವೇದ್ಯಗಳನ್ನು ನಾನಾಬಗೆಯಾಗಿ ಮಾಡಬೇಕು

ಅಭ್ಯಂಗೋನ್ಮರ್ದನಾದರ್ಶದಂತಧಾವಾಭಿಷೇಚನಂ ।
ಅನ್ನಾದ್ಯಂ ನೃತ್ಯಗೀತಾದಿ ಪರ್ವಣ್ಯಸ್ಯನ್ವಹಂ ನೃಪ ॥ ೩೦ ॥

ವಿಧಿನಾ ವಿಹಿತೇ ಕುಂಡೇ ಮೇಖಲಾವರ್ತವೇದಿಭಿಃ ।
ಅಗ್ನಿಮಾಧಾಯ ಪರಿತಃ ಸಮೂಹೇತ್ಪಾಣಿನೋದಕಂ ॥ ೩೧ ॥

ಪರಿಸ್ತೀರ್ಯಾಥ ಪರ್ಯುಕ್ಷ್ಯ ದರ್ಭೈರಿಧ್ಮಂ ಚ ಯಥಾವಿಧಿ ।
ಪ್ರೋಕ್ಷಣ್ಯಾಸಾದ್ಯ ದ್ರವ್ಯಾಣಿ ಪ್ರೋಕ್ಷ್ಯಾಗ್ನಾವಾಜ್ಯಸೇಚನಂ ॥ ೩೨ ॥

ತಪ್ತಜಾಂಬೂನದಪ್ರಖ್ಯಂ ಶಂಖಚಕ್ರಗದಾಂಬುಜೈಃ ।
ಲಸಚ್ಚತುರ್ಭುಜಂ ಶಾನ್ತಂ ಪದ್ಮಕಿಂಜಲ್ಕವಾಸಸಂ ॥ ೩೩ ॥

ಸ್ಫುರತ್ಕಿರೀಟಕಟಕಕಟಿಸೂತ್ರಾಂಗುಲೀಯಕಂ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಂ ॥ ೩೪ ॥

---

೩೦. ಅಭ್ಯಂಜನ ಗಂಧಾದಿಗಳನ್ನು ಪೂಸಿಕೊಳ್ಳುವುದು. ಕನ್ನಡಿ ತೋರಿಸುವುದು. ಹಲ್ಲು ಉಜ್ಜುವುದು, ಅಭಿಷೇಕ, ನೈವೇದ್ಯ, ನೃತ್ತ, ಗೀತ ಇವನ್ನು ನಿತ್ಯವೂ ಪರ್ವಕಾಲಗಳಲ್ಲಿಯೂ ಮಾಡಬೇಕು.

೩೧. ಮಧ್ಯದಲ್ಲಿ ಜಾಗಗಳನ್ನು ಕ್ರಮವಾಗಿ ಬಿಟ್ಟು ಜಗುಲಿ, ಕಟ್ಟೆ ಒಳಗೆ ಮೆಟ್ಟಲುಗಳಂತೆ ಮಾಡಿರುವ ಅಗ್ನಿಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ ಸುತ್ತಲೂ ಪ್ರೋಕ್ಷಿಸಿಕೊಳ್ಳಬೇಕು.

೩೨. ದರ್ಭೆಯಿಂದ ಸುತ್ತಲೂ ಪರಿಸ್ತರಣ ಹಾಕಿ, ನೀರಿನಿಂದ ಚಿಮುಕಿಸಿ, ವಿಧಿವತ್ತಾಗಿ ಸಮಿತ್ತುಗಳನ್ನು ಸುತ್ತಲೂ ಇಟ್ಟು ಪ್ರೋಕ್ಷಣೀ ಪಾತ್ರೆ, ಮುಂತಾದುವುಗಳನ್ನು ಇಟ್ಟು ಅದನ್ನು ಪ್ರೋಕ್ಷಿಸಿ ಸರಿಯಾಗಿಟ್ಟುಕೊಂಡು ಅನಂತರ ಆಜ್ಯಸ್ಥಾಲಿಯಲ್ಲಿ ತುಪ್ಪವನ್ನು ಹಾಕಿಕೊಂಡು ಅದನ್ನು ಸಂಸ್ಕರಿಸಿಕೊಳ್ಳಬೇಕು.

೩೩-೩೫. ಪುಟಕ್ಕೆ ಹಾಕಿದ ಚಿನ್ನದಂತೆ ಕಾಂತಿಯುಳ್ಳ, ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿರುವ, ಚತುರ್ಭುಜಗಳಿಂದ ಪ್ರಕಾಶಿಸುವ, ಶಾನ್ತವಾದ, ಪದ್ಮದ ಪರಾಗದಂತಿರುವ ಬಟ್ಟೆಯುಳ್ಳ ಕಿರೀಟ ಉಡಿದಾರ, ಹಾರ, ಜನಿವಾರ ಉಂಗುರಗಳನ್ನು ಹಾಕಿಕೊಂಡಿರುವ, ಶ್ರೀವತ್ಸಕೌಸ್ತುಭಗಳುಳ್ಳ ಮಾಲೆಯನ್ನು ಹಾಕಿಕೊಂಡಿರುವ,

ಧ್ಯಾಯನ್ನಭ್ಯರ್ಚ್ಯ ದಾರೂಣಿ ಹವಿಷಾ ಸಘೃತಾನಿ ಚ ।
ಪ್ರಾಸ್ಯಾಜ್ಯಭಾಗಾವಾಘಾರೌ ದತ್ವಾ ಚಾಜ್ಯಪ್ಲುತಂ ಹವಿಃ ॥ ೩೫ ॥

ಅಭ್ಯರ್ಚ್ಯಾಥ ನಮಸ್ಕೃತ್ಯ ಪಾರ್ಷದೇಭ್ಯೋ ಬಲಿಂ ಹರೇತ್ ।
ಮುಖವಾಸಂ ಚ ಸುರಭಿಂ ತಾಂಬೂಲಂ ಚ ಉಪಾಹರೇತ್ ॥ ೩೬ ॥

ಉಪಯೋಗಂ ಗೃಣನ್ನಿತ್ಯಂ ಕರ್ಮಾಣ್ಯಭಿತನಾಕ್ಷರೈಃ ।
ಸತ್ಕಥಾಂ ಶ್ರಾವಯನ್ಶೃಣ್ವನ್ಮುಹೂರ್ತಂ ಕ್ಷಣಿಕೋ ಭವೇತ್ ॥ ೩೭ ॥

ಸರ್ವೈರಾಚ್ಚಾವಚೈಸ್ತೋತ್ರೈಃ ಪುರಾಣೈಃ ಪ್ರಾಕೃತೈರಪಿ ।
ಸ್ತುತ್ವಾ ಪ್ರಸೀದ ಭಗವನ್ನಿತ್ಯಂ ವಂದೇತ ದಂಡವತ್ ॥ ೩೮ ॥

ಶಿರಸ್ತತ್ಪಾದಯೋಃ ಕೃತ್ವಾ ಬಾಹುಭ್ಯಾಂ ಚ ಪರಸ್ಪರಂ ।
ಪ್ರಪನ್ನಂ ಪಾಹಿ ಮಾಮೀಶ ಭೀತಂ ಮೃತ್ಯುಗ್ರಹಾರ್ಣವಾತ್ ॥ ೩೯ ॥

---

ಆ ವಿಷ್ಣುವನ್ನು ಧ್ಯಾನಮಾಡುತ್ತಾ ಹೋಮಮಾಡುವ ದರ್ವಿಗಳನ್ನು ಪ್ರೋಕ್ಷಿಸಿ ಹವಿಸ್ಸನ್ನೂ ತುಪ್ಪವನ್ನೂ ಹೋಮಮಾಡಿ, ಆಜ್ಯಭಾಗ ಆಘಾರಗಳನ್ನು ಹಾಕಿ ತುಪ್ಪವನ್ನು ಹಾಕಿದ ಹವಿಸ್ಸನ್ನೂ ಪೂಜಿಸಿ, ನಮಸ್ಕರಿಸಿ ಅನಂತರ ಪಾರ್ಷದರಿಗೆ (ವಿಷ್ಣುವಿನ ಭಕ್ತರಿಗೆ) ಬಲಿಹರಣವನ್ನು ಹಾಕಬೇಕು.

೩೬-೩೭. ನಾವು ಮಾಡತಕ್ಕ ಕೆಲಸಗಳಲ್ಲಿ ಆ ಸ್ವಾಮಿಯ ಸ್ಮರಣೆ ಬರುವಂತೆ ಕೆಲಸಮಾಡುತ್ತಾ ಆಡತಕ್ಕ ಮಾತುಗಳಲ್ಲಿ ಆ ಸ್ವಾಮಿಯ ನಾಮವನ್ನೇ ಉಪಯೋಗಿಸುತ್ತಾ ಆ ವಿಷ್ಣುಕಥೆಯನ್ನು ಹೇಳುತ್ತಾ, ಕೇಳುತ್ತಾ ಮುಹೂರ್ತವನ್ನು ಕ್ಷಣವಂತೆ ಕಳೆಯಬೇಕು.

೩೮. ಅನೇಕ ಬಗೆಯಾದ ಸ್ತೋತ್ರಗಳಿಂದಲೂ, ಪುರಾಣದ ಮತ್ತು ತಮ್ಮಿಂದ ಕಲ್ಪಿತವಾದ ಸ್ತೋತ್ರಗಳಿಂದಲೂ, ಸ್ತೋತ್ರಮಾಡಿ ನಿತ್ಯವೂ ದಂಡನಮಸ್ಕಾರಹಾಕಬೇಕು

೩೯-೪೦. ತಲೆಯನ್ನು ಆ ಸ್ವಾಮಿಯ ಪಾದಗಳಿಗೆ ಚಾಚಿ ಕೈಗಳನ್ನೂ ಹಾಗೆಯೇ ಚಾಚಿ ಮೃತ್ಯುವೆಂಬ ಮೊಸಳೆಯಿರುವ ಸಂಸಾರ ಸಮುದ್ರದಿಂದ ಹೆದರಿ ನಿನ್ನನ್ನು ಮರೆಹೊಕ್ಕಿರುವ ನನ್ನನ್ನು ಕಾಪಾಡು. ಎನ್ನಬೇಕು. ಹೀಗೆಂದು ಸ್ವಾಮಿಯ

ಇತಿ ಶೇಷಾಂ ಹರೇರ್ದತ್ತಾಂ ಶಿರಸ್ಯಾಧಾಯ ಸಾದರಂ ।
ಉದ್ವಾಸಯೇಚ್ಚೇದುದ್ವಾಸ್ಯಂ ಜ್ಯೋತಿರ್ಜ್ಯೋತಿಷಿ ಚಾತ್ಮನಃ ॥ ೪೦ ॥

ಅರ್ಚಾದಿಷು ಪದಂ ಯತ್ರ ಶ್ರದ್ಧಾವಾನ್ತತ್ರ ಚಾರ್ಚಯೇತ್ ।
ಸರ್ವಭೂತೇಷ್ವಾತ್ಮನಿ ಚ ಸರ್ವಾತ್ಮಾನಮವಸ್ಥಿತಂ ॥ ೪೧ ॥

ಏವಂ ಕ್ರಿಯಾಯೋಗಪಥೈಃ ಪುಮಾನ್ವೈದಿಕತಾಂತ್ರಿಕೈಃ ।
ಸರ್ವತಸ್ತು ಯತಸ್ಸಿದ್ಧಿಂ ಹರೇರ್ವಿಂದತ್ಯಭೀಪ್ಸಿತಾಂ ॥ ೪೨ ॥

ವಿಷ್ಣ್ವರ್ಚಾಂ ಸಂಪ್ರತಿಷ್ಠಾಪ್ಯ ಮಂದಿರಂ ಕಾರಯೇದ್ದೃಢಂ ।
ಪುಷ್ಪೋದ್ಯಾನಾನಿ ರಮ್ಯಾಣಿ ಪೂಜಾಕರ್ಮೋಪಸಿದ್ಧಯೇ ॥ ೪೩ ॥

ಪೂಜಾದೀನಾಂ ಪ್ರವಾಹಾರ್ಥಂ ಮಹಾಪರ್ವಸ್ವಥಾನ್ವಹಂ ।
ಕ್ಷೇತ್ರಾಪಣಪುರಗ್ರಾಮಾನ್ದತ್ವಾ ಸಾಯುಜ್ಯತಾಮಿಯಾತ್ ॥ ೪೪ ॥

---

ಪ್ರಸಾದವನ್ನು ಸ್ವೀಕರಿಸಿ ತಲೆಯಲ್ಲಿ ಧರಿಸಿಕೊಂಡು ವಿಸರ್ಜನೆಮಾಡತಕ್ಕ ಪ್ರತಿಷ್ಠೆಯಾದರೆ ವಿಸರ್ಜನೆಮಾಡಬೇಕು. ಅಗ್ನಿಯನ್ನು ತನ್ನ ಜ್ಯೋತಿಸ್ಸಿನಲ್ಲಿ ಸೇರಿಸಿಕೊಳ್ಳಬೇಕು.

೪೧. ಪೂಜೆಗೆ ಆ ಕಾಲದಲ್ಲಿ ಅನುಗುಣವಾದ ಸ್ಥಾನವೆಲ್ಲೆಲ್ಲಿದೆಯೋ ಅಲ್ಲಲ್ಲಿ ಶ್ರದ್ಧೆಯಿಂದ ಪೂಜಿಸಬೇಕು. ಆ ಸ್ವಾಮಿಯು ಸರ್ವಭೂತಗಳಲ್ಲಿಯೂ ತನ್ನಲ್ಲಿಯೂ ಇದ್ದಾನೆ. ಅವನನ್ನು ಎಲ್ಲಿ ಹೇಗೆ ಬೇಕಾದರೂ ಪೂಜಿಸಬಹುದು.

೪೨. ಕರ್ಮಯೋಗದ ದಾರಿಯಲ್ಲಿ ನಡೆಯುವವರು ಈರೀತಿ ವೈದಿಕ ತಾಂತ್ರಿಕಗಳಿಂದ ಪೂಜಿಸಿದರೆ ಸಿದ್ಧಿಯನ್ನು ಸರ್ವಭಾಗದಲ್ಲಿಯೂ, ಹೊಂದುವುದಲ್ಲದೆ ಅವರಿಗೆ ಹರಿಯು ಇಷ್ಟಾರ್ಥವನ್ನೂ ಕೊಡುವನು.

೪೩. ವಿಷ್ಣುಪೂಜಕನು ಅದಕ್ಕೋಸ್ಕರ ಒಂದು ಒಳ್ಳೆಯ ಗುಡಿಯನ್ನು ಕಟ್ಟಿಸಬೇಕು. ಆ ಪೂಜೆಗೋಸ್ಕರ ಒಂದು ಹೂದೋಟವನ್ನು ಹಾಕಿಸಬೇಕು.

೪೪. ಪೂಜೆಯು ಕ್ರಮವಾಗಿ ನಡೆಯುವುದಕ್ಕೂ, ವಿಶೇಷ ದಿವಸಗಳಲ್ಲಿ ಅತಿಶಯದಿಂದ ನಡೆವುದಕ್ಕೂ, ಭೂಮಿ, ಅಂಗಡಿ, ಗ್ರಾಮಗಳನ್ನೂ ಕೊಡಬೇಕು. ಹೀಗೆ ಮಾಡಿದರೆ ಸಾಯುಜ್ಯಪ್ರಾಪ್ತಿಯಾಗುತ್ತದೆ.

ಪ್ರತಿಷ್ಠಯಾ ಸಾರ್ವಭೌಮಂ ಸದ್ಮನಾ ಭುವನತ್ರಯಂ ।
ಪೂಜಾದಿನಾ ಬ್ರಹ್ಮಲೋಕಂ ತ್ರಿಭಿಸ್ತತ್ಸಾಮ್ಯತಾಮಿಯಾತ್ ॥ ೪೫ ॥

ನಾಶ್ವಮೇಧೇನ ಯಜ್ಞೇನ ಭಕ್ತಿಯೋಗಂ ತು ವಿಂದತಿ ।
ಭಕ್ತಿಯೋಗಂ ಸ ಲಭತ ಏವಂ ಯಃ ಪೂಜಯೇದ್ಧರಿಂ ॥ ೪೬ ॥

ಯತ್ಕೃಷ್ಣಪ್ರಣಿಪಾತಧೂಳಿಧವಳಂ ತದ್ವರ್ಷ್ಮ ತದ್ವೈಶುಭಂ ।
ನೇತ್ರೇ ಚೇತ್ತಪಸೋರ್ಜಿತೇ ಸುರುಚಿರೇ ಯಾಭ್ಯಾಂ ಹರಿರ್ದೃಶ್ಯತೇ ।
ಸಾ ಬುದ್ಧಿರ್ವಿಮಲೇಂದುಶಂಖಧವಳಾ ಯಾ ಮಾಧವಧ್ಯಾಯಿನೀ
ಸಾ ಜಿಹ್ವಾ ಮೃದುಭಾಷಿಣೀ ನೃಪ ಮುಹುರ್ಯಾ ಸ್ತೌತಿ ನಾರಾಯಣಂ ॥ ೪೭ ॥

ಮೂಲಮಂತ್ರೇಣ ಕರ್ತವ್ಯಂ ಸ್ತ್ರೀಶೂದ್ರೈರಪಿ ಪೂಜನಂ ।
ಶ್ರದ್ಧಯಾ ಗುರುಮಾರ್ಗೇಣ ತಥಾನ್ಯೈರಪಿ ವೈಷ್ಣವೈಃ ॥ ೪೮ ॥

---

೪೫. ದೇವತಾಪ್ರತಿಷ್ಠೆಮಾಡಿದರೆ ಚಕ್ರವರ್ತಿಯಾಗುವನು. ದೇವಸ್ಥಾನವನ್ನು ಕಟ್ಟಿಸಿದರೆ ಮೂರುಲೋಕವನ್ನೂ ದಾನಮಾಡಿದ ಪುಣ್ಯಬರುವುದು. ಪೂಜೆ ಮಾಡಲು ಏರ್ಪಡಿಸಿದರೆ ಬ್ರಹ್ಮಲೋಕವು ಸಿಕ್ಕುವುದು. ಈ ಮೂರನ್ನೂ ಒಬ್ಬನೇ ಮಾಡಿದರೆ ಸ್ವಾಮಿಯ ಸಾಯುಜ್ಯವೇ ಲಭಿಸುವುದು.

೪೬. ಅಶ್ವಮೇಧಯಾಗ ಮಾಡಿದರೂ ಭಕ್ತಿಯೋಗ ಸಿಕ್ಕುವುದಿಲ್ಲ. ಈ ರೀತಿ ಪೂಜೆಮಾಡಿದರೆ ಅವನಿಗೆ ಭಕ್ತಿಯೋಗವು ಸಿಕ್ಕುತ್ತದೆ.

೪೭. ಕೃಷ್ಣನಿಗೆ ನಮಸ್ಕಾರ ಮಾಡಿದ ಧೂಳಿಯಿಂದ ಪವಿತ್ರವಾದ ದೇಹವೇ ಉತ್ತಮವಾದ ದೇಹವು. ಯಾವ ಕಣ್ಣುಗಳು ಹರಿಯನ್ನು ನೋಡುತ್ತವೆಯೋ, ಅವೇ ತಪಸ್ಸಿನಿಂದ ಕೃತಾರ್ಥವಾದ ಕಣ್ಣುಗಳು. ಯಾವ ಬುದ್ಧಿಯು ಕೃಷ್ಣನಲ್ಲಿಯೇ ಯಾವಾಗಲೂ ಆಸಕ್ತವಾಗಿ ಪವಿತ್ರವಾಗಿದೆಯೋ, ಅದೇ ಬುದ್ಧಿಯು. ಸ್ವಾಮಿಯನ್ನು ಸದಾ ಸ್ತೋತ್ರಮಾಡುತ್ತಾ ಮೃದುವಾಗಿ ಮಾತನಾಡುವ ನಾಲಿಗೆಯೇ ನಾಲಗೆಯು.

೪೮. ಸ್ತ್ರೀಯರೂ, ಶೂದ್ರರೂ, ಮೂಲಮಂತ್ರದಿಂದ ಸ್ವಾಮಿಯನ್ನು ಆರಾಧಿಸಬೇಕು. ಮಿಕ್ಕ ವೈಷ್ಣವರು ಶ್ರದ್ಧೆಯಿಂದ ಗುರುವು ಹೇಳಿದಮಾರ್ಗದಲ್ಲಿ ಹೋಗಬೇಕು.

ಏತತ್ತೇ ಸರ್ವಮಾಖ್ಯಾತಂ ಪಾವನಂ ಮಾಧವಾರ್ಚನಂ ।
ವಿಶೇಷಾನ್ಮಾಧವೇ ಮಾಸಿ ತ್ವಮೇತತ್ಕುರು ಭೂಪತೇ ॥ ೪೯ ॥

॥ ಸೂತ ಉವಾಚ ॥

ಇತ್ಯೇವ ಮಾದಿಶ್ಯ ಮುನಿರ್ನರೇಂದ್ರ
ಮಾಮಂತ್ರ್ಯ ತಂ ಮಂತ್ರವಿದಂ ಸಭಾರ್ಯಂ ।
ಸ್ನಾತುಂ ಯಯೌ ಮಾಧವಮಾಸಿ ಗಂಗಾ
ಮಭ್ಯರ್ಚಿತಸ್ತೇನ ನೃಪೇಣ ವಿಪ್ರಃ ॥ ೫೦ ॥

ವಿಧಿಂ ಸ ರಾಜಾಪಿ ತಥಾ ಚಕಾರ
ವೈಶಾಖಮಾಸಸ್ಯ ಮುನಿಪ್ರಣೀತಂ ।
ಪತ್ನ್ಯಾ ಸಮಂ ಪುಣ್ಯಧಿಯಾ ತಮೇವ
ಸ ಚಿಂತಯಂಲ್ಲೋಕಪವಿತ್ರಕೀರ್ತಿಃ ॥ ೫೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ನವತಿತಮೋಽಧ್ಯಾಯಃ

---

೪೯. ಪವಿತ್ರವಾದ ಈ ಮಾಧವಾರ್ಚನೆಯೆಲ್ಲವನ್ನೂ ನಿನಗೆ ಹೇಳಿದ್ದೇನೆ. ವೈಶಾಖಮಾಸದ ವಿಶೇಷವನ್ನೂ ಹೇಳಿದ್ದೇನೆ. ಎಲೈ ರಾಜನೇ, ನೀನು ಇದನ್ನು ಶ್ರದ್ಧೆಯಿಂದ ಮಾಡು.

೫೦. ಸೂತನು ಹೇಳಿದನು—ಆ ಋಷಿಯು ಹೀಗೆಂದು ಆ ರಾಜನಿಗೆ ಹೇಳಿ ಅವನಿಂದಲೂ, ಅವನ ಹೆಂಡತಿಯಿಂದಲೂ, ಪೂಜಿಸಲ್ಪಟ್ಟು, ಪ್ರೀತನಾಗಿ ಅವರಿಂದ ಹೇಳ್ಕೊಂಡು ವೈಶಾಖಮಾಸದಲ್ಲಿ ಗಂಗೆಯಲ್ಲಿ ಸ್ನಾನಮಾಡಲು ಹೊರಟನು.

೫೧. ಪವಿತ್ರವಾದ ಕೀರ್ತಿಯುಳ್ಳ ಆ ರಾಜನೂ ಕೂಡ ಋಷಿಯು ಹೇಳಿದಂತೆ ವೈಶಾಖಮಾಸದ ವಿಧಿಯನ್ನು ಅನುಸರಿಸಿ ಹೆಂಡತಿಯೊಡನೆ ಒಳ್ಳೆಯ ಮನಸ್ಸಿನಿಂದ ಮಾಡಿದನು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖಮಾಸ ಮಹಿಮೆ
ಎಂಬ ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಏಕನವತಿತಮೋಽಧ್ಯಾಯಃ ॥



॥ ಋಷಯ ಊಚುಃ ॥

**ಸೂತಸೂತ ಮಹಾಪ್ರಾಜ್ಞ ಸಮಾಸ್ಸಂಜೀವಶಾಶ್ವತೀಃ ।**
**ಯದ್ವಯಂ ಪುಣ್ಯಸಮಯಂ ಶ್ರಾವಿತಾ ಜಗತೋ ಹಿತಂ ॥ ೧ ॥**

**ವದ ಭೂಯೋಽಪಿ ಭೂಯಿಷ್ಠಂ ಪಿಬಾಮ ಸ್ತ್ವಾವಕಂ ವಚಃ ।**
**ಪಾಯಂಪಾಯಂ ನ ತೃಪ್ಯಾಮೋ ವಯಂ ಸೂತ ತದುತ್ತಮಂ ॥ ೨ ॥**

॥ ಸೂತ ಉವಾಚ ॥

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।**
**ಸಂವಾದಮಾದಿಲೋಕಸ್ಯ ಜಗತಾಂ ಜಗದೀಶತುಃ ॥ ೩ ॥**

---

### ತೊಂಭತ್ತೊಂದನೆಯ ಅಧ್ಯಾಯವು

೧. ಋಷಿಗಳು ಹೇಳಿದರು—ಎಲೈ ಸೂತನೇ. ನೀನು ನಮಗೆ ಪುಣ್ಯಪ್ರದವಾದ ವಿಷಯಗಳನ್ನು ಹೇಳಿದುದರಿಂದ ಬಹುಕಾಲ ಬದುಕು.

೨. ಇನ್ನೂ ಬಹಳ ಉತ್ತಮವಾದ ವಿಷಯಗಳನ್ನೂ ಹೇಳು. ನಿನ್ನ ವಚೋಽಮೃತವನ್ನು ಪಾನಮಾಡುತ್ತೇವೆ. ನಿನ್ನ ಆ ಉತ್ತಮವಾದ ಮಾತನ್ನು ಕೇಳಿಕೇಳಿ ಎಷ್ಟು ಕೇಳಿದರೂ ತೃಪ್ತಿಯೇ ಉಂಟಾಗುವುದಿಲ್ಲ.

೩. ಸೂತನು ಹೇಳಿದನು—ಸ್ವಾಮಿಯು ಆದಿಲೋಕದಲ್ಲಿ ಮಾಡಿದ ಸಂವಾದ ರೂಪವಾದ ಪುರಾತನವಾದ ಕಥೆಯನ್ನು ಹೇಳುತ್ತೇನೆ, ಕೇಳಿರಿ.

ಷಟ್ಸಹಸ್ರಾಣಿ ಚೋಚ್ಛ್ರಾಯೇ ವಿಸ್ತಾರೇ ಚ ಪುನಸ್ತ್ರಯಂ ।
ಏವಂ ಯುಗಸಹಸ್ರಾಣಿ ಯೋಜನಾನಾಂ ವಿಧಾಯ ಚ ॥ ೪ ॥

ವಾಮಯಾ ದಂಷ್ಟ್ರಯೋದ್ಗೃಹ್ಯ ಚೋದ್ಧೃತಾಸೌ ವಸುಂಧರಾ ।
ದಿವ್ಯಂ ವರ್ಷಸಹಸ್ರಂ ವೈ ದಂಷ್ಟ್ರಯಾ ಧಾರಿತಾ ಮಹೀ
ಧರ್ಮಾಖ್ಯಾನಪ್ರಸಂಗೇನ ಸೋವಾಚ ವಿನಯಾದ್ವಿಭುಂ ॥ ೫ ॥

॥ ಧರೋವಾಚ ॥

ಏತೇ ದ್ವಾದಶಮಾಸಾ ವೈ ಪುಷ್ಟಿರ್ದಿನಶತತ್ರಯಂ ।
ತೇಷಾಂ ಕಿಮುತ್ತಮಂ ಪುಣ್ಯಂ ಪ್ರಿಯಂ ಚ ತವ ಕೇಶವ ॥ ೬ ॥

ಪವಿತ್ರಃ ಕಾರ್ತಿಕೋಮಾಸಸ್ತುಲಾಸಂಸ್ಥೇ ದಿವಾಕರೇ ।
ಮೇಷಸ್ಥೇ ಮಾಧವೋ ಮಾಸೋ ಭಾಸ್ಕರೇ ಪಠ್ಯತೇ ಬುಧೈಃ ॥ ೭ ॥

ಮಾರ್ಗಶೀರ್ಷೋಽಪಿ ಮಾಸಾನಾಂ ಪಾವನಃ ಪರಿಕೀರ್ತಿತಃ ।
ಏವಂ ಮಾಸಾಃ ಪವಿತ್ರಾಸ್ತೇ ವಾಸರಾಃ ಕೇಽಪಿ ಕೀರ್ತಿತಾಃ ॥ ೮ ॥

---

೪. ಆರು ಸಾವಿರ ಯೋಜನ ಎತ್ತರವೂ, ಮೂರು ಯೋಜನ ಅಗಲವೂ ಉಳ್ಳ ಸಾವಿರ ಯುಗಗಳನ್ನು ದೇವರು ಮಾಡಿದನು.

೫. ಎಡಗಡೆಯ ಕೋರೆದಾಡೆಯಿಂದ ಭೂಮಿಯನ್ನು ಹಿಡಿದು ಮೇಲಕ್ಕೆತ್ತಿದನು. ದೇವತೆಗಳ ಸಾವಿರ ವರ್ಷಗಳವರೆಗೂ, ಆ ಭೂಮಿಯನ್ನು ಸ್ವಾಮಿಯು ದಾಡೆಯ ಮೇಲೆಯೇ ಇಟ್ಟುಕೊಂಡಿದ್ದನು. ಆಗ ಹೇಳುತ್ತಿದ್ದ ಧರ್ಮದ ವಿಷಯದಲ್ಲಿ ಭೂಮಿಯು ಇಂತೆಂದಳು.

೬. ಭೂಮಿಯು ಹೇಳಿದಳು—ವರ್ಷಕ್ಕೆ ಹನ್ನೆರಡು ತಿಂಗಳುಗಳು. ಅವು ಮುನ್ನೂರ ಅರವತ್ತು ದಿನಗಳುಳ್ಳವು. ಅವುಗಳಲ್ಲಿ ಉತ್ತಮವಾದುದೂ, ಪುಣ್ಯವಾದುದೂ ಆದ ಮಾಸವಾವುದು? ನಿನಗೆ ಪ್ರಿಯವಾದ ಮಾಸವಾವುದು?

೭. ಸೂರ್ಯನು ತುಲೆಯಲ್ಲಿರುವಾಗ ಕಾರ್ತಿಕಮಾಸವೂ, ಮೇಷದಲ್ಲಿ ಸೂರ್ಯನಿರುವಾಗ ಬರುವ ವೈಶಾಖಮಾಸವೂ, ಬಹು ಪವಿತ್ರವಾದುದೆಂದು ವಿದ್ವಾಂಸರು ಹೇಳುತ್ತಾರೆ.

೮. ಮಾರ್ಗಶಿರಮಾಸವು ಪವಿತ್ರವಾದುದೆಂದೇ ಗಣಿಸಲ್ಪಟ್ಟಿದೆ. ಈ ರೀತಿ ಮಾಸಗಳು ಪವಿತ್ರವಾದುವು. ಇವುಗಳಲ್ಲಿ ಕೆಲವು ದಿನಗಳು ಬಹು ಪವಿತ್ರವಾದುವು.

ಯುಗಾದಯೋ ಯುಗಾನ್ತಾಶ್ಚ ತಥಾ ಕಲ್ಪಾದಯಃ ಪರೇ ।
ಸರ್ವೇಭ್ಯೋಽಪ್ಯಧಿಕಂ ಮಾಸಮೇತೇಭ್ಯೋ ದೇವ ಪಾವನಂ ॥ ೯ ॥

ಸರ್ವಯಜ್ಞಮಯಂ ಶ್ರೀಮನ್ನೇಕಂನಿಶ್ಚಿತ್ಯ ಮೇ ವದ ॥ ೧೦ ॥

॥ ಶ್ರೀ ವಾರಾಹ ಉವಾಚ ॥

ವಿಧಿನಾಽವಿಧಿನಾ ಚೈವ ಯೇ ಯಜನ್ತಿ ಸದಾ ಧರೇ ।
ಮಾಧವೇ ಮಾಸಿ ಮಾಂ ಭಕ್ತ್ಯಾ ತೈಸ್ತು ಪೂಜ್ಯೋಽಸ್ಮ್ಯಹಂ ಸದಾ ॥ ೧೧ ॥

ಹಿರಣ್ಯಾಕ್ಷೋ ಪರಾರೋಹೇ ಮಾಧವೇ ತು ಮಧುರ್ಹತಃ ।
ಆದಿದೈತ್ಯಾವುಭಾವೇತೌ ಹತ್ವಾ ತ್ವಂ ತು ಸಮುದ್ಧೃತಾ ॥ ೧೨ ॥

ತ್ರೇತಾಯುಗೇ ತ್ರಯೀಧರ್ಮೋ ಜ್ಞಾನಸವರ್ಣವ್ಯವಸ್ಥಿತಿಃ ।
ಮಾಧವೇ ಮಾಸಿ ಸಂಭೂತಾ ತಸ್ಮಾನ್ಮೇ ಮಾಧವಃ ಪ್ರಿಯಃ ॥ ೧೩ ॥

ತೃತೀಯಾಯಾಂ ಮಾಧವೇ ತು ಯುಗಂ ತ್ರೇತಾಭಿದಂ ಸಿತೇ ।
ಪ್ರವೃತ್ತಂ ಚ ತ್ರಯೀಧರ್ಮಃ ಪವಿತ್ರಸ್ತೇನ ಕೀರ್ತಿತಃ ॥ ೧೪ ॥

---

೯-೧೦. ಯುಗಾದಿ ಯುಗಾನ್ತ, ಅದೇ ರೀತಿ ಕಲ್ಪಾಂತ ಕಲ್ಪಾದಿ ಇವು ಪಾವನಗಳು. ಇವೆಲ್ಲಕ್ಕಿಂತಲೂ ಯಾವ ಮಾಸವು ಪಾವನವಾದುದು ಸರ್ವಯಜ್ಞ ಮಯವಾದುದಾವುದು? ಇದನ್ನು ನಿಶ್ಚಯಿಸಿ ನನಗೆ ಹೇಳು.

೧೧. ಶ್ರೀ ವರಾಹನು ಹೇಳಿದನು—ಯಾರು ವೈಶಾಖಮಾಸದಲ್ಲಿ ಶಾಸ್ತ್ರರೀತಿ ಯಿಂದಾಗಲಿ ಅಲ್ಲದಾಗಲಿ ಹೇಗೆ ಪೂಜಿಸಿದರೂ, ಆ ಪೂಜೆಯು ನನಗೆ ತೃಪ್ತಿ ಕರವಾದುದು.

೧೨. ವೈಶಾಖಮಾಸದಲ್ಲಿ ಹಿರಣ್ಯಾಕ್ಷ, ಮಧು, ಈ ಇಬ್ಬರು ಆದಿರಾಕ್ಷಸರು ಕೊಲ್ಲಲ್ಪಟ್ಟರು. ಆ ಮೇಲೆ ನಿನ್ನನ್ನು ಮೇಲಕ್ಕೆ ಎತ್ತಿದೆ.

೧೩. ತ್ರೇತಾಯುಗದಲ್ಲಿ ವೇದಗಳ ಜ್ಞಾನವೂ, ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರರ ವರ್ಣಗಳೂ, ವೈಶಾಖಮಾಸದಲ್ಲಿ ಉಂಟಾದುವು. ಆದ್ದರಿಂದ ವೈಶಾಖವು ನನಗೆ ಪ್ರಿಯವಾದುದು.

೧೪. ತ್ರೇತಾಯುಗದ ವೈಶಾಖಮಾಸದ ಶುದ್ಧ ತದಿಗೆಯ ದಿವಸ ವೇದ ಧರ್ಮವು ಹೊರಹೊಮ್ಮಿತು. ಆದ್ದರಿಂದ ಆ ತೃತೀಯೆಯು ಪವಿತ್ರವಾದುದು.

ಅಕ್ಷಯ್ಯಾ ಸೇವ್ಯತೇ ಲೋಕೇ ತೃತೀಯಾ ಹರಿವಲ್ಲಭಾ ।
ಸ್ನಾನೇ ದಾನೇಽರ್ಚನೇ ಶ್ರಾದ್ಧೇ ಜಪೇ ಪೂರ್ವಜತರ್ಪಣೇ ॥ ೧೫ ॥

ಯೇಽರ್ಚಯಂತಿ ಚ ವೈ ವಿಷ್ಣುಂ ಶ್ರಾದ್ಧಂ ಕುರ್ವಂತಿ ಯತ್ನತಃ ।
ತೇಷಾಂ ದದಾಮ್ಯಹಂ ಸರ್ವಂ ಯನ್ಮನೋಭೀಷ್ಟಮುತ್ತಮಂ ॥ ೧೬ ॥

ಯೇ ದದತ್ಯಪಿ ದಾನಾನಿ ಧನ್ಯಾಸ್ತೇ ಧಾರ್ಮಿಕಾ ನರಾಃ ।
ಯೇ ಯಜಂತಿ ಹರಿಂ ನಿತ್ಯಮಧ್ವರೈರ್ವಿವಿಧೈರಪಿ ॥ ೧೭ ॥

ಮಾಧವೇ ಯಜತೇ ಯೋ ಮಾಂ ತೇಭ್ಯಸ್ತಸ್ಯಾಧಿಕಂ ಫಲಂ ।
ಸ್ನಾನಂ ದಾನಂ ಜಪೋ ಹೋಮಃ ತಪೋಯಜ್ಞಾದಿಕಂ ವ್ರತಂ ॥ ೧೮ ॥

ವೈಶಾಖೇ ಯತ್ಕೃತಂ ದೇವಿ ತಸ್ಯ ಪುಣ್ಯಫಲಂ ಶೃಣು ।
ಮನ್ವಂತರಾಣಾಂ ಕೋಟೀಸ್ತು ದಶ ಪಂಚ ಚ ಸಪ್ತ ಚ ॥ ೧೯ ॥

---

೧೫. ಆ ತದಿಗೆಗೆ ಅಕ್ಷತದಿಗೆ ಎಂದು ಹೆಸರು. ಅದು ಹರಿಗೆ ಪ್ರೀತಿಕರ ವಾದುದು. ಆ ದಿನ ಸ್ನಾನ, ದಾನ, ಪೂಜೆ, ಶ್ರಾದ್ಧ, ಜಪ, ಪಿತೃತರ್ಪಣ. ಇವುಗ ಳಿಂದ ವಿಷ್ಣುವನ್ನು ಯಾರು ಪೂಜಿಸುತ್ತಾರೆಯೋ ಅವರಿಗೆ ಬೇಕಾದುದನ್ನು ನಾನು ಕೊಡುತ್ತೇನೆ.

೧೭. ಆ ದಿನ ದಾನಮಾಡಿದವರೂ, ಯಾಗಮಾಡಿದವರೂ, ಬಹು ಧನ್ಯರು, ಧಾರ್ಮಿಕರು.

೧೮. ವೈಶಾಖಮಾಸದಲ್ಲಿ ಸ್ನಾನ, ದಾನ, ಜಪ, ಹೋಮ, ತಪಸ್ಸು, ಯಜ್ಞ, ವ್ರತಗಳಿಂದ ಯಾರು ನನ್ನನ್ನು ತೃಪ್ತಿಪಡಿಸುತ್ತಾರೋ ಅವರಿಗೂ ಅಧಿಕವಾದ ಫಲವು ಬರುತ್ತದೆ.

೧೯. ವೈಶಾಖದಲ್ಲಿ ಒಳ್ಳೆಯ ಕೆಲಸಮಾಡಿದವನಿಗೆ ಬರುವ ಫಲವನ್ನು ಹೇಳು ತ್ತೇನೆ. ಕೇಳು. ಆಗ ಒಳ್ಳೆಯ ಕೆಲಸಮಾಡಿದವನು ಐದು ಕೋಟಿ ಮನ್ವಂತರ, ಹತ್ತು ಕೋಟಿ ಮನ್ವಂತರ, ಏಳು ಕೋಟಿ ಮನ್ವಂತರ ಎಂದರೆ ಇಪ್ಪತ್ತೆರಡು ಕೋಟಿ ಮನ್ವಂತರಗಳ ಕಾಲ ನನ್ನ ಸನ್ನಿಧಿಯಲ್ಲಿ ಸುಖವಾಗಿರುತ್ತಾನೆ. ಭಯವೇ ಇಲ್ಲ.

ಮತ್ಸಾನ್ನಿಧ್ಯಗತಾಸ್ತೇಽಪಿ ತಿಷ್ಠಂತಿ ಭಯವರ್ಜಿತಾಃ ।
ಯದ್ಯಪಿ ಸ್ಸ್ವಗ್ರ್ರಹಾಸ್ಸರ್ವೇ ಕ್ರೂರಾ ಜನ್ಮವ್ಯಯಾಷ್ಟಕಾಃ ॥ ೨೦ ॥

ಪ್ರಾತಸ್ಸ್ನಾನೇನ ವೈಶಾಖೇ ಸರ್ವೇ ಸೌಮ್ಯಾ ಭವಂತಿ ವೈ ।
ವೈಶಾಖೇ ಮಾಸಿ ಯೋ ವಿಪ್ರಾನ್ಭೋಜಯೇದ್ಭಕ್ತಿತತ್ಪರಃ ।
ಸಿಕ್ಥೇ ಸಿಕ್ಥೇ ಭವೇತ್ತೃಪ್ತಿಃ ಪಿತ್ರೂಣಾಂ ಯುಗಸಂಖ್ಯಯಾ ॥ ೨೧ ॥

ಯಚ್ಛನ್ತಿ ತತ್ರ ಮಧುರಾಧಿಕಭೋಜನಾನಿ
ವಿಪ್ರೇಷು ವೈ ಯವತಿಲೋದಕಭೋಜನಾಚ್ಚ ।
ಛತ್ರಾಂಬರಾಣಿ ಪದರಕ್ಷಣಭೂಷಣಾನಿ
ಧನ್ಯಾಸ್ತ ಏವ ಪರಿತೋಷಕರಾ ಹಿ ವಿಷ್ಣೋಃ ॥ ೨೨ ॥

ವಿಶೇಷಾದಿಹ ದಾತವ್ಯಾಸ್ತಿಲಾ ಮಧುಸಮನ್ವಿತಾಃ ।
ಧರ್ಮಾಯ ಬೃಹತೇ ದೀರ್ಘಾ ದುರಿತಕ್ಷಯ ಹೇತವೇ ॥ ೨೩ ॥

ಏವಂಕೃತೇನ ಯತ್ಪುಣ್ಯಂ ಪ್ರಾಪ್ಯತೇ ಮನುಜೈಶ್ಚ ತೈಃ ।
ತತ್ಕೈರ್ಗಣಯಿತುಂ ಶಕ್ಯಂ ವರ್ಷಕೋಟಿಶತೈರಪಿ ॥ ೨೪ ॥

---

೨೦. ಗ್ರಹಗಳೆಲ್ಲವೂ, ಜನ್ಮ, ವ್ಯಯ, ಅಷ್ಟಮರಾಶಿಗಳಲ್ಲಿದ್ದು ಕ್ರೂರವಾಗಿದ್ದರೆ ಅವು ಈ ವೈಶಾಖದ ಪ್ರಾತಃಸ್ನಾನದಿಂದ ಕ್ರೂರತನವನ್ನು ಬಿಟ್ಟು ಸೌಮ್ಯವಾಗುತ್ತವೆ.

೨೧. ವೈಶಾಖಮಾಸದಲ್ಲಿ ಭಕ್ತಿಯಿಂದ ಅನ್ನ ಹಾಕಿದರೆ ಅದು ಪಿತೃಗಳಿಗೆ ಒಂದೊಂದು ಅಗುಳಿಗೂ ಒಂದೊಂದು ಯುಗದಂತೆ ತೃಪ್ತಿಕೊಡುತ್ತದೆ.

೨೨. ವೈಶಾಖಮಾಸದಲ್ಲಿ ಯಾರು ಬ್ರಾಹ್ಮಣರಿಗೆ ಮೃಷ್ಟಾನ್ನವನ್ನು ಊಟಮಾಡಿಸುತ್ತಾರೋ ಮತ್ತು ಛತ್ರಿ, ಬಟ್ಟೆ, ಕೆರ ಮುಂತಾದುವನ್ನು ದಾನ ಮಾಡುತ್ತಾರೋ ಅವರು ವಿಷ್ಣುವಿಗೆ ಪ್ರೀತಿಯನ್ನುಂಟುಮಾಡತಕ್ಕವರೆಂದು ತಿಳಿ.

೨೩. ಈ ವೈಶಾಖದಲ್ಲಿ ಮಧುಪದಾರ್ಥದಿಂದ ಕೂಡಿದ ಎಳ್ಳನ್ನು ದಾನಮಾಡಬೇಕು. ಅದು ಹೆಚ್ಚಾದ ಧರ್ಮವನ್ನೂ ಕೊಟ್ಟು ಪಾಪವನ್ನು ನಾಶಮಾಡುತ್ತದೆ.

೨೪. ಹೀಗೆ ಮಾಡಿದರೆ ಮನುಷ್ಯರಿಗೆ ಬರುವ ಪುಣ್ಯವನ್ನು ಕೋಟಿವರ್ಷಗಳ ಕಾಲವಾದರೂ ಲೆಕ್ಕಮಾಡಲು ಸಾಧ್ಯವಿಲ್ಲ.

ಪುತ್ರಪೌತ್ರಾದಿ ಸಂಪತ್ತಿಂ ದೀರ್ಘಾಯುಶ್ಚ ಯಥೇಪ್ಸಿತಂ ।
ಇಹಾಪ್ನೋತಿ ಪರತ್ರಾಪಿ ಮಾಮೇವ ಪ್ರತಿಪದ್ಯತೇ ॥ ೨೫ ॥

ಯಃ ಪರಿತ್ಯಜ್ಯ ವೈಶಾಖವ್ರತಮನ್ಯದುಪಾಚರೇತ್ ।
ಸ ಕರಸ್ಥಂ ಮಹಾರತ್ನಂ ಹಿತ್ವಾ ಲೋಷ್ಟಂ ಹಿ ಯಾಚತೇ ॥ ೨೬ ॥

॥ ಸೂತ ಉವಾಚ ॥

ಏವಂ ಸಭಗವಾನ್ಪೂರ್ವಮಾದಿದೇವೋಽವದದ್ವಿಭುಃ ।
ಮಾಧವಂ ಮಾಸಮುದ್ದಿಶ್ಯ ಜಗತ್ಯಾಂ ಜಗದೀಶ್ವರಃ ॥ ೨೭ ॥

ಕಿಮತ್ರ ಬಹುನೋಕ್ತೇನ ನ ತದಸ್ತಿಮಹೀಸುರಾಃ ।
ಯದಪ್ರಾಪ್ಯಂ ಭವೇನ್ಮಾಸಿ ಮಾಧವೇ ಮಾಧವಾರ್ಚನಾತ್ ॥ ೨೮ ॥

ಶೃಣು ವಿಪ್ರ ಪುರಾವೃತ್ತಮಿಹಾರ್ಥೇ ಪರಮಾದ್ಭುತಂ ।
ಬ್ರಾಹ್ಮಣಸ್ಯ ಚ ಸಂವಾದಂ ಯಮಸ್ಯ ಚ ಮಹಾತ್ಮನಃ ॥ ೨೯ ॥

---

೨೫. ಅವನು ಈ ಲೋಕದಲ್ಲಿ ಮಕ್ಕಳು, ಮೊಮ್ಮಕ್ಕಳು, ಸಂಪತ್ತು ದೀರ್ಘಾಯುಸ್ಸು ಇನ್ನೂ ಅನೇಕ ಇಷ್ಟಾರ್ಥಗಳನ್ನು ಹೊಂದಿ ಪರಲೋಕದಲ್ಲಿ ನನ್ನನ್ನೇ ಹೊಂದುತ್ತಾನೆ.

೨೬. ಯಾವನು ವೈಶಾಖವ್ರತವನ್ನು ಬಿಟ್ಟು ಬೇರೆವ್ರತವನ್ನು ಕೈಗೊಳ್ಳುತ್ತಾನೋ ಆತನು ಕೈಯಲ್ಲಿರುವ ರತ್ನವನ್ನು ಬಿಟ್ಟು ಮಣ್ಣು ಹೆಂಟೆಯನ್ನು ಅಪೇಕ್ಷಿಸುತ್ತಾನೆ.

೨೭ ಈ ರೀತಿಯಾಗಿ ಪೂರ್ವದಲ್ಲಿ ಆದಿದೇವನಾದ ಸ್ವಾಮಿಯು ವೈಶಾಖ ಮಾಸದ ಮಹಿಮೆಯನ್ನು ಭೂಮಿಯೊಡನೆ ಹೇಳಿದ್ದಾನೆ.

೨೮. ಎಲೈ ಬ್ರಾಹ್ಮಣರಿರಾ! ಬಹು ಹೇಳಿದುದರಿಂದ ಉಪಯೋಗವೇನು? ವೈಶಾಖಮಾಸದಲ್ಲಿ ವಿಷ್ಣುವನ್ನು ಪೂಜಿಸಿದರೆ ಸಿಕ್ಕದಿರತಕ್ಕದೇ ಪ್ರಪಂಚದಲ್ಲಿ ಇಲ್ಲ.

೨೯. ಈ ವಿಷಯದಲ್ಲಿ ಬ್ರಾಹ್ಮಣನಿಗೂ, ಯಮನಿಗೂ ನಡೆದ ಒಂದು ಕಥೆಯನ್ನು ಹೇಳುತ್ತೇನೆ, ಕೇಳು.

ಮಧ್ಯದೇಶೇ ಮಹದ್ಗ್ರಾಮೋ ಬ್ರಾಹ್ಮಣಾನಾಂ ಬಭೂವ ಹ ।
ಗಂಗಾಯಮುನಯೋರ್ಮಧ್ಯೇ ಯಾಮುನಸ್ಯ ಗಿರೇರಧಃ ॥ ೩೦ ॥

ವಿದ್ವಾಂಸಸ್ತತ್ರ ಭೂಯಿಷ್ಠಾ ವಿದ್ವಾಂಸಶ್ಚಾವಸಂಸ್ತದಾ ।
ಅಥ ಪ್ರಾಹ ಯಮಃ ಕಂಚಿತ್ಪುರುಷಂ ಕೃಷ್ಣಪಿಂಗಳಂ ॥ ೩೧ ॥

ರಕ್ತಾಕ್ಷಮೂರ್ಧ್ವಚಿಕುರಂ ಕಾಕಜಂಘಾಲ್ಪನಾಸಿಕಂ ।
ಗಚ್ಛ ತ್ವಂ ಭೋ ಮಹದ್ಗ್ರಾಮಂ ತತೋ ಬ್ರಾಹ್ಮಣಮಾನಯ ॥ ೩೨ ॥

ವಸಿಷ್ಠಗೋತ್ರಸಂಭೂತಂ ನಾಮತೋ ಯಜ್ಞದತ್ತಕಂ ।
ಶಮೇ ನಿವಿಷ್ಟಂ ವಿದ್ವಾಂಸಂ ಯಜ್ಞಕರ್ಮವಿಶಾರದಂ ॥ ೧೩ ॥

ನ ಚಾನ್ಯಮಾನಯೇಥಾಸ್ತ್ವಂ ಸಗೋತ್ರಂ ತಸ್ಯ ಪಾರ್ಶ್ವತಃ ।
ಸಂಹಿತಾದಿಗುಣಸ್ತೇನ ತುಲ್ಯೋಽಧ್ಯಯನಜನ್ಮನಾ ॥ ೩೪ ॥

ಆಕೃತ್ಯಾ ಚ ತಥಾ ಚಿಹ್ನೈಃ ಸಮಸ್ತೈರೇವ ಸತ್ತಮಃ ।
ತಮಾನಯ ಯಥೋದ್ದಿಷ್ಟಾ ಪೂಜಾ ಕಾರ್ಯಾ ಹಿ ತಸ್ಯ ಮೇ ॥ ೩೫ ॥

---

೩೦. ಗಂಗಾಯಮುನೆಗಳ ಮಧ್ಯದೇಶದಲ್ಲಿ ಯಮುನೆಯ ಪಕ್ಕದ ತಪ್ಪಲಿನಲ್ಲಿ ಬ್ರಾಹ್ಮಣರ ಒಂದು ದೊಡ್ಡ ಗ್ರಾಮವಿದ್ದಿತು. ಅದಕ್ಕೆ ಮಹದ್ಗ್ರಾಮವೆಂದು ಹೆಸರು.

೩೧–೩೩. ಆಗ ಯಮನು ಒಬ್ಬ ಕಪ್ಪು ಹೆಚ್ಚಾಗಿ ಕೆಂಚಗಿರುವ ಕೆಂಪಾದ ಕಣ್ಣುಳ್ಳ, ಕೂದಲುಗಳು ಮೇಲು ಮುಖವಾಗಿ ನಿಂತಿರುವ ಕಾಗೆಯ ಕಾಲಿನಂತೆ ಕಾಲುಗಳುಳ್ಳ ಸಣ್ಣ ಮೂಗುಳ್ಳವನನ್ನು ಕರೆದು ಹೇಳಿದನು. ಅಯ್ಯಾ ! ನೀನು ಆ ಮಹದ್ಗ್ರಾಮಕ್ಕೆ ಹೋಗು. ಅಲ್ಲಿ ವಸಿಷ್ಠಗೋತ್ರದವನು, ಯಜ್ಞದತ್ತನೆಂಬ ಬ್ರಾಹ್ಮಣನಿರುವನು. ಅವನು ಶಮವನ್ನು ಹೊಂದಿ ವಿದ್ವಾಂಸನಾಗಿ ಅನೇಕ ಯಜ್ಞಗಳನ್ನು ಮಾಡಿದ್ದಾನೆ. ಆ ಕೆಲಸದಲ್ಲಿ ಬುದ್ಧಿವಂತನು. ಅವನನ್ನು ಕರೆದುಕೊಂಡು ಬಾ.

೩೪–೩೫. ಅವನ ಪಕ್ಕದ ಮನೆಯಲ್ಲಿ ಅದೇ ಗೋತ್ರದವನಾದ ಸಂಹಿತೆ ಮುಂತಾದುವನ್ನು ಅಧ್ಯಯನ ಮಾಡಿರುವ ಅವನಂತೆಯೇ ಆಕಾರ, ಜನ್ಮ ಗುಣಗಳು, ಚಿಹ್ನೆಗಳು ಸಮಸ್ತದಿಂದಲೂ ಹೋಲುವ ಮತ್ತೊಬ್ಬನಿರುವನು. ಅವನನ್ನು ಕರೆತರಬೇಡ. ಇವನನ್ನು ಕರೆದುಕೊಂಡು ಬಾ ಅವನಿಗೆ ನಾನು ಸತ್ಕಾರಮಾಡಿ ಕ್ರಮವಾಗಿ ಪೂಜೆಮಾಡಬೇಕು. ಎಂದನು.

ಸ ಗತ್ವಾ ಪ್ರತಿಕೂಲಂ ತು ಚಕಾರ ಯಮಶಾಸನಂ ।
ತಮೇವ ಚಾನಯಾಮಾಸ ಪ್ರತಿಷಿದ್ಧೋ ಯಮೇನ ಯಃ ॥ ೩೬ ॥

ತಸ್ಮೈ ಯಮಸ್ಸಮುತ್ಥಾಯ ಪೂಜಾಂ ಕೃತ್ವಾ ಚ ಧರ್ಮವಿತ್ ।
ಪ್ರೋವಾಚ ನೀಯತಾಮೇಷಃ ಸೋಽನ್ಯತ್ರಾನೀಯತಾಮಿತಿ ॥ ೩೭ ॥

॥ ಸೂತ ಉವಾಚ ॥

ಏವಮುಕ್ತೇ ತು ವಚನೇ ಧರ್ಮರಾಜೇನ ಸ ದ್ವಿಜಃ ।
ಉವಾಚ ತರ್ಮರಾಜಂ ತಂ ನಿರ್ವಿಣ್ಣೋ ಗಮನೇನ ವೈ ॥ ೩೮ ॥

॥ ಬ್ರಾಹ್ಮಣ ಉವಾಚ ॥

ಕಸ್ಮಾದಹಮಿಹಾನೀತಃ ಕಸ್ಮಾತ್ಪ್ರೇಷಯಸೇ ಪುನಃ ।
ಗನ್ತುಂ ನೈವೋಽತ್ಸಹೇ ತತ್ರ ಮರ್ತ್ಯಲೋಕೇ ಪುನಃ ಪ್ರಭೋ ॥ ೩೯ ॥

॥ ಯಮ ಉವಾಚ ॥

ಇಹ ಕ್ಷೀಣಾಯುಷಾಂ ಪುಂಸಾಂ ವಾಸಃ ಪುಣ್ಯವತಾಂ ಭವೇತ್ ।
ಅಯಂ ನೋ ಧರ್ಮರಾಜಸ್ಯ ಲೋಕೇ ಧರ್ಮಃ ಪ್ರಕೀರ್ತಿತಃ ॥ ೪೦ ॥

---

೩೬. ಆ ದೂತನು ಹೋಗಿ ಯಮನ ಅಪ್ಪಣೆಗೆ ವಿರುದ್ಧವಾಗಿ ಯಮನು ಯಾರನ್ನು ಬೇಡವೆಂದನೋ ಅವನನ್ನೇ ಕರೆತಂದನು.

೩೭. ಯಮನು ಅವನನ್ನು ನೋಡಿದ ಕೂಡಲೇ ಎದ್ದು ಗೌರವಿಸಿ ವಿಧಿವತ್ತಾಗಿ ಪೂಜೆಮಾಡಿದನು. ಆಳುಗಳನ್ನು ಕುರಿತು ಈತನನ್ನು ಸ್ವಲ್ಪ ಬೇರೆ ಕಡೆಗೆ ಕರೆದುಕೊಂಡು ಹೋಗಿ ಕರತನ್ನಿರೆಂದನು.

೩೮. ಸೂತನು ಹೇಳಿದನು– ಹೀಗೆ ಯಮನು ಹೇಳಿದುದನ್ನು ಕೇಳಿ ಆ ಬ್ರಾಹ್ಮಣನು ಹೋಗಲು ದುಃಖಗೊಂಡು ಇಂತೆಂದನು.

೩೯. ಬ್ರಾಹ್ಮಣನು ಹೇಳಿದನು–ನನ್ನನ್ನೇಕೆ ಇಲ್ಲಿಗೆ ಕರೆತಂದೆ ? ಮತ್ತೇಕೆ ಅಲ್ಲಿಗೆ ಕಳುಹಿಸುತ್ತೀಯೆ ? ನಾನು ಮತ್ತೆ ಮನುಷ್ಯಲೋಕವನ್ನು ಹೊಂದಲು ಇಷ್ಟಪಡುವುದಿಲ್ಲ

೪೦. ಯಮನು ಹೇಳಿದನು- ಪುಣ್ಯವಂತರಾಗಿ ಆಯುಸ್ಸು ಮುಗಿದಿರುವವರಿಗೆ ಇಲ್ಲಿ ವಾಸವು ಎಂದು ಈ ಲೋಕದಲ್ಲಿ ವಿಹಿತವಾಗಿದೆ.

ಸೌಖ್ಯಭೂಮಿರಿಯಂ ಸ್ವರ್ಗೇ ಧರ್ಮರಾಜೋ ಮಹೀಶ್ವರಃ ।
ಪುಣ್ಯಾಪುಣ್ಯಾನುಸಾರೇಣ ಜನ್ತೂನಾಂ ಸುಖದುಃಖದಃ ॥ ೪೧ ॥

ಪಾಪಿನಾಂ ಯಮರೂಪೋಽಸ್ಮಿ ನೃಣಾಂ ನಿರಯದಾಯಕಃ ।
ತಥಾ ಪುಣ್ಯವತಾಂ ಸೌಖ್ಯಸ್ವರ್ಗದೋ ಧರ್ಮಮೂರ್ತಿಮಾನ್ ॥ ೪೨ ॥

ಗಚ್ಛ ವಿಪ್ರ ತ್ವಮದ್ಯೈವ ನಿಲಯಂ ಸ್ವಂ ಯಥಾಗತಃ ।
ಅದ್ಯಾಪ್ಯಸ್ತಿ ದಶವರ್ಷಾಣಿ ಹ್ಯಾಯುಸ್ತೇ ಪರಿಕೀರ್ತಿತಂ ॥ ೪೩ ॥

ಕ್ಷಯೇ ತವಾಯುಷಃ ಪ್ರಾಪ್ತಿರ್ಲೋಕಸ್ಯಾಸ್ಯ ಭವಿಷ್ಯತಿ ।
ಪ್ರಷ್ಟವ್ಯಂ ಚೇತ್ತ್ವಯಾ ಹ್ಯನ್ಯತ್ಪೃಚ್ಛಸ್ವ ಪ್ರಬ್ರವೀಮಿ ತೇ ॥ ೪೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಏಕನವತಿತಮೋಽಧ್ಯಾಯಃ

---

೪೧. ಸ್ವರ್ಗದಲ್ಲಿ ಇದೇ ಸೌಖ್ಯಭೂಮಿಯು. ಇಲ್ಲಿಗೆ ರಾಜನು ಧರ್ಮರಾಜನು. ಪ್ರಾಣಿಗಳಿಗೆ ಅವುಗಳ ಪಾಪಪುಣ್ಯಗಳಿಗನುಗುಣವಾಗಿ ಫಲ ಕೊಡುತ್ತೇನೆ.

೪೨. ಪಾಪಿಗಳಿಗೆ ಯಮರೂಪನಾಗಿ ನರಕವನ್ನೂ, ಪುಣ್ಯವಂತರಿಗೆ ಧರ್ಮಮೂರ್ತಿಯಾಗಿ ಸ್ವರ್ಗವನ್ನೂ ಕೊಡುತ್ತೇನೆ.

೪೩. ಎಲೈ ಬ್ರಾಹ್ಮಣನೇ ನೀನು ಬಂದಂತೆಯೇ ನಿನ್ನ ಮನೆಗೆ ಹೋಗು ನಿನಗೆ ಇನ್ನೂ ಹತ್ತು ವರ್ಷಗಳ ಆಯಸ್ಸು ಉಳಿದಿದೆ.

೪೪. ನಿನ್ನ ಆಯಸ್ಸು ಕ್ಷೀಣವಾಗುತ್ತಲೂ, ಈ ಲೋಕವು ಲಭಿಸುತ್ತದೆ ನೀನು ಮತ್ತೇನಾದರೂ ಕೇಳಬೇಕೆಂದಿದ್ದರೆ ಕೇಳು. ಅದನ್ನು ನಿನಗೆ ಹೇಳುತ್ತೇನೆ. ಎಂದು ಹೇಳಿದನು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೆಂಬ
ತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ದ್ವಿನವತಿತಮೋऽಧ್ಯಾಯಃ ॥



॥ ಬ್ರಾಹ್ಮಣ ಉವಾಚ ॥

**ಯತ್ಕೃತ್ವಾ ಸುಮಹತ್ಪುಣ್ಯಂ ಸ್ವರ್ಗಸ್ಸ್ಯಾದ್ಬ್ರೂಹಿ ತನ್ಮಮ ।**
**ಸರ್ವಸ್ಯ ತ್ವಂ ಪ್ರಮಾಣಂ ಚ ಧರ್ಮಾಧರ್ಮವಿನಿಶ್ಚಯೇ ॥ ೧ ॥**

**ಯದಿ ದೇವ ಮಯಾ ಸಮ್ಯಗ್ಗನ್ತವ್ಯಂ ನಿಜಮಂದಿರಂ ।**
**ತದ್ಬ್ರೂಹಿ ಕರ್ಮಣಾ ಕೇನ ಪತಂತಿ ನರಕೇ ನರಾಃ ।**
**ವ್ರಜಂತಿ ಕೇನ ಚ ಸ್ವರ್ಗಂ ತತ್ಸರ್ವಂ ಕೃಪಯಾ ವದ ॥ ೨ ॥**

॥ ಯಮ ಉವಾಚ ॥

**ಕರ್ಮಣಾ ಮನಸಾ ವಾಚಾ ಯೇ ಧರ್ಮವಿಮುಖಾ ನರಾಃ ।**
**ವಿಷ್ಣುಭಕ್ತಿವಿಹೀನಾ ಯೇ ತೇ ವೈ ನಿರಯಗಾಮಿನಃ ॥ ೩ ॥**

---

### ತೊಂಭತ್ತೆರಡನೆಯ ಅಧ್ಯಾಯವು

೧. ಬ್ರಾಹ್ಮಣನು ಹೇಳಿದನು- ಯಾವ ಮಹಾಪುಣ್ಯವನ್ನು ಮಾಡಿದರೆ ಸ್ವರ್ಗವು ಸಿಕ್ಕುತ್ತದೆ ? ಎಲ್ಲದಕ್ಕೂ ನೀನೇ ಪ್ರಮಾಣಭೂತನು. ಧರ್ಮ ಅಧರ್ಮಗಳನ್ನು ನಿಶ್ಚಯಿಸತಕ್ಕವನಲ್ಲವೇ ? ಅವೆಲ್ಲವನ್ನೂ ನನಗೆ ಹೇಳು

೨. ನಾನು ನನ್ನ ಮನೆಗೆ ಹೋಗಬೇಕಾದ ಪಕ್ಷದಲ್ಲಿ ಯಾವ ಕೆಲಸವನ್ನು ಮಾಡಿದರೆ ಜನರು ನರಕವನ್ನು ಹೊಂದುತ್ತಾರೆ ? ಯಾವ ಕೆಲಸಮಾಡಿದರೆ ಸ್ವರ್ಗವನ್ನು ಹೊಂದುತ್ತಾರೆ ? ಎಂಬುದನ್ನು ಕೃಪೆಯಿಂದ ಹೇಳು.

೩. ಯಮನು ಹೇಳಿದನು– ಯಾವ ಮನುಷ್ಯರು ಮನೋವಾಕ್ಕಾಯಗಳಿಂದ ಧರ್ಮದಲ್ಲಿ ಆಸಕ್ತರಾಗಿರುವುದಿಲ್ಲವೋ ಅವರು ನರಕಭಾಗಿಗಳಾಗುತ್ತಾರೆ.

ಪಶ್ಯಂತಿ ಭೇದಬುದ್ಧ್ಯಾ ಯೇ ಬ್ರಹ್ಮಾಣಂ ಶಂಕರಂ ಹರಿಂ ।
ವಿರಕ್ತಾ ವಿಷ್ಣುವಿದ್ಯಾಸು ನರಾ ನಿರಯಗಾಮಿನಃ ॥ ೪ ॥

ಕ್ಷೇತ್ರವೃತ್ತಿಗೃಹಚ್ಛೇದಂ ಪ್ರೀತಿಚ್ಛೇದಂ ಚ ಯೇ ನರಾಃ ।
ಆಶಾಚ್ಛೇದಂ ಚ ಕುರ್ವಂತಿ ತೇ ನರಾ ನರಕೌಕಸಃ ॥ ೫ ॥

ಆಗತಾನ್ಭೋಜನಾರ್ಥಂ ವೈ ಬ್ರಾಹ್ಮಣಾನ್ವೃತ್ತಿಕರ್ಶಿತಾನ್ ।
ಯಃ ಪರೀಕ್ಷೇತ ಮೂಢಾತ್ಮಾ ಸ ಜ್ಞೇಯೋ ನರಕಾತಿಥಿಃ ॥ ೬ ॥

ಅನಾಥಂ ವೈಷ್ಣವಂ ದೀನಂ ರೋಗಾರ್ತಂ ವೃದ್ಧಮೇವ ಚ ।
ನಾನುಕಂಪಯತೇ ಮೂಢಃ ಸಜ್ಞೇಯೋ ನರಕಾತಿಥಿಃ ॥ ೭ ॥

ನಿಯಮಾಂಸ್ತು ಸಮಾದಾಯ ಯಃ ಪಶ್ಚಾದಜಿತೇಂದ್ರಿಯಃ ।
ವಿಲೋಪಯತಿ ಮೂಢಾತ್ಮಾ ಸ ವೈ ನಿರಯಭಾಜನಂ ॥ ೮ ॥

---

೪. ಯಾರು ಶಿವ, ವಿಷ್ಣು, ಬ್ರಹ್ಮರನ್ನು ಭೇದವಿಟ್ಟು ನೋಡುತ್ತಾರೋ ವೈಷ್ಣವ ವಿದ್ಯೆಯಲ್ಲಿ ಆಸಕ್ತರಾಗಿರುವುದಿಲ್ಲವೋ, ಅವರು ನರಕವನ್ನು ಹೊಂದುತ್ತಾರೆ.

೫. ಯಾರು ಕ್ಷೇತ್ರಗಳನ್ನು ನಾಶಮಾಡುತ್ತಾರೋ, ಮನೆಯನ್ನು ಹಾಳು ಮಾಡುತ್ತಾರೋ, ಒಬ್ಬರಿಗೊಬ್ಬರಿಗಿರುವ ಸ್ನೇಹವನ್ನು ನಾಶಮಾಡುತ್ತಾರೋ, ಆಶೆಯನ್ನು ಹಾಳುಮಾಡುತ್ತಾರೋ, ಅವರೆಲ್ಲರೂ ನರಕಕ್ಕೆ ಹೋಗುತ್ತಾರೆ.

೬. ಜೀವನಕ್ಕೆ ಬೇರೆ ಮಾರ್ಗವಿಲ್ಲದೆ ಮನೆಗೆ ಊಟಕ್ಕೋಸ್ಕರ ಬಂದ ಬ್ರಾಹ್ಮಣನನ್ನು ಪರೀಕ್ಷೆಮಾಡುವ ಮೂಢನು ನರಕಕ್ಕೆ ಹೋಗುತ್ತಾನೆ.

೭. ಅನಾಥನನ್ನೂ, ವೈಷ್ಣವನನ್ನೂ, ದೀನನನ್ನೂ, ರೋಗಿಯನ್ನೂ. ಮುದುಕನನ್ನೂ ನೋಡಿ ಯಾವ ಮೂಢನು ನೋಡಿ ದಯೆತೋರುವುದಿಲ್ಲವೋ ಅವನು ನರಕಭಾಗಿಯು.

೮. ವ್ರತನಿಯಮವನ್ನು ಮೊದಲು ಕೈಗೊಂಡು ಆಮೇಲೆ ಇಂದ್ರಿಯ ದೌರ್ಬಲ್ಯದಿಂದ ಅದನ್ನು ಲೋಪಮಾಡುವವನು ನರಕಭಾಗಿಯಾಗುತ್ತಾನೆ.

ಶೃಣು ವಿಪ್ರ ಯಥಾ ಯಾಂತಿ ನರಾಃ ಸ್ವರ್ಗಂ ದಯಾಲವಃ ।
ಸಮಾಸೇನೈವ ವಕ್ಷ್ಯಾಮಿ ಕಿಂಚಿತ್ತೇ ಗೌರವಾದಹಂ ॥ ೯ ॥

ಯೇಽರ್ಚಯಂತಿ ಹರಿಂ ದೇವಂ ವಿಷ್ಣುಂ ಜಿಷ್ಣುಂ ಸನಾತನಂ ।
ನಾರಾಯಣಮಜಂ ದೇವಂ ವಿಷ್ಣುರೂಪಂ ಚತುರ್ಭುಜಂ ॥ ೧೦ ॥

ಧ್ಯಾಯಂತಿ ಪುರುಷಂ ದಿವ್ಯಮಚ್ಯುತಂ ಯೇ ಸ್ಮರಂತಿ ಚ ।
ಲಭಂತೇ ತೇ ಹರಿಸ್ಥಾನಂ ಶ್ರುತಿರೇಷಾ ಸನಾತನೀ ॥ ೧೧ ॥

ಇದಮೇವ ಹಿ ಮಾಂಗಲ್ಯಮಿದಮೇವ ಧನಾರ್ಜನಂ ।
ಜೀವಿತಸ್ಯ ಫಲಂ ಚೈತದ್ಯದ್ದಾಮೋದರಕೀರ್ತನಂ ॥ ೧೨ ॥

ಕೀರ್ತನಾದ್ದೇವದೇವಸ್ಯ ವಿಷ್ಣೋರಮಿತತೇಜಸಃ ।
ದುರಿತಾನಿ ವಿಲೀಯಂತೆ ತಮಾಂಸೀವ ದಿನೋದಯೇ ॥ ೧೩ ॥

---

೯. ಎಲೈ ಬ್ರಾಹ್ಮಣನೇ ನಿನ್ನಲ್ಲಿರುವ ಗೌರವದಿಂದ ನಾನು ದಯೆಯುಳ್ಳವನು. ಜನರು ಸ್ವರ್ಗವನ್ನು ಹೇಗೆ ಹೊಂದುವರೆಂಬುದನ್ನು ಸಂಕ್ಷೇಪದಿಂದ ಹೇಳುತ್ತೇನೆ. ಕೇಳು.

೧೦-೧೧. ಸ್ವಾಮಿಯೂ, ಜಯಶೀಲನೂ, ಸರ್ವವ್ಯಾಪಿಯೂ, ಯಾವಾಗಲೂ, ಇರುವವನೂ, ಜನ್ಮರಹಿತನೂ, ಚತುರ್ಭುಜನೂ, ಆದ ದೇವನನ್ನು ಯಾರು ಪೂಜಿಸುತ್ತಾರೋ, ಯಾರು ಧ್ಯಾನಿಸುತ್ತಾರೋ ಅವರಿಗೆ ಸ್ವರ್ಗವೆಂದು ವೇದವು ಹೇಳುತ್ತದೆ.

೧೨. ದಾಮೋದರನಾದ ಸ್ವಾಮಿಯನ್ನು ವರ್ಣಿಸುವುದೇ ಜೀವನಕ್ಕೆ ಮಂಗಳವು ಅದೇ ಧನಸಂಪಾದನೆಯು. ಅದೇ ಜೀವಿತ ಫಲವೂ ಆಗಿದೆ.

೧೩. ದೇವದೇವನೂ, ಅಗಾಧಶಕ್ತಿಯುಳ್ಳವನೂ, ಆದ ವಿಷ್ಣುವಿನ ಕೀರ್ತನದಿಂದ ಸೂರ್ಯನು ಹುಟ್ಟುವುದರಿಂದ ಕತ್ತಲೆಯು ನಾಶವಾಗುವಂತೆ ಮನುಷ್ಯನ ಪಾಪಗಳು ಲಯ ಹೊಂದುತ್ತವೆ.

ಗಾಥಾಂ ಗಾಯಂತಿ ಯೇ ನಿತ್ಯಂ ವೈಷ್ಣವೀಂ ಶ್ರದ್ಧಯಾನ್ವಿತಾಃ ।
ಸ್ವಾಧ್ಯಾಯನಿರತಾ ನಿತ್ಯಂ ತೇ ನರಾಸ್ಸ್ವರ್ಗಗಾಮಿನಃ ॥ ೧೪ ।

ವಾಸುದೇವಜಪಾಸಕ್ತಾನಪಿ ಪಾಪಕೃತೋ ಜನಾ್ ।
ನೋಪಸರ್ಪಂತಿ ತಾನ್ವಿಪ್ರ ಯಮದೂತಾಸ್ಸುದಾರುಣಾಃ ॥ ೧೫ ॥

ನಾನ್ಯತ್ಪಶ್ಯಾಮಿ ಜಂತೂನಾಂ ವಿಹಾಯ ಹರಿಕೀರ್ತನಂ ।
ಸರ್ವಪಾಪಪ್ರಶಮನಂ ಪ್ರಾಯಶ್ಚಿತ್ತಂ ದ್ವಿಜೋತ್ತಮ ॥ ೧೬ ॥

ಯೋ ಯಾಚಿತಾಃ ಪ್ರಹೃಷ್ಯಂತಿ ಪ್ರಿಯಂ ದತ್ವಾ ವದಂತಿ ಚ ।
ತ್ಯಕ್ತದಾನಫಲಾಯೇ ತು ತೇ ನರಾಸ್ಸ್ವರ್ಗಗಾಮಿನಃ ॥ ೧೭ ॥

ವರ್ಜಯಂತಿ ದಿವಾಸ್ವಾಪಂ ನರಾಸ್ಸರ್ವಸಹಾಶ್ಚ ಯೇ ।
ಪರ್ವಣ್ಯಾಶ್ರಯಭೂತಾ ಯೇ ತೇ ಮರ್ತ್ಯಾಸ್ಸ್ವರ್ಗಗಾಮಿನಃ ॥ ೧೮ ॥

ದ್ವಿಷತಾಮಪಿ ಯೇ ದ್ವೇಷಾನ್ನ ವದಂತ್ಯಹಿತಂ ತದಾ ।
ಕೀರ್ತಯಂತಿ ಗುಣಾಂಶ್ಚೈವ ತೇ ನರಾಸ್ಸ್ವರ್ಗಗಾಮಿನಃ ॥ ೧೯ ॥

---

೧೪. ಯಾರು ಶ್ರದ್ಧೆಯಿಂದ ವಿಷ್ಣುವಿನ ಹಾಡುಗಳನ್ನು ಹಾಡುತ್ತಾ, ಅಧ್ಯಯನದಲ್ಲಿ ಆಸಕ್ತರಾಗಿರುವರೋ, ಅವರು ಸ್ವರ್ಗವನ್ನು ಹೊಂದುತ್ತಾರೆ.

೧೫. ಜನರು ಪಾಪಿಯಾಗಿದ್ದರೂ, ವಾಸುದೇವನನ್ನು ಸ್ಮರಿಸುತ್ತಿದ್ದರೆ ಅವರ ಬಳಿಗೆ ಯಮದೂತರು ಬರುವುದಿಲ್ಲ.

೧೬. ಎಲೈ ಬ್ರಾಹ್ಮಣನೇ ಹರಿಕೀರ್ತನವನ್ನು ಹೊರತು ಪ್ರಾಣಿಗಳಿಗೆ ಪಾಪ ನಾಶಕವಾದ ಪ್ರಾಯಶ್ಚಿತ್ತವನ್ನು ಮತ್ತೊಂದನ್ನು ಲೋಕದಲ್ಲಿ ಕಾಣೆನು.

೧೭. ಮನುಷ್ಯರು ಬಂದು ಯಾಚಿಸಿದರೆ ಯಾವನು ಸಂತೋಷಗೊಳ್ಳುತ್ತಾನೋ ದಾನಮಾಡಿ ಒಳ್ಳೆಯ ಮಾತನ್ನಾಡುತ್ತಾನೋ, ದಾನಫಲವನ್ನು ಯಾವನು ಹರಿಗೆ ಸಮರ್ಪಿಸುತ್ತಾನೋ, ಅವನು ಸ್ವರ್ಗಗಾಮಿಯಾಗುತ್ತಾನೆ

೧೮. ಹಗಲು ನಿದ್ದೆಮಾಡದ ಶಾಂತರಾದ, ಪರ್ವಕಾಲಗಳಲ್ಲಿ ಪ್ರಾಣಿಗಳಿಗೆ ಆಶ್ರಯವನ್ನು ಕೊಡುವ ಜನರು ಸ್ವರ್ಗವನ್ನು ಹೊಂದುತ್ತಾರೆ.

೧೯. ಹಗೆಗಳನ್ನೂ ಕೂಡ ದ್ವೇಷದಿಂದ ಕೆಟ್ಟಮಾತಾಡದೆ. ಅವರ ಗುಣಗಳನ್ನೇ ಹೇಳುವವರು ಸ್ವರ್ಗವನ್ನು ಹೊಂದುತ್ತಾರೆ.

**ಯೇ ಶಾಂತಾಃ ಪರದಾರೇಷು ಕರ್ಮಣಾ ಮನಸಾ ಗಿರಾ ।**
**ರಮಯಂತಿ ನ ಸತ್ವಸ್ಥಾಸ್ತೇ ನರಾಸ್ಸ್ವರ್ಗಗಾಮಿನಃ ॥ ೨೦ ॥**

ಯಸ್ಮಿನ್ಕಸ್ಮಿನ್ಕುಲೇ ಜಾತಾ ದಯಾವಂತೋ ಯಶಸ್ವಿನಃ ।
ಸಾನುಕ್ರೋಶಾ ಸ್ಸದಾಚಾರಾಸ್ತೇನರಾಸ್ಸ್ವರ್ಗಗಾಮಿನಃ ॥ ೨೧ ॥

ವ್ರತಂ ರಕ್ಷಂತಿ ಯೇ ಕೋಪಾಚ್ಛ್ರಿಯಂ ರಕ್ಷಂತಿ ಮತ್ಸರಾತ್ ।
ವಿದ್ಯಾಂ ಮಾನಾಪಮಾನಾಭ್ಯಾಂ ಹ್ಯಾತ್ಮಾನಂ ತು ಪ್ರಮಾದತಃ ॥ ೨೨ ॥

ಮತಿಂ ರಕ್ಷಂತಿ ಯೇ ಲೋಭಾನ್ಮನೋ ರಕ್ಷಂತಿ ಕಾಮತಃ ।
ಧರ್ಮಂ ರಕ್ಷಂತಿ ದುಸ್ಸಂಗಾತ್ತೇ ನರಾಃ ಸ್ವರ್ಗಗಾಮಿನಃ ॥ ೨೩ ॥

ಏಕಾದಶ್ಯಾಂ ಚ ವಿಧಿವದುಪವಾಸಪರಾಯಣಾಃ ।
ಶುಕ್ಲಕೃಷ್ಣೇ ಚ ಯೇ ವಿಪ್ರ ತೇ ನರಾಸ್ಸ್ವರ್ಗಗಾಮಿನಃ ॥ ೨೪ ॥

---

೨೦. ಯಾರು ಶಾಂತರಾಗಿರುತ್ತಾರೋ ಮನೋವಾಕ್ಕಾಯಗಳಿಂದ ಪರರ ಹೆಂಡಿರನ್ನು ಆಶಿಸುವುದಿಲ್ಲವೋ, ಸತ್ವಗುಣದಿಂದಲೇ ಕೂಡಿರುವರೋ, ಅವರು ಸ್ವರ್ಗಭಾಗಿಗಳು.

೨೧. ಅವನು ಯಾವ ಕುಲದಲ್ಲಿಬೇಕಾದರೂ ಹುಟ್ಟಿರಲಿ, ದಯಾವಂತನಾಗಿ ಯಶಸ್ವಿಯಾಗಿ ಪರರ ದುಃಖದಲ್ಲಿ ದುಃಖಿಯಾಗಿ ಸದಾಚಾರವಂತನಾಗಿರುವನೋ ಆತನು ಸ್ವರ್ಗಗಾಮಿಯು.

೨೨-೨೩. ವ್ರತಮಾಡುವಾಗ ಕೋಪಮಾಡಬಾರದು. ಐಶ್ವರ್ಯದಲ್ಲಿ ಆಸಕ್ತಿಯನ್ನು ಕೋರದೆ ಕಾಪಾಡಬೇಕು. ತನ್ನ ವಿದ್ಯೆಗೆ ಸರಿಯಾದ ಗೌರವ ಹೊಂದುತ್ತಾ ಅಪಮಾನಗೊಳ್ಳದೆ ಕಾಪಾಡಿಕೊಳ್ಳುತ್ತಿರಬೇಕು. ತನ್ನ ಆತ್ಮನನ್ನು ಪ್ರಮಾದಕ್ಕೆ ಈಡುಮಾಡಬಾರದು. ಬುದ್ಧಿಯಲ್ಲಿ ಲೋಭತನವನ್ನು ತೋರಿಸಬಾರದು. ಮನಸ್ಸಿನಲ್ಲಿ ಕಾಮವಿಡಬಾರದು. ದುಷ್ಟರ ಸಹವಾಸದಿಂದ ದೂರವಾಗಿದ್ದು ಧರ್ಮವನ್ನು ಕಾಪಾಡಿಕೊಳ್ಳಬೇಕು. ಇಂತಹವರು ಸ್ವರ್ಗಭಾಗಿಗಳು.

೨೪. ಶುಕ್ಲಕೃಷ್ಣಪಕ್ಷದ ಏಕಾದಶಿಗಳಲ್ಲಿ ವಿಧಿವತ್ತಾಗಿ ಉಪವಾಸಮಾಡತಕ್ಕವರು ಸ್ವರ್ಗವನ್ನು ಹೊಂದುತ್ತಾರೆ.

ಮಾತೇವ ಸರ್ವಬಾಲಾನಾಮೌಷಧಂ ರೋಗಿಣಾಮಿವ ।
ರಕ್ಷಾರ್ಥಂ ಸರ್ವಲೋಕಾನಾಂ ನಿರ್ಮಿತೈಕಾಶೀತಿಥಿಃ ॥ ១៥ ॥

ಏಕಾದಶೀಸಮಂ ಕಿಂಚಿತ್ಪಾಪತ್ರಾಣಂ ನ ವಿದ್ಯತೇ ।
ತಾಮುಪೋಷ್ಯ ವಿಧಾನೇನ ತೇ ನರಾಸ್ಸ್ವರ್ಗಗಾಮಿನಃ ॥ ೨೬ ॥

ಯೇ ಭಕ್ತಿಮಂತೋ ಮಧುಸೂದನಸ್ಯ
ನಾರಾಯಣಸ್ಯಾಽಖಿಲನಾಯಕಸ್ಯ ।
ಸತ್ವೇನ ಹೀನಾ ರಜಸಾಪಿಯುಕ್ತಾ
ಗಚ್ಛಂತಿ ತೇ ನಾಕಮನನ್ತಪುಣ್ಯಾಃ ॥ ೨೭ ॥

ವೇತಸೀಂ ಯಮುನಾಂ ಸೀತಾಂ ಪುಣ್ಯಾಂ ಗೋದಾವರೀಂ ನದೀಂ ।
ಸೇವಂತೇ ಯೇ ಶುಭಾಚಾರಾಃ ಸ್ನಾನದಾನಪರಾಯಣಾಃ ॥ ೨೮ ॥

ನ ತೇ ಪಶ್ಯಂತಿ ಪಂಥಾನಂ ನರಕಸ್ಯ ಕದಾಚನ ॥ ೨೯ ॥

---

೨೫. ಜನಗಳಿಗೆ ತಾಯಿಯಂತೆಯೂ, ರೋಗಿಗಳಿಗೆ ಔಷಧದಂತೆಯೂ, ಎಲ್ಲರನ್ನೂ ಕಾಪಾಡಲು ಏಕಾದಶೀತಿಥಿಯು ನಿರ್ಮಿಸಲ್ಪಟ್ಟಿದೆ.

೨೬. ಏಕಾದಶಿಗೆ ಸಮವಾದ ಪಾಪಹಾರಕವು ಮತ್ತೊಂದಿಲ್ಲ. ವಿಧಿವತ್ತಾಗಿ ಆದಿನ ಉಪವಾಸಮಾಡಿದವನು ಸ್ವರ್ಗವನ್ನು ಹೊಂದುತ್ತಾನೆ.

೨೭. ಅಖಿಲಕ್ಕೂ ಸ್ವಾಮಿಯಾದ ನಾರಾಯಣನಲ್ಲಿ ಭಕ್ತಿಯನ್ನಿಟ್ಟುಕೊಂಡು ಇದ್ದರೆ ಅವರು ಸತ್ವವನ್ನು ಬಿಟ್ಟು ರಜೋಗುಣದಿಂದ ಕೂಡಿದ್ದರೂ ಸ್ವರ್ಗವನ್ನು ಹೊಂದುತ್ತಾರೆ.

೨೮-೨೯. ಗಂಗೆ, ಯಮುನೆ ಸರಸ್ವತಿ ಗೋದಾವರೀ ನದಿಗಳನ್ನು ಸೇವಿಸುತ್ತಾ ಒಳ್ಳೆಯ ಆಚಾರವುಳ್ಳವರಾಗಿ ಸ್ನಾನದಾನಗಳನ್ನು ಮಾಡುತ್ತಾ ಯಾರು ಇರುವರೋ ಅವರು ನರಕದ ದಾರಿಯನ್ನು ನೋಡುವುದಿಲ್ಲ.

ಯೇ ನರ್ಮದಾಯಾಮಿಹ ಶರ್ಮದಾಯಾ
ಮಜ್ಜಂತಿ ತುಷ್ಯಂತ್ಯಪಿ ದರ್ಶನೇನ ।
ವಿಧೂತಪಾಪಾಶ್ಚ ಮಹೇಶಲೋಕಂ
ಗಚ್ಛಂತಿ ತೇ ತತ್ರ ಚಿರಂ ರಮಂತೇ ॥ ೩೦ ॥

ಸ್ನಾತಾಶ್ಚರ್ಮಣ್ವತೀತೀರೇ ತ್ರಿರಾತ್ರಂ ನಿಯತಾ ನರಾಃ ।
ವ್ಯಾಸಾಶ್ರಮೇ ವಿಶೇಷೇಣ ತೇ ನರಾ ನಾಕಿನಃ ಸ್ಮೃತಾಃ ॥ ೩೧ ॥

ಗಂಗಾಜಲೇ ಪ್ರಯಾಗೇ ಚ ಕೇದಾರೇ ಪುಷ್ಕರೇಪಿ ವಾ।
ವ್ಯಾಸಾಶ್ರಮೇ ಪ್ರಭಾಸೇ ಚ ಮೃತಾಸ್ತೇ ವಿಷ್ಣುಗಾಮಿನಃ ॥ ೩೨ ॥

ದ್ವಾರಾವತ್ಯಾಂ ಕುರುಕ್ಷೇತ್ರೇ ಯೋಗಾಭ್ಯಾಸೇನ ವಾ ಮೃತಾಃ ।
ಹರಿರಿತ್ಯಕ್ಷರಯುಗಳಂ ವಕ್ತ್ರೇ ಯೇಷಾಂ ಹರಿಪ್ರಿಯಾಃ ॥ ೩೩ ॥

ತ್ರಿರಾತ್ರಮಪಿ ಯೋ ವಿಪ್ರ ದ್ವಾರವತ್ಯಾಂ ಪುರಿ ಸ್ಥಿತಃ ।
ಏಕಾದಶೇಂದ್ರಿಯೈಃ ಪಾಪಾ ಯತ್ಕೃತಾ ಭವತಿ ದ್ವಿಜ ॥ ೩೪ ॥

---

೩೦. ಯಾರು ಸುಖವನ್ನು ಕೊಡುವ ನರ್ಮದೆಯಲ್ಲಿ ಸ್ನಾನಮಾಡುತ್ತಾ ಅದರ ದರ್ಶನದಿಂದ ಸಂತೋಷಗೊಳ್ಳುತ್ತಾರೋ, ಅವರು ಪಾಪವನ್ನು ಕಳೆದು ಕೊಂಡು ಮಹೇಶನ ಲೋಕದಲ್ಲಿ ಬಹುಕಾಲ ವಾಸಿಸುತ್ತಾರೆ.

೩೧. ಚರ್ಮಣ್ವತಿಯಲ್ಲಿ ಸ್ನಾನಮಾಡುತ್ತಾ, ಮೂರು ರಾತ್ರಿ ನಿಯಮದಿಂದ ಅದರ ತೀರದಲ್ಲಿದ್ದರೂ, ವ್ಯಾಸಾಶ್ರಮದಲ್ಲಿದ್ದರೆ ಹೆಚ್ಚಾಗಿಯೂ, ಅವರನ್ನು ಸ್ವರ್ಗ ಗಾಮಿಗಳೆಂದು ಹೇಳುತ್ತಾರೆ.

೩೨. ಗಂಗೆಯ ನೀರಿನಲ್ಲಿ, ಪ್ರಯಾಗದಲ್ಲಿ, ಕೇದಾರದಲ್ಲಿ, ಪುಷ್ಕರದಲ್ಲಿ, ವ್ಯಾಸರ ಆಶ್ರಮದಲ್ಲಿ, ಪ್ರಭಾಸದಲ್ಲಿ ಇವುಗಳಲ್ಲಿ ಎಲ್ಲಿ ಸತ್ತರೂ, ಅವರು ವಿಷ್ಣುವಿನಲ್ಲಿ ಐಕ್ಯರಾಗುತ್ತಾರೆ.

೩೩. ದ್ವಾರಾವತಿಯಲ್ಲಿ ಸತ್ತರೂ, ಕುರುಕ್ಷೇತ್ರದಲ್ಲಿ ಸತ್ತರೂ, ಯೋಗಾ ಭ್ಯಾಸದಿಂದ ಸತ್ತರೂ, ಹರಿಯೆಂಬ ಎರಡಕ್ಷರವನ್ನು ಹೇಳುತ್ತಾ ಸತ್ತರೆ, ಅವರೆಲ್ಲರೂ ಸ್ವರ್ಗಗಾಮಿಗಳು.

೩೪-೪೩. ದ್ವಾರವತಿಯಲ್ಲಿ ಮೂರುರಾತ್ರಿಯಿದ್ದರೆ ಅವನು ಪಂಚಕರ್ಮೇಂದ್ರಿ ಯಗಳು ಪಂಚಜ್ಞಾನೇಂದ್ರಿಯಗಳು ಮನಸ್ಸು ಈ ಹನ್ನೊಂದು ಇಂದ್ರಿಯಗಳಿಂದ

ನರೋ ನಿರ್ಧೂಯ ತತ್ಸರ್ವಂ ಪ್ರಜೇತ್ಸ್ವರ್ಗತಮಿತಿ ಸ್ಥಿತಿಃ ।
ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ॥ ೩೫ ॥

ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಏಕತಃ ಕ್ರತವಸ್ಸರ್ವೇ ಸರ್ವತೀರ್ಥತಪಾಂಸಿ ಚ ॥ ೩೬ ॥

ಮಹಾದಾನಾನಿ ಚ ಬ್ರಹ್ಮನ್ವ್ರತಂ ವೈಷ್ಣವಮೇಕತಃ ।
ವೈಷ್ಣವವ್ರತಜೋ ಧರ್ಮೋ ಧರ್ಮೋ ಯಜ್ಞಾದಿಸಂಭವಃ ॥ ೩೭ ॥

ಏಕತ್ರ ತುಲಿತೌ ಧಾತ್ರಾ ತತ್ರ ಪೂರ್ವೋಽಭವದ್ಗುರುಃ ।
ಹರಿವಾಸರಭಕ್ತಾನಾಮಚ್ಯುತಾಚ್ಯುತಭಾಷಿಣಾಂ ॥ ೩೮ ॥

ನಾಹಂ ಶಾಸ್ತಾ ವಿಶೇಷೇಣ ತೇಭ್ಯೋ ವಿಪ್ರ ಬಿಭೇಮ್ಯಹಂ ।
ಯೇಷಾಂ ಪುತ್ರಾಶ್ಚ ಪೌತ್ರಾಶ್ಚ ಏಕಾದಶ್ಯಾಮುಪೋಷಿತಾಃ ॥ ೩೯ ॥

ಸಹಾತ್ಮನಾ ಸಪುರುಷಾನ್ ಶತಮುದ್ಧರತೇ ಬಲಾತ್ ।
ಉಪೋಷಣಂ ತತಃ ಕುರ್ಯಾತ್ಪಕ್ಷಯೋರುಭಯೋರಪಿ ॥ ೪೦ ॥

---

ಮಾಡಿದ ಪಾಪಗಳನ್ನೆಲ್ಲಾ ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ. ಸಾವಿರ ಅಶ್ವಮೇಧಯಾಗಗಳೂ, ನೂರು ರಾಜಸೂಯಯಾಗಗಳೂ ಕೂಡ ಏಕಾದಶಿಯ ಉಪವಾಸದ ಹದಿನಾರನೆಯ ಒಂದಂಶವನ್ನೂ ಹೋಲಲಾರವು. ಬ್ರಹ್ಮನು ಒಂದು ತಕ್ಕಡಿಯನ್ನು ತಂದು ಒಂದು ಕಡೆಗೆ ಯಾಗದ ಧರ್ಮಗಳೆಲ್ಲವನ್ನೂ, ತೀರ್ಥ ತಪಸ್ಸುಗಳ ಧರ್ಮಗಳೆಲ್ಲವನ್ನೂ, ಮಹಾದಾನಗಳ ಧರ್ಮಗಳನ್ನೂ ಹಾಕಿದನು. ಮತ್ತೊಂದುಕಡೆ ವೈಷ್ಣವವ್ರತದ ಧರ್ಮಗಳನ್ನೂ ಹಾಕಿದನು. ಈರೀತಿ ಹಾಕಿ ಎರಡನ್ನೂ ತೂಗಲು ವೈಷ್ಣವ ವ್ರತದ ಧರ್ಮದ ಕಡೆಯು ಭಾರವಾಗಿತ್ತು. ಅದೇ ದೊಡ್ಡದಾಯಿತು. ಹರಿವಾಸರದಲ್ಲಿ ಭಕ್ತರಾದವರಿಗೂ, ಅಚ್ಯುತ, ಅಚ್ಯುತ ಎಂದು ಹೇಳುತ್ತಿರುವವರಿಗೂ ನಾನು ಶಿಕ್ಷಕನಲ್ಲ. ಅವರಿಗೆ ಹೆದರುತ್ತೇನೆ. ಯಾರ ಮಕ್ಕಳು ಮೊಮ್ಮಕ್ಕಳು, ಏಕಾದಶಿಯ ದಿನ ಉಪವಾಸಮಾಡುತ್ತಾರೋ ಅವರು ತಮ್ಮೊಡನೆ ಹಿಂದಿನ ಆ ಪುರುಷರನ್ನೂ ಸೇರಿಸಿಕೊಂಡು ನೂರು ಜನರನ್ನೂ ಬಲವಂತದಿಂದ ಉದ್ಧಾರಮಾಡುತ್ತಾರೆ. ಆದ್ದರಿಂದ ಕೃಷ್ಣಶುಕ್ಲಪಕ್ಷದ ಏಕಾದಶಿಗಳೆರಡರಲ್ಲಿಯೂ,

ಏಕಾದಶ್ಯಾಂ ಸಪುರುಷೋ ಭುಕ್ತಿಮುಕ್ತ್ಯೈಕಸಾಧನಂ ।
ತ್ರಿಸ್ಪೃಶಾ ವಂಜುಳೀ ಚಾನ್ಯಾ ಪಕ್ಷಸಂವರ್ಧಿನೀ ಪರಾ ॥ ೪೧ ॥

ಜಯಾ ಚ ವಿಜಯಾ ಚೈವ ಜಯಂತೀ ಪಾಪನಾಶಿಕಾ ।
ತಿಲದಗ್ಧಾ ಪರಾ ಜ್ಞೇಯಾಪ್ಯಖಂಡದ್ವಾದಶೀ ತಥಾ ॥ ೪೨ ॥

ಮನೋರಥಾಖ್ಯಾ ಚ ಪರಾ ಭೀಮದ್ವಾದಶಿಕಾ ಪರಾ ।
ಇತ್ಯೇವಮಾದಯೋ ಭೇದಾ ದ್ವಾದಶ್ಯಾಂ ಸಂತಿ ಕೇಶವೇ ॥ ೪೩ ॥

ವ್ರತೇಷ್ವೇತೇಷು ಯೇ ಶಕ್ತ್ಯಾ ಜ್ಞೇಯಾಸ್ತೇ ಬ್ರಹ್ಮಣಿ ಸ್ಥಿತಾಃ ।
ಶ್ರೋತಾರೋ ಧರ್ಮಶಾಸ್ತ್ರಾಣಾಂ ಧರ್ಮಪ್ರತ್ಯಯ ಸಂಗಿತಾಃ
ಪ್ರಿಯಂಕರಾಶ್ಚ ಬಾಲಾನಾಂ ಸ್ವರ್ಗಲೋಕೇ ವ್ರಜಂತಿ ತೇ ॥ ೪೪ ॥

ಮಾಸಿ ಮಾಸ್ಯೇಕದಿವಸೇ ದರ್ಶೇ ಶ್ರಾದ್ಧವ್ರತಾದರಾಃ ।
ತೃಪ್ಯಂತಿ ಪಿತರೋ ಯೇಷಾಂ ತೇ ಧನ್ಯಾಸ್ಸ್ವರ್ಗಗಾಮಿನಃ ॥ ೪೫ ॥

ಭೋಜನೇಷೂಪಪನ್ನೇಷು ಭೋಜ್ಯಂ ಯಚ್ಛಂತಿ ಸಾದರಂ ।
ಅಭಿನ್ನಮುಖರಾಗೇಣ ಶಿಷ್ಟಾಸ್ತೇ ಸ್ವರ್ಗಗಾಮಿನಃ ॥ ೪೬ ॥

---

ಉಪವಾಸಮಾಡಬೇಕು. ಅದು ಭುಕ್ತಿ ಮುಕ್ತಿಗಳಿಗೆ ಸಾಧನವು. ಜಯಾ, ವಿಜಯಾ, ಪಾಪನಾಶಿಕಾ, ಮಂಜುಳೀ, ಪಕ್ಷಸಂವರ್ಧಿನೀ, ತಿಲದಗ್ಧಾ, ಅಖಂಡದ್ವಾದಶೀ, ಮನೋರಥಾ. ಭೀಮದ್ವಾದಶಿ ಇವೇ ಮೊದಲಾದ ಭೇದಗಳು ದ್ವಾದಶಿಯಲ್ಲಿವೆ.

೪೪. ಈ ವ್ರತಗಳನ್ನು ಶಕ್ತಿಯಿಂದ ಮಾಡಿದರೆ ಅವರು ಆ ಬ್ರಹ್ಮನಲ್ಲಿ ಸೇರಿದವರೆಂದೇ ತಿಳಿಯಬೇಕು. ಧರ್ಮಶಾಸ್ತ್ರವನ್ನು ಕೇಳತಕ್ಕವರು ಧರ್ಮದಲ್ಲಿ ನಂಬಿಕೆಯುಳ್ಳವರು, ಬಾಲರಿಗೆ ಪ್ರಿಯವಾದುದವನ್ನು ಮಾಡುವವರೂ ಸ್ವರ್ಗವನ್ನು ಹೊಂದುತ್ತಾರೆ.

೪೫. ಪ್ರತಿ ತಿಂಗಳಲ್ಲಿಯೂ, ಅಮಾವಾಸ್ಯೆಯ ದಿವಸ ಮನುಷ್ಯರು ಶ್ರಾದ್ಧ ಮಾಡಿದರೆ ಅವರ ಪಿತೃಗಳು ತೃಪ್ತಿಗೊಳ್ಳುತ್ತಾರೆ. ಅವರೂ ಸ್ವರ್ಗವನ್ನು ಹೊಂದುತ್ತಾರೆ.

೪೬. ಊಟಮಾಡುವುದಕ್ಕಿದ್ದರೂ ಯಾಚಿಸಿದವರಿಗೆ ಕೋಪಾದಿಗಳನ್ನು ತೋರಿಸದೆ ಆದರದಿಂದ ಊಟಕ್ಕೆ ಬೇಕಾಗುವ ಪದಾರ್ಥಗಳನ್ನು ಕೊಡುವವರು ಸ್ವರ್ಗಗಾಮಿಗಳು.

ನರನಾರಾಯಣಾವಾಸೇ ತ್ರಿರಾತ್ರಂ ಯೇ ಸಮಾಶ್ರಿತಾಃ ।
ಮರ್ತ್ಯಲೋಕೇ ಚ ನಂದಾಯಾಂ ಧನ್ಯಾಸ್ತೇ ಕೇಶವಪ್ರಿಯಾಃ ॥ ೪೭ ॥

ಷಣ್ಮಾಸಮುಷಿತಾ ವಿಪ್ರ ಪುರುಷೋತ್ತಮಸನ್ನಿಧೌ ।
ಏತೇಸ್ಯುರಚ್ಯುತಾತ್ಮಾನೋ ದೃಷ್ಟಾ ಅಪ್ಯಘಕಾರಿಣಃ ॥ ೪೮ ॥

ಅನೇಕಜನ್ಮಾರ್ಜಿತಪುಣ್ಯತೋಯೇ
ಮಜ್ಜಂತಿ ತೋಯೇ ಮಣಿಕರ್ಣಿಕಾಯಾಂ ।
ನಮಂತಿ ವಿಶ್ವೇಶಮವಾಪ್ಯ ಕಾಶೀಂ
ತೇ ವೈ ಮಯಾಪೀಹ ಭವಂತಿ ವಂದ್ಯಾಃ ॥ ೪೯ ॥

ಪೂಜಯಿತ್ವಾ ಹರಿಂ ಯೇ ತು ಭೂಮಿಂ ದರ್ಭತಿಲೈಸ್ಸಹ ।
ತಿಲಾನ್ವಿಕೀರ್ಯ ಲೋಹಂ ಚ ದತ್ವಾ ಧೇನುಂ ಪಯಸ್ವಿನೀಂ ॥
ಯೇ ಮೃತಾ ವಿಧಿವದ್ವಿಪ್ರ ತೇ ನರಾಸ್ಸ್ವರ್ಗಗಾಮಿನಃ ॥ ೫೦ ॥

---

೪೭. ಭೂಲೋಕದಲ್ಲಿ ನಂದಾತಿಥಿಯು ಬಂದಾಗ ಬದರಿಕಾಶ್ರಮದಲ್ಲಿ ಯಾರು ಮೂರುರಾತ್ರಿಗಳು ಉಪವಾಸಮಾಡುತ್ತಾರೋ ಅವರು ಕೇಶವನಿಗೆ ಬಹಳ ಪ್ರಿಯರು.

೪೮. ಪುರುಷೋತ್ತಮನ ಬಳಿಯಲ್ಲಿ ಆರು ತಿಂಗಳು ಯಾರು ಇರುವರೋ, ಅವರು ಪಾಪನಾಶಮಾಡಿಕೊಂಡು ಅಚ್ಯುತನೇ ಆಗಿರುತ್ತಾರೆ.

೪೯. ಯಾರು ಅನೇಕ ಜನ್ಮಗಳಿಂದ ಪುಣ್ಯದ ದೆಸೆಯಿಂದ ಮಣಿಕರ್ಣಿಕೆಯ ನೀರಿನಲ್ಲಿ ಸ್ನಾನಮಾಡುತ್ತಾರೋ ಮತ್ತು ಕಾಶಿವಿಶ್ವೇಶ್ವರನನ್ನು ನಮಸ್ಕರಿಸುತ್ತಾರೋ ಅವರು ಇಲ್ಲಿ ನನಗೂ ವಂದ್ಯರು.

೫೦. ಯಾರು ಹರಿಯನ್ನು ಪೂಜಿಸಿ ಭೂಮಿಯಲ್ಲಿ ದರ್ಭೆಗಳನ್ನು ಹರಡಿಕೊಂಡು ಮಲಗಿ ಕಬ್ಬಿಣವನ್ನೂ, ಕರೆಯುವ ಹಸುವನ್ನೂ ದಾನಮಾಡಿ ಮೃತರಾಗುತ್ತಾರೋ ಅವರು ಸ್ವರ್ಗಕ್ಕೆ ಹೋಗುತ್ತಾರೆ

ಉತ್ಪಾದ್ಯಪುತ್ರಾನ್ಸಂಸ್ಥಾಪ್ಯ ಪಿತೃಪೈತಾಮಹೇ ಪದೇ ।
ನಿರ್ಮಮಾ ನಿರಹಂಕಾರಾ ಯೇ ಮೃತಾಸ್ತೇಽಪಿ ನಾಕಿನಃ ॥ ೫೧ ॥

ಸ್ವೈನ್ಯಾನ್ನಿವೃತ್ತಾಸ್ಸತತಂ ಸಂತುಷ್ಟಾಸ್ಸ್ವಧನೇನ ವಾ ।
ಸ್ವಭಾಗ್ಯೇನೋಽಪಜೀವಂತಿ ತೇ ನರಾಸ್ಸ್ವರ್ಗಗಾಮಿನಃ ॥ ೫೨ ॥

ಶ್ಲಕ್ಷ್ಣಾಂ ವಾಣೀಂ ನಿರಾಬಾಧಾಂ ಮಧುರಾಂ ಪಾಪವರ್ಜಿತಾಂ ।
ಸ್ವಾಗತೇನಾಭಿಭಾಷನ್ತೇ ತೇ ನರಾಸ್ಸ್ವರ್ಗಗಾಮಿನಃ ॥ ೫೩ ॥

ಶುಭಾನಾಮಶುಭಾನಾಂ ಚ ಕರ್ಮಣಾಂ ಫಲಸಂಚಯೇ ।
ವಿಪಾಕಜ್ಞಾಶ್ಚ ಯೇ ಕೇಚಿತ್ತೇ ನರಾಸ್ಸ್ವರ್ಗಗಾಮಿನಃ ॥ ೫೪ ॥

ದಾನಧರ್ಮಪ್ರವೃತ್ತಾನಾಂ ಧರ್ಮಮಾರ್ಗಾನುಯಾಯಿನಾಂ ।
ಪ್ರೋತ್ಸಾಹಂ ವರ್ಧಯನ್ತೇ ಯೇ ತೇ ಮೋದಂತೆ ಚಿರಂ ದಿವಿ ॥ ೫೫ ॥

---

೫೧. ಮಕ್ಕಳನ್ನು ಹುಟ್ಟಿಸಿ ತಂದೆ ತಾತ ಇವರ ದರ್ಜೆಯಲ್ಲಿಟ್ಟು ಮಮತೆಯೂ, ಅಹಂಕಾರವೂ ಇಲ್ಲದೆ ಯಾರು ಸಾಯುತ್ತಾರೋ ಅವರು ಸ್ವರ್ಗವನ್ನು ಹೊಂದುತ್ತಾರೆ.

೫೨ ಕದಿಯದೇ ತನ್ನ ಹಣದಿಂದಲೇ ತುಷ್ಟನಾಗಿ ತನ್ನ ಅದೃಷ್ಟದಿಂದಲೇ ಜೀವಿಸುವ ನರರು ಸ್ವರ್ಗಗಾಮಿಗಳು.

೫೩. ಯಾರು ತಮ್ಮಲ್ಲಿಗೆ ಬಂದವರನ್ನು ಮೃದುಮಧುರವಾದ ಅಡ್ಡಿಯಿಲ್ಲದ ಪಾಪಕಾರಿಯಲ್ಲದ ಮಾತಿನಿಂದ ಸ್ವಾಗತಿಸುವರೋ ಅವರು ಸ್ವರ್ಗಗಾಮಿಗಳು.

೫೪. ಒಳ್ಳೆಯ ಅಥವಾ ಕೆಟ್ಟಕೆಲಸಗಳ ಫಲವನ್ನು ಪಾಕವಾಗುವಾಗ ತಿಳಿಯುವವರೂ ಸ್ವರ್ಗಗಾಮಿಗಳು.

೫೫. ದಾನಧರ್ಮಗಳಲ್ಲಿ ಪ್ರವರ್ತಿಸುತ್ತಿರುವವರಿಗೂ, ಧರ್ಮಮಾರ್ಗದಲ್ಲಿ ನಡೆಯುತ್ತಿರುವವರಿಗೂ, ಯಾರು ಪ್ರೋತ್ಸಾಹಿಸುತ್ತಾರೋ, ಅವರು ಸ್ವರ್ಗದಲ್ಲಿ ಚಿರಕಾಲವಿರುತ್ತಾರೆ.

ಹೇಮಂತೇ ದಾರುದೋ ಯಶ್ಚ ತಥಾ ಗ್ರೀಷ್ಮೇ ಜಲಪ್ರದಃ ।
ವರ್ಷಾಸ್ವಾಶ್ರಮದಾತಾ ಚ ಸ್ವರ್ಗಲೋಕೇ ಮಹೀಯತೇ ॥ ೫೬ ॥

ಪುಣ್ಯಕಾಲೇಷು ಸರ್ವೇಷು ನಿತ್ಯನೈಮಿತ್ತಿಕಾದಿಷು ।
ಭಕ್ತ್ಯಾ ಯಃ ಕುರುತೇ ಶ್ರಾದ್ಧಂ ಸ ನೂನಂ ಸುರಲೋಕಭಾಕ್ ॥ ೫೭ ॥

ದಾನಂ ದರಿದ್ರಸ್ಯ ವಿಭೋಃ ಕ್ಷಮತ್ವಂ
ಯೂನಾಂ ತಪೋ ಜ್ಞಾನವತಾಂ ಚ ಮೌನಂ ।
ಇಚ್ಛಾನಿವೃತ್ತಿಶ್ಚ ಸುಖೋಚಿತಾನಾಂ
ದಯಾ ಚ ಭೂತೇಷು ದಿವಂ ನಯಂತಿ ॥ ೫೮ ॥

ದ್ವಿವಿಧಃ ಕರ್ಮಸಂಬಂಧಃ ಪಾಪಪುಣ್ಯಸಮುದ್ಭವಃ ।
ಸತ್ಯಮೇವ ಸಮಾಶ್ರಿತ್ಯ ಕ್ರಿಯತೇ ಹ್ಯತ್ರ ನಿರ್ಣಯಃ ॥ ೫೯ ॥

ತಪೋಧ್ಯಾನಸಮಾಯುಕ್ತಂ ತಾರಣಾಯ ಭವಾಂಬುಧೇಃ ।
ಪಾಪಂ ತು ಪತನಾಯೋಕ್ತಂ ಸತ್ಯಮೇವ ನ ಸಂಶಯಃ ॥ ೬೦ ॥

---

೫೬ ಹಿಮಗಾಲದಲ್ಲಿ ಕಟ್ಟಿಗೆಯನ್ನು ಕೊಡುವವನೂ, ಬೇಸಿಗೆಯಲ್ಲಿ ನೀರು ಕೊಡುವವನೂ, ಮಳೆಗಾಲದಲ್ಲಿ ಮನೆ ಕೊಡತಕ್ಕವನೂ, ಸ್ವರ್ಗದಲ್ಲಿ ಸುಖಿಸುತ್ತಾರೆ.

೫೭. ನಿತ್ಯ ನೈಮಿತ್ತಿಕವಾದ ಎಲ್ಲಾ ಪುಣ್ಯಕಾಲಗಳಲ್ಲಿಯೂ, ಭಕ್ತಿಯಿಂದ ಶ್ರಾದ್ಧಮಾಡುವವರು ಸ್ವರ್ಗವನ್ನು ಹೊಂದುತ್ತಾರೆ.

೫೮. ದರಿದ್ರನಿಗೆ ದಾನಮಾಡುವುದು. ಅಧಿಕಾರಿಗೆ ಕ್ಷಮಾಗುಣ, ಯುವಕನ ತಪಸ್ಸು, ಜ್ಞಾನಿಯ ಮೌನ, ಸುಖಪಡುವ ಪದಾರ್ಥಗಳಿದ್ದರೂ ತನ್ನ ಇಚ್ಛೆಯಿಂದಲೇ ಬೇಡವೆನ್ನುವುದು, ಪ್ರಾಣಿಗಳಲ್ಲಿ ದಯೆ ಇವು ಸ್ವರ್ಗವನ್ನು ಹೊಂದಿಸುತ್ತವೆ.

೫೯. ಪಾಪಪುಣ್ಯಗಳಿಂದುತ್ಪನ್ನವಾದ ಕರ್ಮ ಸಂಬಂಧವು ಎರಡು ಬಗೆಯು, ಸತ್ಯವನ್ನೇ ಆಶ್ರಯಿಸಿ ಈ ವಿಷಯದಲ್ಲಿ ನಿರ್ಣಯಮಾಡಬೇಕು.

೬೦. ಧ್ಯಾನದಿಂದ ಕೂಡಿದ ತಪಸ್ಸು ಸಂಸಾರ ತಾರಕವು. ಪಾಪವು ನಾಶಕ್ಕೋಸ್ಕರವೇ ಇರುವುದು. ಇದು ಸತ್ಯವು.

ಬಲೇನ ಪರಿವಾರೇಣ ಶೌರ್ಯೇಣಾಽಭಿಯುತಸ್ಯ ಚ ।
ಪುಣ್ಯಹೀನಸ್ಯ ವೈ ಪುಂಸಃ ಪಾತ ಏವ ವಿಧೀಯತೇ ॥ ೬೧ ॥

ಉನ್ನತಾ ಗಿರಿದುರ್ಗೇಷು ವೃಕ್ಷಾಶ್ಚಾಪಿ ಸುಪುಷ್ಟಕಾಃ ।
ಪತಂತಿ ವಾಯುವೇಗೇನ ಸಮೂಲಾಸ್ತು ಘನಾ ಅಪಿ ॥ ೬೨ ॥

ಸಾಮಾನ್ಯಂ ಸರ್ವಜಂತೂನಾಂ ಬಲಂ ಧರ್ಮಸ್ತು ಕೇವಲಃ ।
ಯೇನ ಸಂತರತೇ ಜಂತುರಿಹಲೋಕೇ ಪರತ್ರ ಚ ॥ ೬೩ ॥

ಮಯಾ ಸರ್ವಮಿದಂಸಮ್ಯಕ್ಸ್ವರ್ಗಮಾರ್ಗಪ್ರದಾಯಕಂ ।
ಸಮಾಸೇನ ಸಮಾಖ್ಯಾತಂ ಕಿಂ ಭೂಯಶ್ಶ್ರೋತುಮಿಚ್ಛಸಿ ॥ ೬೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ದ್ವಿನವತಿತಮೋಽಧ್ಯಾಯಃ

---

೬೧. ಸೈನ್ಯದಿಂದಲೂ, ಪರಿವಾರದಿಂದಲೂ, ಶೌರ್ಯದಿಂದಲೂ, ಕೂಡಿಕೊಂಡಿದ್ದರೂ, ಆತನು ಪುಣ್ಯಹೀನನಾದರೆ ಅವನಿಗೆ ಪತನವೇ ಖಂಡಿತವು.

೬೨. ಪರ್ವತಪ್ರದೇಶಗಳಲ್ಲಿ ಹುಟ್ಟಿ ಚೆನ್ನಾಗಿ ಬೆಳೆದಿರುವ ಮರಗಳು ದೊಡ್ಡವುಗಳಾಗಿದ್ದರೂ ವಾಯು ವೇಗದಿಂದ ಅವು ಬುಡಸಹಿತ ಬೀಳುತ್ತವೆ.

೬೩. ಎಲ್ಲಾ ಪ್ರಾಣಿಗಳಿಗೂ ಬಲವು ಸಾಮಾನ್ಯವಾಗಿ ಇದ್ದೇ ಇರುವುದು. ಪ್ರಾಣಿಯು ಸಂಸಾರದಿಂದ ಪಾರಾಗುವ ಪರದಲ್ಲಿ ಸದ್ಗತಿಯನ್ನು ಕೊಡುವ ಧರ್ಮವು ಮಾತ್ರ ಅತಿಶಯವಾದುದು.

೬೪. ಸ್ವರ್ಗಮಾರ್ಗವನ್ನು ತೋರಿಸುವ ಧರ್ಮವನ್ನು ನಾನು ಸಂಗ್ರಹವಾಗಿ ಹೇಳಿದ್ದೇನೆ. ಇನ್ನೇನನ್ನು ಕೇಳಲು ಅಪೇಕ್ಷಿಸುತ್ತೀಯೆ ?

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖಮಾಸ ಮಹಿಮೆ
ಎಂಬ ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ತ್ರಿನವತಿತಮೋಽಧ್ಯಾಯಃ ॥



॥ ಬ್ರಾಹ್ಮಣ ಉವಾಚ ॥

ಏತನ್ಮೂರ್ಖೋಽಪಿ ಜಾನಾತಿ ಶುಭಕರ್ಮಕರಃ ಪುಮಾನ್ ।
ನ ಯಾತಿ ನರಕಂ ಸ್ವರ್ಗಂ ತಥಾ ಪಾಪಕ್ರಿಯಾರತಃ ॥ ೧ ॥

ಕ್ರತುಭಿರ್ವಿವಿಧೈರಿಷ್ಟೈರ್ವ್ರತದಾನಜಪಾದಿಭಿಃ ।
ಸತ್ಯೇನಾಚಾರಕುಶಲೈಃ ಸ್ವರ್ಗಸೌಖ್ಯಮವಾಪ್ಯತೇ ॥ ೨ ॥

ವಿದ್ಯಾಚಾರಧನೋಪೇತೈಃ ಋಷಿಭಿರ್ವೇದಪಾರಗೈಃ ।
ಪ್ರಾಪ್ಯತೇ ಪುಣ್ಯಯೋಗೇನ ಯಜ್ಞೈರ್ನಾಕಸ್ತತಃ ಕ್ವಚಿತ್ ॥ ೩ ॥

---

### ತೊಂಭತ್ತಮೂರನೆಯ ಅಧ್ಯಾಯವು

೧. ಬ್ರಾಹ್ಮಣನು ಹೇಳಿದನು–ಇದನ್ನು ಮೂರ್ಖನೂ ತಿಳಿದುಕೊಳ್ಳುತ್ತಾನೆ. ಶುಭಕರ್ಮವನ್ನು ಮಾಡುವವನು ನರಕವನ್ನು ಹೊಂದುವುದಿಲ್ಲ. ಅಂತೆಯೇ ಪಾಪಕ್ರಿಯಾರತನು ಸ್ವರ್ಗವನ್ನೂ ಹೊಂದುವುದಿಲ್ಲ.

೨. ನಾನಾಬಗೆಯಾದ ಯಾಗಗಳನ್ನು ಮಾಡುವುದರಿಂದಲೂ, ವ್ರತ, ದಾನ, ಜಪಗಳಿಂದಲೂ, ಸತ್ಯದಿಂದಲೂ, ಆಚಾರದಿಂದಲೂ, ಕ್ಷೇಮದಿಂದಲೂ ಸ್ವರ್ಗ ಸೌಖ್ಯವನ್ನು ಹೊಂದುತ್ತಾನೆ.

೩. ವಿದ್ಯೆ, ಆಚಾರಗಳೇ ಧನವಾಗಿ ಉಳ್ಳ ವೇದಪಾರಗರಾದ ಋಷಿಗಳಿಂದ ಪುಣ್ಯಯೋಗದಿಂದ ಸ್ವರ್ಗವು ಸಿಕ್ಕುತ್ತದೆ. ಯಜ್ಞದಿಂದಲೂ ಸ್ವರ್ಗವು ಅಕಸ್ಮಾತ್ತಾಗಿ ಸಿಕ್ಕುವುದುಂಟು.

ವಿತ್ತೇನ ಚ ವಿನಾ ದಾನಂ ಬಹುದಾತುಂ ನ ಶಕ್ಯತೇ ।
ವಿದ್ಯಾಮಾನಧನೇನಾಪಿ ಕುಟುಂಬಾಸಕ್ತಚೇತಸಾ ॥ ೪ ॥

ಅಗ್ನಿಹೋತ್ರಾದಯೋ ಧರ್ಮಾ ವಿಶೇಷೇಣ ಕಲೌ ಯುಗೇ ।
ದುಷ್ಕರಾ ದಾನಧರ್ಮೋಽಪಿ ದುಷ್ಕರೋ ಭಗವನ್ಮತಃ ॥ ೫ ॥

ಅಲ್ಪಾಯಾಸೇನ ಧರ್ಮೇಣ ಲಭ್ಯತೇ ಧರ್ಮಸಂಚಯಃ ।
ತನ್ಮೇ ವಿಶೇಷತೋ ಬ್ರೂಹಿ ಧರ್ಮಾಧರ್ಮಪ್ರದರ್ಶಕ ॥ ೬ ॥

ತದೇಕಂ ಕಥ್ಯತಾಂ ಧರ್ಮಂ ಸರ್ವಧರ್ಮೋತ್ತಮೋತ್ತಮಂ ।
ಕೃತೇನೈಕೇನ ಯೇನೇಹ ಸರ್ವಪಾಪಕ್ಷಯೋ ಭವೇತ್ ॥ ೭ ॥

ಧನಂ ಧಾನ್ಯಂ ಯಶೋಧರ್ಮಮಾಯುರ್ಯೇನಾಽಭಿವರ್ಧತೇ ।
ಮರ್ತ್ಯಲೋಕೇಽಪಿ ಸೌಖ್ಯಂ ಸ್ಯಾತ್ಸ್ವರ್ಗೋ ಯೇನಾಕ್ಷಯೋ ಭವೇತ್ ॥ ೮ ॥

---

೪. ವಿದ್ಯೆಯೂ, ಮಾನವೂ, ಧನವೂ ಇದ್ದರೂ, ಸಂಸಾರಕಾಪಾಡುವಿಕೆಯಲ್ಲಿ ಆಸಕ್ತನಾದವನು. ಹಣದ ತೊಂದರೆಯಿಂದ ಬಹು ದಾನಮಾಡಲು ಸಾಧ್ಯವಾಗುವುದಿಲ್ಲ.

೫. ಕಲಿಯುಗದಲ್ಲಿ ಜನರು ಅಗ್ನಿಹೋತ್ರಾದಿಗಳನ್ನು ಮಾಡುವುದಿಲ್ಲ. ದಾನಧರ್ಮಗಳನ್ನೂ ಕೂಡ ಮಾಡುವುದಸಾಧ್ಯವೆಂದು ತಿಳಿಯುತ್ತದೆ.

೬. ಯಾವ ರೀತಿಯಾಗಿ ಸ್ವಲ್ಪವೇ ಆಯಾಸದಿಂದ ಧರ್ಮವು ಸಿಕ್ಕುತ್ತದೆಂಬುದನ್ನು ನನಗೆ ಹೇಳು. ನೀನು ಧರ್ಮ ಅಧರ್ಮಗಳನ್ನು ತೋರಿಸುವವನಲ್ಲವೇ !

೭. ಸರ್ವ ಧರ್ಮಗಳಿಗೂ ಉತ್ತಮವಾದ ಒಂದು ಧರ್ಮವನ್ನು ಹೇಳು. ಅಂತಹ ಯಾವುದೊಂದನ್ನು ಮಾಡಿದರೆ ಸರ್ವ ಪಾಪಗಳೂ ನಾಶವಾದಾವು ?

೮. ಯಾವ ಧರ್ಮದಿಂದ ಧನ, ಧಾನ್ಯ, ಯಶಸ್ಸು, ಧರ್ಮ, ಆಯುಸ್ಸು ಇವು ಅಭಿವೃದ್ಧಿಯಾಗುತ್ತವೆ ? ಮನುಷ್ಯ ಲೋಕದಲ್ಲಿಯೂ ಸೌಖ್ಯವು ಲಭಿಸಿ ಅಕ್ಷಯವಾದ ಸ್ವರ್ಗವು ಸಿಕ್ಕುತ್ತದೆ ?

ಸಾಕ್ಷಾನ್ನಾರಾಯಣೋ ಯೇನ ಭಕ್ತಾನಾಮಭಯಪ್ರದಃ ।
ತುಷ್ಯೇದಸ್ಯ ಪ್ರಸಾದೇನ ಕಾಮಃ ಕರತಲೇಸ್ಥಿತಃ ॥ ೯ ॥

ಸರ್ವಯಜ್ಞತಪೋದಾನತೀರ್ಥಸೇವಾಧಿಕಂ ಫಲಂ ।
ಲಭ್ಯತೇ ಯೇನ ಯದ್ಯಸ್ತಿ ವೈವಸ್ವತ ತಮಾದಿಶ ॥ ೧೦ ॥

ಅನುಗ್ರಾಹ್ಯೋಽಸ್ಮ್ಯಹಂ ದೇವ ಯದಿ ಧರ್ಮೋಪದೇಶತಃ ।
ಸರ್ವಧರ್ಮಕ್ರಿಯಾಸಾರಂ ತದೇಕಂ ಕೃಪಯಾ ವದ ॥ ೧೧ ॥

ಪಾಪಾನಾಮನುರೂಪಾಣಿ ಪ್ರಾಯಶ್ಚಿತ್ತಾನಿ ಯದ್ಯಥಾ ।
ತಥಾತಥೈವ ಸಂಸ್ಮೃತ್ಯ ಕಥಿತಾನಿ ಮನೀಷಿಭಿಃ ॥ ೧೨ ॥

ಕರ್ತುಂ ತಾನಿ ನ ಶಕ್ಯಂತೇ ದೇವ ಪ್ರತ್ಯೇಕಶೋ ನರೈಃ ।
ಸರ್ವಪಾಪಹರಂ ಪುಣ್ಯಮೇಕಂ ಚೇದಸ್ತಿ ತದ್ವದ ॥ ೧೩ ॥

---

೯. ಯಾವ ಧರ್ಮದಿಂದ ಸಾಕ್ಷಾನ್ನಾರಾಯಣನು ಭಕ್ತರಿಗೆ ಅಭಯವನ್ನು ಕೊಟ್ಟಾನು ? ಮತ್ತು ತುಷ್ಟನಾಗುವನು ? ಯಾವುದರಿಂದ ಇಷ್ಟಾರ್ಥವೆಲ್ಲವೂ ಲಭಿಸುವುವು ?

೧೦. ಎಲ್ಲಾ ತಪಸ್ಸು, ಯಜ್ಞ, ದಾನ, ತೀರ್ಥಸೇವೆಗಳಿಗಿಂತ ಹೆಚ್ಚು ಫಲವು ಯಾವುದನ್ನಾಚರಿಸಿದರೆ ಸಿಕ್ಕುತ್ತದೆ ? ಅದಾವುದಾದರೂ ಇದ್ದರೆ ಎಲೈ ಧರ್ಮರಾಜನೇ ನನಗೆ ಹೇಳು.

೧೧. ನೀನು ನನಗೆ ಧರ್ಮೋಪದೇಶಮಾಡಿ ಅನುಗ್ರಹಿಸಬೇಕೆಂದಿದ್ದರೆ ಸರ್ವ ಧರ್ಮಗಳನ್ನೊಳಗೊಂಡ ಅದೊಂದನ್ನು ತಿಳಿಸು.

೧೨–೧೩. ಪಾಪಗಳಿಗೆ ಅನುರೂಪವಾದ ಅನೇಕ ಪ್ರಾಯಶ್ಚಿತ್ತಗಳನ್ನು ಹೇಳಿದ್ದರೆ ಅದದನ್ನು ಹಾಗೆಯೇ ಜ್ಞಾಪಿಸಿಕೊಂಡು ಪಂಡಿತನಾದವನೂ, ಪ್ರತ್ಯೇಕವಾಗಿ ಮಾಡಲಾರನು. ಆದ್ದರಿಂದ ಸರ್ವಪಾಪಗಳೂ, ನಾಶವಾಗುವ ಧರ್ಮವು ಯಾವುದಾದರೂ ಒಂದಿದ್ದರೆ ಅದನ್ನು ಹೇಳು.

॥ ಸೂತ ಉವಾಚ ॥

ಇತ್ಯುಕ್ತ್ವಾ ಬ್ರಾಹ್ಮಣಶ್ರೇಷ್ಠೋ ಯಮಂ ಧರ್ಮಸ್ವರೂಪಿಣಂ ।
ತುಷ್ಟಾವ ಪ್ರಯತೋ ಭೂತ್ವಾ ಸೂಕ್ಷ್ಮಧರ್ಮಾಭಿಕಾಮುಕಃ ॥ ೧೪ ॥

॥ ಬ್ರಾಹ್ಮಣ ಉವಾಚ ॥

ನಮಸ್ತೇ ಸರ್ವಶಮನ ನಮಸ್ತೇ ಜಗತಾಂ ಪತೇ ।
ನಮೋಽಸ್ತು ದೇವರೂಪಾಯ ಸ್ವರ್ಗಮಾರ್ಗಪ್ರದಾಯಿನೇ ॥ ೧೫ ॥

ಧರ್ಮಶಾಸ್ತ್ರಸ್ವರೂಪಾಯ ಧರ್ಮರಾಜ ನಮೋಽಸ್ತು ತೇ ।
ತ್ವಯಾ ಭೂಃ ಪಾಲ್ಯತೇ ದೇವಾಪ್ಯಂತರಿಕ್ಷಂ ಚ ದ್ಯೌರ್ಮಹಃ ॥ ೧೬ ॥

ಜನಸ್ತಪಸ್ತಥಾಸತ್ಯಂ ಸರ್ವಸ್ವಂ ಪಾಲ್ಯತೇ ತ್ವಯಾ ।
ನ ತ್ವಯಾ ರಹಿತಂ ಕಿಂಚಿಜ್ಜಗತ್ಸ್ಥಾವರಜಂಗಮಂ ॥ ೧೭ ॥

ವಿದ್ಯತೇ ತ್ವದ್ಗೃಹೀತಂ ತು ಸದ್ಯೋ ನಶ್ಯತಿ ವೈ ಜಗತ್ ।
ತ್ವಮಾತ್ಮಾ ಸರ್ವಭೂತಾನಾಂ ಸತಾಂ ಸತ್ವಸ್ವರೂಪವಾನ್ ॥ ೧೮ ॥

---

೧೪. ಸೂತನು ಹೇಳಿದನು- ಹೀಗೆಂದು ಆ ಬ್ರಾಹ್ಮಣನು ಧರ್ಮಸ್ವರೂಪನಾದ ಯಮನನ್ನು ಸ್ತೋತ್ರಮಾಡಿದನು.

೧೫ ಬ್ರಾಹ್ಮಣನು ಹೇಳಿದನು---ಎಲ್ಲವನ್ನೂ ನಾಶಮಾಡುವ ನಿನಗೆ ನಮಸ್ಕಾರವು. ಜಗತ್ಪತಿಯಾದ ನಿನಗೆ ನಮಸ್ಕಾರವು. ದೇವರೂಪನಾದ ನಿನಗೆ ನಮಸ್ಕಾರವು. ಸ್ವರ್ಗದ ಮಾರ್ಗವನ್ನು ಕೊಡತಕ್ಕವನೇ ನಿನಗೆ ನಮಸ್ಕಾರವು.

೧೬. ಧರ್ಮಶಾಸ್ತ್ರಸ್ವರೂಪನಾದ ಧರ್ಮರಾಜನೇ ನಿನಗೆ ನಮಸ್ಕಾರವು. ನೀನೇನೇ ಭೂಲೋಕ, ಭುವರ್ಲೋಕ, ಸುವರ್ಲೋಕಗಳನ್ನು ಪಾಲಿಸುತ್ತೀಯೆ.

೧೭-೧೮. ಜನೋ ಲೋಕ, ತಪೋಲೋಕಗಳನ್ನೂ, ಸರ್ವವನ್ನೂ ನೀನೇ ಪಾಲಿಸುತ್ತೀಯೆ. ಸ್ಥಾವರ ಜಂಗಮಗಳಾವುವೂ ನಿನ್ನನ್ನು ಬಿಟ್ಟಿರುವುದಿಲ್ಲ. ನೀನು ಹಿಡಿದರೆ ಅವೆಲ್ಲವೂ ನಾಶವಾಗುತ್ತವೆ. ನೀನೇ ಎಲ್ಲದಕ್ಕೂ ಆತ್ಮನು. ಸತ್ಪುರುಷ

ರಾಜಸಾನಾಂ ರಜಸ್ತ್ವಂ ಚ ತಾಮಸಾನಾಂ ತಮಸ್ತಥಾ ।
ಚತುಷ್ಪದಾಂ ಭವಾನ್ದೇವ ಚತುಶ್ಶೃಂಗಸ್ತ್ರಿಲೋಚನಃ ॥ ೧೯ ॥

ಸಪ್ತಹಸ್ತಸ್ತ್ರಿಧಾಬದ್ಧೋ ವೃಷರೂಪೋ ನಮೋಸ್ತುತೇ ।
ಸರ್ವಯಜ್ಞಮಯೋ ಧರ್ಮಃ ತ್ವಯಿ ವಿಗ್ರಹವಿಗ್ರಹಃ ॥ ೨೦ ॥

ಸಾಕ್ಷಾದ್ದೃಷ್ಟೋಽಸಿ ಲೋಕೇಶ ದೇವ ತುಭ್ಯಂ ನಮೋನಮಃ।
ಹೃದಿಸ್ಥಸ್ಸರ್ವಭೂತಾನಾಂ ಪುಣ್ಯಪಾಪೇಕ್ಷಿತಾ ಭವಾನ್ ॥ ೨೧ ॥

ತೇನ ಶಾಸ್ತಾ ಚ ಭೂತಾನಾಂ ದಾತಾ ದೇವ ಪ್ರಶಾಸಿತಾ ।
ಪ್ರವರ್ತತೇ ಹಿ ಧರ್ಮಸ್ಯ ದೇವ ದಂಡಧರೋ ಭುವಿ ।
ಸರ್ವಧರ್ಮಮಯಂ ಸಾರನೇಕಂ ವದ ಸುನಿಶ್ಚಿತಂ ॥ ೨೨ ॥

॥ ಯಮ ಉವಾಚ ॥

ಪರಿತುಷ್ಟೋ ಸ್ಮಿ ತೇ ವಿಪ್ರ ಸ್ತೋತ್ರೇಣ ಚ ವಿಶೇಷತಃ ।
ತಥಾಪ್ಯಾಗಮಧರ್ಮೇಣ ಮಾನ್ಯೋಽಸಿ ಮಮ ಸತ್ತಮ ॥ ೨೩ ॥

---

ರಿಗೆ ಸರ್ವಗುಣಸ್ವರೂಪನು. ರಾಜಸರೂಪದವರಿಗೆ ರಜೋರೂಪನೂ, ತಾಮಸಿಕರಿಗೆ ತಮಸ್ಸೂ ನೀನೇ ಆಗಿದ್ದೀಯೆ. ನಾಲ್ಕು ಕಾಲುಳ್ಳ ಪ್ರಾಣಿಗಳಿಗೆ ನೀನು ನಾಲ್ಕು ಕೊಂಬುಳ್ಳವನಾಗಿದ್ದೀಯೆ. ಮತ್ತು ಮೂರು ಕಣ್ಣುಗಳುಳ್ಳವನೂ ಆಗಿದ್ದೀಯೆ

೨೦. ಏಳು ಕೈಯುಳ್ಳವನು. ಈ ರೀತಿ ಮೂರು ವಿಶೇಷಗಳುಳ್ಳ ಎತ್ತಿನ ರೂಪವನ್ನು ಹೊಂದಿದ್ದೀಯೆ. ಸರ್ವಯಜ್ಞಸ್ವರೂಪವಾದ ಧರ್ಮಗಳು ನಿನ್ನಲ್ಲಿ ಮೂರ್ತಿಮತ್ತಾಗಿವೆ

೨೧ ಎಲೈ ಸ್ವಾಮಿಯೇ ಇಂತಹ ನಿನ್ನನ್ನು ಪ್ರತ್ಯಕ್ಷವಾಗಿ ನೋಡಿದೆನು. ನಿನಗೆ ನಮಸ್ಕಾರವು. ನೀನು ಎಲ್ಲಾ ಪ್ರಾಣಿಗಳ ಹೃದಯದಲ್ಲಿದ್ದುಕೊಂಡು ಪುಣ್ಯ ಪಾಪಗಳನ್ನು ನೋಡುತ್ತಿರುವೆ.

೨೨. ಆದ್ದರಿಂದ ಅವನ್ನು ಶಿಕ್ಷಿಸುತ್ತೀಯೆ. ಅವುಗಳಿಗೆ ದಾತನೂ ಆಗಿದ್ದೀಯೆ. ನೀನೇ ಧರ್ಮಕ್ಕೆ ಪ್ರವರ್ತಕನು. ಲೋಕದಲ್ಲಿ ಶಿಕ್ಷಕನೂ ಆಗಿದ್ದೀಯೆ. ಸರ್ವಧರ್ಮದಿಂದ ಕೂಡಿದ ಸಾರವಾದ ಒಂದು ಧರ್ಮವನ್ನು ಹೇಳು.

೨೩. ಯಮನು ಹೇಳಿದನು-ಎಲೈ ಬ್ರಾಹ್ಮಣನೇ ನಿನ್ನ ಸ್ತೋತ್ರದಿಂದ ಸಂತುಷ್ಟನಾಗಿದ್ದೇನೆ. ಆದರೂ ಶಾಸ್ತ್ರರೀತಿಯಿಂದ ನೀನು ನನಗೆ ಗೌರವಾರ್ಹನಾಗಿದ್ದೀಯೆ.

ಯನ್ನ ಕಸ್ಯಚಿದಾಖ್ಯಾತಂ ಯದ್ಗೋಪ್ಯಂ ಪರಮಂ ಮಮ ।
ಸಾರಮುದ್ಧೃತ್ಯ ಸರ್ವೇಷಾಂ ಯದೇಕಂ ನಿಶ್ಚಿತಂ ಮಯಾ ॥ ೨೪ ॥

ಮಹಾನಿರಯಸಂಘಾತಾನ್ನಿರ್ವಾಸನಕರಂ ಪರಂ ।
ಅನಾಖ್ಯೇಯಮಪಿ ಬ್ರಹ್ಮನ್ ವಕ್ಷ್ಯೇ ವಿನಯತೋಷಿತಃ ॥ ೨೫ ॥

ಸ್ವರ್ಗೋಪಾಯ ಚರಾಚರಸ್ಯ ಜಗತಸ್ತೇ ತೇ ಪುರಾಣಾಗಮಾ ।
ಸ್ತಾಂ ತಾಮೇವ ಹಿ ದೇವತಾಂ ಪರಮಿತಾಂ ಜಲ್ಪನ್ತು ಕಲ್ಪೇ ವಿಧೌ ।
ಸಿದ್ಧಾನ್ತೇ ಪುನರೇಕ ಏವ ಭಗವಾನ್ವಿಷ್ಣುಃ ಸಮಸ್ತಾಗಮ ।
ವ್ಯಾಪಾರೇಷು ವಿವೇಕಿನಾಂ ವ್ಯತಿಕರಂ ನೀತೇಷು ನಿಶ್ಚೀಯತೇ ॥ ೨೬ ॥

ಭವೋ ಬ್ರಹ್ಮಾ ಚ ವಿಷ್ಣುಶ್ಚ ತ್ರಯಮೇವ ತ್ರಯೀಮತಾ ।
ದೀಪೋಽಗ್ನಿರ್ವರ್ತಿಸ್ನೇಹೈಸ್ತು ಯಥಾ ವಿಪ್ರ ತಥಾ ಹರಿಃ ॥ ೨೭ ॥

ಅನಾರಾಧ್ಯ ಹರಿಂ ಭಕ್ತ್ಯಾ ಗೋಲೋಕಾನ್ಪ್ರಾಪ್ನುಯಾಚ್ಛುಭಾನ್ ।
ಆರಾಧಿತೇ ಹರೌ ಕಾಮಾಃ ಸರ್ವೇ ಕರತಲೇ ಸ್ಥಿತಾಃ ॥ ೨೮ ॥

---

೨೪-೨೫. ಯಾವುದನ್ನು ಒಬ್ಬರಿಗೂ ಹೇಳಿಲ್ಲವೋ, ಯಾವುದು ಪರಮ ಗೋಪ್ಯವೋ, ದೊಡ್ಡ ನರಕಗಳನ್ನು ಯಾವುದು ನಾಶಮಾಡುತ್ತದೆಯೋ ಅದನ್ನು ಹೇಳಕೂಡದಾದರೂ, ನಿನ್ನ ವಿನಯದಿಂದ ತುಷ್ಟನಾಗಿ ಹೇಳುತ್ತೇನೆ.

೨೬. ಚರಾಚರಾತ್ಮವಾದ ಈ ಜಗತ್ತಿಗೆ ಭ್ರಮೆಯನ್ನುಂಟುಮಾಡಲು ಪುರಾಣಗಳು ವೇದಗಳು ಅವುಗಳಲ್ಲಿರುವ ದೇವತೆಗಳು ಬೇಕಾದಷ್ಟಿರಲಿ. ಅವನ್ನೂ ಆಯಾ ಶಾಸ್ತ್ರರೀತಿಯಲ್ಲಿ ಬೇರೆ ಬೇರೆಯಾಗಿ ಬೇಕಾದ ದೇವರುಗಳನ್ನಾಗಿ ಹೇಳಲಿ. ಸಿದ್ಧಾಂತದಲ್ಲಿ ಮಾತ್ರ ಭಗವಂತನೂ, ಸರ್ವಶಕ್ತನೂ ಆದ ವಿಷ್ಣುವು ವಿವೇಕಿಗಳ ನೀತಿಯ ಪ್ರಕಾರ ಒಬ್ಬನೇ ಎಂದು ನಿಶ್ಚಯಿಸಲ್ಪಟ್ಟಿದ್ದಾನೆ.

೨೭. ಈಶ್ವರ, ಬ್ರಹ್ಮ, ವಿಷ್ಣುಗಳೆಂಬ ಮೂವರೇ ದೇವರು. ವೇದ ಸಮ್ಮತರಾದವರು. ದೀಪ ಒಂದೇ ಆದರೂ ಅಗ್ನಿ, ಬತ್ತಿ, ಎಣ್ಣೆಗಳಿಂದ ಹೇಗೆ ಭಿನ್ನವೆನ್ನುತ್ತೇವೋ ಹಾಗೆ ಹರಿಯು ಈ ಭೇದದಿಂದಿದ್ದರೂ, ಒಬ್ಬನೆಂದೇ ಹೇಳಬೇಕು.

೨೮. ಹರಿಯನ್ನು ಆರಾಧಿಸದಿದ್ದರೂ ಗೋಗಳನ್ನು ಸೇವಿಸಿದರೆ ಶ್ರೇಯಸ್ಸನ್ನು ಪಡೆಯಬಹುದು. ಹರಿಯನ್ನು ಆರಾಧಿಸಿದರೆ ಎಲ್ಲಾ ಇಷ್ಟಾರ್ಥಗಳೂ ಕೈಯ್ಯಲ್ಲೇ ಇರುತ್ತವೆ.

ಅನಾರಾಧ್ಯ ಹರಿಂ ಲೋಕೇ ಸರ್ವದಂ ಸರ್ವದೇಹಿನಾಂ ।
ಕೋಽಪಿ ಕ್ವಾಪಿ ಕಿಮಪ್ಯತ್ರ ನ ಲಭೇತೇತಿ ನಿಶ್ಚಿತಂ ॥ ೨೯ ॥

ಅಪತ್ಯಂ ಭೂಷಣಂ ದಾರಾಸ್ಸಸರ್ಜ ಪರಮೇಶ್ವರಃ ।
ರಜಸ್ತಮೋಭ್ಯಾಂ ಯುಕ್ತೋ ಭೂದ್ರಜಸ್ಸತ್ವಾಧಿಕಂ ವಿಭುಃ ॥ ೩೦ ॥

ಸಸರ್ಜ ನಾಭಿಕಮಲೇ ಬ್ರಹ್ಮಾಣಂ ಕಮಲಾಸನಂ ।
ರಜಸಾ ತಮಸಾ ಜುಷ್ಟಂ ಸ ರುದ್ರಮಸೃಜತ್ಪ್ರಭುಃ ॥ ೩೧ ॥

ಸತ್ವಂ ರಜಸ್ತಮಶ್ಚೈವ ತ್ರಿತಯಂ ಚೈತದುಚ್ಯತೇ ।
ಸತ್ವೇನ ಮುಚ್ಯತೇ ಜನ್ತುತಿ ಸತ್ವಂ ನಾರಾಯಣಾತ್ಮಕಂ ॥ ೩೨ ॥

ರಜಸಾ ಸತ್ವಯುಕ್ತೇನ ಭವೇಚ್ಛ್ರೀಮಾನ್ಯಶೋಽಧಿಕಃ ।
ಯದ್ವೇದವಾಕ್ಯಂ ಧರ್ಮಸ್ಯ ತಮುದ್ದಿಶ್ಯೋಪಸೇವ್ಯತೇ ॥ ೩೩ ॥

---

೨೯. ಎಲ್ಲಾ ಪ್ರಾಣಿಗಳಿಗೂ ಸಮಸ್ತವನ್ನೂ ಕೊಡುವ ಹರಿಯನ್ನು ಜನವು ಪೂಜಿಸದೆ ಯಾವನೂ ಎಲ್ಲಿಯೂ ಏನನ್ನೂ ಹೊಂದಲಾರನೆಂಬುದು ಸಿದ್ಧಾಂತವು.

೩೦. ಈಶ್ವರನು ಮಕ್ಕಳನ್ನೂ ಭೂಷಣವನ್ನೂ ಹೆಂಡಿರನ್ನೂ ಕಲ್ಪಿಸಿದನು. ಅವು ರಜಸ್ತಮೋಗುಣಗಳಿಂದ ಕೂಡಿರುವುವು. ರಜಸ್ಸನ್ನು ಸತ್ವದಿಂದ ಹೆಚ್ಚಿಸಿ ಕೊಂಡು ಇರುವನು.

೩೧. ಕಮಲಾಸನನಾದ ಬ್ರಹ್ಮನನ್ನು ನಾಭಿಕಮಲದಲ್ಲಿ ಸೃಷ್ಟಿಸಿದನು. ಆತನು ರಜೋಗುಣದಿಂದ ಕೂಡಿಕೊಂಡಿರುವಂತೆ ಮಾಡಿದನು. ಮತ್ತು ತಮೋ ಗುಣವನ್ನು ಸೇರಿಸಿ ರುದ್ರನನ್ನೂ ಸೃಷ್ಟಿಸಿದನು.

೩೨. ಈ ಮೂವರೂ, ಸತ್ವ, ರಜಸ್ತಮೋಗುಣರೂಪರೆಂದು ಹೇಳಲ್ಪಟ್ಟಿದ್ದಾರೆ ಸತ್ವಗುಣದಿಂದ ಜಂತುವಿಗೆ ಮೋಕ್ಷವುಂಟು. ಶ್ರೀಮನ್ನಾರಾಯಣನೇ ಸತ್ವಗುಣಾತ್ಮಕನು.

೩೩ ಸತ್ವದಿಂದ ಕೂಡಿದ ರಜೋಗುಣದಿಂದ ಶ್ರೀಮಂತನೂ, ಯಶಸ್ವಿಯೂ ಆಗುತ್ತಾನೆ. ಆತನು ವೇದವಾಕ್ಯದಿಂದ ಹೇಳಲ್ಪಟ್ಟ ಧರ್ಮವನ್ನು ಸೇವಿಸುತ್ತಾನೆ.

ರುದ್ರಸ್ತ್ರಮಿತಿ ವಿಖ್ಯಾತಂ ಕನಿಷ್ಠಂ ಗದಿತಂ ನೃಣಾಂ ।
ತೇನ ರಾಜಾ ಭವೇಲ್ಲೋಕೇ ರಜಸಾ ತಮಸಾ ಯುತಃ ॥ ೩೪ ॥

ಯುದ್ವೀನಂ ರಜಸಾ ಕರ್ಮ ಕೇವಲಂ ತಾಮಸಂ ಚ ಯತ್ ।
ತತ್ತು ದುರ್ಗತಿದಂ ನೃಣಾಮಿಹಲೋಕೇ ಪರತ್ರ ಚ ॥ ೩೫ ॥

ಯೋ ವಿಷ್ಣುಸ್ಸಸ್ವಯಂ ಬ್ರಹ್ಮಾ ಯೋ ಬ್ರಹ್ಮಾ ಸ ಸ್ವಯಂ ಹರಃ ।
ದೇವಾಸ್ತ್ರಯೋಽಪಿ ಯಷ್ಟೇಽಸ್ಮಿನ್ನಿಜ್ಯಾ ದೇವೇಷು ನಿತ್ಯಶಃ ॥ ೩೬ ॥

ಯೋ ಭೇದಂ ಕುರುತೇ ತೇಷಾಂ ತ್ರಯಾಣಾಂ ದ್ವಿಜಸತ್ತಮ ।
ಸ ಪಾಪಕಾರೀ ಪಾಪಾತ್ಮಾ ಹ್ಯನಿಷ್ಟಾಂ ಗತಿಮಾಪ್ನುಯಾತ್ ॥ ೩೭ ॥

ವಿಷ್ಣುರೇವ ಪರಂ ಬ್ರಹ್ಮ ವಿಷ್ಣುರೇವ ಜಗದ್ವಿಜ ।
ತಸ್ಯಾಯಂ ಮಾಧವೋ ಮಾಸಃ ಪ್ರಿಯಸ್ಸರ್ವೇಷು ಕರ್ಮಸು ॥ ೩೮ ॥

ಕೀರ್ತ್ಯತೇ ಹ್ಯಶ್ವಮೇಧಾದಿ ಮಹಾಕ್ರತುಫಲಪ್ರದಃ ।
ತೀರ್ಥಸ್ನಾನತಪೋದಾನಜಪಯಜ್ಞಫಲಾಧಿಕಃ ॥ ೩೯ ॥

---

೩೪. ಕೊನೆಯದಾಗಿ ಯಾವ ತಮಸ್ಸನ್ನು ರುದ್ರರೂಪೆಂದು ಹೇಳಿದೆವೋ ಅದರಿಂದ ಲೋಕದಲ್ಲಿ ರಾಜನಾಗಿ ಹುಟ್ಟುತ್ತಾನೆ. ಅವನು ರಜಸ್ಸು, ತಮಸ್ಸುಗಳಿಂದ ಕೂಡಿರುತ್ತಾನೆ.

೩೫. ರಜೋಗುಣದಿಂದ ಕೂಡಿದ ಕೇವಲ ತಾಮಸಾತ್ಮಕವಾದ ಕೆಲಸವು ಲೋಕದಲ್ಲಿ ಮನುಷ್ಯರಿಗೆ ಇಹಪರಗಳಲ್ಲಿ ಕೆಡುಕನ್ನು ಮಾಡುತ್ತದೆ.

೩೬. ವಿಷ್ಣುವೆಂಬುವನೇ ಬ್ರಹ್ಮನು, ಬ್ರಹ್ಮನೆಂಬುವನೇ ರುದ್ರನು. ಇವರೊಬ್ಬೊಬ್ಬರಿಗೆ ಭೇದವಿಲ್ಲ. ಈ ಮೂವರನ್ನೇ ದೇವತೆಗಳೊಳಗೆ ಪೂಜಿಸಬೇಕು.

೩೭. ಈ ಮೂವರಲ್ಲಿ ಯಾರು ಭೇದಬುದ್ಧಿಯನ್ನಿಡುತ್ತಾರೋ, ಅಂತಹ ಪಾಪಿಗಳು ದುರ್ಗತಿಯನ್ನು ಇಹಪರಗಳಲ್ಲಿ ಹೊಂದುತ್ತಾರೆ.

೩೮. ವಿಷ್ಣುವೇ ಪರಬ್ರಹ್ಮನು. ವಿಷ್ಣುವೇ ಜಗತ್ತು. ಈ ವೈಶಾಖಮಾಸವು ಎಲ್ಲಾ ಕರ್ಮಗಳಲ್ಲಿಯೂ, ಅವನಿಗೆ ಪ್ರಿಯವಾದುದು.

೩೯. ಅಶ್ವಮೇಧವೇ ಮುಂತಾದ ಮಹಾಯಾಗಗಳು ತೀರ್ಥಸ್ನಾನ, ತಪಸ್ಸು ದಾನ ಜಪಯಜ್ಞಗಳ ಫಲಕ್ಕಿಂತ ಈ ವೈಶಾಖ ಪುಣ್ಯವು ಅಧಿಕವೆಂದು ಹೇಳಲ್ಪಟ್ಟಿದೆ.

ಸ್ನಾನಂ ಪ್ರಭಾತೇ ನಿಯಮೇನ ನದ್ಯಾ-
ಮನಾತರಂ ಮೇಷಗತೇ ರವೌ ಯೇ ।
ಕುರ್ವಂತಿ ಯೇಽಸ್ಮಿನ್ನಪಿ ವಿಪ್ರಪೂಜಾಂ
ಮದ್ದಂಡಭಾಜೋಽಹಿ ನ ತೇ ಭವಂತಿ ॥ ೪೦ ॥

ಹತ್ವಾ ಹತ್ವಾ ಕಿಂಕರೌಘಂ ಪುರೋ ಮೇ
ಪೃಷ್ಟ್ವಾ ಪೃಷ್ಟ್ವಾ ಚಿತ್ರಗುಪ್ತಸ್ಯ ಲೇಖ್ಯಂ ।
ಸ್ನಾತ್ವಾ ಸ್ನಾತ್ವಾ ಮಾಧವೇ ಮಾಸಿ ತೀರ್ಥೇ
ಪೂರ್ವಾನ್ಪೂರ್ವಾನುದ್ಧರಂತೀಹ ಪಾಪಾತ್ ॥ ೪೧ ॥

ಇದಂ ಭವಚ್ಛೇದಕರಂ ನ ತಸ್ಮಾ
ತ್ಪ್ರಕಾಶನೀಯಂ ಪರಮಂ ರಹಸ್ಯಂ ।
ನಿರ್ವಾಸಹೇತುರ್ನರಕಾಲಯಸ್ಯ
ಮಮಾಧಿಕಾರಕ್ಷಯಕಾರಣಂ ತತ್ ॥ ೪೨ ॥

ಭಾಗೀರಥೀ ನರ್ಮದಾ ಚ ಯಮುನಾ ಚ ಸರಸ್ವತೀ।
ವಿಶೋಕಾ ಚ ವಿತಸ್ತಾ ಚ ವಿಂಧ್ಯಸ್ಯೋತ್ತರತಸ್ಥಿತಾಃ ॥ ೪೩ ॥

---

೪೦. ರವಿಯು ಮೇಷಮಾಸದಲ್ಲಿರುವಾಗ ಪ್ರಾತಃಸ್ನಾನವನ್ನು ಯಾವಾಗಲೂ ಯಾರು ಮಾಡುತ್ತಾರೋ ಅವನು ನನ್ನ ಶಿಕ್ಷೆಗೆ ಗುರಿಯಾಗುವುದಿಲ್ಲ.

೪೧. ವೈಶಾಖಮಾಸದಲ್ಲಿ ಪದೇ ಪದೇ ಸ್ನಾನಮಾಡಿದವರು ನನ್ನೆದುರಿಗೇ ನನ್ನ ಆಳುಗಳನ್ನು ಹೊಡೆಯುತ್ತಾರೆ. ಚಿತ್ರಗುಪ್ತನ ಲೇಖನವನ್ನು ಓದಿಸಿ ಕೇಳುತ್ತಾರೆ. ಮತ್ತು ತಮ್ಮ ಪೂರ್ವೀಕರನ್ನೂ ಪಾಪದಿಂದ ಉದ್ಧರಿಸುತ್ತಾರೆ.

೪೨. ಇದು ರಹಸ್ಯವಾದುದು. ಸಂಸಾರದಿಂದ ಉದ್ಧರಿಸತಕ್ಕದ್ದು. ನರಕದಿಂದ ಪಾರುಮಾಡುವುದು. ನನ್ನ ಅಧಿಕಾರಕ್ಕೂ ನ್ಯೂನತೆಯನ್ನೂ ತರತಕ್ಕದು. ಆದ್ದರಿಂದ ಇದನ್ನು ಪ್ರಕಾಶಿಸದೇ ಗುಟ್ಟಾಗಿಟ್ಟಿರಬೇಕು.

೪೩. ಭಾಗೀರಥೀ, ನರ್ಮದೇ, ಯಮುನೇ, ಸರಸ್ವತಿ, ವಿಶೋಕಾ, ವಿತಸ್ತಾ ಎಂಬಿವು ವಿಂಧ್ಯದ ಉತ್ತರದಲ್ಲಿರುವ ನದಿಗಳು.

ಗೋದಾವರೀ ಭೀಮರಥೀ ತುಂಗಭದ್ರಾ ಚ ವೇದಿಕಾ ।
ತಾಪೀ ಪಯೋಷ್ಣೀ ವಿಂಧ್ಯಸ್ಯ ದಕ್ಷಿಣೇ ತು ಪ್ರಕೀರ್ತಿತಾಃ ॥ ೪೪ ॥

ದ್ವಾದಶೈತಾ ಮಹಾನದ್ಯೋ ನಿತ್ಯಂ ತೇನಾವಗಾಹಿತಾಃ ।
ವೈಶಾಖೇ ವಿಧಿನಾ ಸ್ನಾನಂ ನದ್ಯಾಂ ಯಃ ಪ್ರಾತರಾಚರೇತ್ ॥ ೪೫ ॥

ಸರ್ವಾಸಮುದ್ರಗಾಃ ಪುಣ್ಯಾಃ ಸರ್ವೇ ಪುಣ್ಯಾ ಜಲಾಶಯಾಃ ।
ಸರ್ವಮಾಯತನಂ ಪುಣ್ಯಂ ಸರ್ವೇ ಪುಣ್ಯಾ ವರಾಶ್ರಮಾಃ ॥ ೪೬ ॥

ತೇನಾವಗಾಹಿತಾ ದೃಷ್ಟಾಃ ಪ್ರಣತಾ ಬಹುಸೇವಿತಾಃ ।
ಸ್ನಾನಮರ್ಧೋದಿತೇ ಸೂರ್ಯೇ ವೈಶಾಖೇ ನಿಯತಶ್ಚರೇತ್ ॥ ೪೭ ॥

ತಸ್ಯ ಪುಣ್ಯಂ ಮಹೀದೇವ ಕಿಂಚಿದ್ವಕ್ತುಂ ನ ಶಕ್ಯತೇ ।
ಯದಿ ವಕ್ತ್ರಸಹಸ್ರಾಣಾಂ ಸಹಸ್ರಾಣಿ ಭವಂತಿ ಚ ॥ ೪೮ ॥

---

೪೪. ಗೋದಾವರೀ, ಭೀಮರಥಿ, ತುಂಗಭದ್ರೆ, ವೇದಾವತಿ, ತಾಪಿ, ಪಯೋಷ್ಣೀ, ಇವು ವಿಂದ್ಯದ ದಕ್ಷಿಣದಲ್ಲಿರುವ ನದಿಗಳು.

೪೫. ಇವು ಹನ್ನೆರಡೂ ಮಹಾನದಿಗಳು. ಇವುಗಳಲ್ಲಿ ನಿತ್ಯವೂ ಸ್ನಾನ ಮಾಡಬೇಕು ವೈಶಾಖದಲ್ಲಿ ವಿಧಿವತ್ತಾಗಿ ಇವುಗಳಲ್ಲಿ ಪ್ರಾತಃಸ್ನಾನಮಾಡಬೇಕು

೪೬. ವೈಶಾಖದಲ್ಲಿ ಸಮುದ್ರವನ್ನು ಸೇರುವ ನದಿಗಳೆಲ್ಲಾ ಪುಣ್ಯನದಿಗಳು. ಎಲ್ಲಾ ನೀರಿರುವ ಸ್ಥಳಗಳೂ, ಪುಣ್ಯಗಳೇ. ಎಲ್ಲಾ ದೇವಸ್ಥಾನಗಳೂ ಪುಣ್ಯಗಳೇ. ಆಶ್ರಮಗಳೆಲ್ಲವೂ ಪುಣ್ಯಪ್ರದಗಳೇ.

೪೭. ಅವುಗಳನ್ನು ದರ್ಶನಮಾಡಿ, ಅವುಗಳಲ್ಲಿ ಸ್ನಾನಮಾಡಿ ನಮಸ್ಕರಿಸಿ ಸೇವಿಸಬೇಕು. ಸೂರ್ಯನು ಅರ್ಧ ಉದಯಿಸಿರುವಾಗ ವೈಶಾಖದಲ್ಲಿ ನಿಯಮದಿಂದ ಸ್ನಾನಮಾಡಬೇಕು.

೪೮. ಅಂತಹವನಿಗೆ ಬರುವ ಪುಣ್ಯವನ್ನು ಎಲೈ ಬ್ರಾಹ್ಮಣನೇ ಸಾವಿರಮುಖ ವುಳ್ಳ ಆದಿಶೇಷನಿಗೆ ಒಂದೊಂದು ಮುಖ, ಮತ್ತೆ ಸಾವಿರದಂತೆ ಹೆಚ್ಚಿದರೂ ಹೇಳಲಾಗುವುದಿಲ್ಲ.

ಆಯುಶ್ಚ ಬ್ರಹ್ಮಣಾ ತುಲ್ಯಂ ಯದಿಸ್ಯಾದ್ದ್ವಿಜಸತ್ತಮ ।
ತದಾ ಮಾಧವಮಾಸಸ್ಯ ಫಲಂ ಕಥಯಿತುಂ ಭವೇತ್ ॥ ೪೯ ॥

ಮಹಾನಿರಯಕಕ್ಷಾಗ್ನಿರ್ಮಾಧವೋ ಮಾಧವೋ ಯಥಾ ।
ಬ್ರಹ್ಮಹತ್ಯಾದಿಕಂಪಾಪಮಗಮ್ಯಾಗಮನಾದಿಕಂ ॥ ೫೦ ॥

ಕಾಮಾಕಾಮಕೃತಂ ಪಾಪಮತಿಪಾತಕಮೇವ ಚ ।
ಉಪಪಾಪಂ ರಹಸ್ಯಂ ಚ ಸಂಕರೀಕರಣಂ ಪರಂ ॥ ೫೧ ॥

ಜಾತಿಭ್ರಂಶಕರಂ ಘೋರಂ ಯಚ್ಛಿತ್ರೀಕರಣಂ ತಥಾ ।
ಮಲಾವಹಂ ಪ್ರಕೀರ್ಣಂ ಚ ವಾಙ್ಮನಃಕಾಯ ಸಂಭವಂ ॥ ೫೨ ॥

ಮಾಧವೋ ನಿರ್ದಹೇನ್ಮಾಸೋ ವಿಧಿನಾ ಸಮುಪಾಸಿತಃ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ವಸೇದ್ವಿಷ್ಣುಪುರೇ ಶ್ರೀಮಾನ್ಮಾಧವೇ ಯೋಽರ್ಚಯೇದ್ಧರಿಂ ॥ ೫೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ತ್ರಿನವತಿತಮೋಽಧ್ಯಾಯಃ

---

೪೯. ಆಯುಸ್ಸು ಬ್ರಹ್ಮನ ಆಯುಸ್ಸಿನಷ್ಟಾದರೆ ಆಗ ಆ ವೈಶಾಖದ ಪುಣ್ಯ ಫಲವನ್ನು ಹೇಳಲು ಸಾಧ್ಯವಾದೀತು.

೫೦-೫೩. ವೈಶಾಖಮಾಸವು ವಿಷ್ಣುವಿನಂತೆ ಮಹಾನರಕವನ್ನು ಸುಡುವ ಅಗ್ನಿಯು. ಬ್ರಹ್ಮಹತ್ಯಾದಿಗಳು, ಅಗಮ್ಯಾಗಮನ, ಇಚ್ಛೆಯಿಂದ, ಇಚ್ಛೆಯಿಲ್ಲದುದರಿಂದ ಮಾಡಿದ ಮಹಾಪಾತಕಗಳು, ಉಪಪಾತಕಗಳು, ರಹಸ್ಯಪಾಪ, ಮಲಾವಹಾಪಾಪ, ಪ್ರಕೀರ್ಣಪಾಪ, ಮನೋವಾಕ್ಕಾಯಗಳಿಂದ ಮಾಡಿದ ಪಾಪವನ್ನೆಲ್ಲಾ ವೈಶಾಖಮಾಸವು ವಿಧಿವತ್ತಾಗಿ ಸೇವಿಸಿದರೆ ನಾಶಮಾಡುವುದು. ಯಾವನು ವೈಶಾಖ ಮಾಸದಲ್ಲಿ ವಿಷ್ಣುವನ್ನು ಪೂಜಿಸುವನೋ ಅವನು ನೂರುಕೋಟಿ ಮತ್ತು ಸಾವಿರ ಕೋಟಿ ಕಲ್ಪಗಳ ಕಾಲದವರೆಗೆ ವೈಕುಂಠದಲ್ಲಿ ವಾಸಮಾಡುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೆಂಬ
ತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಚತುರ್ನವತಿತಮೋಽಧ್ಯಾಯಃ ॥



॥ ಸೂತ ಉವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ಧರ್ಮರಾಜಸ್ಯ ಭೂಸುರಃ ।
ಪುನಃಪಪ್ರಚ್ಛ ಮಾಸಸ್ಯ ಮಾಧವಸ್ಯ ವಿಧಿಂ ಶುಭಂ ॥ ೧ ॥

॥ ಬ್ರಾಹ್ಮಣ ಉವಾಚ ॥

ಧರ್ಮರಾಜ ಮಹಾಭಾಗ ಸಮ್ಯಗ್ಗುಹ್ಯಂ ಪ್ರಕಾಶಿತಂ ।
ಮಾಧವಸ್ನಾನಜಂ ಪುಣ್ಯಂ ನರಾಣಾಂ ಮುಕ್ತಿದಂ ಪರಂ ॥ ೨ ॥

ಮಾಧವಂ ಮಾಧವೇ ಮಾಸಿ ಸ್ನಾತ್ವಾ ಪ್ರಾತಃಸಮಾಹಿತಃ ।
ಕಥಂ ಸಂಪೂಜಯೇದ್ದೇವಂ ಕೈಃ ಪುಷ್ಪೈಸ್ತದ್ವಿಧಿಂ ವದ ॥ ೩ ॥

---

## ತೊಂಭತ್ತನಾಲ್ಕನೆಯ ಅಧ್ಯಾಯವು

೧. ಸೂತನು ಹೇಳಿದನು– ಇದನ್ನು ಕೇಳಿ ಆ ಬ್ರಾಹ್ಮಣನು ಧರ್ಮರಾಜನನ್ನು ಕುರಿತು ವೈಶಾಖದ ವಿಧಿಯನ್ನು ಮತ್ತೂ ಹೇಳಿದನು.

೨. ಬ್ರಾಹ್ಮಣನು ಹೇಳಿದನು– ಎಲೈ ಧರ್ಮರಾಜನೇ ನರರಿಗೆ ಮುಕ್ತಿಯನ್ನು ಕೊಡುವ ವೈಶಾಖಮಾಸದ ಪುಣ್ಯಪ್ರದವಾದ ಗುಟ್ಟು ವಿಷಯವನ್ನು ಹೇಳಿದ್ದೀಯೆ.

೩. ವೈಶಾಖಮಾಸದಲ್ಲಿ ಪ್ರಾತಃಸ್ನಾನಮಾಡಿಕೊಂಡು ವಿಷ್ಣುವನ್ನು ಯಾವ ಪುಷ್ಪಗಳಿಂದ ಹೇಗೆ ಪೂಜಿಸಬೇಕೆಂಬುದನ್ನು ಹೇಳು.

॥ ಧರ್ಮರಾಜ ಉವಾಚ ॥

ಸರ್ವೇಷಾಂ ಪತ್ರಜಾತೀನಾಂ ತುಳಸೀ ಕೇಶವಪ್ರಿಯಾ ।
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ ॥ ೪ ॥

ವಾಸುದೇವಾದಯೋ ದೇವಾ ವಸಂತಿ ತುಳಸೀದಳೇ ।
ಸರ್ವದಾ ಸರ್ವಕಾಲೇಷು ತುಳಸೀ ವಿಷ್ಣುವಲ್ಲಭಾ ॥ ೫ ॥

ತ್ಯಕ್ತ್ವಾ ತು ಮಾಲತೀಪುಷ್ಪಂ ತ್ಯಕ್ತ್ವಾ ಚೈವ ಸರೋರುಹಂ ।
ಗೃಹೀತ್ವಾ ತುಳಸೀಪತ್ರಂ ಭಕ್ತ್ಯಾ ಮಾಧವಮರ್ಚಯೇತ್ ॥ ೬ ॥

ತಸ್ಯ ಪುಣ್ಯಫಲಂ ವಕ್ತುಮಲಂ ಶೇಷೋಽಪಿ ನೋ ಭವೇತ್ ।
ಅಸ್ನಾತ್ವಾ ತುಳಸೀಂ ಛಿತ್ವಾ ದೇವಾರ್ಥಂ ಪಿತೃಕರ್ಮಣಿ ॥ ೭ ॥

ತತ್ಸರ್ವಂ ನಿಷ್ಫಲಂ ಯಾತಿ ಪಂಚಗವ್ಯೇನ ಶುದ್ಧ್ಯತಿ ।
ದಾರಿದ್ರ್ಯ ದುಃಖಭೋಗಾದಿ ಪಾಪಾನಿ ಸುಬಹೂನ್ಯಪಿ ॥ ೮ ॥

---

೪-೫. ಧರ್ಮರಾಜನು ಹೇಳಿದನು- ಎಲ್ಲಾ ಪತ್ರೆಯ ಜಾತಿಗಳಲ್ಲಿಯೂ, ತುಳಸಿಯು ಕೇಶವನಿಗೆ ಪ್ರಿಯವಾದುದು. ಪುಷ್ಕರವೇ ಮುಂತಾದ ತೀರ್ಥಗಳೂ ವಾಸುದೇವನೇ ಮುಂತಾದ ದೇವರೂ, ತುಳಸೀ ದಳದಲ್ಲಿ ವಾಸಿಸುತ್ತಾರೆ. ಎಲ್ಲಾ ಕಾಲದಲ್ಲೂ ಯಾವಾಗಲೂ, ತುಳಸಿಯು ವಿಷ್ಣುವಿಗೆ ಪ್ರಿಯವಾದುದು.

೬ ಜಾಜಿ, ಕಮಲಗಳನ್ನು ಬಿಟ್ಟು, ಮಿಕ್ಕ ಹೂಗಳಿಂದಲೂ, ತುಳಸಿಯಿಂದಲೂ ಭಕ್ತಿಯಿಂದ ಗೋವಿಂದನನ್ನು ಪೂಜಿಸಬೇಕು.

೭-೧೫. ಅವರ ಪುಣ್ಯಫಲವನ್ನು ಹೇಳಲು ಶೇಷನೂ ಸಮರ್ಥನಲ್ಲ. ಸ್ನಾನ ಮಾಡದೆ ತುಳಸಿಯನ್ನು ಕೊಯ್ದು ದೇವಕರ್ಮಕ್ಕಾಗಲೀ, ಪಿತೃಕರ್ಮಕ್ಕಾಗಲೀ ಉಪಯೋಗಿಸಿದರೆ ಅದೆಲ್ಲವೂ ನಿಷ್ಫಲವಾಗುತ್ತದೆ. ಅನಂತರ ಪಂಚಗವ್ಯದಿಂದ ಶುದ್ಧನಾಗುತ್ತಾನೆ. ದಾರಿದ್ರ್ಯ ದುಃಖವನ್ನೂ ಅನೇಕವಿಧವಾದ ಪಾಪಗಳನ್ನೂ,

ತುಳಸೀ ಹರತೇ ಕ್ಷಿಪ್ರಂ ರೋಗಾನಿವ ಹರೀತಕೀ ।
ತುಳಸೀ ಕೃಷ್ಣಗೌರಾಖ್ಯಾ ತಯಾಭ್ಯರ್ಚ್ಯ ಮಧುದ್ವಿಷಂ ॥ ೯ ॥

ವಿಶೇಷೇಣ ಹರೇರ್ಭಕ್ತೋ ನರೋ ನಾರಾಯಣೋ ಭವೇತ್ ।
ಮಾಧವಂ ಸಕಲಂ ಮಾಸಂ ತುಲಸ್ಯಾ ಯೋಽರ್ಚಯೇದ್ಧರಿಂ ॥ ೧೦ ॥

ತ್ರಿಸಂಧ್ಯಂ ಮಧುಹಂತಾರಂ ನಾಸ್ತಿ ತಸ್ಯ ಪುನರ್ಭವಃ ।
ಅಲಾಭೇ ಪುಷ್ಪಪತ್ರಾಣಾಮನ್ನಾದ್ಯೇನಾಪಿ ಪೂಜಯೇತ್ ॥ ೧೧ ॥

ಶಾಲಿ ಗೋಧೂಮ ತಂಡೂಲಯವೈರ್ವಾಪಿ ಹರಿಂ ಸದಾ ।
ಕುರ್ಯಾತ್ಪ್ರದಕ್ಷಿಣಂ ತಂ ತು ಸರ್ವದೇವಮಯಂ ತತಃ ॥ ೧೨ ॥

ಪಿತೃದೇವಮನುಷ್ಯಾಂಶ್ಚ ತರ್ಪಯೇತ್ಸಚರಾಚರಂ ।
ಯೋಽಶ್ವತ್ಥಮರ್ಚಯೇದ್ದೇವಮುದಕೇನ ಸಮನ್ತತಃ ॥ ೧೩ ॥

ಕುಲಾನಾಮಯುತಂ ತೇನ ತಾರಿತಂ ಸ್ಯಾನ್ನಸಂಶಯಃ ।
ಅಲಕ್ಷ್ಮೀಃ ಕಾಲಕರ್ಣೀ ಚ ದುಸ್ಸ್ವಪ್ನಂ ದುರ್ವಿಚಿನ್ತಿತಂ ॥ ೧೪ ॥

---

ಅಳಲೆ ಕಾಯಿಯು ರೋಗವನ್ನು ನಾಶಮಾಡುವಂತೆ ತುಳಸಿಯು ನಾಶಮಾಡುತ್ತದೆ. ಕಪ್ಪುಕಾಂತಿಯುಳ್ಳ ತುಳಸಿಯಿಂದ ವಿಷ್ಣುವನ್ನು ಪೂಜಿಸಿದರೆ ಅವರಲ್ಲೂ ಭಕ್ತನೂ ಆಗಿದ್ದರೆ ಆ ಮನುಷ್ಯನು ನಾರಾಯಣನೇ ಆಗುತ್ತಾನೆ. ವೈಶಾಖಮಾಸ ಪೂರ್ತಿಯಾಗಿ ಹರಿಯನ್ನು ಮೂರು ಹೊತ್ತೂ ತುಳಸಿಯಿಂದ ಪೂಜಿಸಿದರೆ ಅವನು ಪುನರ್ಜನ್ಮವನ್ನು ಹೊಂದುವುದಿಲ್ಲ. ಹೂಪತ್ರೆಗಳು ಸಿಕ್ಕದಿದ್ದಲ್ಲಿ ಶಾಲಿ ಎಂಬ ಧಾನ್ಯ, ಗೋಧಿ, ಅಕ್ಕಿ, ಯವ ಇವುಗಳ ಅಕ್ಕಿಗಳಿಂದ ಹರಿಯನ್ನು ಪೂಜಿಸಬೇಕು ಆಮೇಲೆ ಸರ್ವದೇವ ಸ್ವರೂಪನಾದ ಆ ಸ್ವಾಮಿಯನ್ನು ಪ್ರದಕ್ಷಿಣೆಮಾಡಬೇಕು. ಪಿತೃಗಳನ್ನೂ, ದೇವತೆಗಳನ್ನೂ, ಮನುಷ್ಯರನ್ನೂ, ಚರಾಚರಗಳನ್ನೂ ತರ್ಪಣದಿಂದ ಸಂತೋಷಪಡಿಸಬೇಕು. ಅಶ್ವತ್ಥವೃಕ್ಷವನ್ನು ಪೂಜಿಸಿ ಸುತ್ತಲೂ ನೀರುಹಾಕಿದರೆ ಅವನು ಹತ್ತುಸಾವಿರ ಕುಲಗಳನ್ನು ಉದ್ಧರಿಸುತ್ತಾನೆ ಸಂಶಯವಿಲ್ಲ. ಅಲಕ್ಷ್ಮಿಯೂ ಅಕಾಲಮರಣವೂ ದುಸ್ವಪ್ನವೂ, ದುರಾಲೋಚನೆಯೂ, ಸರ್ವದುಃಖಗಳೂ, ಅಶ್ವತ್ಥವನ್ನು ಪೂಜಿ

ಅಶ್ವತ್ಥ ತರ್ಪಣಾತ್ತಾತ ಸರ್ವದುಃಖಂ ವಿನಶ್ಯತಿ ।
ತರ್ಪಿತಾಃ ಪಿತರಸ್ತೇನ ತೇನ ವಿಷ್ಣುಸ್ಸಮರ್ಚಿತಃ ।
ಯೋಽಶ್ವತ್ಥಮರ್ಚಯೇದ್ಧೀಮಾನ್ಗ್ರಹಾಸ್ತೇನೈವ ಪೂಜಿತಾಃ　　॥ ೧೫ ॥

ಶ್ವೇತಾಂಶ್ಚ ಪುಷ್ಪಾಣಿ ತಥಾಕ್ಷತಾಂಶ್ಚ
ಹುತಾಶನಂ ಚಂದನಮರ್ಕಬಿಂಬಂ ।
ಅಶ್ವತ್ಥವೃಕ್ಷಂ ಚ ಸಮಾಲಭೇತ
ತತಶ್ಚ ಕುರ್ಯಾನ್ನಿಜಜಾತಿಧರ್ಮಾನ್　　॥ ೧೬ ॥

ಕೃತ್ವಾಽಷ್ಟಾಂಗಯೋಗನ್ತು ಸ್ನಾತ್ವಾ ಪಿಪ್ಪಲತರ್ಪಣಂ ।
ಕೃತ್ವಾ ಗೋವಿಂದಮಭ್ಯರ್ಚ ನ ಸ ದುರ್ಗತಿಮಾಪ್ನುಯಾತ್　　॥ ೧೭ ॥

ತ್ರಯೋದಶ್ಯಾಂ ಚತುರ್ದಶ್ಯಾಂ ವೈಶಾಖ್ಯಾಂ ಚ ದಿನತ್ರಯಂ ।
ಸರ್ವಾಶಕ್ತೋಽಪಿ ವಿಧಿನಾ ನಾರೀ ವಾ ಪುರುಷೋಽಪಿ ವಾ　　॥ ೧೮ ॥

ಪೂರ್ವೋಕ್ತನಿಯಮೈರ್ಯುಕ್ತಃ ಪ್ರಾತಃಸ್ನಾತ್ವಾ ಸ ಭಕ್ತಿತಃ ।
ವಿಮುಕ್ತಃ ಪಾತಕೈಸ್ಸರ್ವೈಃ ಸ್ವರ್ಗಮಕ್ಷಯಮಶ್ನುತೇ　　॥ ೧೯ ॥

---

ಸುವುದರಿಂದ ಮತ್ತು ತರ್ಪಣ ಮಾಡುವುದರಿಂದ ಹೋಗುತ್ತವೆ. ಆದರಿಂದ ಪಿತೃಗಳೂ, ತೃಪ್ತಿಹೊಂದುತ್ತಾರೆ. ವಿಷ್ಣುವನ್ನು ಪೂಜಿಸಿದಂತಾಗುತ್ತದೆ. ಅಶ್ವತ್ಥವನ್ನು ಪೂಜಿಸಿದರೆ ಗ್ರಹಗಳೆಲ್ಲವನ್ನೂ ಪೂಜಿಸಿದಂತೆ ಆಗುತ್ತದೆ.

೧೬. ಬಿಳಿಯ ಹೂವನ್ನೂ, ಅಕ್ಷತೆಯನ್ನೂ ಬೆಂಕಿಯನ್ನೂ, ಚಂದನವನ್ನೂ ಸೂರ್ಯಬಿಂಬವನ್ನೂ, ಅಶ್ವತ್ಥವೃಕ್ಷವನ್ನೂ ಮುಟ್ಟಬೇಕು. ಆಮೇಲೆ ಜಾತಿಯ ಧರ್ಮಗಳನ್ನೂ ಮಾಡಬೇಕು.

೧೭. ಅಷ್ಟಾಂಗಯೋಗದ ಅಭ್ಯಾಸವನ್ನೂ ಮಾಡಿ ಸ್ನಾನವನ್ನೂ ಮಾಡಿ ಅಶ್ವತ್ಥತರ್ಪಣವನ್ನೂ ಮಾಡಿ ಗೋವಿಂದನನ್ನು ಪೂಜಿಸಿದರೆ ಕೆಟ್ಟಸ್ಥಿತಿಯನ್ನು (ನರಕವನ್ನು) ಹೊಂದುವುದಿಲ್ಲ.

೧೮-೧೯. ಗಂಡಸಾಗಲೀ, ಹೆಂಗಸಾಗಲೀ, ವೈಶಾಖದಲ್ಲಿ ತ್ರಯೋದಶಿ, ಚತುರ್ದಶಿ, ಹಿಂದು ಅಥವಾ ಮುಂದಿನ ಒಂದು ದಿನವನ್ನು ತೆಗೆದುಕೊಂಡು ಮೂರು ದಿನಗಳು ಹಿಂದೆ ಹೇಳಿದ ನಿಯಮದಂತೆ ಭಕ್ತಿಯಿಂದ ಸ್ನಾನಮಾಡಿದರೆ ಪಾಪಗಳಿಂದ ಮುಕ್ತರಾಗಿ ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾರೆ.

ವೈಶಾಖಮಾಸೇ ಯೋ ಭಕ್ತ್ಯಾ ಭೋಜಯೇದ್ಬ್ರಾಹ್ಮಣಾನ್ಮುದಾ ।
ತ್ರಿರಾತ್ರಮುಷಸಿ ಸ್ನಾತ್ವಾ ಸಕೃಚ್ಚ ಪ್ರಯತಶ್ಶುಚಿಃ ॥ ೨೦ ॥

ಗೌರಾನ್ವಾ ಯದಿ ವಾ ಕೃಷ್ಣಾನ್ತಿಲಾನ್ ಕ್ಷೌದ್ರೇಣಸಂಯುತಾನ್ ।
ದತ್ವಾ ದ್ವಾದಶವಿಪ್ರೇಭ್ಯೋ ತೈರೇವ ಸ್ವಸ್ತಿವಾಚಯೇತ್ ॥ ೨೧ ॥

ಪ್ರೀಯತಾಂ ಧರ್ಮರಾಜೋ ಮೇ ಪಿತೃದೇವಾಂಶ್ಚ ತರ್ಪಯೇತ್ ।
ಯಾವಜ್ಜೀವಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೨೨ ॥

ಅಯುತಾಯುತಂ ಚ ತಿಷ್ಠೇತ್ಸಸ್ವರ್ಗೇ ಲೋಕೇ ಯಥಾಸುಖಂ ।
ಮಾಮೇವ ನ ತು ಪಶ್ಯೇತ್ಸ ಪೂಜಿತಃ ಸರ್ವದೈವತೈಃ ॥ ೨೩ ॥

ಪಕ್ವಾನ್ನಮುದಕಾಂತಾನಿ ಪಿತೃದೈವತತುಷ್ಟಯೇ ।
ತ್ರಯೋದಶ್ಯಾಂ ಚತುರ್ದಶ್ಯಾಂ ಪೂರ್ಣಿಮಾಯಾಂ ದಿನತ್ರಯಂ ॥ ೨೪ ॥

ಯೋ ದದ್ಯಾದ್ಭಕ್ತಿತೋ ವಿಪ್ರ ಸರ್ವಪಾಪೈಃ ಪ್ರಮುಚ್ಯತೇ ।
ಸುವರ್ಣತಿಲಪಾತ್ರೈಸ್ತು ಬ್ರಾಹ್ಮಣಂ ಶಕ್ತಿತೋಽನ್ನದಂ ॥ ೨೫ ॥

---

೨೦-೨೧. ವೈಶಾಖದಲ್ಲಿ ಭಕ್ತಿಯಿಂದ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಮೂರು ದಿನ ಪ್ರಾತಃಸ್ನಾನಮಾಡಿ ಶುಚಿಯಾಗಿರಬೇಕು. ಬಿಳಿ, ಅಥವಾ ಕಪ್ಪು ಎಳ್ಳಿನ ಜೊತೆಗೆ ಜೇನನ್ನು ಇಟ್ಟು ಹನ್ನೆರಡು ಜನ ಬ್ರಾಹ್ಮಣರಿಗೆ ಕೊಟ್ಟು ಸ್ವಸ್ತಿವಾಚನವನ್ನು ಹೇಳಿಸಬೇಕು.

೨೨. ಧರ್ಮರಾಜನಿಗೂ, ಪಿತೃಗಳಿಗೂ, ದೇವತೆಗಳಿಗೂ ತರ್ಪಣಕೊಡಬೇಕು. ಹಾಗೆ ಮಾಡಿದರೆ ಹುಟ್ಟಿದ ಮೊದಲು ಮಾಡಿದ ಪಾಪವು ನಾಶವಾಗುತ್ತದೆ.

೨೩. ಹತ್ತು ಸಾವಿರಗಳ ಹತ್ತುಸಾವಿರ ವರ್ಷಗಳವರೆಗೂ ಸ್ವರ್ಗದಲ್ಲಿ ಸುಖವಾಗಿರುತ್ತಾನೆ. ಸರ್ವ ದೇವತೆಗಳೂ ಅವನನ್ನು ಪೂಜಿಸುತ್ತಾರೆ. ಅವನು ನನ್ನನ್ನು ನೋಡುವುದೇ ಇಲ್ಲ.

೨೪-೨೫. ಪಕ್ವವಾದ ಅನ್ನ, ಭಕ್ಷ್ಯ, ನೀರು ಮುಂತಾದುವನ್ನು ಪಿತೃಗಳು ದೇವರು ಇವರ ತೃಪ್ತಿಗೆ ತ್ರಯೋದಶಿ, ಚತುರ್ದಶಿ, ಪೂರ್ಣಿಮೆ ಈ ಮೂರು ದಿನವೂ ಭಕ್ತಿಯಿಂದ ದಾನಮಾಡಿದರೆ ಅವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಚಿನ್ನದ ದಾನದಿಂದಲೂ, ಚಿನ್ನದ ಪಾತ್ರೆಯಲ್ಲಿ ಎಳ್ಳಿನ ದಾನದಿಂದಲೂ,

ತರ್ಪಯೇದುದಪಾತ್ರೈಸ್ತು ಬ್ರಹ್ಮಹತ್ಯಾಂ ವ್ಯಪೋಹತಿ ।
ವೈಶಾಖಪೂರ್ಣಿಮಾಯಾಂ ಚ ಸೃಷ್ಟಾಃ ಕಮಲಯೋನಿನಾ ॥ ೨೬ ॥

ತಿಲಾ ದೇಯಾಶ್ಚ ಭಕ್ಷ್ಯಾಶ್ಚ ಶ್ರೇಯಸ್ಸಂತತಿಹೇತವೇ ।
ಇಹಾರ್ಥೇ ಚ ಪುರಾವೃತ್ತಂ ತದಾಕರ್ಣಯ ಸುವ್ರತ ॥ ೨೭ ॥

ಫಲಂ ಮಾಧವಮಾಸಸ್ಯ ಪೂರ್ಣಾಯಾಂ ಪರಮಾದ್ಭುತಂ ।
ಮೇಷಸಂಕ್ರಮಮಾರಭ್ಯ ತಿಥಯಸ್ತ್ರಿಂಶದುತ್ತಮಾಃ ॥ ೨೮ ॥

ಸರ್ವಯಜ್ಞಾಧಿಕಾಃ ಪುಣ್ಯಾಃ ಪುರಾಣೇಷು ಪ್ರಕೀರ್ತಿತಾಃ ।
ವಿಶೇಷತೋಽಪಿ ತಾಸ್ತಿಸ್ರಃ ಪವಿತ್ರಾಃ ಪಿತೃದುರ್ಲಭಾಃ ॥ ೨೯ ॥

ತತೋಽಪಿ ಪೂರ್ಣಿಮಾ ಪುಣ್ಯಾ ಮಾಧವೀ ಮಾಧವಪ್ರಿಯಾ ।
ಏವಂ ವರಾಹಕಲ್ಪಸ್ಯ ತಿಥಿರಾದ್ಯಾ ಮಹಾಫಲಾ ॥ ೩೦ ॥

ಪುರಾ ನಾರಾಯಣೇನಾಸ್ಯಾಂ ದಿತಿಜೌ ದ್ವಾವಿಮೌ ಹತೌ ।
ಹಿರಣ್ಯಾಕ್ಷ ಮಧೂ ವಿಪ್ರ ಪೃಥಿವೀ ಚ ಸಮುದ್ಧೃತಾ ॥ ೩೧ ॥

---

ಶಕ್ತಿಗನುಸಾರ ಬ್ರಾಹ್ಮಣನನ್ನು ತೃಪ್ತಿಪಡಿಸಬೇಕು. ಉಪಪಾತ್ರೆಗಳನ್ನು ಕೊಡಬೇಕು. ಹಾಗೆ ಮಾಡಿದರೆ ಬ್ರಹ್ಮಹತ್ಯೆಯು ಹೋಗುತ್ತದೆ. ವೈಶಾಖ ಪೂರ್ಣಿಮೆಯ ದಿನ ಬ್ರಹ್ಮನು ಎಳ್ಳನ್ನು ಸೃಷ್ಟಿಸಿದನು. ಆದಿನ ಎಳ್ಳನ್ನು ದಾನಮಾಡಬೇಕು. ತಿನ್ನಲೂ ಬೇಕು. ಆ ರೀತಿಮಾಡಿದರೆ ಶ್ರೇಯಸ್ಸುಂಟಾಗುತ್ತದೆ ವೈಶಾಖಮಾಸದ ಪೂರ್ಣಿಯಾದ ಫಲವು ಬಹು ಆಶ್ಚರ್ಯಕರವಾದುದು. ಮೇಷಸಂಕ್ರಮಣವನ್ನು ಮೊದಲು ಮಾಡಿಕೊಂಡು ಮೂವತ್ತು ದಿನಗಳು ಉತ್ತಮಗಳು.

೨೮. ಎಲ್ಲಾ ಯಜ್ಞಗಳಿಗಿಂಡ ಹೆಚ್ಚುಪುಣ್ಯಗಳುಳ್ಳದೆಂದು ಪುರಾಣದಲ್ಲಿ ಹೇಳಿದೆ. ಅದರಲ್ಲಿಯೂ ತ್ರಯೋದಶಿ, ಚತುರ್ದಶಿ, ಪೂರ್ಣಿಮಾಗಳು ಅತಿಪವಿತ್ರಗಳು ಪಿತೃಗಳಿಗೆ ದುರ್ಲಭಗಳು.

೩೦. ಅವುಗಳಲ್ಲಿಯೂ, ವೈಶಾಖದ ಪೂರ್ಣಿಮೆಯು ವಿಷ್ಣುಪ್ರಿಯವಾಗಿ ಬಹು ಪುಣ್ಯಪ್ರದವಾದುದು. ಈರೀತಿಯಾಗಿಯೇ ವರಾಹಕಲ್ಪದ ಮೊದಲನೆಯ ತಿಥಿಯೂ ಶ್ರೇಷ್ಠವಾದುದು.

೩೧. ಈ ತಿಥಿಯ ದಿನ ಪೂರ್ವದಲ್ಲಿ ನಾರಾಯಣನು ರಾಕ್ಷಸರಾದ ಹಿರಣ್ಯಾಕ್ಷ, ಮಧು ಎಂಬುವರನ್ನು ಕೊಂದು ಪೃಥಿವಿಯನ್ನುದ್ಧರಿಸಿದನು.

ತ್ರಯೋದಶ್ಯಾಂ ಚತುರ್ದಶ್ಯಾಂ ಪೂರ್ಣಿಮಾಯಾಮಯಂ ವಿಭುಃ ।
ಕ್ರಮಾದೇವ ತ್ರಯಂ ಚಕ್ರೇ ಶುಕ್ಲೇಽಸ್ಮಿನ್ಮಾಸಿ ಮಾಧವೇ ॥ ೩೨ ॥

ತತಃ ಪ್ರಭೃತಿವಿಪ್ರೇಂದ್ರ ವಿಶೇಷಾದೇವ ಪೂರ್ಣಿಮಾ ।
ಕಲ್ಪಾದಿಪಾವನೀ ಖ್ಯಾತಾ ಕರ್ಮಣಃ ಕಲ್ಪಸಾಕ್ಷಿಣೀ ॥ ೩೩ ॥

ಯೇನ ಸ್ನಾತಂ ನ ವೈಶಾಖೇ ಪ್ರಾತರ್ನಿಯಮಶಾಲಿನಾ ।
ಕಿಂ ತಸ್ಯ ಜನ್ಮನಾ ವಿಪ್ರ ನೂನಮಾತ್ಮಾಪಹಾರಿಣಾ ॥ ೩೪ ॥

ತ್ರಯೋದಶ್ಯಾಂ ಚತುರ್ದಶ್ಯಾಂ ಪೌರ್ಣಮಾಸ್ಯಾಂ ವಿಶೇಷತಃ ।
ಅಪಿಸಮ್ಯಗ್ವಿಧಾನೇನ ನಾರೀ ವಾ ಪುರುಷೋಽಪಿ ವಾ ॥ ೩೫ ॥

ಪ್ರಾತಃಸ್ನಾನಂ ಸನಿಯಮಂ ಸರ್ವಪಾಪೈಃ ಪ್ರಮುಚ್ಯತೇ ।
ಸ್ನಾನದಾನಾರ್ಚನಶ್ರಾದ್ಧಕ್ರಿಯಾ ಪುಣ್ಯವಿವರ್ಜಿತಾ ॥ ೩೬ ॥

ಯಸ್ಯಾತೀತಾ ಚ ವೈಶಾಖೇ ಸ ನೂನಂ ನಿರಯಾಲಯಃ ।
ನ ವೇದೇನ ಸಮಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ ॥ ೩೭ ॥

---

೩೨. ವಿಷ್ಣುವು ವೈಶಾಖಶುದ್ಧ ತ್ರಯೋದಶಿಯ ದಿನ ಹಿರಣ್ಯಾಕ್ಷನನ್ನೂ ಚತುರ್ದಶಿಯ ದಿನ ಮಧುವನ್ನೂ ಕೊಂದು ಪೂರ್ಣಿಮೆಯ ದಿನ ಭೂಮಿಯನ್ನು ಮೇಲಕ್ಕೆತ್ತಿದನು.

೩೩. ಅದು ಮೊದಲುಗೊಂಡು ಆ ಪೂರ್ಣಿಮೆಗೆ ಉತ್ಕರ್ಷ ಬಂದಿತು. ಕಲ್ಪದ ಕರ್ಮಕ್ಕೆ ಸಾಕ್ಷಿಯಾಗಿ ಕಲ್ಪದ ಆದಿಯಲ್ಲಿ ಪಾವನವಾಯಿತು.

೩೪. ಪ್ರಾತಃಸ್ನಾನದ ನಿಯಮದಿಂದ ಯಾವನು ವೈಶಾಖದಲ್ಲಿ ಸ್ನಾನ ಮಾಡುವುದಿಲ್ಲವೋ, ಅವನು ಜನ್ಮವೆತ್ತಿದುದು ಸಾರ್ಥಕವಿಲ್ಲ. ವ್ಯರ್ಥವಾಗುವುದು.

೩೫-೪೦. ತ್ರಯೋದಶೀ, ಚತುರ್ದಶೀ, ಪೌರ್ಣಮಾಸ್ಯೆಯಲ್ಲಿ ವಿಶೇಷವಾಗಿ ಹೆಂಗಸಾಗಲಿ, ಗಂಡಸಾಗಲಿ, ವಿಧಿವತ್ತಾಗಿ ಪ್ರಾತಸ್ಸ್ನಾನಮಾಡಿದರೆ ಸರ್ವಪಾಪಗಳನ್ನೂ ಕಳೆದುಕೊಳ್ಳುತ್ತಾರೆ. ವೈಶಾಖವು ಕಳೆದಮೇಲೆ ಮಾಡಿದ ಸ್ನಾನ, ದಾನ, ಪೂಜೆ, ಶ್ರಾದ್ಧಗಳು ಪುಣ್ಯವನ್ನುಂಟುಮಾಡುವುದಿಲ್ಲ. ಅವನಿಗೆ ನರಕವೇ ಲಭಿಸುತ್ತದೆ. ವೇದಗಳಿಗೆ ಸಮವಾದ ಶಾಸ್ತ್ರಗಳಿಲ್ಲ. ಗಂಗೆಗೆ ಸಮವಾದ ತೀರ್ಥವಿಲ್ಲ.

ನ ದಾನಂ ಜಲಗೋತುಲ್ಯಂ ನ ವೈಶಾಖೀ ಸಮಾ ತಿಥಿಃ ।
ಜಲಧೇನುಂ ಚ ಯೋ ದದ್ಯಾದ್ವೈಶಾಖ್ಯಾಂ ವಿಷ್ಣುತತ್ಪರಃ ॥ ೩೮ ॥

ತ್ರಯಾಣಾಮಪಿ ದೇವಾನಾಂ ಚತುರ್ಥೋಽಯಂ ವಿಶೇಷತಃ ।
ಮಾತೃಹಾ ಪಿತೃಹಾ ಚೈವ ಭ್ರೂಣಹಾ ಗುರುತಲ್ಪಗಃ ॥ ೩೯ ॥

ಜಲಧೇನುಂ ಸಮಾಲೋಕ್ಯ ಮುಚ್ಯತೇ ಸರ್ವಪಾತಕೈಃ ।
ದಶಪೂರ್ವಾನ್ಪರಾನ್ವಂಶ್ಯಾನ್ನರಕಾತ್ತಾರಯಂತಿ ತೇ ॥ ೪೦ ॥

ಜಲಧೇನುಂ ಪ್ರಯಚ್ಛಂತಿ ವೈಶಾಖ್ಯಾಂ ವಿಧಿನಾ ದಶ ।
ಶರ್ಕರಾ ಫಲತಾಂಬೂಲಮುಪಾನತ್ಛತ್ರಪತ್ರಿಕಾಃ ॥ ೪೧ ॥

ಪ್ರಯಚ್ಛಂತಿ ದ್ವಿಜಾಗ್ರೇಭ್ಯೋ ಧನ್ಯಾಸ್ತೇ ಚಾತ್ರಕೀರ್ತಿತಾಃ ।
ಮಣಿಕೋದಕಕುಂಭಾಂಶ್ಚ ಪಕ್ವಾನ್ನಂ ಹೇಮದಕ್ಷಿಣಾಂ ॥ ೪೨ ॥

ಯಃ ಪ್ರಯಚ್ಛತಿ ವೈಶಾಖ್ಯಾಂ ಸೋಽಶ್ವಮೇಧಫಲಂ ಲಭೇತ್ ।
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ॥ ೪೩ ॥

---

ಧೇನುದಾನಕ್ಕೆ-ಸಮವಾದ ದಾನವಿಲ್ಲ. ಅದರಂತೆಯೇ ವೈಶಾಖಕ್ಕೆ ಸಮವಾದ ದಿನವಿಲ್ಲ. ವೈಶಾಖದಲ್ಲಿ ವಿಷ್ಣುವಿನಲ್ಲಿ ಭಕ್ತಿಯಿಟ್ಟು ಜಲಧೇನುವನ್ನು ದಾನಮಾಡಿದರೆ ಅವನು ಬ್ರಹ್ಮ, ವಿಷ್ಣು, ಮಹೇಶ್ವರರಿಗಿಂತ ನಾಲ್ಕನೆಯ ಪ್ರಸಿದ್ಧಪುರುಷನೆಂದು ತಿಳಿ. ಮಾತೃ ಹಂತಕ, ಪಿತೃಹಂತಕ, ಮಕ್ಕಳಹಂತಕ, ಗುರುವಿನ ಹೆಂಡತಿಯನ್ನು ಹೊಂದಿದವನು ಇಂತಹ ಪಾಪಿಯಾದರೂ ಜಲಧೇನುವನ್ನು ನೋಡಿದರೇನೇ ಆ ಪಾಪಗಳಿಂದಲೂ, ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ. ಹಾಗೆ ದಾನ ಮಾಡಿದವರು ಹಿಂದಿನ ಹತ್ತು ತಲೆಯವರನ್ನೂ ಮುಂದಿನವರ ಹತ್ತು ತಲೆಯವರನ್ನೂ ಉದ್ಧರಿಸುತ್ತಾರೆ.

೪೧-೪೬. ವೈಶಾಖದಲ್ಲಿ ಜಲಧೇನುವನ್ನು ವಿಧಿವತ್ತಾಗಿ ದಾನಮಾಡಬೇಕು. ಸಕ್ಕರೆ, ಫಲ, ತಾಂಬೂಲ, ಕೆರ, ಛತ್ರಿಗಳನ್ನೂ ಬ್ರಾಹ್ಮಣರಿಗೆ ಕೊಟ್ಟರೆ ಅವರೇ ಧನ್ಯರೆನ್ನಿಸಿಕೊಳ್ಳುತ್ತಾರೆ. ಮಣಿಗಳು, ಉದಕುಂಭಗಳು, ಪಕ್ವವಾದ ಅನ್ನ, ದಕ್ಷಿಣೆಗಳು, ಇವನ್ನು ವೈಶಾಖದಲ್ಲಿ ದಾನಮಾಡಿದರೆ ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಒಂದು ಕಾಡಿನಲ್ಲಿ ಬ್ರಾಹ್ಮಣನೊಡನೆ ಪ್ರೇತಗಳು

ಬ್ರಾಹ್ಮಣಸ್ಯ ಚ ಸಂವಾದಂ ಪ್ರೇತೈಸ್ಸಹ ಮಹಾವನೇ ।
ಬ್ರಾಹ್ಮಣೋ ಧನಧರ್ಮಾಸೀನ್ಮಧ್ಯದೇಶೇಷು ಚಾನಘಃ ॥ ೪೪ ॥

ಕುಶಾದ್ಯರ್ಥೇ ವನಂ ಯಾತೋ ದದರ್ಶೇದಮಥಾದ್ಭುತಂ ।
ಭೀತೋ ಪಶ್ಯನ್ಮಹಾಪ್ರೇತಾನ್ದುಷ್ಟಾಂ ಸ್ತ್ರೀಣೇ ತು ದಾರುಣಾನ್ ॥ ೪೫ ॥

ಊರ್ಧ್ವಕೇಶಾನ್ಸರಕ್ತಾಕ್ಷಾನ್ಕೃಷ್ಣದಂತಾನ್ಕೃಶೋದರಾನ್ ।
ಕುರ್ವತೋ ವಿವಿಧಾರಾವಾನ್ಧಾವತೋಽಪಿ ಇತಸ್ತತಃ ॥ ೪೬ ॥

ತಾನ್ದೃಷ್ಟ್ವಾ ಭಯವಿತ್ರಸ್ತೋ ಬ್ರಾಹ್ಮಣೋ ನಿರ್ಗತೋ ಜವಾತ್ ।
ಕ್ರಂದಮಾನಾಸ್ತತಸ್ತೇಽಪಿ ತಮೇವಾನುಯಯುಸ್ತದಾ ।
ಸ ಗಮ್ಯಮಾನೈಸ್ತೈಃ ಪ್ರೇತೈಃ ಉವಾಚ ಮಧುರಂ ವಚಃ ॥ ೪೭ ॥

॥ ಧನಧರ್ಮೋವಾಚ ॥

ಕೇ ಯೂಯಂ ಚ ಕುತೋಽವಸ್ಥಾ ಜಾತಾತಿನಿರಯೋಚಿತಾ ।
ಭಯಾರ್ತಮನುಕಂಪ್ಯಂ ಮಾಂ ದುಃಖಿತಂ ತ್ರಾತುಮರ್ಹಥ ।
ವೈಷ್ಣವಂ ಬಹುಭೃತ್ಯಂ ಚ ನಿಸ್ಸ್ವಂ ವಿಪ್ರಂ ವನಾಗತಂ ॥ ೪೮ ॥

---

ಮಾಡಿದ ಸಂಭಾಷಣೆಯನ್ನು ಹೇಳುತ್ತೇನೆ ಕೇಳು. ಮಧ್ಯದೇಶದಲ್ಲಿ ಧನಧರ್ಮ ವೆಂಬ ಒಬ್ಬ ಯೋಗ್ಯನಾದ ಬ್ರಾಹ್ಮಣನಿದ್ದನು. ದರ್ಭೆಸಮಿತ್ತುಗಳಿಗೋಸ್ಕರ ವನಕ್ಕೆ ಹೋಗಿ ಅಲ್ಲಿ ಒಂದು ಆಶ್ಚರ್ಯವನ್ನು ಕಂಡನು. ಅಲ್ಲಿ ದುಷ್ಟರಾದ ಸ್ತ್ರೀಯರ ಗುಂಪಿನಲ್ಲಿ ಬಹು ತೊಂದರೆಕೊಡುವ ಮೇಲು ಮುಖವಾದ ಕೂದಲುಗಳುಳ್ಳ ಕೆಂಪ ಗಿರುವ ಕಣ್ಣುಗಳುಳ್ಳ, ಕಪ್ಪಾದ ಹಲ್ಲುಗಳುಳ್ಳ ಬಡಕಲು ದೇಹವುಳ್ಳ ನಾನಾಬಗೆಯಾಗಿ ಕೂಗುತ್ತಿರುವ ಇಲ್ಲಿಗಲ್ಲಿಗೆ ಓಡಾಡುತ್ತಿರುವ ಮಹಾಪ್ರೇತಗಳನ್ನು ನೋಡಿ ಹೆದರಿದನು.

೪೭. ಆ ಪ್ರೇತಗಳನ್ನು ನೋಡಿ ಭಯಗೊಂಡ ಬ್ರಾಹ್ಮಣನು ವೇಗವಾಗಿ ಹೊರಟನು. ಆ ಪ್ರೇತಗಳೂ ಅಳುತ್ತಾ ಅವನನ್ನೇ ಹಿಂಬಾಲಿಸಿ ಹೊರಟವು, ಅವು ಹಿಂದುಗಡೆಯಲ್ಲಿಯೇ ಬರುತ್ತಿರುವುದನ್ನು ನೋಡಿ ಮಧುರವಾಗಿಂತೆಂದನು.

೪೮. ಧನಧರ್ಮನು ಹೇಳಿದನು– ನೀವು ಯಾರು ? ನರಕಕ್ಕೆ ಯೋಗ್ಯ ವಾದ ಈ ಅವಸ್ಥೆ ನಿಮಗೇಕೆ ಬಂದಿತು ? ನನಗೆ ಬಹು ಭಯವಾಗಿದೆ. ನನ್ನಲ್ಲಿ ಕೃಪೆಯಿಡಿ. ದುಃಖಬರುತ್ತಿದೆ. ನನಗೆ ಬಹು ಭೃತ್ಯರುಗಳಿದ್ದಾರೆ. ನಾನು ವೈಷ್ಣವನು. ಇದೋ ಈ ಕಾಡಿಗೆ ಬಂದಿದ್ದೇನೆ. ದಯವಿಟ್ಟು ಕಾಪಾಡಿರಿ.

ಯುಷ್ಮಾಕಮಪಿ ಸ ಶ್ರೇಯೋ ನೂನಂ ದಾಸ್ಯತಿ ಕೇಶವಃ ।
ಬ್ರಹ್ಮಣ್ಯೋ ಭಗವಾನ್ವಿಷ್ಣುಸ್ತುಷ್ಟೋ ಮಯ್ಯನುಕಂಪಯಾ ॥ ೪೯ ॥

ಅತಸೀಪುಷ್ಪಸಂಕಾಶೋ ವಿಷ್ಣುಃ ಪೀತಾಂಬುರೋ ಹರಿಃ ।
ಯಸ್ಯ ಶ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೫೦ ॥

ಅನಾದಿನಿಧನೋ ದೇವಃ ಶಂಖಚಕ್ರಗದಾಧರಃ ।
ಅವ್ಯಯಃ ಪುಂಡರೀಕಾಕ್ಷಃ ಪ್ರೇತಮೋಕ್ಷಪ್ರದಾಯಕಃ ॥ ೫೧ ॥

॥ ಯಮ ಉವಾಚ ॥

ನಾಮಶ್ರವಣಮಾತ್ರೇಣ ವಿಷ್ಣೋಸ್ತೇ ಪರಿತೋಷಿತಾಃ ।
ಪಿಶಾಚಾಃ ಪುಣ್ಯಭಾವಸ್ಥಾ ದಯಾದಾಕ್ಷಿಣ್ಯಯಂತ್ರಿತಾಃ ॥ ೫೨ ॥

ಪ್ರೀಣಿತಾಸ್ತಸ್ಯ ವಚಸಾ ತದಾದಿಷ್ಟೇನ ಚೋದಿತಾಃ ।
ಇದಮೂಚುರ್ದ್ವಿಜಂ ಪ್ರೇತಾಃ ಕ್ಷುತ್ತೃಷ್ಣಾಪರಿಪೀಡಿತಾಃ ॥ ೫೩ ॥

---

೪೯–೫೧. ಬ್ರಾಹ್ಮಣರಲ್ಲಿ ವಿಶ್ವಾಸವುಳ್ಳ, ಅಗಸೆಯ ಹೂವಿನಂತೆ ನೀಲವಾದ ಪೀತಾಂಬರಧಾರಿಯಾದ ವಿಷ್ಣುವು ನನ್ನಲ್ಲಿರುವ ದಯೆಯಿಂದ ನಿನಗೆ ಯಶಸ್ಸನ್ನು ಕೊಡುತ್ತಾನೆ. ಯಾವ ವಿಷ್ಣುವನ್ನು ಸ್ಮರಿಸಿದ ಮಾತ್ರಕ್ಕೆ ಸರ್ವಪಾಪಗಳೂ. ನಾಶವಾಗುವುವೋ, ಅಂತಹ ಆದ್ಯಂತ ರಹಿತನಾದ, ಶಂಖ, ಚಕ್ರ, ಗದೆಗಳನ್ನು ಧರಿಸಿರುವ, ಕ್ಷಯರಹಿತನಾದ, ಪುಂಡರೀಕದಂತೆ ಕಣ್ಣುಳ್ಳ, ಆ ವಿಷ್ಣುವು ಪ್ರೇತಗಳಿಗೆ ಮೋಕ್ಷವನ್ನು ಕೊಡುತ್ತಾನೆ.

೫೨. ಯಮನು ಹೇಳಿದನು- ಅವನು ವಿಷ್ಣುಸ್ಮರಣೆ ಮಾಡಿದುದರಿಂದ ಆ ಪ್ರೇತಗಳು ಸಂತೋಷಗೊಂಡುವು. ಮತ್ತು ಅವು ಒಳ್ಳೆಯ ಅಭಿಪ್ರಾಯವನ್ನು ಹೊಂದಿ ದಯೆಯನ್ನೂ, ದಾಕ್ಷಿಣ್ಯವನ್ನೂ ತೋರಿಸಿದುವು.

೫೩. ಅವನ ಮಾತಿನಿಂದ ಸಂತೋಷಗೊಂಡು, ಅವನ ಮಾತಿನಂತೆ ನಡೆಯುತ್ತಾ ಹಸಿವು, ಬಾಯಾರಿಕೆಯುಳ್ಳ ಆ ಪ್ರೇತಗಳು ಬ್ರಾಹ್ಮಣನನ್ನು ಕುರಿತು ಇಂತೆಂದುವು.

॥ ಪ್ರೇತಾ ಊಚುಃ ॥

ದರ್ಶನೇನ್ನೈವ ತೇ ವಿಪ್ರ ನಾಮಶ್ರವಣತೋ ಹರೇಃ ।
ಭಾವಮನ್ಯಮನುಪ್ರಾಪ್ತಾ ವಯಂ ಜಾತಾ ದಯಾಳವಃ ॥ ೫೪ ॥

ಅಪಾಕರೋತಿ ದುರಿತಂ ಶ್ರೇಯಸ್ಸಂಯೋಜಯಿಷ್ಯತಿ ।
ಯಶೋ ವಿಸ್ತಾರಯತ್ಯಾಶು ನೂನಂ ವೈಷ್ಣವಸಂಗಮಃ ॥ ೫೫ ॥

ರಸಾಯನೋಽಪಮಾ ಶಾನ್ತಾ ಪರಮಾನಂದದಾಯಿನೀ ।
ನಾಽಽನಂದಯತಿ ಕಿಂ ನಾಮ ವೈಷ್ಣವೀವಾಸ್ತು ಚಂದ್ರಿಕಾ ॥ ೫೬ ॥

ಅಯಂ ಕೃತಘ್ನನಾಮಾಸ್ತಿ ದ್ವಿತೀಯೋಽಯಂ ವಿದೈವತಃ ।
ಅವೈಶಾಖ್ಯಸ್ತೃತೀಯೋಽಯಂ ತ್ರಯಾಣಾಮಪಿ ಪಾಪಕೃತ್ ॥ ೫೭ ॥

ಸದೈವಾನುಷ್ಠಿತಾನೇನ ಪಾಪೇನಾಪಿ ಕೃತಘ್ನತಾ ।
ತೇನಾಸ್ಯ ಕರ್ಮಜಂ ನಾಮ ಕೃತಘ್ನಾಖ್ಯಂ ವ್ಯವಸ್ಥಿತಂ ॥ ೫೮ ॥

---

೫೪ ಪ್ರೇತಗಳು ಹೇಳಿದವು- ಎಲೈ ಬ್ರಾಹ್ಮಣನೇ ನಿನ್ನ ದರ್ಶನದಿಂದಲೂ, ಹರಿಯನಾಮಶ್ರವಣದಿಂದಲೂ ಬೇರೆ ಬಗೆಯಾದ ಮನಸ್ಸನ್ನು ಹೊಂದಿ ದಯಾಳುಗಳಾದೆವು.

೫೫. ವೈಷ್ಣವನ ಸಹವಾಸವು ಪಾಪವನ್ನು ನಾಶಮಾಡುತ್ತದೆ. ಶ್ರೇಯಸ್ಸನ್ನು ತಂದು ಸೇರಿಸುತ್ತದೆ. ಯಶಸ್ಸನ್ನೂ ವಿಸ್ತಾರಪಡಿಸುತ್ತದೆ.

೫೬. ವೈಷ್ಣವಸಂಬಂಧವಾದ ವಸ್ತುವಿನ ಬೆಳದಿಂಗಳು ರಸಾಯನದಂತಿದೆ. ಪರಮಾನಂದವನ್ನೂ ಉಂಟುಮಾಡುತ್ತದೆ. ಯಾರನ್ನು ತಾನೇ ಸಂತೋಷಗೊಳಿಸುವುದಿಲ್ಲ!

೫೭. ಇವನು ಕೃತಘ್ನನೆಂದೂ, ಈ ಎರಡನೆಯವನು ವಿದೈವತನೆಂದೂ, ಈ ಮೂರನೆಯವನು ಅವೈಶಾಖ್ಯನೆಂದೂ ಹೆಸರುಳ್ಳವರು. ಮೂವರೂ ಪಾಪಿಗಳು.

೫೮. ಇವನು ಯಾವಾಗಲೂ ಪಾಪಮಾಡುತ್ತಾ ಕೃತಘ್ನತೆಯನ್ನೇ ಆಚರಿಸುತ್ತಿದ್ದನು. ಆದ್ದರಿಂದ ಇವನು ತನ್ನ ಕರ್ಮಕ್ಕೆ ಅನುಸಾರವಾದ ಹೆಸರನ್ನು ಪಡೆದನು.

ಸುದಾಸ ಇತಿ ನಾಮ್ನಾಯಂ ದ್ರೋಹೋಽಭೂತ್ಪೂರ್ವಜನ್ಮನಿ ।
ಕೃತಘ್ನಸ್ತೇನ ಪಾಪೇನ ಪ್ರಾಪ್ತೋಽವಸ್ಥಾಮಿಮಾಂ ದ್ವಿಜ ॥ ೫೯ ॥

ಅತಿಪಾಪಿನಿ ಧೂರ್ತೇ ಚ ಗುರುಸ್ವಾಮ್ಯಹಿತೇಽಪಿ ವಾ ।
ನಿಷ್ಕೃತಿರ್ವಿದ್ಯತೇ ವಿಪ್ರ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೬೦ ॥

ನಾನಾನಿರಯಸಂಘಾತಂ ಶರೀರೈರ್ಯಾತನಾಕ್ಷಮೈಃ ।
ಅನುಭೂಯ ತದಾಽವಸ್ಥಾಮನ್ತ್ಯಾಮೇತಾಂ ದ್ವಿಜೋತ್ತಮ ॥ ೬೧ ॥

ಅನೇನಾನ್ನಂ ಸದಾ ಭುಕ್ತಂ ಅಕೃತ್ವಾ ದೇವತಾರ್ಚನಂ ।
ಅದತ್ತಂ ಗುರುವಿಪ್ರೇಭ್ಯಃ ತೇನೈವಾಯಂ ವಿದೈವತಃ ॥ ೬೨ ॥

ಅಯಂ ದಶಸಹಸ್ರಾಣಾಂ ಗ್ರಾಮಣಾಮೀಶ್ವರೋ ನೃಪಃ ।
ಹರಿವೀರಇತಿಖ್ಯಾತಃ ಸ ಚಾಸೀತ್ಪೂರ್ವಜನ್ಮನಿ ॥ ೬೩ ॥

---

೫೯. ಇವನ ಹೆಸರು ಸುದಾಸನು. ಪೂರ್ವಜನ್ಮದಲ್ಲಿ ದ್ರೋಹಿಯಾಗಿದ್ದನು. ಆ ಕೃತಘ್ನತಾ ಪಾಪದಿಂದ ಈ ಅವಸ್ಥೆಯನ್ನು ಹೊಂದಿದ್ದಾನೆ.

೬೦. ಅತ್ಯಂತ ಪಾಪಿಯಲ್ಲೂ, ಧೂರ್ತನಲ್ಲೂ, ಗುರು, ಸ್ವಾಮಿಗಳಿಗೆ ಕೆಟ್ಟಿದ್ದನ್ನು ಮಾಡುವವನಲ್ಲೂ ಅದನ್ನು ಕಳೆದುಕೊಳ್ಳಲು ಬದಲುಂಟು. ಕೃತಘ್ನನಿಗೆ ಮಾತ್ರ ಆ ಪ್ರತೀಕಾರವಿಲ್ಲ.

೬೧. ಯಾತನೆಯ ಶರೀರದಿಂದ ನರಕದಲ್ಲಿ ಅನೇಕವಾದುದನ್ನು ಅನುಭವಿಸಿ ಈಗ ಈ ಪ್ರೇತಾವಸ್ಥೆಯನ್ನು ಹೊಂದಿದ್ದಾನೆ.

೬೨. ದೇವತಾರ್ಚನೆಯನ್ನು ಮಾಡದೆ ಇವನು ಯಾವಾಗಲೂ ಊಟ ಮಾಡುತ್ತಿದ್ದನು. ಗುರುಗಳಿಗಾಗಲಿ ಬ್ರಾಹ್ಮಣರಿಗಾಗಲಿ ಕೊಟ್ಟವನೇ ಅಲ್ಲ. ಆದ್ದರಿಂದ ಇವನು ವಿದೈವತನು.

೬೩. ಇವನು ಹತ್ತುಸಾವಿರ ಗ್ರಾಮಗಳಿಗೆ ಅಧಿಪತಿಯಾಗಿದ್ದನು. ಇವನ ಹೆಸರು ಹರಿವೀರನೆಂದು ಪೂರ್ವಜನ್ಮದಲ್ಲಿ ಪ್ರಸಿದ್ಧವಾಗಿದ್ದಿತು.

ರೋಷಾಹಂಕಾರನಾಸ್ತಿಕ್ಯೈರ್ಗುರ್ವಾಜ್ಞಾಲಂಘನೋದ್ಯತಃ ।
ಅಕೃತ್ವೈವ ಮಹಾಯಜ್ಞಾನ್ಭಕ್ತವಾನ್ವಿಪ್ರನಿಂತಕಃ ॥ ೬೪ ॥

ಕರ್ಮಣಾ ತೇನ ಪಾಪೇನ ಮಹಾನರಕಸಂಕರಂ ।
ಅನುಭೂಯ ಗತಃ ಪ್ರೇತೋ ಜಾತೋ ನಾಮ್ನಾ ವಿದ್ಯೈವತಃ ॥ ೬೫ ॥

ಅವೈಶಾಖಸ್ತೃತೀಯೋಽಹಂ ತ್ರಯಾಣಾಮಪಿ ಪಾಪಕೃತ್ ।
ತೇನ ಮೇ ಕರ್ಮಣಾ ನಾಮ ಬ್ರಾಹ್ಮಣೋಽಹಂ ವ್ಯವಸ್ಥಿತಃ ॥ ೬೬ ॥

ಮಧ್ಯದೇಶೇ ಭವೇನ್ನಾಮ್ನಾ ಗೌತಮೋ ಗೋತ್ರತೋಽಪ್ಯಹಂ ।
ವಿಪ್ರೋವಾಸಪುರಾವಸೀ ಯಥಾಸಂ ಪೂರ್ವಜನ್ಮನಿ ॥ ೬೭ ॥

ಮಯಾ ಕೇವಲಮೇವೈಕೇಶ್ರೌತಮಾರ್ಗಾನುಸಾರಿಣಾ ।
ಉದ್ದಿಶ್ಯ ಮಾಧವಂ ದೇವಂ ನ ಸ್ನಾತಂ ಮಾಸಿ ಮಾಧವೇ ॥ ೬೮ ॥

ನ ದತ್ತಂ ನ ಹುತಂ ಕಿಂಚಿದ್ವೈಶಾಖಸ್ಯ ವಿಶೇಷತಃ ।
ನಾಽರ್ಚಿತೋ ಮಧುಹಾ ತತ್ರ ತೋಷಿತಾ ನ ಮನೀಷಣಃ ॥ ೬೯ ॥

---

೬೪. ರೋಷ, ಅಹಂಕಾರ, ನಾಸ್ತಿಕ್ಯಗಳಿಂದ ಕೂಡಿ ಗುರುವಿನ ಅಪ್ಪಣೆಯನ್ನು ನಿರಾಕರಿಸುತ್ತಾ, ಯಜ್ಞ ಯಾಗಾದಿಗಳನ್ನು ಮಾಡದೆ ಬ್ರಾಹ್ಮಣ ನಿಂದಕನಾಗಿ ಅನ್ನವನ್ನು ತಿನ್ನುತ್ತಿದ್ದನು

೬೫. ಆ ಕೆಲಸದ ಪಾಪದಿಂದ ಬಹುವಾದ ನರಕಗಳನ್ನು ಹೊಂದಿ ಪ್ರೇತತ್ವವನ್ನು ಹೊಂದಿದ್ದಾನೆ. ಇವನ ಹೆಸರು ವಿದ್ಯೈವತನು

೬೬. ನಾನು ಅವೈಶಾಖನು. ವೈಶಾಖಮಾಸದಲ್ಲಿ ಪುಣ್ಯಕೆಲಸ ಮಾಡದವನು. ಈ ಪಾಪವೂ ಮಿಕ್ಕವರ ಪಾಪಗಳೂ, ನನ್ನಲ್ಲಿವೆ. ಆ ಕರ್ಮದಿಂದ ನಾನು ಈ ಕೆಲಸದಿಂದ ಅವೈಶಾಖನೆಂದು ಹೆಸರು ಪಡೆದಿದ್ದೇನೆ.

೬೭. ನಾನು ಪೂರ್ವಜನ್ಮದಲ್ಲಿ ಮಧ್ಯದೇಶದಲ್ಲಿ ಗೌತಮನೆಂದು ಹೆಸರುಳ್ಳವನು. ಗೌತಮನ ಗೋತ್ರದವನು. ನಮ್ಮ ಊರು ವಾಸಪುರವೆಂಬುದು.

೬೮-೬೯. ನಾನು ಕೇವಲ ಶ್ರೌತಮಾರ್ಗವನ್ನೇ ಅನುಸರಿಸಿಕೊಂಡು ವಿಷ್ಣುವನ್ನುದ್ದೇಶಿಸಿ ವೈಶಾಖದಲ್ಲಿ ಸ್ನಾನಮಾಡಲಿಲ್ಲ. ದಾನಮಾಡಲಿಲ್ಲ. ಹೋಮ ಮಾಡಲಿಲ್ಲ. ವಿಷ್ಣುವನ್ನು ಪೂಜಿಸಲಿಲ್ಲ ತಿಳಿದವರಿಗೆ ದಾನಮಾಡಲಿಲ್ಲ

ಮಣಿಕೋದಕಕುಂಭೈಶ್ಚ ನ ದಾನ್ಯೈರ್ನಾಪಿ ದೇವತಾಃ ।
ತರ್ಪಿತಾ ನ ತಿಲಾ ದತ್ತಾಃ ಸಕ್ಷೌದ್ರಾ ಶ್ರೋತ್ರಿಯೇಷು ಚ ॥ ೭೦ ॥

ನ ಪುಷ್ಪಫಲತಾಂಬೂಲಚಂದನವ್ಯಜನಾಂಬರೈಃ ।
ವಿದ್ವಾಂಸೋ ನಾರ್ಚಿತಾಸ್ತತ್ರ ಪಿತೃದೈವತತೃಪ್ತಯೇ ॥ ೭೧ ॥

ಮಯಾ ನೈಕಾಪಿ ವೈಶಾಖೀ ಪೂರ್ಣಾಪೂರ್ಣಫಲಪ್ರದಾ ।
ಸ್ನಾನದಾನಕ್ರಿಯಾಪೂಜಾಸುಕೃತ್ಯೈರಪಿ ಪಾಲಿತಾ ॥ ೭೨ ॥

ತೇನ ಮೇ ವೈದಿಕಂ ಕರ್ಮ ಜಾತಂ ಸರ್ವಂ ಚ ನಿಷ್ಫಲಂ ।
ತತೋಽವೈಶಾಖನಾಮಾಽಹಂ ಪ್ರೇತೋ ಜಾತೋಽಸ್ಮಿ ಸರ್ವತಃ ॥ ೭೩ ॥

ಏತತ್ತೇ ಸರ್ವಮಾಖ್ಯಾತಂ ತ್ರಯಾಣಾಮಪಿ ಕಾರಣಂ ।
ತ್ವಂ ನೋ ಭವ ಸಮುದ್ಧರ್ತಾ ಪಾಪಾದ್ವಿಪ್ರೋಽಸಿ ವೈ ಯತಃ ॥ ೭೪ ॥

---

೭೦. ಮಣಿಗಳು, ಉದಕ ಕುಂಭಗಳು ಇವುಗಳ ದಾನದಿಂದ ದೇವತೆಗಳನ್ನು ಸಂತೋಷಪಡಿಸಲಿಲ್ಲ. ಜೇನಿನಿಂದ ಕೂಡಿದ ತಿಲವನ್ನು (ಚಿಗುಳಿ) ದಾನಮಾಡಿ ಶ್ರೋತ್ರಿಯರನ್ನು ತೃಪ್ತಿಪಡಿಸಲಿಲ್ಲ.

೭೧. ಹೂವು, ಫಲ, ತಾಂಬೂಲ, ಚಂದನ, ಬೀಸಣಿಗೆ, ಒಟ್ಟೆಗಳನ್ನು ಕೊಟ್ಟು ಪಿತೃಗಳು, ದೇವತೆಗಳು ತೃಪ್ತರಾಗಲೆಂದು ವಿದ್ವಾಂಸರನ್ನು ಗೌರವಿಸಲಿಲ್ಲ.

೭೨. ಪೂರ್ಣವಾಗಿ ಪೂರ್ಣಫಲವನ್ನು ಕೊಡುವ ಒಂದು ವೈಶಾಖಮಾಸವಾದರೂ, ಸ್ನಾನ, ದಾನ, ಕ್ರಿಯೆಗಳಿಂದಾಗಲೀ, ಪೂಜೆಗಳಿಂದಾಗಲೀ ಮತ್ತು ಒಳ್ಳೆಯ ಕೆಲಸಗಳಿಂದಾಗಲೀ ಅನುಸರಿಸಲ್ಪಡಲಿಲ್ಲ.

೭೩. ಹಾಗೆ ವೈಶಾಖವನ್ನು ಆಚರಿಸದಿದ್ದುದರಿಂದ ನನ್ನ ವೈದಿಕಕರ್ಮಗಳೆಲ್ಲವೂ ಫಲರಹಿತವಾದುವು. ಆದ್ದರಿಂದ ವೈಶಾಖನಾಮದ ಪ್ರೇತನು ನಾನು.

೭೪. ನಾವು ಮೂವರೂ ಪ್ರೇತಗಳಾಗುವುದಕ್ಕೆ ಕಾರಣವನ್ನು ಹೇಳಿದೆನು ನೀನು ಬ್ರಾಹ್ಮಣನಾಗಿರುವುದರಿಂದ ನಮ್ಮ ಪಾಪಗಳನ್ನು ನಾಶಪಡಿಸಿ ಕಾಪಾಡು.

ಅಧಿಕಾ ವಿಪ್ರತೀರ್ಥೇಭ್ಯೋ ದ್ವಿಜಾಸ್ಸುಕೃತಸಾಧವಃ ।
ತಾರಯಂತಿ ಮಹಾಪಾಪಾನ್ನಿರಯೇಭ್ಯೋಽಪಿ ಸಂಶ್ರಿತಾನ್ ॥ ೭೫ ॥

ಗಂಗಾದಿಸರ್ವತೀರ್ಥೇಷು ಯೋ ನರಃ ಸ್ನಾತಿ ಸರ್ವದಾ ।
ಯಃ ಕರೋತಿ ಸತಾಂ ಸಗಂ ತಯೋಸ್ಸತ್ಸಂಗವೋ ವರಃ ॥ ೭೬ ॥

ಅಥವಾ ಮಮ ಪುತ್ರೋಽಸ್ತಿ ಧನಶರ್ಮೇತಿ ವಿಶ್ರುತಃ ।
ತ್ವಂ ಗತ್ವಾ ಬೋಧಯ ಸ್ವಾಮಿನ್ನಸ್ಮದರ್ಥೇ ಕೃತೋದ್ಯಮಃ ॥ ೭೭ ॥

ಕಾರ್ಯೇ ಸಮುದ್ಯಮಂ ಕೃತ್ವಾ ಪರೇಷಾಂ ಸಮುಪಸ್ಥಿತೇ ।
ಪುಷ್ಕಲಂ ಫಲಮಾಪ್ನೋತಿ ಯಜ್ಞದಾನಕ್ರಿಯಾದಿಕಂ ॥ ೭೮ ॥

॥ ಯಮ ಉವಾಚ ॥

ಪ್ರೇತವಾಕ್ಯಂ ಸಮಾಕರ್ಣ್ಯ ಧನಶರ್ಮಾತಿ ದುಃಖಿತಃ ।
ಸ ತಂ ಜನಕಮಜ್ಞಾಸೀತ್ಪತಿತಂ ನಿರಯೇ ನಿಜಂ ॥
ಆತ್ಮಾನಮಭಿಕೋನಿಂದನ್ನಿದಂ ವಚನಮಬ್ರವೀತ್ ॥ ೭೯ ॥

---

೭೫. ಸುಕೃತವನ್ನು ಸಾಧಿಸುವ ಬ್ರಾಹ್ಮಣರು ತೀರ್ಥಕ್ಕಿಂತ ಉತ್ತಮರು. ಅವರು ಮಹಾಪಾಪದಿಂದ ಕಾಪಾಡಿ ನರಕದಲ್ಲಿದ್ದರೂ ಅವರನ್ನುದ್ಧರಿಸುತ್ತಾರೆ.

೭೬. ಗಂಗೆಯೇ ಮೊದಲಾದ ಸರ್ವತೀರ್ಥಗಳಲ್ಲೂ ಸ್ನಾನಮಾಡುವ ಮನುಷ್ಯನೂ, ಸತ್ಸಹವಾಸ ಮಾಡುವ ಮನುಷ್ಯನೂ ಇದ್ದರೆ ಈ ಇಬ್ಬರಲ್ಲಿ ಸತ್ಸಂಗಮನೇ ಉತ್ತಮವಾದವನು.

೭೭. ಹಾಗಿಲ್ಲದಿದ್ದರೆ ನನಗೆ ಧನಶರ್ಮನೆಂಬ ಮಗನಿರುವನು. ನನಗೋಸ್ಕರ ಅವನಿಗೆ ಹೋಗಿ ಹೇಳು.

೭೮. ಯಾವನು ಪರರಿಗೋಸ್ಕರ ಕೆಲಸವನ್ನು ಮೊದಲು ಮಾಡಿಸುತ್ತಾನೆಯೋ ಅವನು ಆ ಕ್ರಿಯೆಯ ಪೂರ್ಣಫಲವನ್ನು ಹೊಂದುತ್ತಾನೆ.

೭೯. ಯಮನು ಹೇಳುತ್ತಾನೆ- ಈ ಪ್ರೇತದ ಮಾತನ್ನು ಕೇಳಿ ಧನಶರ್ಮನು ಬಹು ದುಃಖಗೊಂಡನು. ಈ ರೀತಿ ನರಕಭಾಗಿಯಾದವನು ತನ್ನ ತಂದೆಯೆಂದೂ ತಿಳಿದನು. ಆಗ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾ ಇಂತೆಂದನು.

॥ ಧನಶರ್ಮೋವಾಚ ॥

**ಅಹಂ ತವ ಸುತಸ್ಸ್ವಾಮಿನ್ಗೌತಮಸ್ಯ ನಿರರ್ಥಕಃ ।**
**ಯಸ್ತು ಪುತ್ರೋ ನ ನಿಸ್ತಾರಂ ಪಿತುಃ ಕುರ್ಯಾದತಂದ್ರಿತಃ ॥**
**ಆತ್ಮಾನಂ ಪಾವಯೇನ್ನಾಸೌ ಪುಣ್ಯಾನ್ನ ದ್ರವ್ಯವಾನಿವ ॥ ೮೦ ॥**

**ಧರ್ಮೋಹಿ ಗಹನೋ ಜ್ಞೇಯಃ ಪ್ರಯತ್ನೇನಾಽಪಿ ಧೀಮತಾ ।**
**ಯಥಾ ಮಮ ಪಿತಾ ಚ ತ್ವಂ ಇಮಾಂ ಪ್ರಾಪ್ತೋಽಸಿ ದುರ್ಗತಿಂ ॥ ೮೧ ॥**

**ಯಥಾ ಚ ಸುಖಸಂತಾನಂ ನ ಮತ್ತಃ ಪ್ರಾಪ್ತವಾನಸಿ ।**
**ಲೋಕಯೋಸ್ಸುಖಸಂತಾನಸ್ತಥಾ ಸ ತನಯೋ ಮತಃ ॥ ೮೨ ॥**

**ದ್ವೌ ಗುರೂ ಪುರುಷಸ್ಯೇಹ ಪಿತಾ ಮಾತಾ ಚ ಧರ್ಮತಃ ।**
**ತಯೋರಪಿ ಪಿತಾ ಶ್ರೇಯಾನ್ಬೀಜಪ್ರಾಧಾನ್ಯದರ್ಶನಾತ್ ॥ ೮೩ ॥**

**ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ತಾತ ಗತಿಸ್ತವ ।**
**ಧರ್ಮತತ್ತ್ವಂ ನ ಜಾನಾಮಿ ಸಂಶ್ರಯಾಮಿ ಭವದ್ವಚಃ ॥ ೮೪ ॥**

---

೮೦. ಧನಶರ್ಮನು ಹೇಳಿದನು- ಸ್ವಾಮಿ, ನಾನೇ ಆ ನಿನ್ನ ಗೌತಮನ ಮಗನು. ಉಪಯೋಗವಿಲ್ಲದ ಧನಶರ್ಮನು. ಯಾವ ಮಗನು ವಿಶಾಲಬುದ್ಧಿಯಿಂದ ತಂದೆಗೆ ಹೆಚ್ಚಾಗಿ ಫಲಬರುವಂತೆ ಮಾಡಿ ತನ್ನನ್ನೂ ಕೂಡ ತನ್ನ ದ್ರವ್ಯದಿಂದ ಕಾಪಾಡಿಕೊಳ್ಳುವಂತೆ ಕಾಪಾಡದಿರುವನೋ ಅಂತಹ ಮಗನೇ ನಾನಾಗಿದ್ದೇನೆ.

೮೧. ಬುದ್ಧಿವಂತನಾದವನು ಪ್ರಯತ್ನಪಟ್ಟಾದರೂ, ಗಹನವಾದ ಧರ್ಮವನ್ನು ತಿಳಿಯಬೇಕು. ನಾನು ನಿನಗೆ ಮಗನ ಕೆಲಸವನ್ನೂ ಮಾಡಲಿಲ್ಲ. ನನ್ನ ತಂದೆಯಾದ ನೀನೂ ಕೂಡ ಇಂತಹ ದುರ್ಗತಿಯನ್ನು ಹೊಂದಿರುವೆಯಲ್ಲಾ ?

೮೨. ನನ್ನಿಂದ ಇಹ ಪರಗಳ ಸುಖಸಂತಾನವನ್ನು ನೀನು ಹೊಂದದಿರುವುದರಿಂದ ನಾನು ನಿನಗೆ ಮಗನ ಕೆಲಸವನ್ನೂ ಮಾಡಲಿಲ್ಲ.

೮೩. ತಾಯಿಯೂ, ತಂದೆಯೂ, ಇಬ್ಬರೇ ಮನುಷ್ಯರಿಗೆ ಗುರುಗಳು. ಅವರಿಬ್ಬರೊಳಗೆ ಬೀಜಪ್ರಧಾನದಿಂದ ತಂದೆಯೇ ಒಳ್ಳೆಯವನು

೮೪. ಅಪ್ಪ ! ಏನುಮಾಡಲಿ ? ಎಲ್ಲಿ ಹೋಗಲಿ ? ನಿನಗೆ ಸದ್ಗತಿ ಒದಗುವುದು ಹೇಗೆ? ಧರ್ಮ ತತ್ತ್ವವನ್ನು ತಿಳಿಯೆನಲ್ಲ ! ನಿನ್ನ ಮಾತನ್ನೇ ಅನುಸರಿಸುತ್ತೇನೆ.

॥ ಪ್ರೇತ ಉವಾಚ ॥

ಶೃಣು ಪುತ್ರ ಪ್ರವಕ್ಷ್ಯಾಮಿ ಭಾವಿನೋಽರ್ಥಸ್ಯ ಮೇ ಬಲಾತ್ ।
ಅಥ ಪುಣ್ಯೇನ ಕೇನಾಪಿ ಭವಿತ್ರೀ ಸುಗತಿರ್ಮಮ ॥ ೮೫ ॥

ಮಯಾ ಶ್ರೌತಾನಿ ಕರ್ಮಾಣಿ ಕುರ್ವತಾ ಕಿಲ ಗರ್ವತಃ ।
ನೈವಾದೃತಂ ಗುರುವಚೋ ಗುರುಸ್ತತ್ರಾಪ್ಯಮಾನಿತಃ ॥ ೮೬ ॥

ಗುರೂಣಾಮಪಮಾನೇನ ಪ್ರಹರ್ಷಕ್ರೋಧವಿಸ್ಮಯೈಃ ।
ಪೌರಾಣಿಕವಿಧಾನೇನ ಕರ್ಮಶ್ರೌತಾವಿರೋಧಿ ಯತ್ ॥ ೮೭ ॥

ವೈದಿಕಂ ಕೇವಲಂ ಕರ್ಮ ಕೃತಮಜ್ಞಾನತೋ ಮಯಾ ।
ಪಾಪೇಂಧನದವಜ್ವಾಲಾಪಾಪದ್ರುಮಕುಠಾರಿಕಾ ॥ ೮೮ ॥

ಕೃತಾ ನೈಕಾಪಿ ವೈಶಾಖೀ ವಿಧಿನಾ ವತ್ಸ ಪೂರ್ಣಿಮಾ ।
ಅವ್ರತಾ ಯಸ್ಯ ವೈಶಾಖೀ ಸೋಽವೈಶಾಖೋ ಭವೇನ್ನರಃ ॥ ೮೯ ॥

ದಶ ಜನ್ಮಾನಿ ಚ ತತಃ ತಿರ್ಯಗ್ಯೋನಿಷು ಜಾಯತೇ ।
ಚಿರಂ ಭುಕ್ತ್ವಾ ದುಃಖಮನ್ತೇ ಪ್ರೇತಃ ಪರ್ಯಾಯತೋ ಭವೇತ್ ॥ ೯೦ ॥

---

೮೫. ಪ್ರೇತವು ಹೇಳಿತು- ಎಲೈ ಮಗನೇ ನನಗೆ ಮುಂದಾಗತಕ್ಕ ಸುಕೃತ ಬಲದಿಂದ ಹೇಳುತ್ತೇನೆ. ಯಾವುದಾದರೂ ಪುಣ್ಯದಿಂದ ನನಗೆ ಒಳ್ಳೆಯಗತಿ ಯುಂಟಾಗಬೇಕು.

೮೬. ಶ್ರೌತಕರ್ಮಗಳನ್ನು ಮಾಡುತ್ತಿದ್ದ ನಾನು ಗರ್ವದಿಂದ ಗುರುವಿನ ಮಾತನ್ನು ಲಕ್ಷಿಸದೆ ಆತನನ್ನು ಅಪಮಾನಪಡಿಸಿದೆನು.

೮೭–೯೦. ಹೀಗೆ ಗುರುಗಳಿಗೆ ಅಪಮಾನಮಾಡಿದುದರಿಂದ ಹರ್ಷ ಕ್ರೋಧ ಗಳಿಂದಲೂ ಆಶ್ಚರ್ಯದಿಂದಲೂ, ಪುರಾಣ ವಿಧಾನದಿಂದ ಶ್ರೌತಕ್ಕೆ ಅವಿರೋಧವಾದ ಕೇವಲ ವೈದಿಕವಾದ ಕರ್ಮವೇ ಅಜ್ಞಾನದಿಂದ ಮಾಡಲ್ಪಟ್ಟಿತು. ಪಾಪವೆಂಬ ಕಟ್ಟಿಗೆಗೆ ಕಾಳ್ಗಿಚ್ಚಾದ ಪಾಪವೆಂಬ ಮರಕ್ಕೆ ಕೊಡಲಿಯಾದ ವೈಶಾಖ ಪೂರ್ಣಿಮೆ ಯೊಂದನ್ನೂ ವಿಧಿವತ್ತಾಗಿ ಮಾಡಲಿಲ್ಲ. ವೈಶಾಖವ್ರತವನ್ನು ಮಾಡದಿರುವ ಮನು ಷ್ಯನು ಅವೈಶಾಖನಾಗುವನು. ಅವನು ಹತ್ತು ಜನ್ಮಗಳ ಪರ್ಯಂತ ಕೀಳು ಜನ್ಮದಲ್ಲಿ ಹುಟ್ಟುತ್ತಾನೆ. ಅವುಗಳಲ್ಲಿ ಬಹುಕಾಲ ದುಃಖವನ್ನು ಅನುಭವಿಸಿ ಕೊನೆಗೆ ಪ್ರೇತ ನಾಗುತ್ತಾನೆ.

ತತಃ ಕಥಂಚಿಲ್ಲಭತೇ ಮಾನುಷ್ಯಮತಿದುರ್ಲಭಂ ।
ಉಪಾಯಂ ತೇಽಭಿಧಾಸ್ಯಾಮಿ ಪ್ರೇತಮೋಕ್ಷಕರಂ ಪರಂ ॥ ೯೧ ॥

ಶ್ರುತವಾನ್ಯದಹಂ ಪೂರ್ವಜನ್ಮನಿ ಸ್ವಗುರೋರ್ಮುಖಾತ್ ।
ಗಚ್ಛ ಪುತ್ರ ಗೃಹಂ ಸ್ನಾತ್ವಾ ಯಮುನಾಯಾಂ ವಿಧಾನತಃ ॥ ೯೨ ॥

ಅಥೈತಸ್ಸರ್ವಗತಿದಾ ಕಲ್ಪಾದ್ಯಾ ಸಾಪ್ಯುಪಾಗತಾ ।
ಪಂಚಮೇಽಹನಿ ವೈಶಾಖೀ ಪಿತೃದೇವಾರ್ಚನೇ ಹಿತಾ ॥ ೯೩ ॥

ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ
ಸಹೋದಕುಂಭಾನ್ನಫಲಾನಿ ಭಕ್ತ್ಯಾ ।
ದದ್ಯಾತ್ಪಿತೃಭ್ಯೋ ಭವತೀಹ ದತ್ತಂ
ಶ್ರಾದ್ಧಂ ಮುದೇ ತೇನ ಸಮಾಸ್ಸಹಸ್ರಂ ॥ ೯೪ ॥

ವೈಶಾಖ್ಯಾಂ ಪೌರ್ಣಮಾಸ್ಯಾಂ ಯೋ ಭೋಜಯೇದ್ಭೂಮಿದೈವತಾನ್ ।
ಸಿಕ್ಥೇಸಿಕ್ಥೇ ಭವೇತ್ಪ್ರೀತಿಃ ಪಿತೄಣಾಂ ಯುಗಸಂಖ್ಯಯಾ ॥ ೯೫ ॥

---

೯೧-೯೨. ಆಮೇಲೆ ಬಹುಕಷ್ಟದಿಂದ ದುರ್ಲಭವಾದ ಮನುಷ್ಯ ಜನ್ಮವನ್ನು ಹೊಂದುತ್ತಾನೆ. ನಿನಗೆ ಪ್ರೇತಮೋಕ್ಷವನ್ನುಂಟುಮಾಡುವ ಉಪಾಯವನ್ನು ಹೇಳುತ್ತೇನೆ. ಆ ಉಪಾಯವನ್ನು ನಾನು ಪೂರ್ವಜನ್ಮದಲ್ಲಿ ನನ್ನ ಗುರುವಿನ ಮುಖದಿಂದ ಕೇಳಿದ್ದೇನೆ. ಮಗು ಯಮುನೆಯಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಮನೆಗೆ ಹೋಗು.

೯೩. ಕಲ್ಪಾದಿಯಾದ ಸರ್ವರಿಗೂ ಗತಿಯನ್ನು ಕೊಡುವ ಪಿತೃಗಳು ದೇವತೆಗಳ ಅರ್ಚನೆಗೆ ಯೋಗ್ಯವಾದ ವೈಶಾಖ ಪೌರ್ಣಿಮೆಯು ಈದಿನದಿಂದ ಐದನೆಯ ದಿನದಲ್ಲಿ ಬರುತ್ತದೆ.

೯೪. ಒಳ್ಳೆಯ ಪಾನೀಯ ಮುಂತಾದುವುಗಳನ್ನೂ (ಪಾನಕವೇ ಮುಂತಾದ ಪಾನೀಯ) ಎಳ್ಳಿನಿಂದ ಮಿಶ್ರವಾದ ಪದಾರ್ಥಗಳನ್ನೂ, ಉದಕುಂಭ, ಅನ್ನ, ಫಲಗಳನ್ನೂ ಭಕ್ತಿಯಿಂದ ದಾನಮಾಡು. ಆದಿನ ಕೊಟ್ಟುದು ಪಿತೃಗಳಿಗೆ ಸಾವಿರವರ್ಷಗಳವರೆಗೂ ತೃಪ್ತಿಯನ್ನುಂಟುಮಾಡುತ್ತದೆ.

೯೫. ವೈಶಾಖದ ಪೌರ್ಣಿಮೆಯ ದಿನ ಬ್ರಾಹ್ಮಣಭೋಜನಮಾಡಿಸಿದರೆ ಅದು ಅಗುಳಗುಳಿಗೂ ಪಿತೃಗಳಿಗೆ ಯುಗ ಸಂಖ್ಯೆಯಿಂದ ಪ್ರೀತಿಯನ್ನುಂಟುಮಾಡುತ್ತದೆ.

ವೈಶಾಖ್ಯಾಂ ವಿಧಿವತ್ಸ್ನಾತ್ವಾ ಭೋಜಯನ್ಬ್ರಾಹ್ಮಣಾನ್ದಶ ।
ಪಾಯಸಂ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೯೬ ॥

ಯಸ್ತಿಲೈರ್ಯವಸಂಮಿಶ್ರೈಃ ಸ್ನಾತಿ ರಕ್ತಾಂಗಕಸ್ತದಾ ।
ತಸ್ಯ ಬ್ರಹ್ಮಾ ಚ ಧರ್ಮಶ್ಚ ದದಾತಿ ವರಮೀಪ್ಸಿತಂ ॥ ೯೭ ॥

ಪ್ರೀತಯೇ ಧರ್ಮರಾಜಸ್ಯ ಯೋ ದದ್ಯಾದುದಕುಂಭಕಾನ್ ।
ಸಪ್ತ ಸಪ್ತ ಕುಲಂ ತೇನ ತಾರಿತಂ ಸ್ಯಾನ್ನಸಂಶಯಃ ॥ ೯೮ ॥

ತ್ರಯೋದಶ್ಯಾಂ ಚತುರ್ದಶ್ಯಾಂ ಪೂರ್ಣಾಯಾಂ ಭಕ್ತಿತತ್ಪರಃ ।
ಸ್ನಾತ್ವಾ ಜಪ್ತ್ವಾ ತಥಾ ದತ್ವಾ ಹುತ್ವಾ ಸಂಪೂಜ್ಯ ಮಾಧವಂ ॥
ಯತ್ಫಲಂ ಜಾಯತೇ ಪುತ್ರ ತದಸ್ಮಾಕಂ ಸಮರ್ಪಯ ॥ ೯೯ ॥

ನೈತೌ ಪರಿಚಿತೌ ಪ್ರೇತೌ ಹಿತ್ವಾ ಸ್ವರ್ಗತಿಮಾಶ್ರಯೇ ।
ಏತಯೋರಪಿ ಪಾಪಸ್ಯ ಪ್ರಾನ್ತೋಽಯಂ ಸಮುಪಸ್ಥಿತಃ ॥ ೧೦೦ ॥

---

೯೬. ವೈಶಾಖದಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಹತ್ತು ಬ್ರಾಹ್ಮಣರಿಗೆ ಪಾಯಸವನ್ನು ಭೋಜನಮಾಡಿಸಿದರೆ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಸಂಶಯವಿಲ್ಲ.

೯೭. ಯಾವನು ಎಳ್ಳು, ಯವಗಳನ್ನು ತಲೆಯಮೇಲಿಟ್ಟುಕೊಂಡು ಸ್ನಾನಮಾಡುತ್ತಾನೋ ಅವನಿಗೆ ಬ್ರಹ್ಮನೂ, ವಿಷ್ಣುವೂ ಇಷ್ಟವಾದ ವರವನ್ನು ಕೊಡುತ್ತಾರೆ.

೯೮. ಧರ್ಮರಾಜನಿಗೆ ಪ್ರೀತಿಯಾಗಲೆಂದು ಉದಕುಂಭದಾನಮಾಡಿದರೆ ಅವನ ಹಿಂದುಮುಂದಿನ ಏಳೇಳು ತಲೆಗಳು ಉದ್ಧೃತವಾಗುತ್ತವೆ. ಸಂಶಯವಿಲ್ಲ.

೯೯. ತ್ರಯೋದಶಿ, ಚತುರ್ದಶಿ, ಪೂರ್ಣಿಮೆಗಳಲ್ಲಿ ಭಕ್ತಿಯಿಂದ ಸ್ನಾನಮಾಡಿ, ಜಪಿಸಿ, ದಾನಮಾಡಿ, ಹೋಮಮಾಡಿ ವಿಷ್ಣುವನ್ನು ಪೂಜಿಸು. ಅದರಿಂದ ಬಂದ ಫಲವನ್ನು ನನಗೆ ಸಮರ್ಪಿಸು.

೧೦೦. ಪರಿಚಿತವಾದ ಈ ಪ್ರೇತಗಳನ್ನು ಬಿಟ್ಟು ಸ್ವರ್ಗಕ್ಕೆ ಹೋಗಲು ನನಗೆ ಇಚ್ಛೆಯಿಲ್ಲ. ಆದ್ದರಿಂದ ಇವರ ಪಾಪಕ್ಕೂ ಕೊನೆಯು ಬಂದಿತು.

॥ ಯಮ ಉವಾಚ ॥

ತಥೇತ್ಯುಕ್ತ್ವಾ ಸ ವಿಪ್ರಾಗ್ರ್ಯೋ ಗೃಹಂ ಗತ್ವಾ ತಥಾ ಕರೋತ್ ।
ಪ್ರೀತಃ ಪರಮಯಾ ಭಕ್ತ್ಯಾ ವೈಶಾಖಸ್ನಾನದಾನಕೃತ್ ॥ ೧೦೧ ॥

ಸ್ನಾತ್ವಾ ಸಮುದಿತೋ ಭಕ್ತ್ಯಾ ಪ್ರಾಪ್ಯ ಮಾಧವ ಪೂರ್ಣಿಮಾಂ ।
ದತ್ವಾ ಬಹೂನಿ ದಾನಾನಿ ತೇಭ್ಯಃ ಪುಣ್ಯಂ ದದೌ ಪೃಥಕ್ ॥ ೧೦೨ ॥

ತತ್ಕ್ಷಣಾದೇವ ತೇ ಸರ್ವೇ ವಿಮಾನಸ್ಥಾ ದಿವಂ ಯಯುಃ ।
ತತ್ಪುಣ್ಯದಾನಯೋಗೇನ ಮುದಿತಾ ದ್ವಿಜಸತ್ತಮ ॥ ೧೦೩ ॥

ಧನಶರ್ಮಾಪಿ ವಿಪ್ರೇಂದ್ರಃ ಶ್ರುತಿಸ್ಮೃತಿಪುರಾಣವಿತ್ ।
ಭುಕ್ತ್ವಾ ಭೋಗಾಂಶ್ಚಿರಂ ಕಾಲಂ ಬ್ರಹ್ಮಲೋಕಮವಾಪ್ತವಾನ್ ॥ ೧೦೪ ॥

ಏಷಾ ಪುಣ್ಯತಮಾ ತಸ್ಮಾದ್ವೈಶಾಖೀ ವಿಶ್ವಪಾವನೀ ।
ಕಥ್ಯತೇ ತು ಮಯಾ ವಿಪ್ರ ಸಮಾಸೇನಾತಿಗೌರವಾತ್ ॥ ೧೦೫ ॥

---

೧೦೧. ಯಮನು ಹೇಳಿದನು- ಆ ಬ್ರಾಹ್ಮಣನು ಹಾಗೇ ಆಗಲೆಂದು ಹೇಳಿ ಮನೆಗೆ ಹೋಗಿ ಹಾಗೆಯೇ ಮಾಡಿದನು. ಸಂತೋಷದಿಂದಲೂ, ಭಕ್ತಿಯಿಂದಲೂ ವೈಶಾಖಸ್ನಾನಮಾಡಿ ದಾನವನ್ನೂ ಮಾಡಿದನು

೧೦೨. ಸಂತೋಷದಿಂದ ಸ್ನಾನಮಾಡಿ ವೈಶಾಖಮಾಸಪೂರ್ಣಿಮೆಯ ದಿನ ಬಹುವಾಗಿ ದಾನಮಾಡಿ ಅವರಿಗೆ ಬೇರೆ ಬೇರೆಯಾಗಿ ದಾನಗಳ ಫಲವನ್ನು ಕೊಟ್ಟನು.

೧೦೩. ಆ ಪುಣ್ಯದಾನದ ಮಹಿಮೆಯಿಂದ ಅವರು ಸಂತೋಷಗೊಂಡು ಆಗಲೆ ವಿಮಾನದಲ್ಲೇ ಸ್ವರ್ಗಕ್ಕೆ ಹೋದರು.

೧೦೪. ಶ್ರುತಿ ಸ್ಮೃತಿ ಪುರಾಣಗಳನ್ನು ಬಲ್ಲ ಧನಶರ್ಮನೂ ಅನೇಕ ಭೋಗಗಳನ್ನು ಅನುಭವಿಸಿ ಬಹುಕಾಲವಿದ್ದು ಬ್ರಹ್ಮಲೋಕಕ್ಕೆ ಹೋದನು.

೧೦೫. ಆ ವೈಶಾಖ ಪೂರ್ಣಿಮೆಯು ಅತಿ ಪುಣ್ಯವಾದುದು. ಪ್ರಪಂಚಕ್ಕೆ ಪಾವನವು. ಆದ್ದರಿಂದ ಅತಿಗೌರವದಿಂದ ಅದನ್ನು ಸಂಕ್ಷಿಪ್ತವಾಗಿ ಹೇಳುತ್ತೇನೆ.

ಧನ್ಯಾಸ್ತ ಏವ ಕೃತಿನಶ್ಚ ತ ಏವ ಜಾತಾ
ಲೋಕೇ ತ ಏವ ಪುರುಷಾಃ ಪುರುಷಾರ್ಥಭಾಜಃ ।
ಯೇ ಮಾಧವೇ ಮಧುನಿಷೂದನಮರ್ಚಯಂತಿ
ಪ್ರಾತರ್ನಿಮಜ್ಯ ನಿಯಮೇನ ವಿಶುದ್ಧಚಿತ್ತಾಃ ॥ ೧೦೬ ॥

ಯೇ ಮಾಧವೇ ಮಾಸಿ ಸರಃ ಪ್ರಭಾತೇ
ಸ್ನಾತ್ವಾ ಸಮಾರಾಧಯತೇ ರಮೇಶಂ ।
ಯಮೈರುಪೇತೋ ನಿಯಮೈರಶೇಷೈ
ರ್ವ್ರತೋಽಪಿ ನೂನಂ ಸ ನಿಹಂತಿ ಪಾಪಂ ॥ ೧೦೭ ॥

ತೈರೇವ ಕಾಲೋ ವಿಹಿತಸ ಏವ
ನರೇಷು ಧನ್ಯಾ ವಿಗತೈನಸಸ್ತೇ ।
ಪ್ರಾತಸ್ಸಮುತ್ಥಾಯ ನಿಮಜ್ಜತೇ ಯೈ
ರ್ಗಾಂಗೇ ಮಧುದ್ವೇಷಿಸಮರ್ಚನಾಯ ॥ ೧೦೮ ॥

---

೧೦೬. ಯಾರು ವೈಶಾಖಮಾಸದಲ್ಲಿ ನಿಯಮದಿಂದ ಪ್ರಾತಸ್ಸ್ನಾನಮಾಡಿ ಶುದ್ಧವಾದ ಮನಸ್ಸುಳ್ಳವರಾಗಿ ಮಧುಹಂತೃವಾದ ವಿಷ್ಣುವನ್ನು ಪೂಜಿಸುತ್ತಾರೋ ಅವರೇ ಧನ್ಯರು. ಅವರೇ ಕಾರ್ಯಮಾಡಿದವರು. ಅವರ ಜನ್ಮವೇ ಹುಟ್ಟಿದುದಕ್ಕೆ ಸಾರ್ಥಕವಾದುದು. ಲೋಕದಲ್ಲಿ ಅವರೇ ಪುರುಷಾರ್ಥಗಳನ್ನು ಹೊಂದಿದ ಪುರುಷರು.

೧೦೭. ಯಾವನು ವೈಶಾಖದಲ್ಲಿ ಪ್ರಾತಸ್ಸ್ನಾನಮಾಡಿ ವಿಷ್ಣುವನ್ನು ನಿಯಮ ದಿಂದಲೂ, ಇಂದ್ರಿಯನಿಗ್ರಹದಿಂದಲೂ, ಪೂಜಿಸುತ್ತಾನೆಯೋ ಅವನು ಪಾಪಗಳನ್ನು ನಾಶಮಾಡಿಕೊಳ್ಳುತ್ತಾನೆ.

೧೦೮. ಯಾರು ವಿಷ್ಣುಪೂಜೆಗೋಸ್ಕರ ವೈಶಾಖದಲ್ಲಿ ಗಂಗೆಯಲ್ಲಿ ಪ್ರಾತಃ ಸ್ನಾನಮಾಡುತ್ತಾರೆಯೋ ಅವರೇ ಕಾಲವನ್ನು ಉಪಯೋಗಿಸಿಕೊಂಡವರು ಮನುಷ್ಯ ರಲ್ಲಿ ಅವರೇ ಧನ್ಯರು. ಪಾಪವನ್ನು ಕಳೆದುಕೊಂಡವರು.

ಅಹೋಽತಿಧನ್ಯಸ್ಸುಕೃತೈಕಸಾರಃ
ಸರ್ವಾಧಿಕೋ ಮಾಧವಮಾಸ ಏಷಃ ।
ಯಸ್ಮಿನ್ಕೃತಂ ವಿಪ್ರ ಕಥಂಚಿದಲ್ಪಂ
ಪುಣ್ಯಂ ಪುನಸ್ಸ್ಯಾದಿಹ ಕಲ್ಪತುಲ್ಯಂ ॥ ೧೦೯ ॥

ಮಜ್ಜತೋಹಿ ಮನುಜಸ್ಯ ಮಾಧವೇ
ಮಾಧವಾರ್ಚನಕೃತೇ ದಿನೋದಯೇ ।
ತಾಮಸೋಽಪಿ ಜಲಬಿಂದುಸಂಗಮಾ-
ದಂಗಮಾವಹತಿ ಪಾವನಂ ಯತಃ । ॥ ೧೧೦ ॥

ತಾನಿ ದೇಹಮಧಿರುಹ್ಯ ದೇಹಿನ
ಸ್ತಾವದೇವ ವಿಚರಂತ್ಯಘಾನಿ ಚ ।
ಯಾವದೇತಿ ನ ಚ ಮಾಧವಾಹ್ವಯೋ
ಶ್ರೀರಮಾರಮಣ ವಲ್ಲಭೋ ವಿರಾಟ್ ॥ ೧೧೧ ॥

---

೧೦೯. ಈ ವೈಶಾಖಮಾಸದಲ್ಲಿ ಸ್ವಲ್ಪವಾದ ಪುಣ್ಯಮಾಡಿದರೂ, ಅದು ಕಲ್ಪಕ್ಕೆ ಸಮಾನವಾಗುತ್ತದಾದುದರಿಂದ ಸುಕೃತವೇ ಮುಖ್ಯವಾದ ಈ ವೈಶಾಖ ಮಾಸವು ಧನ್ಯವಾದುದು. ಇದು ಎಲ್ಲಕ್ಕಿಂತಲೂ ಅಧಿಕವಾದುದು.

೧೧೦. ವೈಶಾಖದಲ್ಲಿ ಸ್ನಾನಮಾಡಿ ವಿಷ್ಣುವನ್ನು ಪೂಜಿಸಿದರೆ ತಮೋಗುಣ ದಿಂದ ಕೂಡಿರುವವನಾದರೂ ಆ ಜಲದಿಂದ ಅವಯವಗಳನ್ನು ಪವಿತ್ರವನ್ನಾಗಿ ಮಾಡಿಕೊಳ್ಳುತ್ತಾನೆ.

೧೧೧. ಶ್ರೀರಮಾರಮಣನಿಗೆ ಪ್ರೀತಿಪಾತ್ರವಾದ ವಿರಾಟ್ಸ್ವರೂಪವಾದ ಮಾಧವವೆಂಬ ಮಾಸವು ಎಲ್ಲಿಯವರೆಗೆ ಉದಿಸುವುದಿಲ್ಲವೋ ಅಲ್ಲಿಯವರೆಗೆ ಪಾಪವು ಪ್ರಾಣಿಯ ದೇಹವನ್ನು ಹತ್ತಿಕೊಂಡು ಓಡಿಯಾಡುತ್ತವೆ.

ಸ್ನಾತುಂ ಪದಾನಿ ಮನುಜೋ ಗಮನೇ ವಿಭಾತೇ
ತೀರ್ಥೇ ದದಾತಿ ಮಧುಸೂದನಮಾಸಿ ಯುಕ್ತಃ ।
ಭೂಯೋ ಭವಂತಿ ಹಯಮೇಧಸಮಾನಿ ತಾನಿ
ಶ್ರೀಮಾಧವಸ್ಮರಣತೋ ಗದತೋಽಸ್ಯ ನಾಮ ॥ ೧೧೨ ॥

ಮೇರುಮಂದರತುಲ್ಯಾನಿ ಪಾಪಾನ್ಯುಗ್ರಾಣ್ಯನೇಕಧಾ ।
ದಹತೇ ಮಾಧವೋ ಮಾಸೋಽನುಷ್ಠಿತೋ ಹರಿವಲ್ಲಭಃ ॥ ೧೧೩ ॥

ಇದಂ ಸಂಕ್ಷೇಪತಃ ಪ್ರೋಕ್ತಂ ಮಯಾ ತೇಽನುಗ್ರಹಾದ್ದ್ವಿಜ ।
ವೈಶಾಖಸ್ನಾನಮಾಹಾತ್ಮ್ಯಂ ಶೃಣು ಪಾಪಕ್ಷಯಂ ಪರಂ ॥ ೧೧೪ ॥

ಯಸ್ತು ಶ್ರೋಷ್ಯತಿ ಭಕ್ತ್ಯೇಮಮಿತಿಹಾಸಂ ಮಯೋದಿತಂ ।
ಸೋಽಪಿ ಪಾಪವಿನಿರ್ಮುಕ್ತೋ ಮಮ ಲೋಕಂ ಸ ಯಾಸ್ಯತಿ ॥ ೧೧೫ ॥

ಬ್ರಹ್ಮಹತ್ಯಾದಿಪಾಪಾನಿ ಬಹುಶೋಽಪಿ ಕೃತಾನ್ಯಪಿ ।
ವೈಶಾಖಸ್ಯ ವಿಧಾನೇನ ತಾನಿ ನಶ್ಯಂತಿ ನಿಶ್ಚಿತಂ ॥ ೧೧೬ ॥

---

೧೧೨. ಮನುಷ್ಯನು ವೈಶಾಖಮಾಸದಲ್ಲಿ ಪ್ರಾತಃಕಾಲದಲ್ಲಿ ತೀರ್ಥಸ್ನಾನಕ್ಕೋಸ್ಕರ ವಿಷ್ಣು ಸ್ಮರಣೆಮಾಡುತ್ತ ಎಷ್ಟು ಹೆಜ್ಜೆಗಳನ್ನಿಡುತ್ತಾನೋ ಆ ಹೆಜ್ಜೆಗಳು ಒಂದೊಂದೂ ಒಂದೊಂದು ಅಶ್ವಮೇಧಯಾಗಕ್ಕೆ ಸಮವಾಗುತ್ತವೆ.

೧೧೩. ಆಚರಿಸಲ್ಪಟ್ಟ ವೈಶಾಖಮಾಸವು ಪಾಪಗಳು ಉಗ್ರವಾಗಿ ಮೇರು ಮಂದರ ಪರ್ವತದಷ್ಟು ದಪ್ಪವಾಗಿದ್ದರೂ ಅವನ್ನು ಅನೇಕಪ್ರಕಾರವಾಗಿ ಸುಡುತ್ತವೆ.

೧೧೪. ವೈಶಾಖ ಸ್ನಾನಮಹಿಮೆಯನ್ನು ಕೇಳು. ಇದು ಪಾಪಕ್ಷಯಕರವು. ನಿನ್ನಲ್ಲಿ ಅನುಗ್ರಹದಿಂದ ಇದನ್ನು ಸಂಕ್ಷೇಪವಾಗಿ ಹೇಳಿದೆನು.

೧೧೫. ಈ ಪುರಾತನವಾದ ಕಥೆಯನ್ನು ಕೇಳಿದವನು ಪಾಪವನ್ನು ಕಳೆದು ಕೊಂಡು ನನ್ನ ಲೋಕವನ್ನು ಹೊಂದುತ್ತಾನೆ.

೧೧೬. ಬ್ರಹ್ಮಹತ್ಯಾದಿಪಾಪಗಳನ್ನು ಅನೇಕಬಾರಿ ಮಾಡಿದರೂ ವೈಶಾಖ ವಿಧಿಯನ್ನಾಚರಿಸಿದರೆ ಅವು ನಾಶವಾಗುತ್ತವೆ. ನಿಶ್ಚಯವು.

ತ್ರಿಂಶತ್ಪೂರ್ವಾನ್ಪರಾಂಸ್ತ್ರಿಂಶತ್ಪಿತೄನ್ಸಂತಾರಯೇನ್ನರಃ ।
ಯತೋ ಭಗವತಸ್ತಸ್ಯ ಹರೇರಕ್ಲಿಷ್ಟಕರ್ಮಣಃ                    ॥ ೧೧೭ ॥

ಪ್ರಿಯೋಽಸೌ ಮಾಧವೋ ಮಾಸಃ ಸ ಮಾಸಃ ಪ್ರವರೋ ಯತಃ ।
ಸಂಶಯಂ ಮಾ ವಿಧೇಹೀಹ ಮಹೀದೇವ ಕಥಂಚನ                    ॥ ೧೧೮ ॥

ವೈಶಾಖಂ ಪ್ರತಿಮಾಸಂ ಹಿ ಸಮಾಸಾದ್ಯನ್ಮಯೋದಿತಂ ।
ಇಹಾರ್ಥೇ ಯತ್ಪುರಾವೃತ್ತಂ ತದಪ್ಯಾಕರ್ಣಯಾದ್ಭುತಂ ।
ಅನಾಖ್ಯೇಯಮಪೀದಂ ತೇ ಕಥಯಿಷ್ಯೇ ಕಥಾನಕಂ                    ॥ ೧೧೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಚತುರ್ನವತಿತಮೋಽಧ್ಯಾಯಃ

---

೧೧೭. ಆ ಭಗವಂತನಾದ ಹರಿಯ ವೈಶಾಖವನ್ನು ಆಚರಿಸಿದವನು ತನ್ನ ಹಿಂದಿನ ಮೂವತ್ತು ತಲೆಗಳನ್ನೂ, ಮುಂದಿನ ಮೂವತ್ತು ತಲೆಗಳನ್ನೂ ಉದ್ಧರಿಸುತ್ತಾನೆ.

೧೧೮. ವೈಶಾಖಮಾಸವು ಉತ್ತಮವಾದುದರಿಂದ ಅದೇ ಪ್ರಿಯವಾದುದು. ಎಲೈ ಬ್ರಾಹ್ಮಣನೇ ಇದರಲ್ಲಿ ಯಾವರೀತಿಯ ಸಂಶಯವನ್ನೂ ಮಾಡಬೇಡ.

೧೧೯. ವೈಶಾಖಮಾಸದ ಮಹಿಮೆಯನ್ನು ಸಂಕ್ಷೇಪವಾಗಿ ಹೇಳಿದೆನಷ್ಟೆ. ಈ ವಿಷಯದಲ್ಲಿ ಹಿಂದೆ ನಡೆದ ಒಂದು ಕಥೆಯನನ್ನು ಹೇಳುತ್ತೇನೆ. ಅದನ್ನೂ ಕೇಳು. ಆ ಕಥೆಯು ಯಾರಿಗೂ ಹೇಳತಕ್ಕದ್ದಲ್ಲವಾದರೂ ನಿನಗೆ ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೊಂಬ
ತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

— × —

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಪಂಚನವತಿತಮೋಽಧ್ಯಾಯಃ ॥



॥ ಯಮ ಉವಾಚ ॥

ಬಭೂವ ಭೂಪತಿಃ ಪೂರ್ವಂ ಖ್ಯಾತೋ ನಾಮ್ನಾ ಮಹೀರಥಃ ।
ಪೂರ್ವಪುಣ್ಯಫಲಾವಾಪ್ತಪ್ರಭೂತೈಶ್ವರ್ಯಸಂಪದಃ ॥ ೧ ॥

ಬಭೂವ ಭೂಪತಿಸ್ಸರ್ವಲಲನಾಲಲಿತಸ್ಥಿತಃ ।
ತದೇಕವ್ಯಸನಾಸಕ್ತಿರ್ನಧರ್ಮಾರ್ಥವ್ಯವಸ್ಥಿತಃ ॥ ೨ ॥

ಮಂತ್ರಿವಿನ್ಯಸ್ತರಾಜ್ಯಶ್ರೀಃ ಬಭುಜೇ ವಿಷಯಾನ್ನೃಪಃ ।
ಸ ಕಾಮಿನೀಸಹಚರೋ ರಾಜ್ಯಕಾರ್ಯಪರಾಙ್ಮುಖಃ ॥ ೩ ॥

---

## ತೊಂಭತ್ತೈದನೆಯ ಅಧ್ಯಾಯವು

೧. ಯಮನು ಹೇಳಿದನು—ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಫಲದಿಂದ ಬಹು ಐಶ್ವರ್ಯವನ್ನು ಹೊಂದಿದ್ದ ಮಹೀರಥನೆಂಬ ಒಬ್ಬ ರಾಜನು ಇದ್ದನು.

೨. ಆ ರಾಜನು ಯಾವಾಗಲೂ ಸ್ತ್ರೀಲೋಲುಪನಾಗಿಯೇ ಇರತಕ್ಕವನಾದನು. ಅವನು ಅದೊಂದು ವ್ಯಸನವನ್ನು ಹತ್ತಿಸಿಕೊಂಡಿದ್ದನೇ ಹೊರತು ಧರ್ಮಾರ್ಥಗಳ ತಂಟೆಗೇ ಹೋಗುತ್ತಿರಲಿಲ್ಲ.

೩. ಮಂತ್ರಿಯಲ್ಲಿ ರಾಜ್ಯಭಾರವನ್ನಿಟ್ಟು ರಾಜ್ಯಕಾರ್ಯದಲ್ಲಿ ಪರಾಙ್ಮುಖನಾಗಿ ಯಾವಾಗಲೂ ಹೆಂಗಸರೊಡನೆಯೇ ಇದ್ದುಕೊಂಡು ವಿಷಯವನ್ನು ಅನುಭವಿಸುತ್ತಿದ್ದನು.

ನ ಪ್ರಜಾ ನ ಧನಂ ಧರ್ಮಂ ನಾಽರ್ಥಕಾರ್ಯಂ ಸ ಪಶ್ಯತಿ ।
ಕೇವಲಂ ಕಾಮಿನೀಕೇಳಿಕಲನೋಚಿತವಾಙ್ಮನಾಃ ॥ ೪ ॥

ಅಥ ಕಾಲೇನ ಮಹತಾ ಪುರೋಧಾಸ್ತಸ್ಯ ಕಶ್ಯಪಃ ।
ವಚಃ ಪ್ರೋವಾಚ ತಂ ಧರ್ಮಮಿತಿ ಚೇತಸಿ ಚಿಂತಯನ್ ॥ ೫ ॥

ನಿವಾರಯತಿ ನೋ ಮೋಹಾದಧರ್ಮಾನ್ನೃಪತಿಂ ಗುರುಃ ।
ಸೋಽಪಿ ತತ್ಪಾಪಭಾಗ್ಯಸ್ಮಾದ್ಬೋಧನೀಯಃ ಪುರೋಧಸಾ ॥ ೬ ॥

ಬೋಧಿತೋಽಪ್ಯವಜಾನಾತಿ ಸ ಚೇದ್ವಾಕ್ಯಂ ಪುರೋಧಸಃ ।
ಪುರೋಧಾಸ್ತತ್ರ ನಿರ್ದೋಷೋ ರಾಜಾ ಸ್ಯಾತ್ಸರ್ವದೋಷಭಾಕ್ ॥ ೭ ॥

॥ ಕಶ್ಯಪ ಉವಾಚ ॥

ಶೃಣು ರಾಜನ್ಮಮಗುರೋರ್ವಚೋ ಧರ್ಮಾರ್ಥಸಂಹಿತಂ ।
ಅಭಿಸ್ನಾರ್ಥಮುಪೇತಾರ್ಥಮಿಚ್ಛಾರಾಗಾದಿವರ್ಜಿತಂ ॥ ೮ ॥

---

೪. ಸ್ತ್ರೀಲೀಲೆಯೊಂದರಲ್ಲಿ ಬಹು ಆಸಕ್ತನಾಗಿ ಪ್ರಜೆಗಳನ್ನಾಗಲಿ, ಹಣವನ್ನಾಗಲಿ, ಧರ್ಮವನ್ನಾಗಲಿ, ಮತ್ತಾವ ರಾಜ್ಯಕಾರ್ಯವನ್ನಾಗಲೀ ನೋಡುತ್ತಲೇ ಇರಲಿಲ್ಲ.

೫. ಬಹುಕಾಲದ ಮೇಲೆ ಕಶ್ಯಪನೆಂಬ ಅವನ ಪುರೋಹಿತನು ತಾನು ಎಚ್ಚರಿಸತಕ್ಕದ್ದು ಧರ್ಮವೆಂದು ತಿಳಿದು ಈ ರೀತಿ ಯೋಚಿಸಿಕೊಂಡು ಹೇಳಿದನು.

೬. ಗುರುವಾದವನು ರಾಜನನ್ನು ಅಧರ್ಮದಿಂದ ನಿವಾರಿಸದಿದ್ದರೆ ಆ ಗುರುವೂ ಅವನ ಪಾಪದಲ್ಲಿ ಭಾಗಿಯಾಗುತ್ತಾನೆ. ಆದ್ದರಿಂದ ಪುರೋಹಿತನಾದ ನಾನು ರಾಜನಿಗೆ ಬುದ್ಧಿಯನ್ನು ಹೇಳಬೇಕು.

೭. ನಾನು ಬೋಧಿಸಿದರೂ ನನ್ನ ಮಾತನ್ನು ತಿರಸ್ಕರಿಸಿದರೆ ಆಗ ಪುರೋಹಿತನಾದ ನಾನು ದೋಷರಹಿತನಾಗುತ್ತೇನೆ. ಸರ್ವದೋಷವೂ ರಾಜನದೇ ಆಗುತ್ತದೆ.

೮. ಕಶ್ಯಪನು ಹೇಳಿದನು—ಎಲೈ ರಾಜನೇ, ಶ್ಲೇಷಾರ್ಥಗಳಿಲ್ಲದ ಅರ್ಥವತ್ತಾದ ಆಶೆಕೋಪಗಳಿಂದ ದೂರವಾದ ಧರ್ಮಾರ್ಥಗಳಿಂದ ಕೂಡಿದ ಗುರುವಾದ ನಾನು ಹೇಳುವ ಮಾತನ್ನು ಕೇಳು.

ಅಯಮೇವ ಪರೋ ಧರ್ಮೋ ಯದ್ಗುರೋರ್ವಚಸಿ ಸ್ಥಿತಿಃ ।
ಗುರ್ವಾಜ್ಞಾಯಾ ಲವೋ ರಾಜ್ಞಾಮಾಯುಶ್ರೀಸೌಖ್ಯವರ್ಧನಃ ॥ ೯ ॥

ನ ವಿಪ್ರಾಸ್ತರ್ಪಿತಾ ದಾನೈಃ ವಿಷ್ಣುರ್ನಾರಾಧಿತಸ್ತ್ವಯಾ ।
ನ ವ್ರತಂ ನ ತಪಃ ಕಿಂಚಿನ್ನ ತೀರ್ಥಂ ಹಿ ತ್ವಯಾಕೃತಂ ॥ ೧೦ ॥

ಹರಿನಾಮ ತ್ವಯಾ ಕಾಮವಶಗೇನ ನ ಚಿಂತಿತಂ ।
ಹಾ ತ್ವಯಾ ಭೀರುಸಂಗತ್ಯಾ ನ ವಿದ್ವತ್ಸಂಗತಿಃ ಕೃತಾ । ॥ ೧೧ ॥

ಸ್ಮರಾವಸರವಾಹಿನ್ಯೋ ವಲ್ಲಭಾಃ ಕಸ್ಯ ನ ಪ್ರಿಯಾಃ ।
ಕಿಂತು ತಾಃ ಪವನಾಲ್ಲೋಲಕದಳೀದಳಸನ್ನಿಭಾಃ ॥ ೧೨ ॥

ತರಂಗತರಳೈರರ್ಥ್ಯೈರ್ಭೋಗ್ಯೈರ್ಭ್ರೂಭಂಗಭಂಗುರೈಃ ।
ಮುಹೂರ್ತಪೇಯೈಸ್ತಾರುಣ್ಯೈರ್ನ ನೃತ್ಯಂತೇ ಮಹಾಶಯಾಃ ॥ ೧೩ ॥

---

೯. ಗುರುವಿನ ಮಾತಿನಂತೆ ನಡೆಯತಕ್ಕದ್ದು ರಾಜನಿಗೆ ಉತ್ತಮವಾದ ಧರ್ಮವು. ಗುರುವಿನ ಆಜ್ಞೆಯ ಒಂದಂಶವನ್ನಾಚರಿಸಿದರೂ ಅದು ರಾಜರಿಗೆ ಆಯುಸ್ಸು ಸಂಪತ್ತು ಸೌಖ್ಯಗಳನ್ನು ಕೊಡುತ್ತದೆ.

೧೦. ದಾನದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಲಿಲ್ಲ. ವಿಷ್ಣುವನ್ನು ಆರಾಧಿಸಲಿಲ್ಲ. ವ್ರತಗಳನ್ನು ಮಾಡಲಿಲ್ಲ. ತಪಸ್ಸುಗಳಂತೂ ಇಲ್ಲವೇ ಇಲ್ಲ. ತೀರ್ಥ ಸೇವೆಗಳನ್ನೂ ಮಾಡಲಿಲ್ಲ. ಈ ರೀತಿ ನೀನಿದ್ದೀಯೆ.

೧೧. ಕಾಮಕ್ಕೆ ಅಧೀನನಾದ ನೀನು ಹರಿನಾಮವನ್ನೇ ಚಿಂತಿಸಲಿಲ್ಲ. ಅಯ್ಯೋ! ನೀನು ಯಾವಾಗಲೂ ಹೆಂಗಸರ ಸಹವಾಸದಲ್ಲೇ ಇದ್ದು ವಿದ್ವಾಂಸರ ಸಹವಾಸವನ್ನೇ ಮಾಡಲಿಲ್ಲ.

೧೨. ಮನ್ಮಥನ ಸೊಕ್ಕನ್ನು ಸುರಿಸುತ್ತಿರುವ ಆ ಸ್ತ್ರೀಯರು ಯಾರಿಗೆ ತಾನೇ ಪ್ರಿಯರಲ್ಲ. ಆದರೆ ಅವರು ಗಾಳಿಯ ಬಡಿತದಿಂದ ಚಂಚಲವಾದ ಬಾಳೆಯ ಎಲೆಯಂತೆ ಚಂಚಲರು.

೧೩. ಯೋಗ್ಯರಾದವರು ಅಲೆಗಳಂತೆ ಚಂಚಲವಾದ ಆ ಸ್ತ್ರೀಯರ ಹುಬ್ಬಿನ ನೋಟಗಳಿಗೆ ಹಿಗ್ಗದೆ ಕ್ಷಣಕಾಲ ಅನುಭವಯೋಗ್ಯವಾದ ಅವರ ತಾರುಣ್ಯಕ್ಕೆ ಹಿಗ್ಗಿ ಕುಣಿಯುವುದಿಲ್ಲ.

ಕಿಂ ವಿದ್ಯಯಾ ಕಿಂ ತಪಸಾ ಕಿಂ ತ್ಯಾಗೇನ ನಯೇನ ವಾ ।
ಕಿಂ ವಿವಿಕ್ತೇನ ಮನಸಾ ಸ್ತ್ರೀಭಿರ್ಯಸ್ಯ ಮನೋಹೃತಂ ॥ ೧೪ ॥

ಏಕೋ ಮುಖ್ಯೋ ಮಹಾಧರ್ಮೋ ನಿಧನೇಷ್ವನುಯಾತಿ ಯಃ ।
ಸರ್ವಮನ್ಯಚ್ಛರೀರೋಪಭೋಗ್ಯಂ ನಾಶಂ ಪ್ರಯಾತಿ ಚ ॥ ೧೫ ॥

ಧರ್ಮಂ ಶನೈಸ್ಸಂಚಿನುಯಾದ್ವಲ್ಮೀಕಮಿವ ಪುತ್ತಿಕಾಃ ।
ಧರ್ಮೇಣ ಹಿ ಸಹಾಯೇನ ನರಸ್ತರತಿ ದುರ್ಗತಿಂ ॥ ೧೬ ॥

ಅನಿತ್ಯೋಲ್ಲಸಿತೋತ್ತಾರಜಲಕಲ್ಲೋಲಚಂಚಲಂ ।
ಕಿನ್ನ ಜಾನಾಸಿ ರಾಜೇಂದ್ರ ನೃಣಾಂ ಜೀವಿತವಿಭ್ರಮಂ ॥ ೧೭ ॥

ವಿನಯೋಷ್ಣೀಷಮುಕುಟಃ ಸತ್ಯಧರ್ಮೌ ಚ ಕುಂಡಲೇ ।
ತ್ಯಾಗಶ್ಚ ಕಂಕಣೇ ಯೇಷಾಂ ಕಿಂ ತೇಷಾಂ ಜಡಮಂಡನೈಃ ॥ ೧೮ ॥

---

೧೪. ಸ್ತ್ರೀಯರಿಗೆ ಮನಸೋತವನ ವಿದ್ಯೆಯಿಂದಾಗಲಿ, ತಪಸ್ಸಿನಿಂದಾಗಲಿ, ತ್ಯಾಗದಿಂದಾಗಲಿ, ನೀತಿಯಿಂದಾಗಲಿ, ಏಕಾಂತವಾದ ಮನಸ್ಸಿನಿಂದಾಗಲಿ, ಪ್ರಯೋಜನವೇನು ?

೧೫. ಮುಖ್ಯವಾಗಿ ಧರ್ಮ ಒಂದು ಮಾತ್ರ ಇವನು ಸತ್ತರೂ ಅನುಸರಿಸಿ ಬರುತ್ತದೆ. ಮಿಕ್ಕಭೋಗ್ಯವಸ್ತುಗಳೆಲ್ಲವೂ ನಾಶವನ್ನು ಹೊಂದುತ್ತವೆ.

೧೬. ಗೆದ್ದಲಹುಳುಗಳು ಹುತ್ತವನ್ನು ಸೇರಿಸುವಂತೆ ಮನುಷ್ಯನು ಧರ್ಮವನ್ನು ಕೊಂಚಕೊಂಚವಾಗಿ ಸಂಗ್ರಹಿಸಬೇಕು. ಧರ್ಮದ ಸಹಾಯದಿಂದ ಮನುಷ್ಯನು ನರಕದಿಂದ ಪಾರಾಗುತ್ತಾನೆ.

೧೭. ಅನಿತ್ಯವಾದ ಮೇಲುಮೇಲಕ್ಕೆ ಏಳುತ್ತಿರುವ ನೀರಿನ ಅಲೆಗಳಂತೆ ಈ ಸ್ತ್ರೀಯರು ಚಂಚಲರು. ಮತ್ತು ಈ ಜೀವಿತವೂ ಅದರಂತೆ ಚಂಚಲವು. ಎಲೈ ದೊರೆಯೇ! ಅದನ್ನು ನೀನೇಕೆ ತಿಳಿಯುವುದಿಲ್ಲ.

೧೮. ಯಾರಿಗೆ ವಿನಯವೇ ತಲೆಯ ಮೇಲಿನ ಕಿರೀಟವೋ, ಸತ್ಯಧರ್ಮಗಳು ಕರ್ಣಾಭರಣಗಳೋ, ತ್ಯಾಗವೇ ಕೈಬಳೆಯೋ, ಅವರಿಗೆ ಲೌಕಿಕವಾದ ಈ ಉಪಯೋಗವಿಲ್ಲದ ಅಲಂಕಾರಗಳಿಂದೇನು ಪ್ರಯೋಜನ?

ಮೃತಂ ಶರೀರಮುತ್ಸೃಜ್ಯ ಲೋಷ್ಟಕಾಷ್ಠಸಮಂ ಭುವಿ ।
ವಿಮುಖಾ ಬಾನ್ಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥ ೧೯ ॥

ಗಮ್ಯಮಾನೇಷು ಸರ್ವೇಷು ಕ್ರಿಯಮಾಣೇ ತಥಾಯುಷಿ ।
ಜೀವಿತೇ ಲುಪ್ಯಮಾನೇ ಚ ಕಿಮುತ್ಥಾಯ ನ ಧಾವಸಿ ॥ ೨೦ ॥

ಕುಟುಂಬಂ ಪುತ್ರದಾರಾದಿ ಶರೀರಂ ದ್ರವ್ಯಸಂಚಯಃ ।
ಪಾರಕ್ಯಮಧ್ರುವಂ ಕಿಂ ತು ಸ್ವೀಯೋ ಸುಕೃತದುಷ್ಕೃತೇ ॥ ೨೧ ॥

ಯದಾ ಸರ್ವಂ ಪರಿತ್ಯಜ್ಯ ಗಂತವ್ಯಮವಶೇನ ತೇ ।
ಅನರ್ಥೇ ಕಿಂ ಪ್ರಸಕ್ತಸ್ತ್ವಂ ಸ್ವಧರ್ಮಂ ನಾನುತಿಷ್ಠಸಿ ॥ ೨೨ ॥

ಅವಿಶ್ರಾಮಮಭಕ್ಷ್ಯಾಂಬುಮಪಾಥೇಯಮದೇಶಿಕಂ ।
ಮೃತಃ ಕಾಂತಾರಮಧ್ವಾನಂ ಕಥಮೇಕೋ ಗಮಿಷ್ಯಸಿ ॥ ೨೩ ॥

---

೧೯. ಮಣ್ಣುಹೆಂಟೆ ಸೌದೆಗಳಿಗೆ ಸಮವಾದ ಪ್ರಾಣಬಿಟ್ಟ ಈ ಶರೀರವನ್ನು ಬಂಧುಗಳು ಬಿಟ್ಟು ಹಿಂತಿರುಗಿ ಹೊರಟುಹೋಗುತ್ತಾರೆ. ಧರ್ಮ ಒಂದು ಮಾತ್ರ ಅವನನ್ನು ಅನುಸರಿಸುತ್ತದೆ.

೨೦. ಎಲ್ಲವೂ ಹೊರಟುಹೋಗುತ್ತಿರುವುದನ್ನು ನೋಡಿ ಆಯುಸ್ಸು ಕ್ಷೀಣವಾಗುತ್ತಿರುವುದನ್ನು ಕಂಡು, ಜೀವಿತವು ಕಡಿಮೆಯಾಗುವುದನ್ನೂ ತಿಳಿದು ಏಕೆ ಎಚ್ಚರಗೊಳ್ಳುವುದಿಲ್ಲ?

೨೧. ಕುಟುಂಬ, ಹೆಂಡತಿ ಮಕ್ಕಳು, ಶರೀರ, ದ್ರವ್ಯದ ರಾಶಿ ಎಲ್ಲವೂ ಸ್ಥಿರವಲ್ಲದುವು. ಮತ್ತು ಇವೆಲ್ಲವೂ ಉಳಿದವರಿಗೆ. ತನಗೆ ಬರುವುದು ಪುಣ್ಯಪಾಪಗಳು ಮಾತ್ರ. ಅವೇ ತನ್ನವು.

೨೨. ಎಲ್ಲವನ್ನೂ ಬಿಟ್ಟು ಪರಾಧೀನನಾಗಿ ನೀನು ಹೋಗುವಾಗ ಕಷ್ಟದಲ್ಲೇಕೆ ಸಿಕ್ಕಿಕೊಳ್ಳಬೇಕು? ಸ್ವಧರ್ಮವನ್ನೇಕೆ ಅನುಸರಿಸಬಾರದು?

೨೩. ವಿಶ್ರಾಂತಿಯಿಲ್ಲದೆ, ತಿಂಡಿತೀರ್ಥಗಳಿಲ್ಲದೇ, ಅನ್ನವಿಲ್ಲದೇ, ದೇಶವಿಲ್ಲದೇ, ಸತ್ತಮೇಲೆ ಕಾಡುದಾರಿಯಲ್ಲಿ ಒಬ್ಬನೇ ಹೇಗೆ ಹೋಗುತ್ತೀಯೆ?

ನ ಹಿ ತ್ವಾಂ ಪ್ರಸ್ಥಿತಂ ಕಿಂಚಿತ್ಪೃಷ್ಠತೋಽನುಗಮಿಷ್ಯತಿ ।
ದುಷ್ಕೃತಂ ಸುಕೃತಂ ಚ ತ್ವಾಂ ಯಾಸ್ತನ್ಯಮನುಯಾಸ್ಯತಿ ॥ ೨೪ ॥

ಶೃತಿಸ್ಮೃತ್ಯುದಿತಂ ಕರ್ಮ ಕುಲದೇಶೋಚಿತಂ ಹಿತಂ ।
ಧರ್ಮಮೂಲಂ ನಿಷೇವಸ್ವ ಸದಾಚಾರಮತಂದ್ರಿತಃ ॥ ೨೫ ॥

ಪರಿತ್ಯಜೇದರ್ಥಕಾಮೌ ಸ್ಯಾತಾಂ ಚೇದ್ಧರ್ಮವರ್ಜಿತೌ ।
ಧರ್ಮೇಣ ಪ್ರಾಪ್ಯತೇ ಸರ್ವಮರ್ಥಕಾಮಾದಿಕಂ ಸುಖಂ ॥ ೨೬ ॥

ಇಂದ್ರಿಯಾಣಾಂ ಜಯಂ ಯೋಗಂ ಸಮಾತಿಷ್ಠೇದ್ದಿವಾನಿಶಂ ।
ಜಿತೇಂದ್ರಿಯೋ ಹಿ ಶಕ್ನೋತಿ ಪಥಿ ಸ್ಥಾಪಯಿತುಂ ಪ್ರಜಾಃ ॥ ೨೭ ॥

ಅತಿಪ್ರಗಲ್ಭಲಲನಾಕಟಾಕ್ಷಚಪಲಾಶ್ರಿಯಃ ।
ವಿನಯಪ್ರಣಿಧಾನೇನ ಚಿರಂ ತಿಷ್ಠತಿ ಭೂಭುಜಾಂ ॥ ೨೮ ॥

ಕಾಮದರ್ಪಾತಿಶೀಲಾನಾಮವಿಚಾರಿತ್ರಕರ್ಮಣಾಂ ।
ಸಹಾಯುಷಾ ಪ್ರಣಶ್ಯಂತಿ ಸಂಪದೋ ಮೂಢಚೇತಸಾಂ ॥ ೨೯ ॥

---

೨೪. ಹೊರಟುಹೋಗುತ್ತಿರುವ ನಿನ್ನ ಹಿಂದೆ ಯಾವುದೂ ಅನುಸರಿಸಿ ಬರುವುದಿಲ್ಲ ನಿನ್ನ ಹಿಂದೆ ಪುಣ್ಯ ಮತ್ತು ಪಾಪಗಳು ಮಾತ್ರ ಅನುಸರಿಸಿ ಬರುತ್ತವೆ.

೨೫. ಶೃತಿಸ್ಮೃತಿಗಳಲ್ಲಿ ಹೇಳಿರುವ, ಕುಲಕ್ಕೂ ದೇಶಕ್ಕೂ ಯೋಗ್ಯವಾದ, ಹಿತವಾದ ಧರ್ಮಕ್ಕೆ ಕಾರಣವಾದ ಕೆಲಸಗಳನ್ನು ಆಲಸ್ಯವಿಲ್ಲದೆ ಮಾಡು.

೨೬. ಧರ್ಮದಿಂದ ದೂರವಾದ ಅರ್ಥಕಾಮಗಳನ್ನು ಬಿಡಬೇಕು. ಧರ್ಮದಿಂದ ಅರ್ಥಕಾಮಾದಿಗಳ ಸುಖವು ಲಭಿಸುತ್ತದೆ.

೨೭. ಇಂದ್ರಿಯಗಳ ಜಯವೇ ಯೋಗವು. ಅದನ್ನು ಹಗಲೂ ರಾತ್ರಿಯೂ, ಆಚರಿಸಬೇಕು. ಜಿತೇಂದ್ರಿಯನಾದರೆ ಪ್ರಜೆಗಳನ್ನು ಸನ್ಮಾರ್ಗದಲ್ಲಿಡಬಹುದು.

೨೮. ಐಶ್ವರ್ಯಗಳು ಅತ್ಯಂತ ಪ್ರೌಢೆಯರಾದ ಸ್ತ್ರೀಯರ ಕಟಾಕ್ಷದಂತೆ ಚಪಲವಾದುವು. ಆ ಐಶ್ವರ್ಯವು ವಿನಯದ ಹಿಡಿತದಿಂದ ರಾಜರಲ್ಲಿ ನಿಲ್ಲುತ್ತದೆ.

೨೯. ಕಾಮ, ದರ್ಪಗಳೇ ಸ್ವಭಾವವಾಗಿ ಉಳ್ಳ ಕರ್ಮಗಳನ್ನು ವಿಚಾರಿಸದ ಮೂಢರಿಗೆ ಸಂಪತ್ತು ಆಯುಸ್ಸಿನ ಸಂಗಡವೇ ನಾಶವಾಗುತ್ತದೆ.

ವಿಭೂತಿನಷ್ಟದೃಗ್ಭಿಸ್ತು ನೃತ್ಯಂತೇ ನ ಮಹಾಯಶಾಃ ।
ನಾಗತಾಭಿರ್ನಯಾತಾಭಿಃ ನದೀಭಿಶ್ಚೀಯತೇಽಂಬುಂಭಿಃ ॥ ೩೦ ॥

ವ್ಯಸನಸ್ಯ ಚ ಮೃತ್ಯೋಶ್ಚ ವ್ಯಸನಂ ಕಷ್ಟಮುಚ್ಯತೇ ।
ವ್ಯಸನ್ಯಧೋಽಧಃ ವ್ರಜತಿ ಸ್ವರ್ಯಾತ್ಯವ್ಯಸನೀ ನೃಪಃ ॥ ೩೧ ॥

ವ್ಯಸನಾನಿ ಚ ದುಃಖಾನಿ ಕಾಮಜಾನಿ ವಿಶೇಷತಃ ।
ತ್ಯಜ ಸ್ಮರ ಮಹಾರಾಜ ಕಾಮಂ ಧರ್ಮವಿರೋಧಿನಂ ॥ ೩೨ ॥

ಜಡಾನಾಮವಿವೇಕಾಯ ಸುರಾಣಾಂ ಚ ದುರಾತ್ಮನಾಂ ।
ಭಾಗ್ಯಭೋಗ್ಯಾನಿ ರಾಜೇಂದ್ರ ಸಂತಿ ನೀತಿಮತಾಮಪಿ ॥ ೩೩ ॥

ನೈವ ಸ್ಥಿರಾಣಿ ತಾನೀಹ ದುರಿತೈರನುಸೇವಿತೈಃ ।
ವಿಲೀಯಂತೇ ಯಥಾವಹ್ನಿಸಂಸರ್ಗೇಣೇಂಧನಾನಿ ಚ ॥ ೩೪ ॥

---

೩೦. ಐಶ್ವರ್ಯದಿಂದ ಕಣ್ಣುಕಾಣದವರ ಯಶಸ್ಸು ನರ್ತನಮಾಡುವುದಿಲ್ಲ. ನೀರು ಬರದೆ ಹೋಗದೇ ಇದ್ದರೆ ನದಿಗಳು ಹೆಚ್ಚುವುದೇ ಇಲ್ಲವಷ್ಟೆ!

೩೧. ವ್ಯಸನವನ್ನೂ, ಮರಣವನ್ನೂ ಯೋಚಿಸಿದರೆ ಅವುಗಳಲ್ಲಿ ವ್ಯಸನವೇ ಕಷ್ಟವಾದುದು. ವ್ಯಸನವುಳ್ಳವನು ಹೀನಸ್ಥಿತಿಗೆ ಬರುತ್ತಾನೆ. ವ್ಯಸನವಿಲ್ಲದವನು ಸ್ವರ್ಗಕ್ಕೆ ಹೋಗುತ್ತಾನೆ.

೩೨. ವ್ಯಸನದಿಂದ ಬಂದ ದುಃಖಗಳು ಹೆಚ್ಚಾಗಿ ಕಾಮದಿಂದಲೇ ಬಂದಿರುತ್ತವೆ. ಆದ್ದರಿಂದ ಎಲೈ ದೊರೆಯೇ, ವ್ಯಸನವನ್ನು ಬಿಡು. ಎಲ್ಲವನ್ನೂ ಸ್ಮರಿಸಿಕೊ. ಕಾಮವು ಧರ್ಮಕ್ಕೆ ವಿರೋಧಿಯು.

೩೩. ದಡ್ಡರಿಗೂ, ದೇವತೆಗಳಿಗೂ, ದುಷ್ಟರಿಗೂ, ವಿವೇಕನಾಶಕ್ಕೂ, ನೀತಿವಂತರಿಗೆ ಭಾಗ್ಯದಿಂದ ಅನುಭವಿಸುವುದಕ್ಕೂ ಈ ಸಂಪತ್ತುಗಳಿರುವುವು.

೩೪. ಅವು ಇಲ್ಲಿ ಸ್ಥಿರಗಳಲ್ಲ. ನಾವು ಸೇವಿಸುವ ಕೆಟ್ಟಕೆಲಸಗಳಿಂದ ಅವು ಬೆಂಕಿಯ ಸಹವಾಸದಿಂದ ಸೌದೆಯು ನಾಶವಾಗುವಂತೆ ನಾಶವಾಗುತ್ತವೆ.

ಗಚ್ಛತಸ್ತಿಷ್ಠತೋ ವಾಪಿ ಜಾಗ್ರತಸ್ಸ್ವಪತೋಽಪಿ ವಾ ।
ನ ವಿಚಾರಪರಂ ಚೇತೋ ಯಸ್ಯಾಽಸೌ ಮೃತ ಏವ ಸಃ ॥ ೩೫ ॥

ಉಪದೇಷ್ಟಾ ಶತವತಾಂ ಗುರುರಿತ್ಯುಚ್ಯತೇ ಯತಃ ।
ಕಿಂತು ತ್ವಾಸನ್ನವಿಪದಾಮುಪದೇಶಾಶ್ಶಿರೋರುಹಾಃ ॥ ೩೬ ॥

ವಿಷಯಜ್ವರಮುತ್ಸೃಜ್ಯ ಸಮಯಾ ಸ್ವಸ್ಥಯಾನುಯಾ ।
ಯುಕ್ತ್ಯಾ ಚ ವ್ಯವಹಾರಿಣ್ಯಾ ಸ್ವಾರ್ಥಃ ಪ್ರಾಜ್ಞೇನ ಸಾಧ್ಯತೇ ॥ ೩೭ ॥

ಅಶುಭಾಚರಿತಂ ಯಾತಿ ಶುಭಂ ತಸ್ಮಾದಪೀತರತ್ ।
ಜಂತೋಶ್ಚಿತ್ತಂ ಚ ಶಿಶುವತ್ತಸ್ಮಾತ್ತಚ್ಚಾಲಯೇದ್ಬಲಾತ್ ॥ ೩೮ ॥

ಉಪಧಾರ್ಯ ಮತಿಂ ರಾಜನ್ವೃದ್ಧಾನಾಂ ಧರ್ಮದರ್ಶಿನಾಂ ।
ನಿಯಚ್ಛೇತ್ಪರಯಾ ಬುದ್ಧ್ಯಾ ಚಿತ್ತಮುತ್ಪಥಗಾಮಿ ಯತ್ ॥ ೩೯ ॥

---

೩೫. ಓಡಾಡುವಾಗ, ಕುಳಿತಿರುವಾಗ, ಎಚ್ಚತ್ತಾಗ, ಮಲಗಿರುವಾಗ ಯಾವನ ಮನಸ್ಸು ವಿಚಾರಯುಕ್ತವಾಗಿರುವುದಿಲ್ಲವೋ ಅವನು ಸತ್ತಕೂಟವೇ ಆಗಿರುತ್ತಾನೆ

೩೬. ನೂರು ಜನಗಳಿಗುಪದೇಶಿಸುವವನು ಗುರುವೆಂದೆನ್ನಿಸಿಕೊಳ್ಳುತ್ತಾನೆ. ಆದರೆ ವಿಪತ್ತು ಸಮೀಪಿಸಿದವರಿಗೆ ಉಪದೇಶವು ತಲೆಯಲ್ಲಿ ಹತ್ತುವುದು.

೩೭. ಪ್ರಾಜ್ಞನಾದವನು ವಿಷಯಗಳೆಂಬ ಜ್ವರವನ್ನು ಬಿಟ್ಟು ಸ್ಥಿರವಾದ ಸ್ಥಿತಿಯುಳ್ಳ ಸಮನಾದ ಯುಕ್ತಿಗಳಿಂದಲೂ, ವ್ಯವಹಾರದಿಂದಲೂ, ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾನೆ.

೩೮. ಅಶುಭವಾದ ಆಚಾರವುಳ್ಳವನು ಶುಭಾಚಾರಿಯಾಗುತ್ತಾನೆ. ಹಾಗೆಯೇ ಶುಭಾಚಾರವುಳ್ಳವನೂ ಅಶುಭಾಚಾರವುಳ್ಳವನಾಗುತ್ತಾನೆ. ಪ್ರಾಣಿಯ ಮನಸ್ಸು ಮಕ್ಕಳ ಹಾಗೆ, ಆದ್ದರಿಂದ ಅದನ್ನು ಬಲಾತ್ಕಾರದಿಂದ ಬದಲಾಯಿಸಬೇಕು.

೩೯. ವೃದ್ಧರೂ ಧರ್ಮವನ್ನು ಬಲ್ಲವರೂ ಆಗಿರುವವರು ಹೇಳಿದ ಬುದ್ಧಿವಾದವನ್ನು ತಿಳಿದು ಅಯೋಗ್ಯದಾರಿಯಲ್ಲಿ ಹೋಗುತ್ತಿರುವ ಮನಸ್ಸನ್ನು ಉತ್ತಮವಾದ ಬುದ್ಧಿಯಿಂದ ತಡೆಯಬೇಕು.

ನ ಧರ್ಮಾಣ್ಯುಪಕುರ್ವಂತಿ ನ ಮಿತ್ರಾಣಿ ನ ಬಾಂಧವಾಃ ।
ನ ಹಸ್ತಪಾದಚಲನಂ ನ ದೇಶಾಂತರಸಂಗತಂ ॥ ೪೦ ॥

ನ ಕಾಯಕ್ಲೇಶವೈಧುರ್ಯ ನ ತೀರ್ಥಾಯತನಾದಯಃ ।
ಕೇವಲಂ ತನ್ಮನಸ್ಕಸ್ಯ ಜಪೇನಾಸಾದ್ಯತೇ ಪದಂ ॥ ೪೧ ॥

ವಿಷಯೇ ವರ್ತಮಾನಸ್ಯ ತಸ್ಮಾಚ್ಚಿತ್ತಸ್ಯ ಸಂಯಮೋ ।
ಯತ್ನಂ ಕುರ್ಯಾದ್ಬುಧೋ ರಾಜನ್ಧ್ರುವಂ ಯತ್ನೇನ ವಾ ಜಿತಂ ॥ ೪೨ ॥

ತತ್ತತ್ಕರ್ಮಕೃತೋ ರಾಜನ್ಭವತಾಪೇನ ವಂಚಿತಃ ।
ಮುನಿಭಿಶ್ಚ ಫಲೈಸ್ತೈಸ್ತೈರತೋಽಸ್ಯಾಕರ್ಣಯಾಧುನಾ ॥ ೪೩ ॥

ಮುಹ್ಯತಾಪಿ ಮನುಷ್ಯೇಣ ಪ್ರಷ್ಟವ್ಯಾಸ್ಸುಹೃದೋ ಬುಧಾಃ ।
ತೇ ಚ ಪೃಷ್ಟಾ ವಂದತಿಸ್ಮ ತತ್ಕರ್ತವ್ಯಂ ಯಥೋಚಿತಂ ॥ ೪೪ ॥

---

೪೦-೪೧. ಮನುಷ್ಯರಿಗೆ ಧರ್ಮವಾಗಲಿ, ಮಿತ್ರರಾಗಲಿ, ಬಂಧುಗಳಾಗಲಿ, ಕೈಕಾಲುಗಳ ಚೇಷ್ಟೆಯಾಗಲೀ, ಬೇರೆ ದೇಶಕ್ಕೆ ಹೋಗುವಿಕೆಯಾಗಲಿ, ದೇಹದ ಕಷ್ಟಗಳಾಗಲಿ, ತೀರ್ಥಗಳಾಗಲಿ, ಉಪಕಾರಮಾಡುವುದಿಲ್ಲ. ಸ್ಥಿರವಾದ ಮನಸ್ಸಿನಿಂದ ಜಪಿಸಿದರೆ ಆ ಪರಮ ಪದವು ಸಿಕ್ಕುತ್ತದೆ.

೪೨. ಆದ್ದರಿಂದ ವಿಷಯಾಸಕ್ತವಾದ ಚಿತ್ತವನ್ನು ಯತ್ನದಿಂದ ಸ್ಥಿರಮಾಡಿಕೊಳ್ಳಬೇಕು. ಯತ್ನದಿಂದ ಆ ಚಿತ್ತವನ್ನು ಜಯಿಸಲಾದರೂ ಬೇಕು.

೪೩. ಎಲೈ ರಾಜನೇ ನೀನು ಆಯಾ ಇಂದ್ರಿಯಗಳ ಹೇಳಿಕೆಯಂತೆ ಕೆಲಸ ಮಾಡುತ್ತಾ ಸಂಸಾರದುಃಖದಿಂದ ವಂಚಿತನಾಗಿದ್ದೀಯೆ, ಮುನಿಗಳೂ ಕೂಡ ಆಯಾ ಫಲಗಳಿಂದ ವಂಚಿಸಲ್ಪಟ್ಟಿದ್ದಾರೆ. ಆದ್ದರಿಂದ ಈಗ ನಾನು ಹೇಳುವುದನ್ನು ಕೇಳು.

೪೪. ಮನುಷ್ಯನು ತನಗೆ ತಿಳಿಯದಿರುವಾಗ ಅಥವಾ ಭ್ರಮೆಬಂದಾಗ ಪ್ರಾಜ್ಞರಾದ ಸ್ನೇಹಿತರನ್ನು ಕೇಳಬೇಕು. ಆಗ ಅವರು ಅವನು ಮಾಡತಕ್ಕದ್ದನ್ನು ಯೋಗ್ಯವಾದ ರೀತಿಯಲ್ಲಿ ಹೇಳುತ್ತಾರೆ.

ಸರ್ವೋಪಾಯೇನ ಕರ್ತವ್ಯೋ ನಿಗ್ರಹಃ ಕಾಮಕೋಪಯೋಃ ।
ಶ್ರೇಯೋಽರ್ಥಿನಾ ಯತಸ್ತೌಹಿ ಶ್ರೇಯೋಘಾತಾರ್ಥಮುದ್ಯತೌ ॥ ೪೫ ॥

ಕಾಮೋ ಹಿ ಬಲವಾನ್ರಾಜನ್ ಶರೀರಸ್ಥೋ ರಿಪುರ್ಮಹಾನ್ ।
ನ ತಸ್ಯ ವಶಗೋ ಭೂಯಾತ್ ಜನಶ್ಶ್ರೇಯೋಽಭಿಲಾಷುಕಃ ॥ ೪೬ ॥

ಯಃ ಕಾಮೋ ದೇವದೇವೇನ ಪುರಾ ತೇನೈವ ಶೂಲಿನಾ ।
ಲಲಾಟವಹ್ನಿನಾ ದಗ್ಧಃ ಕೃತೋಽನಂಗ ಇತಿ ಸ್ಥಿತಿಃ ॥ ೪೭ ॥

ಧರ್ಮ ಏವ ತತಶ್ಶ್ರೇಯಾನ್ವಿಧಿನಾ ಸಮನುಷ್ಠಿತಃ ।
ಧೈರ್ಯಮಾಲಂಬ್ಯ ಚರತೋ ಧರ್ಮಮೇವ ಸಮಾಚರ ॥ ೪೮ ॥

ಶ್ವಾಸ ಏಷ ಚಪಲಃ ಕ್ಷಣಮಧ್ಯೇ
ಯೋ ಗತಾಗತಶತಾನಿ ವಿಧತ್ತೇ ।
ಜೀವಿತೇಽಪಿ ತದಧೀನಚೇತಸಾ
ಕಸ್ಸಮಾಚರತಿ ಧರ್ಮವಿಲಂಬಂ ॥ ೪೯ ॥

---

೪೫. ಎಲ್ಲ ವಿಧದಿಂದಲೂ, ಕಾಮಕೋಪಗಳನ್ನು ನಿಗ್ರಹಿಸಬೇಕು. ಶ್ರೇಯಸ್ಸನ್ನು ಅಪೇಕ್ಷಿಸುವವನಿಗೆ ಅವೆರಡೂ ಘಾತಕಗಳು.

೪೬. ಕಾಮವು ಶರೀರದಲ್ಲಿರುವ ದೊಡ್ಡ ಶತ್ರುವು. ಶ್ರೇಯಸ್ಸನ್ನು ಅಪೇಕ್ಷಿಸುವವನು ಅದಕ್ಕೆ ಅಧೀನನಾಗಬಾರದು.

೪೭. ಕಾಮನನ್ನು ಪೂರ್ವದಲ್ಲಿ ಈಶ್ವರನು ತನ್ನ ಹಣೆಗಣ್ಣಿನಿಂದ ಸುಟ್ಟು ಶರೀರವಿಲ್ಲದವನನ್ನಾಗಿ ಮಾಡಿದನೆಂದು ವದಂತಿ ಇದೆ. ಆದ್ದರಿಂದಲೇ ಅವನು ಅನಂಗನು.

೪೮. ಎಲ್ಲದರಲ್ಲೂ ಧರ್ಮವೇ ಉತ್ತಮವಾದುದೆಂದು ವಿಧಿಯು ಆಚರಿಸಿದನು. ಆದ್ದರಿಂದ ಧೈರ್ಯವನ್ನು ತಂದುಕೊಂಡು ಧರ್ಮವನ್ನೇ ಮಾಡಬೇಕು.

೪೯. ಚಂಚಲವಾದ ಈ ಶ್ವಾಸವು ಒಂದು ಕ್ಷಣದೊಳಗೇ ನೂರು ಬಾರಿ ಓಡಾಡುತ್ತದೆ. ಜೀವಿತವು ಅದರ ಅಧೀನವಾಗಿರುವಾಗ ಧರ್ಮದ ವಿಷಯದಲ್ಲಿ ಯಾವನು ತಾನೆ ನಾವಕಾಶಮಾಡುತ್ತಾನೆ.

ದಶಮೀಮಪಿ ಯಾ ತಸ್ಯ ಚೇತೋ ನಾದ್ಯಾಽಪಿ ಭೂಪತೇ ।
ವಿಷಯೇಭ್ಯೋ ನಿಷಿದ್ಧೇಭ್ಯೋ ಹಾ ಹಾ ನ ವಿರಮೇದಲಂ ॥ ೫೦ ॥

ತಸ್ಮಾತ್ಸರ್ವಂ ನಿಷ್ಫಲತ್ವಂ ಪ್ರಯಾತಂ ಕಾಮುಕಶ್ಮಲಾತ್ ।
ವಯಸ್ತೇ ಪ್ಯಧುನಾ ಭೂಪ ಸಮಾಚರ ಹಿತಂ ನಿಜಂ ॥ ೫೧ ॥

ವದಾಮ್ಯಹಂ ತವ ನೃಪ ಹಿತಂ ಸರ್ವೋತ್ತಮೋತ್ತಮಂ ।
ಪುರೋಹಿತೋ ಯತಸ್ತೇಽಹಂ ಸದಸತ್ಕರ್ಮಭಾಗಪಿ ॥ ೫೨ ॥

ಏಕತಸ್ಸರ್ವಪುಣ್ಯಾನಿ ಪಾಪನಾಶಾಯ ಪಾಪಿನಾಂ ।
ಏಕತೋ ಮಾಧವೋ ಮಾಸೋ ಮಾಧವಸ್ಯ ಪ್ರಿಯಸ್ಸದಾ ॥ ೫೩ ॥

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಮಹಾನ್ತಿ ಪಾತಕಾನ್ಯೇವ ಕೀರ್ತಿತಾನಿ ಮುನೀಶ್ವರೈಃ ॥ ೫೪ ॥

ತತ್ರ ಯನ್ಮನಸಾ ವಾಚಾ ಕಾಯೇನಾಪಿ ಕೃತಂ ನರೈಃ ।
ನಾಶಯೇನ್ಮಾಧವೋ ಮಾಸಃ ಸರ್ವಂ ಪಾಪತಮೋ ಮಹತ್ ॥ ೫೫ ॥

---

೫೦. ವಯಸ್ಸು ಕಳೆದವನಾದರೂ ನಿನ್ನ ಮನಸ್ಸು ಈಗಲೂ ಕೂಡ ನಿಷಿದ್ಧವಾದ ವಿಷಯಗಳಿಂದ ಸುಮ್ಮನಿರುವುದಿಲ್ಲ. ಅಯ್ಯೋ ಆಶ್ಚರ್ಯವು.

೫೧. ಈ ರೀತಿ ಮಲಿನವಾದ ನಿನಗೆ ಎಲ್ಲವೂ ನಿಷ್ಫಲವಾದುವು. ವಯಸ್ಸು ಕಳೆಯುತ್ತಾ ಬಂದಿತು. ನಿನಗೆ ಒಳ್ಳೆಯದನ್ನು ಆಚರಿಸಿಕೋ.

೫೨. ಎಲೈ ದೊರೆಯೇ ! ನಾನು ನಿನಗೆ ಸರ್ವೋತ್ತಮವಾದ ಹಿತವನ್ನು ಹೇಳುತ್ತೇನೆ. ನಿನಗೆ ನಾನು ನಿನ್ನ ಒಳ್ಳೆಯದು ಕೆಟ್ಟುದುದರಲ್ಲಿ ಭಾಗವನ್ನು ಹೊಂದುವ ಪುರೋಹಿತನು.

೫೩. ಪಾಪಿಗಳ ಪಾಪನಾಶಕ್ಕೋಸ್ಕರ ಎಲ್ಲಾ ಪುಣ್ಯಗಳೂ ಒಂದು ಕಡೆ ಇವೆ. ವಿಷ್ಣುವಿಗೆ ಪ್ರಿಯವಾದ ವೈಶಾಖಮಾಸವೇ ಒಂದು ಕಡೆ ಇದೆ.

೫೪. ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುವಿನ ಹೆಂಡತಿಯ ಗಮನ ಇವುಗಳು ಮುನೀಶ್ವರರಿಂದ ಮಹಾಪಾಪಗಳೆಂದು ಹೇಳಲ್ಪಟ್ಟಿವೆ.

೫೫. ಅವುಗಳಲ್ಲಿ ಮನೋವಾಕ್ಕಾಯಗಳಿಂದ ಮಾಡಿದ ಎಲ್ಲಾ ಪಾಪವೆಂಬ ಅಂಧಕಾರವನ್ನು ವೈಶಾಖಮಾಸವು ನಾಶಮಾಡುತ್ತದೆ.

ದಿವಾಕರ ಇವ ಧ್ವಾನ್ತಂ ನಾಶಯೇನ್ನೃಪ ಸರ್ವಶಃ ।
ತಥಾ ಶ್ರೀಮಾಧವೋ ಮಾಸಃ ತಸ್ಮಾಚ್ಚರ ವಿಧಾನತಃ ॥ ೫೬ ॥

ಆಜನ್ಮತೋಽಪಿ ವಿಹಿತಾನಿ ಮಹಾಂತಿ ರಾಜ
ನ್ಘೋರಾಣಿ ತಾನಿ ದುರಿತಾನಿ ವಿಹಾಯ ಮರ್ತ್ಯಃ ।
ವೈಶಾಖಮಾಸವಿಹಿತಾಚರಣಪ್ರಭಾವ-
ಪುಣ್ಯೇನ ತೇನ ಹರಿಮಂದಿರಮೇತಿ ಚಾನ್ತೇ ॥ ೫೭ ॥

ಯದ್ಯೇಕಮಪಿ ವೈಶಾಖಮಾಚರಂತಿ ವಿಧಾನತಃ ।
ಭಾವತಃ ಪಾಪಿನೋಽಪ್ಯಂತೇ ಪ್ರಯಾಂತಿ ಹರಿಮಂದಿರಂ ॥ ೫೮ ॥

ತಸ್ಮಾತ್ತ್ವಮಪಿ ರಾಜೇಂದ್ರಮಾಸೇಽಸ್ಮಿನ್ಮಾಧವೇಽಧುನಾ ।
ಪ್ರಾತಸ್ಸ್ನಾತ್ವಾ ವಿಧಾನೇನ ಸಮರ್ಚಯ ಮಧುದ್ವಿಷಂ ॥ ೫೯ ॥

ತಂಡುಲಸ್ಯ ಯಥಾ ಚರ್ಮ ಯಥಾ ತಾಮ್ರಸ್ಯ ಕಾಳಿಮಾ ।
ನಶ್ಯೇತ ಕ್ರಿಯಯಾ ರಾಜನ್ತಥಾ ಪುಂಸೋ ಮಲಂ ಮಹತ್ ॥ ೬೦ ॥

---

೫೬. ಸೂರ್ಯನು ಕತ್ತಲೆಯನ್ನು ನಾಶಮಾಡುವಂತೆ ಎಲ್ಲಾ ಪಾಪವನ್ನೂ ವೈಶಾಖವು ನಾಶಮಾಡುತ್ತದೆ. ಎಲೈ ದೊರೆಯೇ ಆದ್ದರಿಂದ ವೈಶಾಖಮಾಸವನ್ನು ವಿಧಿವತ್ತಾಗಿ ಮಾಡು.

೫೭. ಮನುಷ್ಯನು ವೈಶಾಖಮಾಸದಲ್ಲಿ ಆಚರಿಸಿದ ಪುಣ್ಯದ ಪ್ರಭಾವದಿಂದ ಹುಟ್ಟಿದ ಮೊದಲಿನಿಂದ ಮಾಡಿದ ಘೋರವಾದ ಪಾಪಗಳನ್ನೂ ಬಿಟ್ಟು ಕೊನೆಯಲ್ಲಿ ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಹೊಂದುತ್ತಾನೆ.

೫೮. ಒಂದು ವೈಶಾವನ್ನಾದರೂ ವಿಧಿವತ್ತಾಗಿ ಮಾಡಿದವನು ಅದರ ಪ್ರಭಾವ ದಿಂದ ಕೊನೆಯಲ್ಲಿ ಹರಿಮಂದಿರವನ್ನು ಹೊಂದುತ್ತಾನೆ.

೫೯ ಎಲೈ ರಾಜನೇ ಆದ್ದರಿಂದ ಈಗ ವೈಶಾಖಮಾಸದಲ್ಲಿ ವಿಧಾನದಿಂದ ಸ್ನಾನವನ್ನು ಮಾಡಿ ಮಾಧವನನ್ನು ಪೂಜಿಸು.

೬೦. ಮಾಡತಕ್ಕ ಕೆಲಸದಿಂದ ಭತ್ತದ ಹೊಟ್ಟು ಹೋಗುವಂತೆಯೂ, ತಾಮ್ರದ ಕಿಲುಬು ಹೋಗುವಂತೆಯೂ, ಮನುಷ್ಯನ ಬಹುವಾದ ಪಾಪವು ನಾಶ ವಾಗುತ್ತದೆ. ಆದ್ದರಿಂದ ಉತ್ತಮ ಕೆಲಸವನ್ನನುಸರಿಸು. ಅದನ್ನಾಚರಿಸು.

**ಜೀವಸ್ಯ ತಂಡುಲಸ್ಯೇವ ಸಹಜೋಽಪಿ ಮಲೋ ಮಹಾನ್ ।**
**ನಶ್ಯೇತ ನ ಚ ಸಂದೇಹಃ ತಸ್ಮಾತ್ಕರ್ಮೋದಿತಂ ಕುರು ॥ ೬೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ ಪಂಚನವತಿತಮೋಽಧ್ಯಾಯಃ**

---

೬೧. ಆ ಭತ್ತದ ಜೊತೆಯಲ್ಲಿ ಹುಟ್ಟಿದ ಹೊಟ್ಟು ಹೋಗುವಂತೆ ಜೀವಿಯ ಪಾಪಗಳು ಸಂದೇಹವಿಲ್ಲದೇ ನಾಶವಾಗುತ್ತದೆ. ಆದ್ದರಿಂದ ಆ ವೈಶಾಖವನ್ನು ಆಚರಿಸು. ಯುಕ್ತವಾದ ಕರ್ಮಗಳನ್ನು ಮಾಡು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖಮಾಸ ಮಹಿಮೆ ಎಂಬ ತೊಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಷಣ್ಣವತಿತಮೋಽಧ್ಯಾಯಃ ॥



॥ ರಾಜೋವಾಚ ॥

ಕ್ಷೀರೋದಭವತುಲ್ಯಾಭಿಃ ಶೀತಲಾಮಲವೃಷ್ಟಿಭಿಃ ।
ಕಥಾಭಿಶ್ಚ ವಿಚಿತ್ರಾಭಿಸ್ತ್ವಯಾಽಹಂ ತೋಷಿತೋ ದ್ವಿಜ ॥ ೧ ॥

ಅಸಾಗರೋತ್ಥಂ ಪೀಯೂಷಮದ್ರವ್ಯಂ ವ್ಯಸನೌಷಧಂ ।
ತ್ವಯಾಽಹಂ ಪಾಯಿತಸ್ಸೌಮ್ಯ ಭವರೋಗನಿವಾರಣಂ ॥ ೨ ॥

ಹರ್ಷಪ್ರದೋ ನೃಣಾಂ ಪಾಪಹಾನಿಕೃಜ್ಜೀವನೌಷಧಂ ।
ಜರಾಮೃತ್ಯುಹರೋ ವಿಪ್ರ ಸದ್ಭಿಸ್ಸಹ ಸಮಾಗಮಃ ॥ ೩ ॥

---

### ತೊಂಭತ್ತಾರನೆಯ ಅಧ್ಯಾಯವು

೧. ರಾಜನು ಹೇಳಿದನು- ಕ್ಷೀರಸಮುದ್ರದಿಂದ ಹುಟ್ಟಿದಂತಿರುವ ಶೀತಲವೂ, ಪವಿತ್ರವೂ ಆದ ತುಂತುರುಗಳಂತಿರುವ ವಿಚಿತ್ರವಾದ ಕಥೆಗಳಿಂದ ನಾನು ನಿನ್ನ ದೆಸೆಯಿಂದ ಸಂತೋಷಗೊಂಡೆನು. (ನೀನು ನನ್ನನ್ನು ಸಂತೋಷಪಡಿಸಿದೆ)

೨. ಸಮುದ್ರದಿಂದ ಹುಟ್ಟದ ಅಮೃತವೂ, ದ್ರವ್ಯರೂಪವಲ್ಲದ ವ್ಯಸನಕ್ಕೆ ಔಷಧವೂ, ಸಂಸಾರವೆಂಬ ರೋಗಕ್ಕೆ ನಿವಾರಕವೂ ಆದ ಪದಾರ್ಥವನ್ನು ನೀನು ನನಗೆ ಕುಡಿಸಿದೆ.

೩. ಎಲೈ ಬ್ರಾಹ್ಮಣನೇ ಮನುಷ್ಯರಿಗೆ ಸಜ್ಜನಸಹವಾಸವು ಹರ್ಷಪ್ರದವಾದುದು. ಪಾಪವನ್ನು ನಾಶಮಾಡುತ್ತದೆ. ಜೀವನಕ್ಕೆ ಔಷಧವಾಗಿದೆ. ಮುಪ್ಪು ಸಾವುಗಳನ್ನು ನಾಶಮಾಡುತ್ತದೆ.

ಯಾನಿ ಯಾನಿ ದುರಾಪಾನಿ ವಾಂಛಿತಾನಿ ಮಹೀತಲೇ ।
ಪ್ರಾಪ್ಯನ್ತೇ ತಾನಿ ತಾನ್ಯೇವ ಸಾಧೂನಾಂ ಹೀಹ ಸಂಗಮಾತ್ ॥ ೪ ॥

ಯಃ ಸ್ನಾತಃ ಪಾಪಹರಯಾ ಸಾಧುಸಂಗಮಗಂಗಯಾ ।
ಕಿಂ ತಸ್ಯ ದಾನೈಃ ಕಿಂ ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ॥ ೫ ॥

ಯೋ ಯೋ ಭಾವಃ ಪುರಾಹ್ಯಾಸೀತ್ಕಾಮೈಕಸುಖಲೋಲುಪಃ ।
ದರ್ಶನಾದ್ವಚನಾತ್ತೇದ್ಯ ವಿಪರೀತೋಽಭವದ್ವಿಭೋ ॥ ೬ ॥

ಏಕಜನ್ಮಸುಖಸ್ಯಾರ್ಥೇ ಸ್ಪೃಹಸ್ರಾಣಿ ವಿಲೋಪಯೇತ್ ।
ಪ್ರಾಜ್ಞೋ ಜನ್ಮಸಹಸ್ರಾಣಿ ಸಂಚಿನೋತ್ಯೇ ಜನ್ಮನಃ ॥ ೭ ॥

ಹಾ ಹಾ ! ಕಾಮರಸಾಸ್ವಾದಸುಖಲಾಲನಚೇತಸಾ ।
ಮಯಾ ಮೂಢೇನ ನ ಕೃತಂ ಕಿಂಚಿದಾತ್ಮಹಿತಂ ದ್ವಿಜ ॥ ೮ ॥

---

೪. ಸಾಧುವಿನ ಸಂಗಮವು ಭೂಮಿಯಲ್ಲಿ ಮನುಷ್ಯರಿಗೆ ಸಿಕ್ಕದಿರುವುದಾದರೂ ಯಾವು ಯಾವುದನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವನ್ನೂ ಕೊಡುತ್ತದೆ.

೫. ಯಾವನು ಪಾಪಹಾರಕವಾದ ಸಾಧುಸಂಗಮವೆಂಬ ಗಂಗೆಯಲ್ಲಿ ಸ್ನಾನ ಮಾಡುತ್ತಾನೋ ಅವನಿಗೆ ದಾನ, ತೀರ್ಥ, ತಪಸ್ಸು ಯಾಗಗಳೊಂದೂ ಪ್ರಯೋಜನ ವಿಲ್ಲದುವುಗಳಾಗುತ್ತವೆ.

೬. ಮೊದಲು ಕಾಮ ಒಂದರ ಸುಖದಲ್ಲೇ ಆಸಕ್ತವಾದ ಯಾವ ಯಾವ ಭಾವಗಳು ನನ್ನಲ್ಲಿ ಇದ್ದುವೋ ಅವೆಲ್ಲವೂ ನಿನ್ನ ದರ್ಶನದಿಂದ ಮೊದಲುಗೊಂಡು ಬದಲಾಯಿಸಿಹೋದುವು.

೭. ಮನುಷ್ಯನು ಒಂದು ಜನ್ಮದ ಸುಖಕ್ಕೋಸ್ಕರ ಸಾವಿರ ಜನ್ಮದ ಸುಖ ವನ್ನು ಇಲ್ಲಿ ನಾಶಮಾಡಿಕೊಳ್ಳುತ್ತಾನೆ. ಅವನು ಬುದ್ಧಿವಂತನಾದರೆ ಒಂದೇ ಜನ್ಮದಲ್ಲಿ ಸಹಸ್ರ ಜನ್ಮಗಳ ಫಲವನ್ನೂ ಸಂಪಾದಿಸಿಕೊಳ್ಳುತ್ತಾನೆ.

೮. ಅಯ್ಯೋ ! ಎಲೈ ಬ್ರಾಹ್ಮಣನೇ ಕಾಮರಸವನ್ನು ಅನುಭವಿಸುವ ಮನಸ್ಸುಳ್ಳ ದಡ್ಡನಾದ ನನ್ನಿಂದ ಸ್ವಲ್ಪವೂ ಆತ್ಮಹಿತವು ಮಾಡಿಕೊಳ್ಳಲ್ಪಡಲಿಲ್ಲ.

ಅಹೋ! ಮೇ ಮನಸೋ ಮೋಹೋ ಯದಾತ್ಮಾ ಯೋಷಿತಾಂ ಕೃತೇ ।
ಪಾತಿತೋ ವ್ಯಸನೇ ಘೋರೇ ದುಃಖೋದರ್ಕೇ ದುರತ್ಯಯೇ ॥ ೯ ॥

ಭಗವನ್ಪರಿತುಷ್ಟೇನ ಬೋಧಿತೋ ವಚಸಾ ತ್ವಯಾ ।
ಉಪದೇಶಪ್ರದಾನೇನ ತ್ವಂ ಮಾಮುದ್ಧರ್ತುಮರ್ಹಸಿ ॥ ೧೦ ॥

ಪುರಾ ಚರಿತಪುಣ್ಯೋಽಹಂ ಭವತಾ ಬೋಧಿತೋಽಸ್ಮಿ ಯತ್ ।
ತ್ವತ್ಪಾದರಜಸಾ ವಾಽಪಿ ವಿಶೇಷಾದಸಿ ಪಾವಿತಃ ॥ ೧೧ ॥

ವಿಧಿಂ ಮಾಧವಮಾಸಸ್ಯ ಬ್ರೂಹಿ ಮೇ ವದತಾಂ ವರ ।
ಸರ್ವಪಾಪಕ್ಷಯಕರೋ ಯಸ್ತ್ವಯಾ ಪರಿಕೀರ್ತಿತಃ ॥ ೧೨ ॥

ಕಥಂ ಸ್ನಾನಂ ಚ ಕಿಂ ದಾನಂ ಕೋ ದೇವೋ ನಿಯಮಶ್ಚ ಕಃ ।
ಏತದಾಚಕ್ಷ್ವ ವಿಪ್ರರ್ಷೇ ದುರಿತೋತ್ತಾರಣಾಯ ಮೇ ॥ ೧೩ ॥

---

೯. ಅಯ್ಯೋ ! ನನ್ನ ಮನಸ್ಸಿನ ಅಜ್ಞಾನವನ್ನು ಏನೆಂದು ಹೇಳಲಿ. ನಾನು ಆತ್ಮವನ್ನು ಹೆಂಗಸಿಗೋಸ್ಕರ ದುಃಖಫಲವುಳ್ಳ ಕಷ್ಟವೂ, ಘೋರವೂ ಆದ ವ್ಯಸನದಲ್ಲಿ ಬೀಳಿಸಿರುವೆನಲ್ಲ !

೧೦. ಸ್ವಾಮಿ ಸಂತೋಷದ ಮನಸ್ಸಿನಿಂದ ನೀನು ನನ್ನನ್ನು ಎಚ್ಚರಿಸಿದ್ದೀಯೆ. ಉಪದೇಶಗಳನ್ನು ಮಾಡಿ ನನ್ನನ್ನು ಉದ್ಧಾರಮಾಡು.

೧೧. ನಾನು ಮೊದಲು ಪುಣ್ಯಕಾರ್ಯಗಳನ್ನು ಮಾಡಿದ್ದೆ. ಈಗಲೂ ನಿನ್ನಿಂದ ಎಚ್ಚರಗೊಳಿಸಲ್ಪಟ್ಟಿದ್ದೇನೆ. ನಿನ್ನ ಪಾದಧೂಳಿಯಿಂದ ಪವಿತ್ರನಾಗಿದ್ದೇನೆ.

೧೨. ಸರ್ವಪಾಪಗಳನ್ನೂ ನಾಶಮಾಡುವ ವೈಶಾಖಮಾಸವನ್ನು ಹೇಳಿದೆಯಲ್ಲ ! ಅದರ ವಿಧಿಯನ್ನು ಹೇಳು.

೧೩. ಸ್ನಾನವನ್ನು ಹೇಗೆ ಮಾಡಬೇಕು ? ದಾನವೇನು? ದೇವರಾವುದು? ನಿಯಮವೇನು ? ಎಲೈ ಋಷಿಯೇ ಪಾಪನಾಶಕ್ಕೋಸ್ಕರ ಅವೆಲ್ಲವನ್ನೂ ಹೇಳು.

॥ ಯಮ ಉವಾಚ ॥

ಇತ್ಯೇವಮುಕ್ತೋ ಭಗವಾನ್ಕಶ್ಯಪಸ್ಯದಯಾನಿಧಿಃ ।
ಪ್ರೋವಾಚ ವಚನಂ ವಿಪ್ರ ಧರ್ಮ್ಯಂ ವಿಶ್ವಹಿತಂ ಚ ಯತ್ ॥ ೧೪ ॥

॥ ಕಶ್ಯಪ ಉವಾಚ ॥

ಪೂರ್ವಾಪರಸಮಾಧಾನಕ್ಷಯಬುದ್ಧ್ಯಾ ಚ ತಂದ್ರಿತೇ ।
ಪೃಷ್ಟಜ್ಞಾನೇ ನ ವಕ್ತವ್ಯಂ ನಾಧಮೇ ಪಾತಕಾಶಯೇ ॥ ೧೫ ॥

ಪಾಪವೃತ್ತಸ್ಯ ತು ತಥಾ ದತ್ವಾ ಭೂಪ ಶುಭಾಂ ಮತಿಂ ।
ವಿದ್ಯಾದಾನಫಲಂ ಸಮ್ಯಕ್ಪ್ರಾಪ್ಯತೇ ನಾತ್ರ ಸಂಶಯಃ ॥ ೧೬ ॥

ನಾಪೃಷ್ಟಃ ಕಸ್ಯ ಚಿದ್ಬ್ರೂಯಾನ್ನ ಚಾನ್ಯಾಯೇನ ಪೃಚ್ಛತಃ ।
ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕ ಆಚರೇತ್ ॥ ೧೭ ॥

ವಿದುಷಾಮಥ ಶಿಷ್ಯಾಣಾಂ ಪುತ್ರಾಣಾಂ ಚ ಕೃಪಾವತಾ ।
ಅಪೃಷ್ಟಮಪಿ ವಕ್ತವ್ಯಂ ಶ್ರೇಯಶ್ಶ್ರದ್ಧಾವತಾಂ ಹಿತಂ ॥ ೧೮ ॥

---

೧೪. ಯಮನು ಹೇಳಿದನು– ಹೀಗೆ ಹೇಳಲ್ಪಟ್ಟ ದಯಾನಿಧಿಯಾದ ಆ ಕಶ್ಯಪನು ಧರ್ಮವೂ, ಹಿತವೂ ಆದ ಮಾತನ್ನು ಹೇಳಿದನು.

೧೫. ಕಶ್ಯಪನು ಹೇಳಿದನು– ಹಿಂದುಮುಂದಿನ ಯೋಚನೆಗಳಿಂದ ಸಮಾಧಾನ ಹೊಂದಿದ ಸೋಮಾರಿಯಲ್ಲೂ, ಜ್ಞಾನವನ್ನು ಒಂದುಸಾರಿ ತಿಳಿದಿರುವವನಲ್ಲೂ, ಅಧಮನಲ್ಲಿಯೂ, ಪಾಪಬುದ್ಧಿಯುಳ್ಳವನಲ್ಲೂ ಹೇಳಬಾರದು

೧೬. ಪಾಪಿಯಾದವನಿಗೆ ಒಳ್ಳೆಯ ಬುದ್ಧಿಯನ್ನುಂಟುಮಾಡಿದರೆ ವಿದ್ಯಾದಾನ ಮಾಡಿದ ಫಲವನ್ನು ಹೊಂದುತ್ತಾನೆ. ಸಂಶಯವಿಲ್ಲ.

೧೭. ಕೇಳದಿರುವವನಿಗೆ ಹೇಳಬಾರದು. ಅನ್ಯಾಯದಿಂದ ಕೇಳಿದವನಿಗೂ, ಹೇಳಬಾರದು. ಬುದ್ಧಿವಂತನು ತಿಳಿದಿದ್ದರೂ ದಡ್ಡನಂತೆ ಲೋಕದಲ್ಲಿರಬೇಕು.

೧೮. ವಿದ್ವಾಂಸರಿಗೂ, ಶಿಷ್ಯರಿಗೂ, ಮಕ್ಕಳಿಗೂ ದಯೆಯಿಂದ ಅವರು ಕೇಳದಿದ್ದರೂ ಹೇಳಬೇಕು. ಶ್ರದ್ಧೆಯುಳ್ಳವರಿಗೂ ಹಿತವನ್ನು ಹೇಳಬೇಕು.

ಸಾಂಪ್ರತಂ ಶುದ್ಧಹೃದಯೋ ಜಾತಸ್ತ್ವಂ ವಚನಾನ್ಮಮ ।
ಪುರಾಚರಿತಪುಣ್ಯೇನ ಕೇನಾಪಿ ಚ ಮಹೀಪತೇ ॥ ೧೯ ॥

ಪಾಪಾವಸ್ಥಾಂ ಶರೀರಂ ತದ್ಗತಂ ತವ ಮಯಾಶ್ರಯಾತ್ ।
ಶ್ರವಣಾದ್ಧರ್ಮಶಾಸ್ತ್ರಸ್ಯ ಧರ್ಮಾವಸ್ಥಂ ತು ತೇ ಭವೇತ್ ॥ ೨೦ ॥

ಪಾಪಾವಸ್ಥಮಧರ್ಮಾಖ್ಯಂ ಧರ್ಮಜ್ಞಾನವಿವರ್ಜಿತಂ ।
ಅಪರಂ ಸದ್ವ್ರತಂ ಯದ್ಧಿ ವಿಜ್ಞೇಯಂ ತದ್ಧಿ ಧಾರ್ಮಿಕಂ ॥ ೨೧ ॥

ಧರ್ಮಾಧರ್ಮೋಪಭೋಗಾಯ ತತ್ತೃತೀಯಮತೀಂದ್ರಿಯಂ ।
ತಸ್ಮಾತ್ತ್ರಿಭೇಥಂ ದೇಹಂ ಹಿ ವೇದವಿದ್ಭಿರಿಹೋಚ್ಯತೇ ॥ ೨೨ ॥

ಯಾವನ್ನ ಧರ್ಮೋ ಭೋಗಶ್ಚ ಮುಕ್ತಿಶ್ಚೈವ ತ್ರಿಭೇದಕಂ ।
ಪಾಪಾವಸ್ಥಂ ಶರೀರಂ ತತ್ಪಾಪಸಂಜ್ಞಂ ತದುಚ್ಯತೇ ॥ ೨೩ ॥

---

೧೯. ಎಲೈ ದೊರೆಯೇ ನೀನು ಪೂರ್ವದಲ್ಲಿ ಮಾಡಿದ ಯಾವುದೋ ಒಂದು ಪುಣ್ಯದಿಂದ ನನ್ನ ಮಾತಿನಿಂದ ಈಗ ಶುದ್ಧವಾದ ಮನಸ್ಸುಳ್ಳವನಾದೆ.

೨೦. ಪಾಪದ ಅವಸ್ಥೆಯನ್ನು ಹೊಂದಿದ್ದ ಆ ನಿನ್ನ ಶರೀರವು ನನ್ನನ್ನು ಆಶ್ರಯಿಸಿದುದರಿಂದ ಹೋಯಿತು ಧರ್ಮಶಾಸ್ತ್ರವನ್ನು ಕೇಳಿದುದರಿಂದ ಧರ್ಮಾವಸ್ಥೆಯನ್ನೂ ಹೊಂದಿತು.

೨೧. ಧರ್ಮಜ್ಞಾನದಿಂದ ಬಿಡಲ್ಪಟ್ಟ ಅಧರ್ಮವೆಂಬ ಹೆಸರುಳ್ಳದೇ ಪಾಪಾವಸ್ಥೆಯು. ಅದಕ್ಕಿಂತ ಹೊರತಾದುದು ಒಳ್ಳೆಯ ವ್ರತವುಳ್ಳದು ಧಾರ್ಮಿಕವೆಂದು ತಿಳಿ.

೨೨. ಧರ್ಮ ಅಧರ್ಮಗಳನ್ನನುಭವಿಸುವುದಕ್ಕೋಸ್ಕರ ಇದ್ದು ಕಣ್ಣಿಗೆ ಕಾಣಿಸದಂತಿರುವುದು ಮೂರನೆಯದು. ಆದ್ದರಿಂದ ವೇದ ಓದಿದವರು ದೇಹವನ್ನು ಮೂರು ಭೇದವುಳ್ಳದೆಂದು ಹೇಳುತ್ತಾರೆ

೨೩. ಧರ್ಮವೂ, ಭೋಗವೂ, ಮುಕ್ತಿಯೂ ಇಲ್ಲದ, ಪಾಪಾವಸ್ಥೆಯುಳ್ಳ ಶರೀರವನ್ನೇ ಪಾಪಸಂಜ್ಞೆಯುಳ್ಳದ್ದೆಂದು ಹೇಳುತ್ತೇವೆ.

ಇದಾನೀಂ ಗುರುಭಕ್ತ್ಯಾ ಚ ಕುರ್ವತೋ ವಚನಂ ಮಮ ।
ಶೃಣ್ವತೋ ಧರ್ಮರೂಪಂ ತು ಶರೀರಂ ತೇ ವ್ಯವಸ್ಥಿತಂ ॥ ೨೪ ॥

ತೇನೈವ ಶುದ್ಧಿರಮಲಾ ಜಾತಾ ಧರ್ಮಕ್ರಿಯೋಚಿತಾ ।
ದೈವೇನ ದೇಹಿನಾಂ ನಾಮ ಚೇತಾಂಸಿ ಚರಿತಾನಿ ಚ ॥ ೨೫ ॥

ಶರೀರಾಣಿಚ ಪುಷ್ಯಂತೇ ಕಾಲೇ ಕಾಲೇ ವಿಪರ್ಯಯಂ ॥
ಸಾಂಪ್ರತಂ ಭವತೋ ರಾಜನ್ಮನೋ ಧರ್ಮೇ ಸಮಾಸ್ಥಿತಂ ॥ ೨೬ ॥

ತೇನ ತ್ವಾಂ ಕಾರಯಿಷ್ಯಾಮಿ ಮಾಧವಸ್ನಾನಮುತ್ತಮಂ ॥ ೨೭ ॥

॥ ಯಮ ಉವಾಚ ॥

ತತಸ್ತು ಕಾರಿತಸ್ತೇನ ಕಾಶ್ಯಪೇನ ಪುರೋಧಸಾ ।
ಸ ನೃಪೋ ಮಾಧವೇ ಮಾಸಿ ಸ್ನಾನಂ ದಾನಂ ಚ ಪೂಜನಂ ॥ ೨೮ ॥

---

೨೪. ಈಗ ಗುರುಭಕ್ತಿಯನ್ನಿಟ್ಟು ನನ್ನ ಮಾತನ್ನು ನಡೆಸುತ್ತಾ ಕೇಳುತ್ತಿರುವ ಈ ನಿನ್ನ ಶರೀರವು ಧರ್ಮರೂಪವಾದದ್ದೆಂದು ವ್ಯವಸ್ಥಿತವಾಗಿದೆ.

೨೫-೨೭. ಆದರಿಂದಲೇ ಧರ್ಮಕೆಲಸಕ್ಕೆ ಯೋಗ್ಯವಾದ ಶುದ್ಧಿಯುಂಟಾಯಿತು. ದೇವರು, ಮನುಷ್ಯರ ಮನಸ್ಸು ಚರಿತ್ರೆ ಶರೀರಗಳನ್ನು ಅಯಾಕಾಲದಲ್ಲಿ ವೃದ್ಧಿಪಡಿಸುತ್ತಾನೆ. ಅಂತೆಯೇ ಕ್ಷೀಣಿಸುತ್ತಾನೆ. ಎಲೈ! ರಾಜನೇ ಈಗ ನಿನ್ನ ಮನಸ್ಸು ಧರ್ಮದಲ್ಲಿ ನಿರತವಾಗಿದೆ. ಆದ್ದರಿಂದ ನಿನಗೆ ವೈಶಾಖಸ್ನಾನವನ್ನು ಶಾಸ್ತ್ರಾನುಸಾರವಾಗಿ ಮಾಡಿಸುತ್ತೇನೆ.

೨೮. ಯಮನು ಹೇಳಿದನು- ಆಗ ಆ ಪುರೋಹಿತನಾದ ಕಾಶ್ಯಪನು ಆ ರಾಜನಿಗೆ ವೈಶಾಖಮಾಸದಲ್ಲಿ ಸ್ನಾನದಾನಗಳನ್ನೂ ಪೂಜೆಯನ್ನೂ ವಿಧಿವತ್ತಾಗಿ ಮಾಡಿಸಿದನು.

ಯಥಾ ದೃಷ್ಟಂ ಪುರಾ ಶಾಸ್ತ್ರೇ ವೈಶಾಖಸ್ನಾನಜಂ ವಿಧಿಂ ।
ಸ ಮುನಿಃ ಪ್ರತ್ಯುವಾಚಾಽಸ್ಮೈ ಭೂಪಾಯ ಚ ಯಥೋದಿತಂ ॥ ೨೯ ॥

ಶೃಣ್ವತಃ ಸ್ತೋತ್ರಸಾರಂ ಚ ಕಥನಂ ಹರಿಮೇಧಸಃ ।
ಶ್ರುತೇ ಯಸ್ಮಿನ್ನಧೀತೇ ಚ ಸ ಸಮ್ಯಕ್ಫಲಮಾಪ್ನುಯಾತ್ ॥ ೩೦ ॥

ಸ ಕಾರಿತಸ್ತೇನ ವಿಧಾನಭಾವೋ
ರಾಜಾಪಿ ಚಕ್ರೇ ವಿಧಿವತ್ತಥಾನೀಂ ।
ಶ್ರೀಮಾಧವೇಮಾಸಿ ವಿಧಾನಮೀಡ್ಯಂ
ತತೋ ಯಥಾಽಕರ್ಣಿತಮಾದರೇಣ ॥ ೩೧ ॥

ಪ್ರಾತಸ್ಸ್ನಾನಂ ಚ ಪಾದ್ಯಂ ಚ ಹ್ಯರ್ಘ್ಯಂ ಚ ಹರಿಪೂಜನಂ ।
ನೈವೇದ್ಯಂ ಭಕ್ತಿಭಾವೇನ ಚಕಾರ ಸ ನೃಪೋತ್ತಮಃ ॥ ೩೨ ॥

ದಾನಂ ಯಥಾ ನಿಯಮಪಾಲನಮಾದರೇಣ
ವೈಶಾಖಮಾಸಿ ವಿದಧಾತಿ ವಿಧಾನಮೇವಂ ।
ಯೋ ಭಕ್ತಿತೋಽನ್ವಹಮಸೌ ಪ್ರತಿವರ್ಷಮೇವಂ
ಕೃತ್ವಾ ಪ್ರಯಾತಿ ಹರಿಧಾಮ ಮಹೀಸುರಾಗ್ರ್ಯಃ ॥ ೩೩ ॥

---

೨೯-೩೦ ಶಾಸ್ತ್ರದಲ್ಲಿ ಹೇಳಿರುವಂತೆ ವೈಶಾಖಸ್ನಾನದ ವಿಧಿಯಂತೆ ಮಾಡಿಸಿದನು. ಆ ಕಾಶ್ಯಪನು ರಾಜನಿಗೆ ಶಾಸ್ತ್ರದಲ್ಲಿ ಹೇಳಿರುವಂತೆ ಸ್ನಾನವನ್ನೂ ಸ್ತೋತ್ರವನ್ನೂ ಹೇಳುತ್ತಾ ಹರಿಭಕ್ತರು ಹೇಳುತ್ತಿರುವ ವಿಷಯಗಳನ್ನೂ ಹೇಳುತ್ತಾ ಇದ್ದನು. ಅದನ್ನು ಕೇಳಿದರೂ, ಓದಿದರೂ, ಸರಿಯಾದ ಫಲವನ್ನು ಹೊಂದುತ್ತಾನೆ.

೩೧. ಆ ವಿಧಾನವು ಹೇಳಿರುವಂತೆ ಪುರೋಹಿತನು ಮಾಡಿಸಿದನು. ರಾಜನೂ ಮಾಡಿದನು. ವೈಶಾಖಮಾಸದಲ್ಲಿ ಪೂಜ್ಯವಾದ ಆ ವಿಧಿಯನ್ನನುಸರಿಸಿ ಸ್ತೋತ್ರವನ್ನೂ ಕಥೆಯನ್ನೂ ಆದರದಿಂದ ಕೇಳಿದನು.

೩೨. ಆ ರಾಜನು ಭಕ್ತಿಯಿಂದ ಪ್ರಾತಸ್ಸ್ನಾನವನ್ನೂ, ಅರ್ಘ್ಯ, ಪಾದ್ಯ, ಪೂಜೆಗಳನ್ನೂ ನೈವೇದ್ಯಗಳನ್ನೂ ಮಾಡಿದನು.

೩೩. ಯಾವ ಆ ಬ್ರಾಹ್ಮಣನು ಪ್ರೀತಿಯಿಂದ ದಾನವನ್ನೂ ನಿಯಮಪಾಲನೆಯನ್ನೂ ವೈಶಾಖಮಾಸದಲ್ಲಿ ಭಕ್ತಿಯಿಂದ ಪ್ರತಿದಿನವೂ ಮಾಡುತ್ತಾನೋ ಅವನು ವೈಕುಂಠವನ್ನು ಹೊಂದುತ್ತಾನೆ.

ಅಥೇತರೇಷು ಮಾಸೇಷು ಕಾಮಿನೀಕುಚಕೇಳಿವಾ‌ ।
ಭೋಗೈಕಲಾಲಸೋ ಭೂಯೋ ಭವತ್ಯೇವ ಯಥಾರುಚಿ ॥ ೩೪ ॥

ನ ಧರ್ಮನಿಯಮಂ ರಾಜಕಾರ್ಯೇಷು ನ ವಿಚಾರಣಾಂ ।
ಕರೋತಿ ಕಾಮವಶಗೋ ಹಿತ್ವಾ ಮಾಸಂ ಚ ಮಾಧವಂ ॥ ೩೫ ॥

ಮಹತಾಮಪಿ ವಿಪ್ರಾಗ್ರ್ಯ ದುರ್ನಿವಾರ್ಯೋ ಮನೋಭವಃ ।
ಶರೀರಸಹಜೋ ನೂನಮನಾದಿರ್ವಾಸನಾಕ್ರಮಃ ॥ ೩೬ ॥

ಕೇಶಕಜ್ಜಲಶಾಲಿನ್ಯೋ ದುಸ್ಸ್ಪರ್ಶಾ ಲೋಚನಪ್ರಿಯಾಃ ।
ಯಸ್ಮಾದಗ್ನಿಶಿಖಾ ನಾರ್ಯೋ ದಹಂತಿ ತೃಣವನ್ನರಂ ॥ ೩೭ ॥

---

೩೪. ಉಳಿದ ಮಾಸಗಳಲ್ಲಿ ಸ್ತ್ರೀಯರಲ್ಲಿ ಆಸಕ್ತನಾಗಿ ಭೋಗಪಡುತ್ತಾ ಇಷ್ಟ ಬಂದಂತೆ ಇರಬಹುದು.

೩೫. ವೈಶಾಖಮಾಸ ಹೊರತು ಉಳಿದ ಮಾಸಗಳಲ್ಲಿ ಧರ್ಮನಿಯಮ ವನ್ನಾಗಲೀ ರಾಜಕಾರ್ಯದ ವಿಚಾರಣೆಯನ್ನಾಗಲೀ, ಮಾಡುತ್ತಿರಲಿಲ್ಲ. ಕೇವಲ ಕಾಮಾಸಕ್ತನಾಗಿಯೇ ಇರುತ್ತಿದ್ದನು.

೩೬. ಎಲೈ ಬ್ರಾಹ್ಮಣನೇ ಮಹಾತ್ಮರಿಗೂ ಕೂಡ ಮನ್ಮಥನು ಬಿಡಲ್ಪಡಲ ಸಾಧ್ಯನು. ಶರೀರದ ಜೊತೆಯಲ್ಲಿಯೇ ಹುಟ್ಟಿರುವನು. ವಾಸನೆಯು ಅನಾದಿ ಯಾದುದು.

೩೭. ಕೂದಲು, ಕಾಡಿಗೆಗಳಿಂದ ಪ್ರಕಾಶಿಸುವ ಕಣ್ಣಿಗೆ ಆನಂದವನ್ನುಂಟು ಮಾಡುವ ಹೆಂಗಸರನ್ನು ಮುಟ್ಟಬಾರದು. ಏಕೆಂದರೆ ಅವರು ಬೆಂಕಿಯ ಜ್ವಾಲೆಗಳು ಹುಲ್ಲನ್ನು ಸುಡುವಂತೆ ಮನುಷ್ಯನನ್ನು ಸುಡುತ್ತಾರೆ.

ಘೋರಶ್ಶತ್ರುಶರೀರಸ್ಥಃ ಪುಂಸಾಂ ಕಾಮೋ ಯಥೋಚಿತಃ ।
ಮೋಹಧೂಮಮಯಃ ಪಾಪೋ ನ ಕೇಷಾಮಂಧಕಾರಕಃ　　　॥ ೩೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ
ಷಣ್ಣವತಿತಮೋಽಧ್ಯಾಯಃ

---

೩೮. ಕಾಮನು ಮನುಷ್ಯರಿಗೆ ಶರೀರದಲ್ಲಿರುವ ಕಾಲಕ್ಕೆ ತಕ್ಕ ಘೋರವಾದ ಶತ್ರುವು. ಮೋಹವೆಂಬ ಹೊಗೆಯಿಂದ ಕೂಡಿರುವ ಆ ಪಾಪಿಯು ಯಾರಿಗೆ ಅಂಧಕಾರವನ್ನುಂಟುಮಾಡುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೆಂಬ
ತೊಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಸಪ್ತನವತಿತಮೋಽಧ್ಯಾಯಃ ॥



॥ ಯಮ ಉವಾಚ ॥

ಅಥ ಕಾಲಕಟಾಕ್ಷೇಣ ಲಕ್ಷಿತೋ ನೃಪತಿಸ್ತದಾ ।
ಮೃತೋಽತಿರತಿಸೇವೋತ್ಥಕ್ಷಯಕ್ಷೀಣಕಳೇಬರಃ ॥ ೧ ॥

ನೀಯಮಾನೋ ಮಮ ಗಣೈಃ ತಾಡ್ಯಮಾನೋ ಮುಹುರ್ಮುಹುಃ ।
ಕ್ರಂದಮಾನೋ ಮಹಾರಾವಾನ್ಸಂಸ್ಮರನ್ನಿಜಪಾತಕಂ ॥ ೨ ॥

ವಿಷ್ಣುದೂತೈಸ್ತಥಾಗತ್ಯ ತಾನಧಿಕ್ಷಿಪ್ಯ ಮೇಽನುಗಾನ್ ।
ಧರ್ಮವಾನಯಮಿತ್ಯುಕ್ತ್ವಾ ಹ್ಯಾರೋಪ್ಯ ವ್ಯೋಮವಾಹನಂ ॥ ೩ ॥

---

### ತೊಂಭತ್ತೇಳನೆಯ ಅಧ್ಯಾಯವು

೧. ಯಮನು ಹೇಳಿದನು- ಹೀಗಿರುತ್ತಿರುವಲ್ಲಿ ಆ ರಾಜನು ಒಬ್ಬರನ್ನೂ ಬಿಡದ ಕಾಲಪುರುಷನ ಕಣ್ಣಿಗೆ ಬಿದ್ದು ಅತ್ಯಂತವಾದ ರತಿಯನ್ನು ಸೇವಿಸಿ ಅದರಿಂದಲೇ ಕ್ಷಯಬಂದು ಮೃತನಾದನು.

೨. ಆಗ ನನ್ನ ಕಡೆಯ ದೂತರು ಬಾರಿಬಾರಿಗೂ ಹೊಡೆದು ಹೊಡೆದು ಕರೆದುಕೊಂಡು ಹೋಗುತ್ತಿರಲು ಅಳುತ್ತಾ ತನ್ನ ಪಾಪಗಳನ್ನು ಸ್ಮರಿಸಿ ಕೊಳ್ಳುತ್ತಿದ್ದನು.

೩-೪. ಆಗ ವಿಷ್ಣು ದೂತರು ಬಂದು ಯಮದೂತರನ್ನು ಬೈದು ಅವನು ಧರ್ಮಿಷ್ಠನೆಂದು ಹೇಳಿ ವಿಮಾನವನ್ನು ಹತ್ತಿಸಿಕೊಂಡು ವೈಕುಂಠಕ್ಕೆ ಕರೆದುಕೊಂಡು

ನೀತೋ ಹರಿಪುರಂ ವಿಪ್ರ ಸ್ತೂಯಮಾನೋಽಪ್ಸರೋಗಣೈಃ ।
ಪ್ರಾತಃಸ್ನಾನೇನ ವೈಶಾಖಮಾಸಸ್ಯ ಕ್ಷೀಣಪಾತಕಃ ॥ ೪ ॥

ಅಥ ಧರ್ಮವಿಹೀನೋಽಯಮಿತಿ ಮತ್ವಾ ಚ ತೈಃ ಪುನಃ ।
ದೇವದೂತೈರದೂರೇಣ ನರಕಸ್ಯ ಚ ವರ್ತ್ಮನಃ ॥ ೫ ॥

ಆನೀತೋ ನೃಪತಿರ್ವಿಷ್ಣೋರ್ನಿರ್ದೇಶೇತಿ ವಿಶಾರದೈಃ ।
ಸ ಗಚ್ಛನ್ನಪಿ ಶುಶ್ರಾವ ಜೀವಾನಾಂ ಕ್ರಂದನಂ ಪುನಃ ॥ ೬ ॥

ನಿರಯೇ ಪಚ್ಯಮಾನಾನಾಮಾರಾವಂ ವಿವಿಧಂ ತದಾ ।
ಪಾಪಿನಾಂ ಕ್ವಥ್ಯಮಾನಾನಾಮಾಕ್ರಂದಮತಿದಾರುಣಂ ॥ ೭ ॥

ಶ್ರುತ್ವಾ ವಿಸ್ಮಯವಾನ್ವಿಪ್ರ ರಾಜಾಭೂದತಿದುಃಖಿತಃ ।
ಪ್ರೋವಾಚ ದೂತಾನ್ಕಿಮಯಮಾಕ್ರಂದೋ ದಾರುಣಶ್ರುತಃ ।
ಕಿಮತ್ರ ಕಾರಣಂ ತನ್ಮೇ ಸರ್ವಂ ವಕ್ತುಮಿಹಾರ್ಹಥ ॥ ೮ ॥

॥ ದೂತಾ ಊಚುಃ ॥

ಜನ್ತವಸ್ತ್ಯಕ್ತಮರ್ಯಾದಾಃ ಪಾಪಾಃ ಪುಣ್ಯವಿವರ್ಜಿತಾಃ ।
ನಿರಯೇಷು ಸುಘೋರೇಷು ತಾಮಿಸ್ರಾದಿಷು ಪಾತಿತಾಃ ॥ ೯ ॥

---

ಹೋದರು. ವೈಶಾಖದ ಪ್ರಾತಸ್ಸ್ನಾನದಿಂದ ಪಾಪನಾಶವಾಗಿ ಪುಣ್ಯಬಂದುದರಿಂದ ಅಪ್ಸರೋಗಣಗಳೂ ಕೂಡ ಸ್ತೋತ್ರಮಾಡುತ್ತಿದ್ದರು.

೫-೭. ಮತ್ತೆ ಆ ದೇವದೂತರು ಇವನು ಪಾಪಿಯೆಂದು ತಿಳಿದು ನರಕದ ದಾರಿಯ ಸಮೀಪದಲ್ಲಿ ಕರೆದೊಯ್ದರು. ಇದು ವಿಷ್ಣುವಿನ ಅಪ್ಪಣೆಯೆಂದು ತಿಳಿದು ಅವರು ಹಾಗೆ ತಂದರು. ಅವನು ಹೋಗುತ್ತಾ ನರಕದಲ್ಲಿ ಶಿಕ್ಷೆಯನ್ನನುಭವಿಸುತ್ತಿರುವ ಪ್ರಾಣಿಗಳ ಬಗೆಬಗೆಯಾದ ಕೂಗುಗಳನ್ನೂ ಆ ಪಾಪಿಗಳ ಅತಿ ದಾರುಣವಾದ ಮಾತುಗಳನ್ನೂ ಹೋಗುತ್ತಲೇ ಕೇಳುತ್ತಿದ್ದನು-

೮. ಆಗ ರಾಜನು ಆ ದೂತರನ್ನು ಕುರಿತು ಇದೇನು ? ಈ ಭಯಂಕರವಾದ ಅಳುವು ಇದಕ್ಕೆ ಕಾರಣವೇನು ? ಎಲ್ಲವನ್ನೂ ದಯವಿಟ್ಟು ನನಗೆ ಹೇಳಿರಿ. ಎಂದನು.

೯. ದೂತರು ಹೇಳಿದರು- ಮರ್ಯಾದೆಯಿಲ್ಲದ ಪುಣ್ಯದಿಂದ ಬಿಡಲ್ಪಟ್ಟ ಪಾಪಿಗಳಾದ ಪ್ರಾಣಿಗಳನ್ನು ಘೋರವಾದ ತಮಿಸ್ರವೇ ಮೊದಲಾದ ನರಕದಲ್ಲಿ ಹಾಕಿ ಬೇಯಿಸುತ್ತಾರೆ.

ಕೃತಪಾತಕಿನಸ್ತತ್ರ ಪ್ರಾಣತ್ಯಾಗಾದನಂತರಂ ।
ಯಾಮ್ಯಂ ಪಂಥಾನಮಾಶ್ರಿತ್ಯ ದುಃಖಮಶ್ನಂತಿ ದಾರುಣಂ ॥ ೧೦ ॥

ಯಮಸ್ಯಪುರುಷೈರ್ಘೋರೈಃ ಕೃಷ್ಯಮಾಣಾ ಇತಸ್ತತಃ ।
ಅಂಧಕಾರೇ ನಿಪತಿತಾ ಭಕ್ಷ್ಯಂತೇ ಹ್ಯತಿದಾರುಣೈಃ ॥ ೧೧ ॥

ಶ್ವಭಿಃ ಶೃಗಾಲೈಃ ಕ್ರವ್ಯಾದ್ಯೈಃ ಕಾಕಕಂಕಬಕಾದಿಭಿಃ ।
ಅಗ್ನಿಕುಂಡೈರ್ವೃಕವ್ಯಾಘ್ರೈಃ ಭುಜಗೈರ್ವೃಶ್ಚಿಕಾದಿಭಿಃ ॥ ೧೨ ॥

ಅಗ್ನಿನಾ ದಹ್ಯಮಾನಾಶ್ಚ ತುದ್ಯಮಾನಾಶ್ಚ ಕಂಟಕೈಃ ।
ಕ್ರಕಚೈಃ ಪಾಟ್ಯಮಾನಾಶ್ಚ ಪೀಡ್ಯಮಾನಾಶ್ಚ ತೃಷ್ಣಯಾ ॥ ೧೩ ॥

ಕ್ಷುಧಯಾ ಬಾಧ್ಯಮಾನಾಶ್ಚ ಘೋರೈರ್ವ್ಯಾಧಿಗಣೈಸ್ತಥಾ ।
ಪೂಯಶೋಣಿತಗಂಧೇನ ಮೂರ್ಛಮಾನಾಃ ಪುನಃ ಪುನಃ ॥ ೧೪ ॥

ಕ್ವಥ್ಯಂತೇ ಕ್ವಥಿತೇ ತೈಲೇ ತಾಡ್ಯಂತೇ ಮುಸಲೈಃಕ್ವಚಿತ್ ।
ಆಯಸೀಷು ಪ್ರಪಚ್ಯಂತೇ ಶಿಲಾಸು ಕ್ವಚಿದೇವ ಚ ॥ ೧೫ ॥

---

೧೦. ಪಾಪಿಗಳು ಪ್ರಾಣಬಿಟ್ಟಮೇಲೆ ಯಮನ ದಾರಿಯನ್ನು ಹೊಂದಿ ಇಲ್ಲಿ ಕ್ರೂರವಾದ ಶಿಕ್ಷೆಗಳನ್ನು ಅನುಭವಿಸುತ್ತಾರೆ.

೧೧. ಯಮನ ಪುರುಷರಿಂದ ಅತ್ತಿತ್ತಲಾಗಿ ಎಳೆಯಲ್ಪಡುತ್ತಾ ಕಗ್ಗತ್ತಲೆಯಲ್ಲಿ ಕೆಡವಲ್ಪಟ್ಟ ಕ್ರೂರವಾದ ಪ್ರಾಣಿಗಳಿಂದ ಕಚ್ಚಿಸಲ್ಪಡುತ್ತಾರೆ.

೧೨. ನಾಯಿ, ನರಿ, ದುಷ್ಟಮೃಗಗಳು, ಕಾಗೆ, ಹದ್ದು ಜಿಂಕೆಯು ಮೊದಲಾದವು ತೋಳ, ಹುಲಿ, ಹಾವು, ಚೇಳು ಇವುಗಳಿಂದ ಕಚ್ಚಿಸುತ್ತಾರೆ.

೧೩-೧೪. ಅಲ್ಲಿ ಬೆಂಕಿಯಿಂದ ಸುಡುತ್ತಾರೆ. ಮುಳ್ಳುಗಳಿಂದ ಚುಚ್ಚುತ್ತಾರೆ. ಗರಗಸಗಳಿಂದ ಕುಯ್ಯುತ್ತಾರೆ. ಬಾಯಾರಿಕೆಯಿಂದ ತೊಂದರೆಪಡಿಸುತ್ತಾರೆ. ಹಸಿವಿನಿಂದ ಬಾಧಿಸಲ್ಪಡುತ್ತಾರೆ. ಅದರಂತೆ ಘೋರವಾದ ರೋಗಗಳಿಂದಲೂ ತೊಂದರೆ ಕೊಡುತ್ತಾರೆ. ಕೀವು ರಕ್ತಗಳ ವಾಸನೆಯಿಂದ ಬಾರಿಬಾರಿಗೆ ಮೂರ್ಛೆಯನ್ನು ಹೊಂದುತ್ತಾರೆ.

೧೫-೧೬. ಕುದಿಯುತ್ತಿರುವ ಎಣ್ಣೆಯಲ್ಲಿ ಹಾಕಿ ಕುದಿಸುತ್ತಾರೆ. ಮುಸಲಗಳಿಂದ (ಒನಕೆ) ಹೊಡೆಯುತ್ತಾರೆ. ಕಬ್ಬಿಣದ ಬಾಣಲೆಗಳಲ್ಲಿ ಹುರಿಯುತ್ತಾರೆ.

ಕ್ವಚಿದ್ವಾನ್ನಮಥಾಶ್ನಂತಿ ಕ್ವಚಿತ್ಪೂಯಮಸೃಕ್ಕ್ವಚಿತ್ ।
ಕೇಶಶೋಣಿತಮಾಂಸಾಸೃಗ್ವಸಾಸ್ಥಿನಿಕರೇಷು ಚ ॥ ೧೬ ॥

ಆಸ್ಥಿತಾಃ ಕುಣಪಾಃ ಪಶ್ಚಾತ್ಕ್ಲಿನ್ನಾಸು ಭೂಮಿಷು ಕ್ವಚಿತ್ ।
ಶಾವದುರ್ಗಂಧಿನೀರಂಧ್ರಸಂಘಾದ್ರಿಶತಕೋಟಿಷು ॥ ೧೭ ॥

ಕರಪತ್ರಶಿಲಾಪಾತವಿನಿಷ್ಪಪ್ತತಲೇಷು ಚ ।
ಲೋಹತೈಲವಸಾಸ್ತಂಭಕೂಟಶಾಲ್ಮಲಿ ಸದ್ಮಸು ॥ ೧೮ ॥

ಕ್ಷುರಕಂಟಕಕೀಲೋಗ್ರಜ್ವಾಲಾಕ್ಷುಬ್ಧವಿಭೀತಿಷು ।
ತಪ್ತವೈತರಣೀಪೂಯಪೂರಿತೇಷು ಪೃಥಕ್ಪೃಥಕ್ ॥ ೧೯ ॥

ಅಸಿಪತ್ರವನೋತ್ಕೃತ್ತನರನಾರೀತನೂಷು ಚ ।
ಘೋರಾಂಧಕಾರದಹನದಾರುಣೇಷು ಮುಹುರ್ಮುಹುಃ ॥ ೨೦ ॥

---

ಕಾದ ಕಲ್ಲುಗಳ ಮೇಲೆ ಕೂರಿಸುತ್ತಾರೆ. ವಾಂತಿ ಮಾಡಿದುದನ್ನು ತಿನ್ನಿಸುತ್ತಾರೆ. ಕೀವುರಕ್ತಗಳನ್ನು ಕುಡಿಸುತ್ತಾರೆ. ಕೂದಲು, ರಕ್ತ, ಮಾಂಸ, ಕೊಬ್ಬು ಇವುಗಳ ಸಮೂಹದಲ್ಲಿ ಕೆಡವುತ್ತಾರೆ.

೧೭. ಅವರು ಅಲ್ಲಿ ಶವಗಳಂತೆ ಹೆಣಗಳ ಜೊತೆಯಲ್ಲಿ ಬಿದ್ದಿರಬೇಕು. ಅಲ್ಲಿ ಹೆಣದ ದುರ್ಗಂಧವೂ, ವಿಪರೀತವಾಗಿರುವುದು. ಅದನ್ನು ಸಹಿಸುತ್ತ ಅಲ್ಲಿ ಬಿದ್ದಿರಬೇಕು.

೧೮. ಗರಗಸಗಳ ಮೇಲೆ ನಿಲ್ಲಿಸುತ್ತಾರೆ. ಕೆಳಗೆ ನಿಲ್ಲಿಸಿ ಮೇಲೆ ಕಲ್ಲುಗಳನ್ನು ಎತ್ತಿಹಾಕುತ್ತಾರೆ. ಕೆಳಗೆ ಕಾದಿರುವ ಕಲ್ಲನ್ನಿಟ್ಟು ಅದರ ಮೇಲೆ ಕೆಡವುತ್ತಾರೆ. ಲೋಹಗಳನ್ನು ಕೆಳಗೆ ಕಾಸಿಟ್ಟು ಅದರ ಮೇಲೆ ಕೆಡವುತ್ತಾರೆ. ಎಣ್ಣೆ, ಕೊಬ್ಬು ಇವುಗಳನ್ನೂ ಕಾಸಿ ಹುಯ್ಯುತ್ತಾರೆ. ಗರಗಸದ ಎಲೆಗಳುಳ್ಳ ಮರದ ಕೆಳಗೆ ಮಲಗಿಸುತ್ತಾರೆ.

೧೯. ಕತ್ತಿ, ಮುಳ್ಳು, ಗೂಟ, ಇವುಗಳುಳ್ಳ ಜಾಗದಲ್ಲೂ. ಉಗ್ರವಾದ ಜ್ವಾಲೆಯುಳ್ಳ ಭಯಂಕರವಾದ ಜಾಗದಲ್ಲೂ ಕಾದಿರುವ ವೈತರಣೀ ನದಿಯ ಕೀವು ರಕ್ತಗಳು ತುಂಬಿರುವ ಪ್ರವಾಹಗಳಲ್ಲಿಯೂ ಹಾಕುತ್ತಾರೆ.

೨೦. ಅಸಿಪತ್ರವನ ( ಗರಗಸದಂತಿರುವ ಎಲೆಗಳುಳ್ಳ ಮರ ) ದಲ್ಲಿಯೂ, ಕತ್ತಲೆಯಿಂದ ಕೂಡಿದ ಮತ್ತು ಬೆಂಕಿಯಿರುವ ಜಾಗಗಳಲ್ಲಿಯೂ, ಕೆಡವುತ್ತಾರೆ.

ಪಚ್ಯಮಾನಾರುದಂತಶ್ಚ ದಾರುಣಂ ವಿವಿಧೈಸ್ತ್ವರೈಃ ।
ಕಂಠೇಷು ಬದ್ಧಪಾಶಾಶ್ಚ ಭುಜಂಗಾವೇಷ್ಟಿತಾಃ ಕ್ವಚಿತ್ ॥ ೨೧ ॥

ಕೂಟಗಾರೇಭ್ರಾಮ್ಯಮಾಣಾಃ ಶರೀರೈರ್ಯಾತನೋಚಿತೈಃ ।
ಪೀಡ್ಯಂತೇ ಪಾಪಿನೋ ರಾಜನ್ನ್ಕ್ರಂದಂತೋತೀವ ಕರ್ಮಿಣಃ ॥ ೨೨ ॥

ಸಹಿತಂ ವಿಷಯಾಸ್ವಾದೈಃ ಕ್ರಂದನಂ ತ್ವೈರ್ವಿಧೀಯತೇ ।
ಭುಜ್ಯತೇ ಚ ಕೃತಂ ಪೂರ್ವ ಮೇತತ್ಸರ್ವೈಶ್ಚ ಜಂತುಭಿಃ ॥ ೨೩ ॥

ಪರಸ್ತ್ರೀಷು ಕೃತಸ್ಸಂಗಃ ಪ್ರೀತಯೇ ದುಃಖದೋ ಹಿ ಸಃ ।
ಮುಹೂರ್ತವಿಷಯಾಸ್ವಾದೋಽನೇಕಕಲ್ಪಾಂತದುಃಖದಃ ॥ ೨೪ ॥

ವಪುಷಸ್ತವ ರಾಜೇಂದ್ರ ಪ್ರಾತಸ್ಸ್ನಾನಸ್ಯ ಮಾಧವೇ ।
ವಿಧಿನಾ ಪಾವನಶ್ಚೈತೆ ಪ್ರಾಪ್ಯ ಸ್ವರ್ಗಂ ಚ ಭಾಸತಾತ್ ॥ ೨೫ ॥

---

೨೧–೨೨. ಆ ಜಾಗದಲ್ಲಿ ತೊಂದದರೆಪಡಿಸುತ್ತಿರುವುದರಿಂದ ನಾನಾ ಬಗೆಯಾದ ಅಳುವಿನಿಂದ ದುಃಖಿಸುತ್ತಿದ್ದಾರೆ. ಕೆಲವು ಜಾಗಗಳಲ್ಲಿ ಕತ್ತಿಗೆ ಹಗ್ಗವನ್ನು ಹಾಕಿ ಬಿಗಿಯುತ್ತಾರೆ. ಮತ್ತೆ ಕೆಲವೆಡೆಗಳಲ್ಲಿ ಹಾವುಗಳನ್ನು ಸುತ್ತಿರುತ್ತಾರೆ. ದಾರಿ ತಿಳಿಯದಂತಿರುವ ಮನೆಗಳಲ್ಲಿ ಸುತ್ತಿರುತ್ತಾರೆ. ಈ ರೀತಿ ಪಾಪಿಗಳು ಯಾತನಾ ಶರೀರಗಳಿಂದ ತೊಂದರೆಪಡಿಸಲ್ಪಟ್ಟು ದುಃಖಪಡುತ್ತಿರುತ್ತಾರೆ.

೨೩. ವಿಷಯ ಸುಖದಂತೆ ಸುಖವನ್ನು ತೋರಿಸುತ್ತಾ ದುಃಖಿಸುವಂತೆ ಮಾಡುತ್ತಾರೆ. ಈ ರೀತಿ ಪೂರ್ವಜನ್ಮದ ಪಾಪವನ್ನು ಆ ಜಂತುಗಳೆಲ್ಲರೂ ಅನುಭವಿಸುತ್ತಾರೆ.

೨೪. ಪ್ರೀತಿಗೋಸ್ಕರ ಪರಸ್ತ್ರೀ ಸಂಗ ಮಾಡಿದುದು ದುಃಖವನ್ನು ಕೊಡುತ್ತದೆ. ಒಂದುಗಳಿಗೆ ಕಾಲ ಆಕೆಯಲ್ಲಿ ಸುಖಪಟ್ಟುದು ಅನೇಕಕಲ್ಪಗಳವರೆಗೂ ದುಃಖವನ್ನು ಕೊಡುತ್ತದೆ.

೨೫. ವೈಶಾಖಮಾಸದಲ್ಲಿ ಪ್ರಾತಸ್ಸ್ನಾನ ಮಾಡಿದ ನಿನ್ನ ದೇಹವನ್ನು ಮುಟ್ಟಿದ ಗಾಳಿಯು ಅವರ ಮೇಲೆ ಬೀಸುವುದರಿಂದ ಹರ್ಷಗೊಳ್ಳುತ್ತಿದ್ದಾರೆ.

ಲಬ್ಧಸೌಖ್ಯಾಃ ಕ್ಷಣಂ ಜಾತಾ ಮಹಸಾಽಪ್ಯಾಯಿತಾಸ್ತ್ವವ ।
ಆಕ್ರಂದರಹಿತಾ ಜಾತಾಸ್ತೇಽನ್ಯೈತೇ ನಿರಯಂ ಗತಾಃ　　　॥ ೨೬ ॥

ನಾಮಾಪಿ ಪುಣ್ಯಶೀಲಾನಾಂ ಶ್ರುತಂ ಸೌಖ್ಯಾಯ ಕೀರ್ತಿತಂ ।
ಜಾಯತೇ ತದ್ವಪುಃಸ್ಪರ್ಶವಾಯುಃ ಸ್ಪರ್ಶಸುಖಾವಹಃ　　　॥ ೨೭ ॥

॥ ಯಮ ಉವಾಚ ॥

ಇತಿ ದೂತವಚಶ್ಶ್ರುತ್ವಾ ಸ ರಾಜಾ ಕರುಣಾನಿಧಿಃ ।
ಪ್ರತ್ಯುವಾಚ ಹ ತಾನ್ದೂತಾನ್ವಿಷ್ಣೋರದ್ಭುತಕರ್ಮಣಃ　　　॥ ೨೮ ॥

ಕೋಮಲಂ ಹೃದಯಂ ನೂನಂ ಸಾಧೂನಾಂ ನವನೀತವತ್ ।
ವಹ್ನಿಸಂತಾಪಸಂತಪ್ತಂ ತದ್ಯಥಾ ದ್ರವತಿ ಸ್ಫುಟಂ　　　॥ ೨೯ ॥

॥ ರಾಜೋವಾಚ ॥

ನಾರ್ತಜಂತೂನಹಂ ಹಿತ್ವಾ ಪೀಡಿತೋ ಗನ್ತುಮುತ್ಸಹೇ ।
ಸ ಪಾಪಿಷ್ಠೋ ಹಿ ಆರ್ತಾನಾಂ ಶೋಕಂ ನಾಪಹರೇತ್ಕ್ಷಮಃ　　　॥ ೩೦ ॥

---

೨೬. ಈ ನರಕವನ್ನು ಅನುಭವಿಸುತ್ತಿರುವ ಪಾಪಿಗಳು ಕ್ಷಣಕಾಲ ಸುಖವುಳ್ಳವರಾದರೂ ನಿನ್ನ ತೇಜಸ್ಸಿನಿಂದ ಸುಖಹೊಂದಿ ಅಳುವುದನ್ನು ನಿಲ್ಲಿಸಿದರು.

೨೭. ಪುಣ್ಯವಂತನ ಹೆಸರೂ ಕೂಡ ಕೇಳಿದ ಪಕ್ಷದಲ್ಲಿ ಸೌಖ್ಯವನ್ನು ಕೊಡುತ್ತದೆ. ಅವರ ದೇಹವನ್ನು ಮುಟ್ಟಿದ ಗಾಳಿಯೂ ಕೂಡ ಬೀಸಿದರೆ ಸುಖವನ್ನುಂಟು ಮಾಡುತ್ತದೆ.

೨೮. ಯಮನು ಹೇಳಿದನು- ಕರುಣಾ ನಿಧಿಯಾದ ಆ ರಾಜನು ಹೀಗೆಂಬ ದೂತರ ಮಾತನ್ನು ಕೇಳಿ ಆ ಮಹಾತ್ಮನಾದ ವಿಷ್ಣುವಿನ ದೂತರನ್ನು ಕುರಿತು ಇಂತೆಂದನು.

೨೯. ಸಾಧುಗಳ ಹೃದಯವು ಬೆಣ್ಣೆಯಂತೆ ಮೃದುವಾದುದು. ಬೆಂಕಿ ತಗಲಿದರೆ ಅದು ಕರಗುವಂತೆ ದುಃಖಿತರನ್ನೂ ಕಂಡರೆ ಕರಗುತ್ತದೆ.

೩೦. ರಾಜನು ಹೇಳಿದನು– ತೊಂದರೆಪಡುತ್ತಿರುವ ಪ್ರಾಣಿಗಳನ್ನು ಬಿಟ್ಟು ದುಃಖಪಡುತ್ತಾ ಹೋಗಲಾರೆ. ಯಾವನು ಪಾಪಿಗಳ ಪೀಡೆಯನ್ನು ನಾಶಮಾಡಲು ಶಕ್ತನಾಗಿದ್ದರೂ ನಾಶಮಾಡುವುದಿಲ್ಲವೋ ಅವನು ಪಾಪಿಷ್ಠನು.

ಮದಂಗಸಂಗವೋತ್ಸೃಷ್ಟವಾಯುಸ್ಪರ್ಶೇನ ತೇ ಯದಿ ।
ಜಂತವಸ್ಸುಖಿನೋ ಜಾತಾಸ್ತಸ್ಮಾತ್ತತ್ರ ನಯಂತು ಮಾಂ ॥ ೩೧ ॥

ಪರತಾಪಚ್ಛಿದೋ ಯೇ ತು ಚಂದನಾ ಇವ ಚಂದನಾಃ ।
ಪರೋಪಕೃತಯೇ ಯೇ ತು ಪೀಡ್ಯಂತೇ ಕೃತಿನೋ ಹಿತೇ ॥ ೩೨ ॥

ಸನ್ಯಸ್ತ ಏವ ಯೇ ಲೋಕೇ ಪರದುಃಖವಿದಾರಣಾಃ ।
ಆರ್ತಾನಾಮಾರ್ತಿನಾಶಾರ್ಥಂ ಪ್ರಾಣಾ ಯೇಷಾಂ ತೃಣೋಪಮಾಃ ॥ ೩೩ ॥

ತೈರಿಯಂ ಧಾರ್ಯತೇ ಭೂಮಿಃ ನರೈಃ ಪರಹಿತೋದ್ಯತೈಃ ।
ಮನಸೋ ಯತ್ಸುಖಂ ನಿತ್ಯಂ ಸ ಸ್ವರ್ಗೋ ನರಕೋಪಮಃ ॥ ೩೪ ॥

ತಸ್ಮಾತ್ಪರಸುಖೇನೈವ ಸಾಧವಃ ಸುಖಿತಸ್ಸದಾ
ವರಂ ನಿರಯಪಾತೋತ್ರ ವರಂ ಪ್ರಾಣವಿಯೋಜನಂ ।
ನ ಪುನಃ ಕ್ಷಣಮಾರ್ತಾನಾಮಾರ್ತಿನಾಶನ್ಮೃತೇ ಸುಖಂ ॥ ೩೫ ॥

---

೩೧. ನನ್ನ ದೇಹವನ್ನು ಮುಟ್ಟಿ ಬೀಸಿದ ಗಾಳಿಗಳಿಂದ ಅವರಿಗೆ ಸುಖವುಂಟಾಗುವ ಪಕ್ಷದಲ್ಲಿ ನನ್ನನ್ನೂ ಅವರ ಬಳಿಗೇ ಕರೆದುಕೊಂಡು ಹೋಗಿರಿ.

೩೨. ಚಂದನದಂತೆ ಪರರ ತಾಪವನ್ನು ಯಾರು ನಾಶಮಾಡುತ್ತಾರೋ ಅವರು ಯೋಗ್ಯರು. ಪರೋಪಕಾರಕ್ಕೋಸ್ಕರ ಯಾರು ತೊಂದರೆಪಡುತ್ತಾರೋ ಅವರೇ ಧನ್ಯರು.

೩೩. ಪರರ ದುಃಖವನ್ನು ನಿವಾರಣೆ ಮಾಡುವವರೇ ಲೋಕದಲ್ಲಿ ಸತ್ಪುರುಷರು. ಅವರಿಗೆ ತೊಂದರೆಯಲ್ಲಿರುವವರನ್ನು ಕಾಪಾಡಲು ಪ್ರಾಣವು ಹುಲ್ಲಿಗಿಂತ ಕಡಮೆಯಾಗಿ ಇರುತ್ತದೆ.

೩೪. ಪರರ ಹಿತದಲ್ಲಿ ನಿರತರಾದವರಿಂದಲೇ ಈ ಭೂಮಿಯು ನಿಂತಿರುವುದು. ಯಾವಾಗಲೂ ಮನಸ್ಸಿಗೆ ಹಿತವಾಗಿರುವುದು. ನರಕವಾದರೂ ಸ್ವರ್ಗವೇ.

೩೫. ಆದುದರಿಂದ ಪರರ ಸುಖವೇ ಸಾಧುಗಳಿಗೆ ಸುಖವು. ಅದಕ್ಕೋಸ್ಕರ ನರಕವಾಗಲಿ ಪ್ರಾಣಬಿಡುವುದಾಗಲಿ ಉತ್ತಮವು. ಕಷ್ಟಗಾರರ ಕಷ್ಟವನ್ನು ನಾಶ ಮಾಡದಿದ್ದರೆ ಅವನಿಗೆ ಸುಖವೇ ಇಲ್ಲ.

॥ ದೂತಾ ಊಚುಃ ॥

ಜಂತವೋ ನಿರಯೇ ಘೋರೇ ಪಚ್ಯಂತೇ ತತ್ರ ಪಾಪಿನಃ ।
ಸ್ವಕರ್ಮೈರ್ವೋಪಭುಂಜಾನಾ ಮೋಹಸ್ಥಾನಂ ನ ವಿದ್ಯತೇ ॥ ೩೬ ॥

ಯೈರ್ನದತ್ತಂ ಹುತಂ ತೀರ್ಥೇ ಪುಣ್ಯೇ ಸ್ನಾನಂ ನ ವಾ ಕೃತಂ ।
ಪುನರ್ನೋಪಕೃತಂ ನ್ಯಾಣಾಂ ಸುಕೃತಂ ನ ಕೃತಂ ಪರಂ ॥ ೩೭ ॥

ನೇಷ್ಟಂ ನ ತಪ್ತಂ ನೋ ದತ್ತಂ ಯೈರ್ನ ಹೃಷ್ಟತಯಾ ನೃಪ ।
ಪರಸ್ಮಿನ್ನಿಹಘೋರೇಷು ಪಚ್ಯಂತೇ ನರಕೇಷು ತೇ ॥ ೩೮ ॥

ದುಶ್ಶೀಲಾ ಯೇ ದುರಾಚಾರಾ ವ್ಯವಹಾರೇಷು ನಿಂದಿತಾಃ ।
ಪರಾಪಕಾರಿಣಃ ಪಾಪಕಾರಿಣೋ ದುರ್ವಿಹಾರಿಣಃ ॥ ೩೯ ॥

ಏಹಿ ಭೂಪ ಮಹಾಭಾಗ ಗಚ್ಛಾಮೋ ಹರಿಮಂದಿರಂ ।
ನತೇ ಪುಣ್ಯವತೋಯುಕ್ತಮಿಹಸ್ಥಾತುಮತಃಪರಂ ॥ ೪೦ ॥

---

೩೬. ದೂತರು ಹೇಳಿದರು- ಪಾಪಿಗಳಾದ ಜಂತುಗಳು ದುಃಖವನ್ನು ಅನುಭವಿಸುತ್ತಾರೆ. ಅಲ್ಲಿ ಅವರು ತಮ್ಮ ಪಾಪಗಳನ್ನೂ ಅನುಭವಿಸುತ್ತಾರೆ. ಹೀಗಿರುವಲ್ಲಿ ನೀನೇಕೆ ದುಃಖಪಡುತ್ತೀಯೆ ?

೩೭. ಯಾರು ದಾನ ಹೋಮಗಳನ್ನು ಮಾಡಲಿಲ್ಲವೋ, ಪುಣ್ಯತೀರ್ಥಗಳಲ್ಲಿ ಮೀಯಲಿಲ್ಲವೋ, ಉಪಕಾರವನ್ನಾರಿಗೂ ಮಾಡಲಿಲ್ಲವೋ, ಯಾವರೀತಿಯಿಂದಲೂ, ಸುಕೃತವನ್ನೂ ಮಾಡಲಿಲ್ಲವೋ, ಅವರೇ, ಇವರು.

೩೮. ಯಾರು ಯಾಗ ಮಾಡಲಿಲ್ಲವೋ, ಜಪಮಾಡಲಿಲ್ಲವೋ, ತಪಸ್ಸನ್ನೂ ಮಾಡಲಿಲ್ಲವೋ, ಅವರು ಈ ಘೋರವಾದ ನರಕದಲ್ಲಿ ತೊಂದರೆಪಡಿಸಲ್ಪಡುತ್ತಾರೆ.

೩೯. ದುಶ್ಶೀಲರೂ, ದುರಾಚಾರಿಗಳೂ, ವ್ಯವಹಾರದಲ್ಲಿ ದೂಷಿತರಾದವರೂ, ಪರರಿಗೆ ಅಪಕಾರಮಾಡಿದವರೂ, ಈ ಪಾಪಿಗಳು.

೪೦. ಎಲೈ ಪುಣ್ಯಾತ್ಮನಾದ ರಾಜನೇ ಬಾ. ವಿಷ್ಣು ಲೋಕಕ್ಕೆ ಹೋಗೋಣ. ಪುಣ್ಯವಂತನಾದ ನೀನು ಇನ್ನು ಮೇಲೆ ಇರತಕ್ಕುದಲ್ಲ

ವಿದಾರಿಣೋ ಹಿ ಮರ್ನೋಕ್ತ್ಯಾ ಪಾಪಾಃ ಪರಹೃದಾಂ ಹಿ ಯೇ ।
ನಿರಯೇಷ್ವಪಿ ಪಚ್ಯಂತೇ ಯೇ ಪರಸ್ತ್ರೀವಿಹಾರಿಣಃ ॥ ೪೧ ॥

॥ ರಾಜೋವಾಚ ॥

ಯದ್ಯಹಂ ಸುಕೃತೀ ದೂತಾಃ ಕಸ್ಮಾದಸ್ಮಿನ್ಮಹಾಭಯೇ ।
ಯಾತನಾಮಾರ್ಗ ಆನೀತಃ ಕಿಂ ಮಯಾಸುಕೃತಂ ಕೃತಂ ॥ ೪೨ ॥

ಮಯಾ ನ ಸುಕೃತಂ ತಾದೃಕ್ಕೃತಂ ವೈ ಕಾಮಶಾಲಿನಾ ।
ಕಥಂ ಹರಿಪುರಂ ಗಂತಾ ಸಂಶಯಂ ಛೇತ್ತುಮರ್ಹಥ ॥ ೪೩ ॥

॥ ದೂತಾ ಊಚುಃ ॥

ಸುಕೃತಂ ನ ಕೃತಂ ಸತ್ಯಂ ತ್ವಯಾ ಕಾಮವಶಾತ್ಮನಾ ।
ನೇಷ್ಟಂ ಯಜ್ಞೈರ್ನ ವಾ ಯಜ್ಞಾವಶಿಷ್ಟಂ ಭವತಾಶಿತಂ ॥ ೪೪ ॥

ಕಿಂ ತು ಮಾಧವೇಮಾಸೇ ಯದ್ವಿಧಿನಾ ವತ್ಸರತ್ರಯಂ ।
ಪ್ರಾತಃ ಸ್ನಾತಂ ಗುರುವಚಃಪ್ರೇರಿತೇನ ತ್ವಯಾ ಪುರಾ ॥ ೪೫ ॥

---

೪೧. ಮನಸ್ಸನ್ನು ನೋಯಿಸುವ ಮಾತಿನಿಂದ ಪರರ ಮನಸ್ಸನ್ನು ಯಾರು ನೋಯಿಸುತ್ತಾರೋ, ಯಾರು ಪರಸ್ತ್ರೀಲಂಪಟರೋ ಅವರು ನರಕದಲ್ಲಿ ಬಿದ್ದು ಕಷ್ಟ ಪಡುತ್ತಾರೆ.

೪೨. ರಾಜನು ಹೇಳಿದನು- ಎಲೈ ದೂತರೇ ನಾನು ಪುಣ್ಯವಂತನಾಗಿದ್ದರೆ ಈ ಮಹಾಭಯಂಕರವಾದ ಯಾತನಾ ಮಾರ್ಗಕ್ಕೇಕೆ ಕರೆತರಲ್ಪಟ್ಟೆನು ? ನಾನು ಏನು ಪಾಪವನ್ನು ಮಾಡಿದ್ದೆನು.

೪೩. ನಾನು ಕಾಮಿಯಾಗಿದ್ದು ಅಂತಹ ಸುಕೃತವನ್ನು ಮಾಡದಿದ್ದರೆ ವೈಕುಂಠವನ್ನು ಹೇಗೆ ಹೊಂದುತ್ತಿದ್ದೆನು ? ಈ ಸಂಶಯವನ್ನು ನಾಶಮಾಡಿರಿ.

೪೪. ದೂತರು ಹೇಳಿದರು- ಕಾಮಕ್ಕಧೀನನಾದ ನೀನು ಪುಣ್ಯವನ್ನೇನೋ ಮಾಡಲಿಲ್ಲ. ನಿಜ. ಯಜ್ಞಗಳನ್ನೂ ಮಾಡಲಿಲ್ಲ. ಯಜ್ಞದಲ್ಲಿ ಶೇಷಪ್ರಸಾದವನ್ನೂ ತಿನ್ನಲಿಲ್ಲ.

೪೫. ಆದರೆ ಗುರುವಿನ ಮಾತಿನಿಂದ ಪ್ರೇರಿತನಾಗಿ ನೀನು ವೈಶಾಖಮಾಸದಲ್ಲಿ ವಿಧಿವತ್ತಾಗಿ ಮೂರುವರ್ಷಗಳು ಪ್ರಾತಸ್ಸ್ನಾನಮಾಡಿದ್ದೀಯೆ.

ಭಕ್ತ್ಯಾ ಸಂಪೂಜಿತೋ ವಿಷ್ಣುಃ ವಿಶ್ವೇಶೋ ಮಧುಸೂಧನಃ ।
ಮಹಾಪಾಪಾತಿಪಾಪೌಘನಿಹನ್ತಾ ಭಕ್ತವತ್ಸಲಃ ॥ ೪೬ ॥

ಸರ್ವೈಕಸಾರೇಣ ಪುನಸ್ತೇನೈಕೇನ ನರೇಶ್ವರ ।
ನೀಯಸೇ ವಿಷ್ಣುಭವನಂ ಪೂಜ್ಯಮಾನೋ ಮರುದ್ಗಣೈಃ ॥ ೪೭ ॥

ಯಥೈವ ವಿಸ್ಫುಲಿಂಗೇನ ಜ್ವಾಲ್ಯತೇ ತೃಣಸಂಚಯಃ ।
ಪ್ರಾತಸ್ಸ್ನಾನೇನ ವೈಶಾಖೇ ತಥಾಘೌಘೋ ನರೇಶ್ವರ ॥ ೪೮ ॥

ತಾವದ್ವಪುಷಿ ಪಾಪಾನಿ ಪ್ರಭವಂತಿ ನರೇಶ್ವರ ।
ಯಾವನ್ನ ಮಾಧವೇ ಮಾಸೇ ತೀರ್ಥೇ ಮಜ್ಜತಿ ಚೋಷಸಿ ॥ ೪೯ ॥

ವೈಶಾಖೇ ಮಾಸಿ ಯೋ ಯುಕ್ತೋ ಯಥೋಕ್ತನಿಯಮೈರ್ನರಃ ।
ಹರಿಭಕ್ತೋತಿಪಾಪೌಘೈರ್ಮುಕ್ತೋಽಚ್ಯುತಪದಂ ವ್ರಜೇತ್ ॥ ೫೦ ॥

---

೪೬. ಮಹಾಪಾಪಗಳ ಗುಂಪನ್ನು ನಾಶಮಾಡುವ ಭಕ್ತವತ್ಸಲನಾದ, ವಿಶ್ವೇಶನಾದ ವಿಷ್ಣುವನ್ನು ಭಕ್ತಿಯಿಂದ ಪೂಜಿಸಿದ್ದೀಯೆ.

೪೭. ಸರ್ವಸಾರಭೂತವಾದ ಆ ವೈಶಾಖಸ್ನಾನ ಒಂದರಿಂದಲೇ ದೇವತೆಗಳಿಂದ ಹೊಗಳಲ್ಪಡುತ್ತಾ ವೈಕುಂಠಕ್ಕೆ ಹೋಗುತ್ತಿದ್ದೀಯೆ.

೪೮. ಯಾವರೀತಿಯಾಗಿ ಬೆಂಕಿಯ ಕಿಡಿಯಿಂದ ಹುಲ್ಲಿನ ಮೆದೆಯು ಸುಡಲ್ಪಡುತ್ತದೆಯೋ ಹಾಗೆ ಪ್ರಾತಸ್ಸ್ನಾನದ ವಿಧಿಯಿಂದ ಪಾಪಗಳ ಗುಂಪು ನಾಶವಾಗುತ್ತದೆ.

೪೯. ಎಷ್ಟರವರೆಗೆ ವೈಶಾಖದಲ್ಲಿ ಪ್ರಾತಸ್ಸ್ನಾನವನ್ನು ಮಾಡುವುದಿಲ್ಲವೋ ಅದುವರೆಗೆ ದೇಹದಲ್ಲಿ ಪಾಪಗಳು ಪ್ರಕಾಶಿಸುತ್ತವೆ.

೫೦. ಮನುಷ್ಯನು ವೈಶಾಖಮಾಸದಲ್ಲಿ ನಿಯಮದಿಂದ ಪ್ರಾತಸ್ಸ್ನಾನ ಮಾಡುತ್ತಾ ಹರಿಯನ್ನು ಪೂಜಿಸುತ್ತಾ ಹರಿಭಕ್ತನಾಗಿದ್ದರೆ ಪಾಪಗಳನ್ನು ಕಳೆದುಕೊಂಡು ಹರಿಪದವನ್ನೂ ಹೊಂದುತ್ತಾನೆ.

ಆಜನ್ಮನೋ ನ ಸುಕೃತಂ ಯತ್ತ್ವಯಾನ್ಯತ್ಪುರಾಕೃತಂ ।
ತೇನ ತ್ವಂ ನಿರಯಸ್ಥಾನಮಾರ್ಗಂ ನೀತೋ ನರೇಶ್ವರ ॥ ೫೧ ॥

ಅಥ ಭೂಮಿಪತೇ ತೂರ್ಣಮಸ್ಮಾಭಿಶ್ಚ ಮರುದ್ಗಣೈಃ ।
ಸ್ತೂಯಮಾನೋ ವಿಮಾನೇನ ಗಚ್ಛ ಗೋವಿಂದಮಂದಿರಂ ॥ ೫೨ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖ ಮಾಹಾತ್ಮ್ಯೇ ಸಪ್ತನವತಿತಮೋಽಧ್ಯಾಯಃ**

---

೫೧. ಎಲೈ ರಾಜನೇ ಹುಟ್ಟಿದ ಮೊದಲು ಬೇರೆ ವಿಧವಾದ ಸುಕೃತವನ್ನು ನೀನು ಮಾಡಲೇ ಇಲ್ಲ. ಆದ್ದರಿಂದ ಈ ನರಕಮಾರ್ಗದಲ್ಲಿ ನಿನ್ನನ್ನು ಕರೆತಂದೆವು.

೫೨. ಎಲೈ ರಾಜನೇ ಆದ್ದರಿಂದ ನೀನು ನಮ್ಮಿಂದಲೂ, ದೇವತೆಗಳಿಂದಲೂ, ಹೊಗಳಲ್ಪಡುತ್ತಾ ವಿಮಾನದಿಂದ ಹರಿಯಮಂದಿರವನ್ನು ಹೊಂದತಕ್ಕವನಾಗು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯೆಯೆಂಬ ತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಅಷ್ಟನವತಿತಮೋಽಧ್ಯಾಯಃ ॥



ತತಸ್ತು ಕರುಣಾವಧಿಸ್ತೇಷಾಂ ಶೋಕೇನ ಪೀಡಿತಃ ।
ಭೂಪತಿಶ್ರೀಹರೇರ್ದೂತಾನ್ವಿನಯೇನಾಹ ಬಾಡವ ॥ ೧ ॥

ಐಶ್ವರ್ಯಸ್ಯಾಽಭಿಜಾತಸ್ಯ ಗುಣಾನಾಂ ಸುಕೃತಸ್ಯ ಚ ।
ಸಂತಃ ಫಲಂ ಹಿ ಮನ್ಯಂತೇ ಹ್ಯಾರ್ತಾನಾಂ ಪರಿರಕ್ಷಣಂ ॥ ೨ ॥

ಯದ್ಯಸ್ತಿ ಸುಕೃತಂ ಕಿಂಚಿನ್ಮಮ ತೇನೈವ ಜಂತವಃ ।
ಸ್ವರ್ಗಂ ಗಚ್ಛಂತು ಮುಕ್ತಾಗಾಃ ಸ್ಥಾನೇ ಚೇಷಾಂ ವಸಾಮ್ಯಹಂ ॥ ೩ ॥

ಏವಂ ಭೂಪವಚಶ್ಶ್ರುತ್ವಾ ದೂತಾ ವಿಷ್ಣೋರ್ಮನೋಹರಾಃ ।
ಔದಾರ್ಯಂ ಸತ್ಯಮೇತಸ್ಯ ಧ್ಯಾಯನ್ತೋ ಜಗದುರ್ನೃಪಂ ॥ ೪ ॥

---

### ತೊಂಭತ್ತೆಂಟನೆಯ ಅಧ್ಯಾಯವು

೧. ಆಮೇಲೆ ಆ ಕರುಣಾಶಾಲಿಯಾದ ರಾಜನು ಆ ನಾರಕೀಯರ ಶೋಕದಿಂದ ವ್ಯಥೆಗೊಂಡು ಆ ಹರಿಯ ದೂತರನ್ನು ಕುರಿತು ವಿನಯದಿಂದ ಇಂತೆಂದನು.

೨. ಐಶ್ವರ್ಯಕ್ಕೂ, ಒಳ್ಳೆಯ ಕುಲದಲ್ಲಿ ಹುಟ್ಟಿದುದಕ್ಕೂ ಒಳ್ಳೆಯ ಗುಣಗಳಿಗೂ, ಪುಣ್ಯಕ್ಕೂ ದುಃಖಿತರ ರಕ್ಷಣವೇ ಫಲವೆಂದು ಸತ್ಪುರುಷರು ತಿಳಿಯುತ್ತಾರೆ

೩. ನನಗೇನಾದರೂ ಸುಕೃತವಿದ್ದರೆ ಅದರಿಂದ ಈ ಜಂತುಗಳು ಪಾಪದಿಂದ ಮುಕ್ತರಾಗಿ ಸ್ವರ್ಗವನ್ನು ಹೊಂದಲಿ ಅವರ ಜಾಗದಲ್ಲಿ ನಾನು ವಾಸಮಾಡುತ್ತೇನೆ

೪. ಹೀಗೆ ಹೇಳಿದ ರಾಜನ ಮಾತನ್ನು ಕೇಳಿ ಆ ದೂತರು ಇವನ ಉದಾರತೆಯು ಸರಿಯಾದುದೆಂದು ಯೋಚಿಸುತ್ತಾ ಅವನಿಗೆ ಇಂತೆಂದರು.

॥ ದೂತಾ ಊಚುಃ ॥

ಅನೇನ ತವ ಕಾರುಣ್ಯಧರ್ಮೇಣವಚಸಾ ನೃಪ ।
ಬಭೂವ ವೃದ್ಧಿರ್ಧರ್ಮಸ್ಯ ಸಂಚಿತಸ್ಯ ವಿಶೇಷತಃ ॥ ೫ ॥

ಸ್ನಾನಂ ದಾನಂ ಜಪೋ ಹೋಮಸ್ತಪೋ ದೇವಾರ್ಚನಾದಿಕಂ ।
ಕೃತಂ ಯನ್ಮಾಧವೇ ಮಾಸಿ ತದನಂತಫಲಂ ಹ್ಯಭೂತ್ ॥ ೬ ॥

ಸ್ವರ್ಗೇ ಯಜ್ವಾ ಚ ದಾತಾ ಚ ಕ್ರೀಡತೇ ತ್ರಿದಶೈಸ್ಸಹ ।
ವಾಪೀಷು ಹೇಮಪದ್ಮಾಸು ಕಲ್ಪವೃಕ್ಷಯುತಾಸು ಚ ॥ ೭ ॥

ಗೀಯಮಾನೋ ಮುದಂ ಯಾತಿ ಗೀರ್ವಾಣರಮಣೀಗಣೈಃ ।
ಜಲಾನ್ನದಾನತೋ ಲೋಕಂ ಲಭತೇ ವಾರುಣಂ ಶುಭಂ ॥ ೮ ॥

ಕುಲಾನಿ ಹೇಲಯಾ ಸಪ್ತ ಸಂತಾರಯತಿ ಗೋಪ್ರದಃ ।
ಹಯಂ ದತ್ವಾ ರವೇರ್ಲೋಕೇ ಯಾತಿ ವಿದ್ಯಾಪ್ರದೋ ನರಃ ॥ ೯ ॥

ಬ್ರಹ್ಮಲೋಕಂ ತಥಾ ಹೇಮದಾನಾದ್ಯಾತಿ ಸುರಾಲಯಂ ।
ಯಾತಿ ದೇಹೀ ದಯಾ ಕನ್ಯಾದಾನಾದ್ಯೈರ್ದೇವಲೋಕತಾಂ ॥ ೧೦ ॥

---

೫. ದೂತರು ಹೇಳಿದರು- ಎಲೈ ದೊರೆಯೇ ನಿನ್ನ ದಯೆಯ ಧರ್ಮಗಳಿಂದ ನೀನು ಶೇಖರಿಸುವ ಧರ್ಮವು ವೃದ್ಧಿಗೊಂಡಿತು.

೬. ವೈಶಾಖಮಾಸದಲ್ಲಿ ಸ್ನಾನ, ದಾನ, ಜಪ, ತಪಸ್ಸು ಹೋಮ ದೇವತಾರ್ಚನೆಗಳನ್ನು ಮಾಡಿದರೆ ಅನಂತವಾದ ಫಲಗಳನ್ನು ಕೊಡುತ್ತವೆ.

೭-೮. ಯಾಗಮಾಡಿದವನೂ, ದಾನಮಾಡಿದವನೂ, ಸ್ವರ್ಗದಲ್ಲಿ ಕ್ರೀಡಿಸುತ್ತ, ಬಾವಿ, ಕೊಳ, ಕಲ್ಪವೃಕ್ಷಗಳ ನೆಳಲು ಇವುಗಳಲ್ಲಿ ದೇವತಾಸ್ತ್ರೀಯರಿಂದ ಹೊಗಳಲ್ಪಡುತ್ತ ಸುಖಿಸುತ್ತಾನೆ. ನೀರು ಅನ್ನಗಳನ್ನು ದಾನಮಾಡಿದರೆ ಶುಭವಾದ ವರುಣಲೋಕವು ಸಿಕ್ಕುತ್ತದೆ.

೯-೧೦. ಗೋದಾನ ಮಾಡಿದವನು ತನ್ನ ಏಳು ಕುಲಗಳನ್ನು ಉದ್ಧರಿಸುತ್ತಾನೆ. ಕುದುರೆಯನ್ನು ದಾನಮಾಡಿದರೆ ಸೂರ್ಯಲೋಕದಲ್ಲಿ ಸುಖಿಸುತ್ತಾನೆ. ವಿದ್ಯಾದಾನಮಾಡಿದವನು. ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ. ಚಿನ್ನವನ್ನು ದಾನಮಾಡಿದರೆ ದೇವಲೋಕವನ್ನು ಹೊಂದುತ್ತಾನೆ. ದಯೆ ತೋರಿಸುವವನೂ ಕನ್ಯಾದಾನ ಮಾಡಿದವನೂ ದೇವಲೋಕವನ್ನು ಹೊಂದುತ್ತಾರೆ.

ಮಾಧವೇ ಮಾಸಿ ಯಸ್ಸ್ನಾತ್ವಾ ದತ್ವಾ ಸಂಪೂಜ್ಯ ಮಾಧವಂ ।
ಅವಾಪ್ಯ ಸಕಲಾನ್ಕಾಮಾನ್ಸ್ವಯಾತಿ ಹರಿಮಂದಿರಂ ॥ ೧೧ ॥

ಏಕತೋಽಪಿ ತಪೋದಾನಕ್ರತುಸುತ್ಯಾದಿಕಾಃ ಕ್ರಿಯಾಃ ।
ಏಕತೋ ವಿಧಿವನ್ಮಾಸೋ ಮಾಧವಶ್ಚರಿತೋ ಮಹಾನ್ ॥ ೧೨ ॥

ತಸ್ಯ ಮಾಧವಮಾಸಸ್ಯ ದಿನ್ಯೈಕಸ್ಯಾಪಿ ಭೂಪತೇ ।
ಕೃತಂ ಯತ್ಸುಕೃತಂ ತತ್ತೇ ಸರ್ವದಾನಾಧಿಕಂ ಪರಂ ॥ ೧೩ ॥

ಕಾರುಣ್ಯೇನ ದಿನ್ಯೈಕಸ್ಯ ಪುಣ್ಯಂ ದೇಹಿ ಧರಾಪತೇ ।
ನಿರಯೇ ಪಚ್ಯಮಾನೇಭ್ಯೋ ದುಃಖಿತೇಭ್ಯೋ ದಯಾನಿಧೇ ॥ ೧೪ ॥

ನ ದಯಾಸದೃಶೋ ಧರ್ಮೋ ನ ದಯಾ ಸದೃಶಂ ತಪಃ ।
ನ ದಯಾಸದೃಶಂ ದಾನಂ ನ ದಯಾಸದೃಶಸ್ಸಖಾ ॥ ೧೫ ॥

ಪುಣ್ಯದಃ ಪುಣ್ಯಮಾಪ್ನೋತಿ ನರೋ ಲಕ್ಷಗುಣಂ ಸದಾ ।
ಕಾರುಣ್ಯೇನ ವಿಶೇಷಾತ್ತೇ ಧರ್ಮವೃದ್ಧಿಸ್ತತೋಽಭವತ್ ॥ ೧೬ ॥

---

೧೧. ವೈಶಾಖಮಾಸದಲ್ಲಿ ಪ್ರಾತಸ್ಸ್ನಾನಮಾಡಿ ದಾನಮಾಡಿ ವಿಷ್ಣುವನ್ನು ಪೂಜಿಸಿದರೆ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದಿ ವೈಕುಂಠವನ್ನು ಹೊಂದುತ್ತಾನೆ.

೧೨-೧೩. ತಪಸ್ಸು, ದಾನ, ಯಾಗ, ಹೋಮಗಳು ಒಂದುಕಡೆ ವಿಧಿವತ್ತಾಗಿ ಆಚರಿಸಲ್ಪಟ್ಟ ವೈಶಾಖಮಾಸವು ಮತ್ತೊಂದು ಕಡೆ ಇದ್ದರೆ ಎರಡೂ ಸಮಾನವು. ಆ ವೈಶಾಖಮಾಸದಲ್ಲಿ ವಿಧಿವತ್ತಾಗಿ ನಿಯಮದಿಂದ ಮಾಡಿದ ಒಂದು ದಿನದ ಫಲವು ಸರ್ವದಾನಗಳಿಗಿಂತಲೂ ಹೆಚ್ಚಾದುದು.

೧೪. ನೀನು ಒಂದು ದಿನದ ಪುಣ್ಯವನ್ನು ದಯವಿಟ್ಟು ಈ ನರಕದಲ್ಲಿ ದುಃಖ ಪಡುವವರಿಗೆ ಕೊಡು.

೧೫. ದಯೆಗೆ ಸಮವಾದ ಧರ್ಮವಿಲ್ಲ. ದಯೆಗೆ ಸಮವಾದ ತಪಸ್ಸಿಲ್ಲ. ದಯೆಗೆ ಸಮವಾದ ದಾನವಿಲ್ಲ. ದಯೆಗೆ ಸಮನಾದ ಸ್ನೇಹಿತನೂ ಇಲ್ಲ.

೧೬. ಪುಣ್ಯದಾನ ಮಾಡಿದವನು ಲಕ್ಷದಷ್ಟು ಹೆಚ್ಚಿನ ಪುಣ್ಯವನ್ನು ಹೊಂದುತ್ತಾನೆ. ನೀನು ಧರ್ಮವನ್ನು ದಾನಮಾಡಿದುದರಿಂದಲೂ, ನಿನಗೆ ವಿಶೇಷ ದಯೆಯಿರುವುದರಿಂದಲೂ ನಿನ್ನ ಧರ್ಮವೃದ್ಧಿಯು ಆಯಿತು.

ದುಃಖಿತಾನಾಂ ಹಿ ಭೂತಾನಾಂ ದುಃಖೋದ್ಧರ್ತಾ ಹಿ ಯೋ ನರಃ ।
ಸ ಏವ ಸುಕೃತೀ ಲೋಕೇ ಜ್ಞೇಯೋ ನಾರಾಯಣಾಂಶಜಃ ॥ ೧೭ ॥

ಮಾಧವೇ ಮಾಸಿ ಪೂರ್ಣಾಯಾಂ ಸ್ನಾನದಾನಾದಿಕಂ ತ್ವಯಾ ।
ಯತ್ತೀರ್ಥೇ ವಿಹಿತಂ ವೀರ ಸರ್ವಾಘವಿನಿಷೂದನಂ ॥ ೧೮ ॥

ತದೇಭ್ಯೋ ದೇಹಿ ವಿಧಿವತ್ಕೃತ್ವಾ ಸಾಕ್ಷ್ಯೇ ಹರಿಂ ಪ್ರಭುಂ ।
ತ್ರಿವಾಚಕಂ ಚ ನಿರಯಾದ್ಯೇನಾಮೀ ಸ್ವರ್ಗಮಾಪ್ನುಯುಃ ॥ ೧೯ ॥

ಕಪೋತಾರ್ಥಂ ಸ್ವಮಾಂಸಾನಿ ಕಾರುಣ್ಯೇನ ಪುರಾ ಶಿಬಿಃ ।
ದತ್ವಾ ದಯಾನಿಧಿಃ ಸ್ವರ್ಗೇ ಸಜಾತಃ ಕೀರ್ತಿವಾರಿಧಿಃ ॥ ೨೦ ॥

ದಧೀಚಿರಪಿ ರಾಜರ್ಷಿರ್ದತ್ವಾಽಸ್ಥಿಚಯಮಾತ್ಮನಃ ।
ತ್ರೈಲೋಕ್ಯಕೌಮುದೀಂ ಕೀರ್ತಿಂ ಲಬ್ಧವಾನ್ಸ್ವರ್ಗಮಕ್ಷಯಂ ॥ ೨೧ ॥

ಸಹಸ್ರಜಿಚ್ಚ ರಾಜರ್ಷಿಃ ಪ್ರಾಣಾನಿಷ್ಟಾನ್ಮಹಾಯಶಾಃ ।
ಬ್ರಾಹ್ಮಣಾರ್ಥೇ ಪರಿತ್ಯಜ್ಯ ಗತೋ ಲೋಕಾನನುತ್ತಮಾ ॥ ೨೨ ॥

---

೧೭. ದುಃಖಗೊಂಡವರ ದುಃಖವನ್ನು ಯಾವನು ನಾಶಮಾಡುತ್ತಾನೆಯೋ ಅವನೇ ಲೋಕದಲ್ಲಿ ಪುಣ್ಯವಂತನು. ಅವನೇ ನಾರಾಯಣಾಂಶದಿಂದ ಹುಟ್ಟಿದವನು.

೧೮-೧೯. ವೈಶಾಖಮಾಸದ ಹುಣ್ಣಿಮೆಯ ದಿನ ಸರ್ವಪಾಪನಿವಾರಕವಾದ ಪ್ರಾತಸ್ಸ್ನಾನಾದಿಗಳನ್ನು ಯಾವತೀರ್ಥದಲ್ಲಿ ಮಾಡಿದೆಯೋ ಅದನ್ನು ಸರ್ವಾತ್ಮಕನಾದ ಹರಿಯನ್ನು ಸಾಕ್ಷಿಯಾಗಿಟ್ಟುಕೊಂಡು ಕೊಟ್ಟಿದ್ದೇನೆಂದು ಮೂರು ಬಾರಿ ಉಚ್ಚರಿಸಿ ಕೊಂಡು ಕೊಡು. ಆಗ ಇವರು ನರಕದಿಂದ ಪಾರಾಗಿ ಸ್ವರ್ಗವನ್ನು ಹೊಂದುತ್ತಾರೆ.

೨೦. ಪಾರಿವಾಳಕ್ಕೋಸ್ಕರ ತನ್ನ ಮಾಂಸಗಳನ್ನು ಕೃಪೆಯಿಂದ ಕೊಟ್ಟ ಶಿಬಿಯು ಕೀರ್ತಿಯನ್ನು ಹೊಂದಿ ಸ್ವರ್ಗವನ್ನು ಹೊಂದಿದನು.

೨೧. ರಾಜರ್ಷಿಯಾದ ದಧೀಚಿಯೂ ಕೂಡ ತನ್ನ ಮೂಳೆಯನ್ನು ದಾನ ಮಾಡಿ ಮೂರು ಲೋಕಗಳನ್ನೂ ಬೆಳಗುವ ಕೀರ್ತಿಯನ್ನು ಹೊಂದಿ ನಾಶರಹಿತವಾದ ಸ್ವರ್ಗವನ್ನು ಹೊಂದಿದನು.

೨೨. ಸಹಸ್ರಜಿತ್ತೆಂಬ ರಾಜರ್ಷಿಯು ಬ್ರಾಹ್ಮಣನಿಗೋಸ್ಕರ ಅಮೂಲ್ಯವಾದ ಪ್ರಾಣಗಳನ್ನು ಕೊಟ್ಟು ಉತ್ತಮವಾದ ಲೋಕವನ್ನು ಹೊಂದಿದನು.

ನ ಸ್ವರ್ಗೇ ನಾಪವರ್ಗೇಽಪಿ ತತ್ಸುಖಂ ಲಭತೇ ನರಃ ।
ಯದಾರ್ತಜನ್ತುನಿರ್ವಾಣಾದಾಸೋತ್ಥಮಿತಿ ಮೇ ಮತಿಃ ॥ ೨೩ ॥

ಸರ್ವೇಷು ದಾನಜಾತೇಷು ಪುರಾಜಾತೇಷು ಭೂಪತೇ ।
ಕರ್ಮಣಾ ತೇನ ಸಂಖ್ಯಾಸು ಧುರಿ ಧೈರ್ಯಂ ನಿಯೋಜ್ಯ ಚ ॥ ೨೪ ॥

ದೃಷ್ಟ್ವಾ ತವ ಧಿಯಂ ಸೌಮ್ಯ ದಯಾದಾನಸುನಿಶ್ಚಲಾಂ ।
ಅಸ್ಮಾಭಿರಪಿತೂತ್ಸಾಹಃ ಕ್ರಿಯತೇ ವೇದವಾದಿಭಿಃ ॥ ೨೫ ॥

ಯದಿ ತೇ ರೋಚತೇ ರಾಜನ್ನವಿಲಂಬಿತಯಾ ತತಃ ।
ತದೇಭ್ಯೋ ದೇಹಿ ತತ್ಪುಣ್ಯಂ ಯಾತನಾದುಃಖದಾಹಕಂ ॥ ೨೬ ॥

ಇತ್ಯುಕ್ತಸ್ಸ ತದಾ ದೇವಂ ಕೃತ್ವಾ ಸಾಕ್ಷ್ಯೇ ಗದಾಧರಂ ।
ತೇಭ್ಯಸ್ತ್ರಿವಾಚಿಕಂ ಪುಣ್ಯಂ ದಯಾವಾನ್ವಿಧಿನಾ ದದೌ ॥ ೨೭ ॥

ದತ್ತೇ ಮಾಧವಮಾಸಸ್ಯ ತಸ್ಮಿನ್ನೇಕದಿನೋದ್ಭವೇ ।
ಸುಕೃತೇ ಜಂತವೋ ಯಾಮ್ಯೇ ಯಾತನಾದುಃಖವರ್ಜಿತಾಃ ॥ ೨೮ ॥

---

೨೩. ದುಃಖಪಡುತ್ತಿರುವ ಜಂತುಗಳಿಗೆ ದಾನಮಾಡಿದ ಸುಖವು ಸ್ವರ್ಗದಲ್ಲಾಗಲೀ ಮೋಕ್ಷದಲ್ಲಾಗಲೀ ಸಿಕ್ಕುವುದಿಲ್ಲವೆಂದು ನನ್ನ ಮತ.

೨೪-೨೫. ಎಲ್ಲಾ ದಾನಗಳನ್ನೂ ಪೂರ್ವದಲ್ಲಿ ದೇವರು ಸೃಷ್ಟಿಮಾಡಿದನು. ಅವನ್ನು ಲೆಕ್ಕಮಾಡುವುದಕ್ಕೋಸ್ಕರ ಮುಂದೆ ಧೈರ್ಯವನ್ನು ನೇಮಿಸಿದನು. ದಯಾದಾನದಲ್ಲಿ ನಿಶ್ಚಲವಾದ ನಿನ್ನ ಬುದ್ಧಿಯನ್ನು ನೋಡಿ ವೇದವಾದಿಗಳಾದ ನಮಗೂ ಉತ್ಸಾಹ ಹೆಚ್ಚಿದೆ.

೨೬. ನಿನಗಿಷ್ಟವಿರುವ ಪಕ್ಷದಲ್ಲಿ ಎಲೈ ದೊರೆಯೇ! ಸಾವಕಾಶಮಾಡದೇ ಆ ಪುಣ್ಯವನ್ನು ನರಕದುಃಖನಾಶಕ್ಕೋಸ್ಕರ ಆ ನರಕದವರಿಗೆ ಕೊಡು.

೨೭. ಹೀಗೆನ್ನಲು ಆ ದಯಾವಂತನಾದ ರಾಜನು ಗದಾಧರನನ್ನು ಸಾಕ್ಷಿಯಾಗಿಟ್ಟುಕೊಂಡು ಮೂರು ಬಾರಿ ಹೇಳಿ ಅವರಿಗೆ ಆ ಪುಣ್ಯವನ್ನು ವಿಧಿವತ್ತಾಗಿ ದಾನಮಾಡಿದನು.

೨೮. ಹೀಗೆ ದಯಾವಂತನಾದ ಆ ರಾಜನು ಗಧಾದರನನ್ನು ಸಾಕ್ಷಿಯಾಗಿಟ್ಟುಕೊಂಡು ವೈಶಾಖಮಾಸದ ಒಂದು ದಿನದ ಪುಣ್ಯವನ್ನು ಕೊಡಲು ಅವರೆಲ್ಲರೂ ದುಃಖದಿಂದ ಪಾರಾದರು.

ವಿಮಾನವರಮಾರುಢಾಸ್ತೇ ಸರ್ವೇ ತ್ರಿದಿವಂ ಯಯುಃ ।
ಪ್ರಣಮಂತಸ್ತುವಂತಸ್ತಂ ಪಶ್ಯಂತಸ್ಸಂಪ್ರಹರ್ಷಿತಾಃ ॥ ೨೯ ॥

ನೃಪೇಣ ದತ್ತಂ ತದವಾಪ್ಯ ಪುಣ್ಯಂ
ವೈಶಾಖಮಾಸಸ್ಯ ದಿನಾಭಿಜಾತಂ ।
ಸರ್ವೇ ಯಯುಸ್ತೇ ನರಕಾದ್ವಿಮುಕ್ತಾ
ದಿವಂ ವಿಮಾನಾಧಿಗತಾ ವಿಚಿತ್ರಂ ॥ ೩೦ ॥

ಸಂಸ್ತೂಯಮಾನೋ ಮುನಿದೇವಸಂಘೈ
ರ್ಯತ್ತದ್ವಿಶೇಷೇಣ ಚ ಲಬ್ಧಪುಣ್ಯಃ ।
ಪರಂಪದಂ ಯೋಗಿವರ್ಯೈರಲಬ್ಧಂ
ಯಯೌ ಜಗನ್ನಾಥ ಗಣಾಭಿವಂದ್ಯಃ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖಮಾಹಾತ್ಮ್ಯೇ
ಅಷ್ಟನವತಿನೋಽಧ್ಯಾಯಃ

---

೨೯. ಅವರೆಲ್ಲರೂ ನರಕದಿಂದ ಪಾರಾಗಿ ವಿಮಾನವನ್ನು ಹತ್ತಿ ಆ ರಾಜನನ್ನು ನಮಸ್ಕರಿಸುತ್ತಾ, ನೋಡುತ್ತಾ, ಸ್ತೋತ್ರಮಾಡುತ್ತಾ ಸಂತೋಷದಿಂದ ಸ್ವರ್ಗವನ್ನು ಹೊಂದಿದರು.

೩೦. ರಾಜನು ಕೊಟ್ಟ ಆ ಒಂದು ದಿನದ ಪುಣ್ಯವನ್ನು ಹೊಂದಿ ಅವರೆಲ್ಲರೂ ನರಕದಿಂದ ಪಾರಾಗಿ ವಿಮಾನವನ್ನು ಹತ್ತಿ ಸ್ವರ್ಗವನ್ನು ಹೊಂದಿದರೆಂಬುದುದು ಆಶ್ಚರ್ಯವು.

೩೧. ಆ ದಾನದಿಂದ ಇನ್ನೂ ಹೆಚ್ಚಾಗಿ ಪುಣ್ಯವನ್ನು ಹೊಂದಿದವನಾಗಿ ಋಷಿಗಳೂ, ದೇವತೆಗಳೂ ಇವರಿಂದ ಹೊಗಳಲ್ಪಡುತ್ತಾ ವಿಷ್ಣು ದೂತರಿಂದ ನಮಸ್ಕರಿಸಲ್ಪಡುತ್ತಾ ಯೋಗಿಗಳಿಂದಲೂ ಹೊಂದಲಸಾಧ್ಯವಾದ ಪದವಿಯನ್ನು ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಹಾತ್ಮ್ಯೆಯೆಂಬ
ತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ನವನವತಿತಮೋಽಧ್ಯಾಯಃ ॥



॥ ಯಮ ಉವಾಚ ॥

ಏತನ್ಮಾಧವಮಾಸಸ್ಯ ಸಮಾಸಾತ್ಕಿಂಚಿದೀರಿತಂ ।
ಮಹಾತ್ಮ್ಯಂ ಪೂರ್ಣಿಮಾಯಾಶ್ಚ ವಿಶೇಷಾದ್ದ್ವಿಜಸತ್ತಮ ॥ ೧ ॥

ವೈಶಾಖಮಾಸೇ ಮಧುಸೂದನಸ್ಯ
ಪ್ರಿಯಂ ಯ ಏತತ್ಪಠತೀತಿಹಾಸಂ ।
ಸ ಯಾತಿ ಕೃಷ್ಣಾಲಯಮಾಶು ಪೂತಃ
ಕಲ್ಪಾನನೇಕಾನಿಹ ಮೋದತೇ ಚ ॥ ೨ ॥

ಧನ್ಯಂ ಯಶಸ್ಯಮಾಯುಷ್ಯಮಿದಂ ಸ್ವಸ್ತ್ಯಯನಂ ಮಹತ್ ।
ಸ್ವರ್ಗ್ಯಂ ಶ್ರೀದಂ ಸೌಮನಸ್ಯಂ ಪ್ರಶಸ್ಯಮಘಾಮರ್ಷಣಂ ॥ ೩ ॥

---

## ತೊಂಭತ್ತೊಂಭತ್ತನೆಯ ಅಧ್ಯಾಯವು

೧. ಯಮನು ಹೇಳಿದನು- ಈ ವೈಶಾಖಮಾಸದ ಮಹಿಮೆಯನ್ನು ಸಂಗ್ರಹವಾಗಿ ಸ್ವಲ್ಪವನ್ನು ಹೇಳಿದನು. ಅದರಲ್ಲಿ ಪೂರ್ಣಿಮೆಯ ಮಹಿಮೆಯೂ ಅಗಾಧವಾದುದೆಂದು ಹೇಳಿದನು.

೨. ವೈಶಾಖಮಾಸದಲ್ಲಿ ವಿಷ್ಣುವಿಗೆ ಪ್ರಿಯಕರವಾದ ಈ ಇತಿಹಾಸವನ್ನು ಯಾವನು ಓದುತ್ತಾನೋ, ಅವನು ಪರಿಶುದ್ಧನಾಗಿ ವೈಕುಂಠವನ್ನು ಹೊಂದುತ್ತಾನೆ ಅಲ್ಲಿ ಅನೇಕ ಕಲ್ಪಗಳವರೆಗೂ ಸುಖಿಸುತ್ತಾನೆ.

೩. ಈ ಇತಿಹಾಸವೂ ಧನ್ಯವು, ಯಶಸ್ಕರವೂ ಆಯುಸ್ಸುಪ್ರದವೂ ಸ್ವಸ್ತಿವಾಚಕವೂ ಆಗಿದೆ. ಸ್ವರ್ಗವನ್ನು ಕೊಡುವುದಾಗಿಯೂ, ಲಕ್ಷ್ಮಿಯನ್ನು ಕೊಡುವುದಾಗಿಯೂ, ಒಳ್ಳೆಯ ಮನಸ್ಸನ್ನು ಕೊಡುವುದಾಗಿಯೂ, ಪ್ರಶಸ್ತವಾಗಿಯೂ, ಪಾಪನಾಶಕವಾಗಿಯೂ ಇದೆ.

ಇದಂ ಮಾಧವಮಾಸಸ್ಯ ಮಾಹಾತ್ಮ್ಯಂ ಮಾಧವಪ್ರಿಯಂ ।
ಚರಿತಂ ಭೂಪತೇಸ್ತಸ್ಯ ಸಂವಾದಂ ಚಾವಯೋರ್ನೃಪ ॥ ೪ ॥

ಶ್ರುತ್ವಾ ಪಠಿತ್ವಾ ವಿಧಿವದನುಮೋದ್ಯ ಮನಃ ಪ್ರಿಯಂ ।
ಲಭೇದ್ಭಕ್ತಿಂ ಭಗವತಿ ಯಯಾ ಸ್ಯಾತ್ಕ್ಲೇಶಸಂಕ್ಷಯಃ ॥ ೫ ॥

ಅಥ ಗಚ್ಛ ಮಹಾಭಾಗ ದೇವಲೋಕಾದಿತೋ ಭವಾನ್ ।
ನಿಪಾತ್ಯ ಭುವಿ ತೇ ದೇಹಂ ರುದನ್ತ್ಯದ್ಯಾಪಿ ಬಾಂಧವಾಃ ॥ ೬ ॥

ವಿಲಪ್ಯಮಾನೈರಪಿ ಬಂಧುಭಿಸ್ತೇ
ನಯಾವದಗ್ನೌ ತವ ಯಚ್ಛರೀರಂ ।
ಪ್ರಕ್ಷಿಪ್ಯತೇ ಹನ್ತ ಜವೇನ ತಾವ
ದ್ಯಾಹಿ ಸ್ವಯಂ ಸುಪ್ತ ಇವ ಪ್ರಬುದ್ಧಃ ॥ ೭ ॥

ಮಮ ಪ್ರಸಾದಾದಿಹ ಪುಣ್ಯಯೋಗಃ
ಶ್ರುತೋ ಯಥಾವತ್ತಮಿಮಂ ವಿಧೇಹಿ ।
ವಿಧಾನತೋ ವೈ ಸಮಮೋ ಸಮಂ ತೇ
ಸಮಾಗಮೋನ್ತೇ ಭವಿತಾ ಸುರೈಶ್ಚ ॥ ೮ ॥

---

೪. ಈ ವೈಶಾಖಮಾಸದ ಮಹಿಮೆಯೂ, ನಮ್ಮಿಬ್ಬರ ಸಂವಾದ ರೂಪವಾದ ಈ ರಾಜನ ಚರಿತ್ರೆಯೂ, ಮಾಧವನಿಗೆ ಪ್ರಿಯವಾದುದು.

೫. ಈ ಚರಿತ್ರೆಯನ್ನು ವಿಧಿಯಂತೆ ಕೇಳಿಯಾಗಲೀ, ಓದಿಯಾಗಲೀ, ಮಾಡಬೇಕು. ಹಾಗೆ ಮಾಡಿದರೆ ಕ್ಲೇಶನಾಶಕವಾದ ಭಗವದ್ಭಕ್ತಿಯುಂಟಾಗುತ್ತದೆ.

೬. ಎಲೈ ಬ್ರಾಹ್ಮಣನೇ ನೀನು ದೇವಲೋಕದಿಂದ ಭೂಲೋಕಕ್ಕೆ ಹೋಗು. ಭೂಮಿಯಲ್ಲಿ ನಿನ್ನ ಪೂರ್ವದೇಹವನ್ನು ಇಟ್ಟುಕೊಂಡು ನಿನ್ನ ಬಾಂಧವರು ಇನ್ನೂ ಅಳುತ್ತಿದ್ದಾರೆ.

೭. ನಿನ್ನ ಬಂಧುಗಳು ಅಳುತ್ತಾ ಬೆಂಕಿಯಲ್ಲಿ ನಿನ್ನ ಶರೀರವನ್ನು ಹಾಕುವುದಕ್ಕೆ ಮೊದಲೇ ಅದರಲ್ಲಿ ಸೇರಿಕೊಂಡು ಮಲಗಿದ್ದವನು ಎದ್ದಂತೆ ಏಳು.

೮. ನನ್ನ ಅನುಗ್ರಹದಿಂದ ಪುಣ್ಯದ ಸಂಬಂಧ ಸಿಕ್ಕಿತು. ನೀನು ಕೇಳಿರುವಂತೆಯೇ ಮಾಡು. ವಿಧಿವತ್ತಾಗಿ ಮಾಡುತ್ತಿದ್ದರೆ ಪ್ರಾಪ್ತಕಾಲದಲ್ಲಿ ದೇವಲೋಕಕ್ಕೆ ಹೋಗುತ್ತೀಯೆ.

॥ ಸೂತ ಉವಾಚ ॥

ಇತಿ ದೇವಚಶ್ಶ್ರುತ್ವಾ ನತ್ವಾ ಧರ್ಮಾಧಿಪಂ ತತಃ ।
ಪುನಃ ಪಪಾತ ಸ ಇಹ ಪರಿತುಷ್ಟಮನಾ ದ್ವಿಜಃ ॥ ೯ ॥

ಧರ್ಮರಾಜಪ್ರಸಾದೇನ ತತಸ್ತತ್ರ ಮಹೀತಳೇ ।
ಸಂಸುಪ್ತ ಇವ ಚೋತ್ತಸ್ಥೌ ಬಂಧುವರ್ಗಸಮನ್ವಿತಃ ॥ ೧೦ ॥

ವಿಧಿನೇನಂ ದ್ವಿಜೋ ಭೂಮೌ ವರ್ಷೇ ವರ್ಷೇ ಚ ಸಸ್ವಯಂ ।
ಚಕಾರ ಕಾರಯಾಮಾಸ ಮಾಧವಸ್ನಪನಂ ಪರಾನ್ ॥ ೧೧ ॥

ಯಮಬ್ರಾಹ್ಮಣಸಂವಾದೋ ಮಯಾಯಂ ಬೋಧಿತೋ ಹಿ ವಃ ।
ತಸ್ಯ ಮಾಧವಮಾಸಸ್ಯ ಪುಣ್ಯಸ್ನಾನಪ್ರಸಂಗತಃ ॥ ೧೨ ॥

ವೈಶಾಖಮಾಸೇ ಸತತಂ ಹರಿಪ್ರಿಯೇ
ಸ್ನಾನಂ ವಿದಧ್ಯಾಚ್ಚ ದದಾತಿ ಭಕ್ತ್ಯಾ ।
ದಾನಂ ಚ ಹೋಮಂ ಸುಕೃತಂ ತಥಾ ಬುಧೋ
ಹರೇಃಪದಂ ತಸ್ಯ ನ ದುರ್ಲಭಂ ತದಾ ॥ ೧೩ ॥

---

೯. ಸೂತನು ಹೇಳಿದನು- ಈ ರೀತಿ ಆ ದೇವತೆಗಳ ಮಾತನ್ನು ಕೇಳಿ ಧರ್ಮರಾಜನಿಗೆ ನಮಸ್ಕರಿಸಿ ಸಂತೋಷದಿಂದ ಮತ್ತೆ ನಮಸ್ಕರಿಸಿದನು.

೧೦. ಧರ್ಮರಾಜನ ಅನುಗ್ರಹದಿಂದ ಅನಂತರ ಭೂಮಿಯಲ್ಲಿ ಮಲಗಿದ್ದವ ನಂತೆ ಎದ್ದು ಬಂಧುಗಳಿಂದ ಕೂಡಿಕೊಂಡನು.

೧೧. ಆ ಬ್ರಾಹ್ಮಣನು ಈ ವಿಧಿಯಿಂದ ಪ್ರತಿವರ್ಷವೂ ತಾನು ಮಾಡುತ್ತಲೂ ಇತರರಿಂದ ಮಾಡಿಸುತ್ತಲೂ ಇದ್ದನು.

೧೨. ವೈಶಾಖಮಾಸದ ಪುಣ್ಯಸ್ನಾನದ ಪ್ರಸಂಗದ ಯಮ ಬ್ರಾಹ್ಮಣ ಸಂವಾದದಿಂದ ನಿಮ್ಮನ್ನು ಎಚ್ಚರಗೊಳಿಸಿದ್ದೇನೆ.

೧೩. ಹರಿಗೆ ಪ್ರೀತಿಪಾತ್ರವಾದ ವೈಶಾಖಮಾಸದಲ್ಲಿ ವಿಧಿವತ್ತಾಗಿ ಸ್ನಾನ ಮಾಡಬೇಕು.

ಯಶ್ಶೃಣೋತ್ಯೇಕಚಿತ್ತೇನ ಮಾಹಾತ್ಮ್ಯಂ ಮೇಷಸೂರ್ಯಜಂ ।
ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ॥ ೧೪ ॥

॥ ಋಷಯ ಊಚುಃ ॥

ಸೂತ ಸೂತ ಮಹಾಪ್ರಾಜ್ಞ ತ್ವಯಾತಿಕರುಣಾತ್ಮನಾ ।
ವೈಶಾಖಮಾಸಮಾಹಾತ್ಮ್ಯಂ ಕೀರ್ತಿತಂ ಪಾಪನಾಶನಂ ॥ ೧೫ ॥

ನಿಯಮಾ ಮಧುಹನ್ತುರ್ವೈ ಮಾಧವೇ ಕಥಿತಾಸ್ತ್ವಯಾ ।
ಪೂಜನಂ ಸ್ನಾನದಾನಾದ್ಯಂ ಶ್ರೌತಸ್ಮಾರ್ತವಿಧಾನತಃ ॥ ೧೬ ॥

ಯಥಾ ಚ ಮಾಧವೋ ದೇವಃ ಪ್ರೀಯತೇ ಪಾಪನಾಶನಃ ।
ಅಧುನಾ ಶ್ರೋತುಮಿಚ್ಛಾಮೋ ಧ್ಯಾನಂ ತಸ್ಯ ಮಹಾತ್ಮನಃ ॥ ೧೭ ॥

ಕೃಷ್ಣಸ್ಯ ಭಕ್ತವೃಂದಾನಾಂ ಪ್ರಿಯಸ್ಯ ಭವತಾರಣಂ ॥ ೧೮ ॥

॥ ಸೂತ ಉವಾಚ ॥

ಶೃಣುಧ್ವಂ ಮುನಯಸ್ಸರ್ವೇ ಕೃಷ್ಣಸ್ಯ ಜಗದಾತ್ಮನಃ ।
ಗೋಗೋಪಗೋಪೀಪ್ರಾಣಸ್ಯ ವೃಂದಾವನಚರಸ್ಯ ಚ ॥ ೧೯ ॥

---

೧೪. ಮೇಷಮಾಸದಲ್ಲಿ ಸೂರ್ಯನಿರುವಾಗಿನ ಮಹಿಮೆಯನ್ನು ಕೇಳಿದವನು ಪಾಪಗಳಿಂದ ಮುಕ್ತನಾಗಿ ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ.

೧೫. ಋಷಿಗಳು ಹೇಳಿದರು– ಮಹಾಪ್ರಾಜ್ಞನಾದ ಸೂತನೇ ಮಹಾತ್ಮನಾದ ನೀನು ವೈಶಾಖಮಾಸದ ಮಹಿಮೆಯನ್ನು ಹೇಳಿದೆ. ಅದು ಪಾಪನಾಶನವು.

೧೬. ವೈಶಾಖದಲ್ಲಿ ವಿಷ್ಣುನಿಯಮವನ್ನೂ ಪೂಜೆ, ಸ್ನಾನ, ದಾನಗಳನ್ನೂ ಶ್ರುತಿ ಸ್ಮೃತಿಯ ರೀತಿಗಳಿಂದ ಹೇಳಿದ್ದೀಯೆ.

೧೭. ಮಾಧವನು ಪ್ರೀತನಾಗಿ ಪಾಪನಾಶವಾಗುವಂತೆ ಆ ಮಹಾತ್ಮನ ಧ್ಯಾನವನ್ನು ಕೇಳಬೇಕೆಂದಿದ್ದೇವೆ, ಹೇಳು.

೧೮. ಭಕ್ತರಿಗೆ ಪ್ರಿಯನಾದ ಕೃಷ್ಣನ ಸಂಸಾರನಾಶಕವಾದ ಆ ಸ್ತೋತ್ರವನ್ನು ಹೇಳು

೧೯. ಸೂತನು ಹೇಳಿದನು. ಜಗತ್ತಿಗೆ ಪ್ರಾಣಸ್ವರೂಪನಾದ, ಗೋವುಗಳಿಗೂ, ಗೋಪಿಯರಿಗೂ ಪ್ರಾಣದಂತಿರುವ ವೃಂದಾವನದ ಕೃಷ್ಣನ ಮಹಿಮೆಯನ್ನು ಕೇಳಿರಿ.

ಏಕದಾ ನಾರದಃ ಪೃಷ್ಟೋ ಗೌತಮೇನ ದ್ವಿಜೋತ್ತಮಾಃ ।
ಸ ತಸ್ಮೈ ಪ್ರಾಹ ಯದ್ಧ್ಯಾನಂ ತದ್ವಕ್ಷ್ಯೇ ಪಾಪನಾಶನಂ ॥ ೨೦ ॥

॥ ನಾರದ ಉವಾಚ ॥

ಸುಮಪ್ರಕರಸೌರಭೋದ್ಗಳಿತಮಾಧ್ವಿಕಾದ್ಯುಲ್ಲಸ
ತ್ಸುಶಾಖಿನವಪಲ್ಲವಪ್ರಕರನಮ್ರಶೋಭಾಯುತಂ ।
ಪ್ರಫುಲ್ಲನವಮಂಜರೀಲಲಿತವಲ್ಲರೀವೇಷ್ಟಿತಂ
ಸ್ಮರೇತ ಸತತಂ ಶಿವಂ ಶಿವಮತಿಸ್ಸುವೃಂದಾವನಂ ॥ ೨೧ ॥

ವಿಕಾಶಿಸುಮನೋರಸಾಸ್ವಾದನಮಂಜುಲೈಃ ಸಂಚರ
ಚ್ಛಿಲೀಮುಖಮುಖೋದ್ಗತೈರ್ಮುಖರಿತಾನ್ತರಂ ಝಂಕೃತೈಃ ।
ಕಪೋತಶುಕಸಾರಿಕಾಪರಭೃತಾದಿಭಿಃ ಪತ್ರಿಭಿ-
ರ್ವಿರಾಣಿತಮಿತಸ್ತತೋ ಭುಜಗಶತ್ರು ನೃತ್ಯಾಕುಲಂ ॥ ೨೨ ॥

---

೨೦. ಒಂದಾವರ್ತಿ ಗೌತಮನು ನಾರದನನ್ನು ಕೇಳವಾಗ್ಗೆ ಅವನಿಗೆ ಪಾಪನಾಶಕವಾದ ಧ್ಯಾನವನ್ನು ಹೇಳಿದನು. ಅದನ್ನೇ ನಿಮಗೆ ಹೇಳುತ್ತೇನೆ ಕೇಳಿರಿ.

೨೧. ನಾರದನು ಹೇಳಿದನು- ಹೂವಿನ ಗುಂಪಿನ ಸುವಾಸನೆಯಿಂದ ಹೊರಹೊಮ್ಮುತ್ತಿರುವ ಮಕರಂದ ರುಚಿಯುಳ್ಳ, ಮರಗಳ ಚಿಗುರುಗಳ ಗುಂಪಿನಿಂದ ಬಗ್ಗಿರುವ ಕಾಂತಿಯುಳ್ಳ ಅರಳಿರುವ ಹೊಸ ಹೂಗೆಂಚಲುಗಳ ಸಾಲಿನಿಂದ ಕೂಡಿರುವ ಮಂಗಳಕರವಾದ ವೃಂದಾವನವನ್ನು ಬುದ್ಧಿವಂತನಾದವನು ಸ್ಮರಿಸಬೇಕು.

೨೨. ಅರಳಿದ ಹೂಗಳ ಮುಂದುಗಡೆಯಲ್ಲಿ ಮಕರಂದವನ್ನು ಕುಡಿಯುವುದರಿಂದ ಮನೋಹರವಾಗಿ ಕಾಣುತ್ತ ಓಡಿಯಾಡುತ್ತಿರುವ ದುಂಬಿಗಳ ಮುಖದಿಂದ ಝೇಂಕಾರಗಳಿಂದ ಸದ್ದಾದ ಮಧ್ಯಭಾಗವುಳ್ಳ, ಪಾರಿವಾಳ, ಗಿಳಿ, ಸಾರಿಕೆ, ಕೋಗಿಲೆ ಮುಂತಾದುವುಗಳಿಂದ ಇತ್ತತ್ತ ಸದ್ದುಳ್ಳ- ನವಿಲುಗಳ ನೃತ್ಯವುಳ್ಳ ಆ ವೃಂದಾವನವನ್ನು ಸ್ಮರಿಸಬೇಕು.

ಕಳಿಂದದುಹಿತುಶ್ಚಲಲ್ಲಹರಿವಿಪ್ರುಷಾಂ ವಾಹಿಭಿ
ರ್ವಿನಿದ್ರಸರಸೀರುಹೋದರರಜಶ್ಚಯೋದ್ಧೂಸರೈಃ ।
ಪ್ರದೀಪಿತಮನೋಭವವ್ರಜವಿಲಾಸಿನೀವಾಸಸಾಂ
ವಿಲೋಲನಪರೈರ್ನಿಷೇವಿತಮನಾರತಂ ಮಾರುತೈಃ ॥ ೨೩ ॥

ಪ್ರವಾಳನವಪಲ್ಲವಂ ಮರಕತಚ್ಛದಂ ಮೌಕ್ತಿಕ
ಪ್ರಭಾಪ್ರಕರಕೋರಕಂ ಕಮಲರಾಗನಾನಾಫಲಂ ।
ಸ್ಥವಿಷ್ಠಮಖಿಲರ್ತುಭಿಃ ಸತತಸೇವಿತಂ ಕಾಮದಂ
ತದಂತರವಿಕಲ್ಪಕಾಂಘ್ರಿಪಮುದಂಚಿತಂ ಚಿಂತಯೇತ್ ॥ ೨೪ ॥

ಸುಹೇಮಶಿಖರಾಚಲೇ ಉದಿತಭಾನುವದ್ಭಾಸುರಾ
ಮಧೋಽಸ್ಯ ಕನಕಸ್ಥಲೀಮಮೃತಶೀಕರಾಸಾರಿಣಃ ।
ಪ್ರದೀಪ್ತಮಣಿಕುಟ್ಟಿಮಾಂ ಕುಸುಮರೇಣುಪುಂಜೋಜ್ವಲಾಂ
ಸ್ಮರೇತ್ಪುನರತಂದ್ರಿತೋ ವಿಗತಷಟ್ತರಂಗಾಂ ಬುಧಃ ॥ ೨೫ ॥

---

೨೩. ಯಮುನೆಯ ಪ್ರವಾಹದ ತುಂತುರುಗಳನ್ನು ಹೊತ್ತು ತರುತ್ತಿರುವ ಅರಳಿರುವ ಕಮಲದ ಮಧ್ಯಭಾಗದ ಧೂಳಿನಿಂದ ಮಲಿನವಾದ ಮನ್ಮಥನ ಆವೇಶವುಳ್ಳ, ಮುಗ್ಧೆಯರ ಬಟ್ಟೆಗಳನ್ನು ಅಲ್ಲಾಡಿಸುತ್ತಿರುವ ಗಾಳಿಗಳಿಂದ ಸೇವಿಸಲ್ಪಟ್ಟ ವೃಂದಾವನವನ್ನು ಸ್ಮರಿಸಬೇಕು.

೨೪. ಹವಳದಂತಿರುವ ಹೊಸಚಿಗುರುಳ್ಳ, ಮರಕತಮಣಿಯ ಕಾಂತಿಯುಳ್ಳ, ಮುತ್ತಿನ ಕಾಂತಿಯಂತಿರುವ ಮೊಗ್ಗುಗಳುಳ್ಳ ಕಮಲದ ಬಣ್ಣದ ನಾನಾಫಲಗಳುಳ್ಳ ಉತ್ತಮವಾದ ಎಲ್ಲಾ ಋತುಗಳಿಂದ ಸೇವಿಸಲ್ಪಡುವ ಇಷ್ಟಾರ್ಥಗಳನ್ನು ಕೊಡುವ ವನದ ಮಧ್ಯದಲ್ಲಿ ಉತ್ತಮವಾದ ಕಲ್ಪವೃಕ್ಷವುಳ್ಳ ವೃಂದಾವನವನ್ನು ಧ್ಯಾನಿಸಬೇಕು.

೨೫. ಮೇರುಪರ್ವತದ ಮೇಲೆ ಹುಟ್ಟಿರುವ ಸೂರ್ಯನಂತೆ ಪ್ರಕಾಶಮಾನವಾದ ಅದರ ಕೆಳಗೆ ಚಿನ್ನದ ಭೂಮಿಯಲ್ಲಿ ಅಮೃತದ ಮಳೆಯ ತುಂತುರುಗಳುಳ್ಳ, ಹೂವಿನ, ಪರಾಗಗಳಿಂದ ಪ್ರಕಾಶಿಸುವ ಪ್ರಕಾಶಮಾನವಾದ ಮಣಿಗಳನ್ನು ಕೆತ್ತಿರುವ ಭೂಮಿಗಳುಳ್ಳ, ಅರಿಷಡ್ವರ್ಗಗಳಿಗೆ ಅವಕಾಶವಿಲ್ಲದಿರುವ ಉದ್ಯಾನವನದ ಕುಟ್ಟಿಮಭಾಗವನ್ನು ಆಲಸ್ಯವಿಲ್ಲದೇ ಸ್ಮರಿಸಬೇಕು.

ತದ್ರತ್ನಕುಟ್ಟಿಮನಿವಿಷ್ಟಮಹಿಷ್ಠಯೋಗ
ಪೀಠೇಽಷ್ಟಪತ್ರಮರುಣಂ ಕಮಲಂ ವಿಚಿಂತ್ಯ ।
ಉದ್ಯದ್ವಿರೋಚನಸರೋಚಿರಮುಷ್ಯಮಧ್ಯೇ
ಸಂಚಿತಯೇ ಸುಖನಿವಿಷ್ಟಮಥೋ ಮುಕುಂದಂ ॥ ೨೬ ॥

ಸುತ್ರಾಮಹೇತಿ ದಳಿತಾಂಜನಮೇಘಪುಂಜ
ಪ್ರತ್ಯಗ್ರನೀಲಜಲಜನ್ಮಸಮಾನಭಾಸಂ ।
ಸುಸ್ನಿಗ್ಧನೀಲಘನಕುಂಚಿತಕೇಶಜಾಲಂ
ರಾಜನ್ಮನೋಜ್ಞಶಿತಿಕಂಠಶಿಖಂಡಚೂಡಂ ॥ ೨೭ ॥

ರೊಲಂಬಲಾಲಿತಸುರದ್ರುಮಸೂನುಸಂಪ
ದ್ಯುಕ್ತಂ ಸಮುತ್ಕಚನವೋತ್ಪಲಕರ್ಣಪೂರಂ ।
ಲೋಲಾಲಿಭಿಃ ಸ್ಫುರಿತಫಾಲತಲಪ್ರದೀಪ್ತ
ಗೋರೋಚನಾತಿಲಕಮುಜ್ವಲಚಿಲ್ಲಿಚಾಪಂ ॥ ೨೮ ॥

---

೨೬. ಆ ರತ್ನಕುಟ್ಟಿಮದಲ್ಲಿ ಕುಳಿತಿರುವ ದೊಡ್ಡದಾದ ಯೋಗಪೀಠದಲ್ಲಿ ಅಷ್ಟ ದಳದ ಗುಂಪಿನ ಕಮಲವನ್ನು ಧ್ಯಾನಿಸಿ ಅದರ ಮಧ್ಯದಲ್ಲಿ ಮೇಲಕ್ಕೆ ಹೊರಡುತ್ತಿರುವ ಕಾಂತಿಯುಳ್ಳ, ಸುಖವಾಗಿ ಕುಳಿತಿರುದ ಮುಕುಂದನನ್ನು ಧ್ಯಾನಿಸಬೇಕು.

೨೭. ವಜ್ರಾಯುಧದಿಂದ ಸೀಳಿದ ಮೇಘದಂತೆ ಹೊಸದಾಗಿರುವ ನೀಲಿಯ ನೀರಿನಲ್ಲಿ ಹುಟ್ಟಿದ ನೈದಿಲೆಗೆ ಸಮವಾದ ಕಾಂತಿಯುಳ್ಳ ಮನೋಹರವಾದ ನೀಲಮೇಘದಂತೆ ಇರುವ ಕೂದಲುಗಳುಳ್ಳ, ಮನೋಹರವಾದ ನವಿಲುಗರಿಯನ್ನು ತಲೆಯಲ್ಲಿ ಸಿಕ್ಕಿಸಿಕೊಂಡಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೨೮. ದುಂಬಿಗಳಿಂದ ಕೂಡಿರುವ ಸಣ್ಣಕಲ್ಪವೃಕ್ಷದ ಹೂಗಳಿಂದ ಕೂಡಿದ ಮೇಲಕ್ಕೆತ್ತಿ ಕಟ್ಟಿರುವ ಕೂದಲುಳ್ಳ, ಕಿವಿಗೆ ಆ ಹೂವನ್ನಿಟ್ಟುಕೊಂಡಿರುವ, ದುಂಬಿಗಳಿಂದ ಪ್ರಕಾಶಿತವಾದ ಹಣೆಯಲ್ಲಿ ಪ್ರಕಾಶಿಸುವ ಗೋರೋಚನವುಳ್ಳ, ಪ್ರಕಾಶಮಾನವಾದ ಬಗ್ಗಿಗುವ ಧನುಸ್ಸನ್ನು ಹೊಂದಿರುವ ಸ್ವಾಮಿಯನ್ನು ಸ್ಮರಿಸಬೇಕು.

ಆಪೂರ್ಣಶಾರದಗತಾಂಕಶಶಾಂಕಬಿಂಬ
ಕಾನ್ತಾನನಂ ಕಮಲಪತ್ರವಿಶಾಲನೇತ್ರಂ ।
ರತ್ನಸ್ಫುರನ್ಮಕರಕುಂಡಲರಶ್ಮಿದೀಪ್ತ
ಗಂಡಸ್ಥಲೀಮುಕುರಮುನ್ನತಚಾರುನಾಸಂ ॥ ೨೯ ॥

ಸಿಂದೂರಸುಂದರತರಾಧರಮಿಂದುಕುಂದ
ಮಂದಾರಮಂದಹಸಿತದ್ಯುತಿದೀಪಿತಾಶಂ ।
ವನ್ಯಪ್ರವಾಳಕುಸುಮಪ್ರಚಯಾವಕ್ಲೃಪ್ತ
ಗ್ರೈವೇಯಕೋಜ್ವಲಮನೋಹರಕಂಬುಕಂಠಂ ॥ ೩೦ ॥

ಮತ್ತಭ್ರಮದ್ಭ್ರಮರಘುಷ್ಟವಿಲಂಬಮಾಸಂ
ಸಂತಾನಕಪ್ರಸರದಾಮ ಪರಿಷ್ಕೃತಾಂಸಂ ।
ಹಾರಾವಳೀಭಗಣರಾಜತಪೀವರೋರೋ
ವ್ಯೋಮಸ್ಥಳೀಲಸಿತಕೌಸ್ತುಭಭಾಸುಮಂತಂ ॥ ೩೧ ॥

---

೨೯. ಕಳಂಕರಹಿತನಾದ ಶರತ್ಕಾಲದ ಪೂರ್ಣಚಂದ್ರನಂತೆ ಮುಖವುಳ್ಳ ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ರತ್ನಗಳುಳ್ಳ ಮೊಸಳೆಯ ಆಕಾರವಾದ ಕುಂಡಲಗಳಿಂದ ಪ್ರಕಾಶಿಸುವ ಕಪೋಲಗಳುಳ್ಳ ಎತ್ತರವಾಗಿ ಮನೋಹರವಾಗಿರುವ ಮೂಗುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

೩೦. ಕುಂಕುಮದಂತೆ ಕೆಂಪಗಿರುವ ತುಟಿಗಳುಳ್ಳ ಚಂದ್ರಕಾಡುಮಲ್ಲಿಗೆ ಮಂದಾರ ಕುಸುಮಗಳಂತೆ ಇರುವ, ಮುಗುಳುನಗೆಯ ಕಾಂತಿಯಿಂದ ಪ್ರಕಾಶಿತವಾದ ದಿಕ್ಕುಗಳುಳ್ಳ, ಕಾಡಿನಲ್ಲಿ ಚಿಗುರು ಹೂಗಳನ್ನು ಕಟ್ಟಿ ಮಾಡಿರುವ ಹಾರವನ್ನು ಕಂಠದಲ್ಲಿ ಹಾಕಿಕೊಂಡು ಮನೋಹರವಾಗಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೩೧. ಮದಿಸಿ ಸುತ್ತುತ್ತಿರುವ ಭ್ರಮರಗಳ ಕೂಗಿನಿಂದ ಕೂಡಿ ನೇತಾಡುತ್ತಿರುವ ಕಲ್ಪವೃಕ್ಷದ ಉದ್ದವಾದ ಮಾಲೆಯಿಂದ ಶೋಭಿಸುವ ಭುಜಶಿರಸ್ಸುಳ್ಳ ನಕ್ಷತ್ರಗಳಿಂದ ಕೂಡಿರುವಂತಹ ಹಾರಗಳಿಂದ ಶೋಭಿಸುವ ವಕ್ಷಸ್ಥಳವುಳ್ಳ ಎದುರು ಭಾಗದಲ್ಲೆಲ್ಲಾ ಪ್ರಕಾಶಿಸುತ್ತಿರುವ ಕೌಸ್ತುಭ ರತ್ನದ ಕಾಂತಿಯುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

ಶ್ರೀವತ್ಸಲಕ್ಷಣಸುಲಕ್ಷಿತಮುನ್ನತಾಂಸ
ಮಾಜಾನುಪೀನಪರಿವೃತ್ತಸುಜಾಯಬಾಹುಮ್ ।
ಆಬಂಧುರೋದರಮುದಾರಗಭೀರನಾಭಿಂ
ಭೃಂಗಾಂಗನಾಭಿಕರಮಂಜುಳರೋಮರಾಜಿಂ ॥ ೩೨ ॥

ನಾನಾಮಣಿಪ್ರಘಟಿತಾಂಗದಕಂಕಣೋರ್ಮಿ
ಗ್ರೈವೇಯಸಾರಸನನೂಪುರಕುಂದಬಂಧಂ ।
ದಿವ್ಯಾಂಗರಾಗಪರಿತಾಜರಿತಾಂಗಯಷ್ಟಿ
ಮಾಪೀತವಸ್ತ್ರಪರಿವೀತನಿತಂಬಬಿಂಬಂ ॥ ೩೩ ॥

ಚಾರೂರುಜಾನುಮನುವೃತ್ತಮನೋಜ್ಞಜಂಘಂ
ಕಾನ್ತೋನ್ನತಪ್ರಪದನಿಂದಿತಕೂರ್ಮಕಾಂತಿಂ ।
ಮಾಣಿಕ್ಯದರ್ಪಣಲಸನ್ನಖರಾಜರಾಜ
ದ್ರಕ್ತಾಂಗುಳಿಚ್ಛದನಸುಂದರಪಾದಪದ್ಮಂ ॥ ೩೪ ॥

---

೩೨ ಶ್ರೀವತ್ಸವೆಂಬ ಮಚ್ಚೆಯಿಂದ ಕೂಡಿರುವ ಎತ್ತರವಾದ ಭುಜಶಿರಸ್ಸುಳ್ಳ ದುಂಡಗೆ ಹೋಗುಹೋಗುತ್ತಾ ದಪ್ಪವಾಗಿ ಮಂಡಿಯುವರೆಗೂ ಇರುವ ತೋಳುಗಳುಳ್ಳ ಮನೋಹರವಾದ ಹೊಟ್ಟೆಯುಳ್ಳ ಆಳವಾಗಿರುವ ಹೊಕ್ಕುಳುಳ್ಳ ದುಂಬಿಗಳಂತೆ ಕಪ್ಪಾಗಿರುವ ರೋಮಪಂಕ್ತಿಗಳುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

೩೩. ಬಗೆಬಗೆಯಾದ ಮಣಿಗಳನ್ನು ಕೆತ್ತಿರುವ ಕೈಬಳೆ ಉಂಗುರಗಳು ಕತ್ತಿನ ಸರಗಳೂ ಉಡಿದಾರವೂ ಕಾಲುಬಳೆಗಳೂ, ಇವುಗಳಿಂದ ಕೂಡಿರುವ ಉತ್ತಮವಾದ ಅಂಗರಾಗದಿಂದ ಹೊಂಬಣ್ಣವಾಗಿ ಮಾಡಲ್ಪಟ್ಟ ದೇಹವುಳ್ಳ ಹೊಂಬಣ್ಣದ ವಸ್ತ್ರವನ್ನು ಸೊಂಟಕ್ಕೆ ಕಟ್ಟಿರುವ ಸ್ವಾಮಿಯನ್ನು ಸ್ಮರಿಸಬೇಕು.

೩೪. ಮನೋಹರವಾಗಿ ಕ್ರಮದಿಂದ ದಪ್ಪವಾಗಿ ದುಂಡಗಿರುವ ತೊಡೆ ಮಂಡಿಗಳುಳ್ಳ, ಚೆನ್ನಾಗಿಯೂ, ಎತ್ತರವಾಗಿ ಎದ್ದೂ ಇರುವ ಪಾದಾಗ್ರದಿಂದ ಆಮೆಯನ್ನು ತಿರಸ್ಕರಿಸುತ್ತಲೂ ಇರುವ, ಮಾಣಿಕ್ಯದ ದರ್ಪಣದಂತೆ ಪ್ರಕಾಶಿಸುವ ಹೆಬ್ಬೆಟ್ಟಿನಿಂದ ಪ್ರಕಾಶಿಸುವ ಉಗುರೇ ಹೊದಿಕೆಯಾಗಿರುವ ಪಾದಪದ್ಮವುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

ಮತ್ಸ್ಯಾಂಕುಶಾರಿದರಕೇತುಯವಾಬ್ಜವಜ್ರೈಃ
ಸಂಲಕ್ಷಿತಾರುಣಕರಾಂಘ್ರಿತಲಾಭಿರಾಮಂ ।
ಲಾವಣ್ಯಸಾರಸಮುದಾಯವಿನಿರ್ಮಿತಾಂಗಂ
ಸೌಂದರ್ಯನಿಂದಿತ ಮನೋಭವದೇಹಕಾನ್ತಿಂ ॥ ೩೫ ॥

ಆಸ್ಯಾರವಿಂದಪರಿಪೂರಿತವೇಣುರಂಧ್ರ
ಲೋಲತ್ಕರಾಂಗುಳಿಸಮೀರಿತ ದಿವ್ಯರಾಗೈಃ ।
ಶಶ್ವದ್ದ್ರವೈಃ ಕೃತನಿವಿಷ್ಟಸಮಸ್ತಜಂತು
ಸಂತಾನಸನ್ನತಿಮನಂತಸುಖಾಂಬುರಾಶಿಂ ॥ ೩೬ ॥

ಗೋಭಿರ್ಮುಖಾಂಬುಜ ನಿಲೀನವಿಲೋಚನಾಭೀ
ರೂಧೋಭರಸ್ಖಲಿತಮಂಥರಮಂದಗಾಭಿಃ ।
ದಂತಾಗ್ರದಷ್ಟಪರಿಶಿಷ್ಟತೃಣಾಂಕುರಾಭಿ
ರಾಲಂಬಿವಾಲಧಿಲತಾಭಿರಥಾಭಿವೀತಂ ॥ ೩೭ ॥

---

೩೫. ಮೀನು, ಅಂಕುಶ, ಚಕ್ರ, ಕೇತು, ಯವ, ಕಮಲ, ವಜ್ರರೂಪವಾದ ರೇಖೆಗಳಿಂದ ಕೂಡಿರುವ ಕೈ ಮತ್ತು ಹೆಜ್ಜೆಗಳಿಂದ ಮನೋಹರನಾದ, ಸೌಂದರ್ಯ ಸಾರದಿಂದ ನಿರ್ಮಿತವಾದ ಅವಯವಗಳುಳ್ಳ ಸೌಂದರ್ಯದಿಂದ ಮನ್ಮಥನನ್ನೂ ತಿರಸ್ಕರಿಸುತ್ತಿರುವ ದೇಹಕಾಂತಿಯುಳ್ಳ ಸ್ವಾಮಿಯನ್ನು ಸ್ಮರಿಸಬೇಕು.

೩೬. ಬಾಯಿನ ರಂಧ್ರದಲ್ಲಿ ಇಟ್ಟುಕೊಂಡಿರುವ ಕೊಳಲಿನಲ್ಲಿ ಆಲ್ಲಾಡುತ್ತಿರುವ ಕೈಬೆರಳಿನಿಂದ ಹೊರಡಿಸುತ್ತಿರುವ, ದಿವ್ಯವಾದ ರಾಗಗಳಿಂದ ಸುಮ್ಮನೆ ನಿಂತುಕೊಂಡಿರುವಂತೆ ಮಾಡಿ, ತಲೆಯನ್ನು ಅಲ್ಲಾಡಿಸುವಂತೆ ಮಾಡಿರುವ ಸಮಸ್ತ ಪ್ರಾಣಿಗಳುಳ್ಳ ಸಮುದ್ರದಂತೆ ಬಹು ಸುಖವುಳ್ಳ ಸ್ವಾಮಿಯನ್ನು ಸ್ಮರಿಸಬೇಕು.

೩೭. ಸ್ವಾಮಿಯ ಮುಖವನ್ನೇ ನೋಡುತ್ತಿರುವ ಕೆಚ್ಚಲಿನ ಭಾರದಿಂದ ಎಡವುತ್ತ ಮೆಲ್ಲಗೆ ಹೋಗುತ್ತಿರುವ ತಿನ್ನುತ್ತಿದ್ದು ಸ್ವಲ್ಪಭಾಗ ಹಲ್ಲಿನಲ್ಲಿ ಕಚ್ಚಿಕೊಂಡು ಹೊರಗೆ ಕಾಣುತ್ತಿರುವ ಹಲ್ಲುಗಳುಳ್ಳ, ಉದ್ದಕ್ಕೂ ಜೋತಾಡುತ್ತಿರುವ ಬಾಲವುಳ್ಳ ಗೋವುಗಳಿಂದ ಸುತ್ತುವರಿಯಲ್ಪಟ್ಟ ಸ್ವಾಮಿಯನ್ನು ಸ್ಮರಿಸಬೇಕು.

ಸಂಪ್ರಸ್ನುತಸ್ತನವಿಭೂಷಣಪೂರ್ಣನಿಶ್ಚ
ಲಾಸ್ಯಾದ್ಧೃತಕ್ಷರಿತಫೇನಿಲದುಗ್ಧಮುಗ್ಧೈಃ ।
ವೇಣುಪ್ರವರ್ತಿತಮನೋಹರಮಂದಗೀತ
ದತ್ತೋಚ್ಚಕರ್ಣಯುಗಳೈರಪಿತರ್ಣಕೈಶ್ಚ ॥ ೩೮ ॥

ಪ್ರತ್ಯಗ್ರಶೃಂಗಮೃದುಮಸ್ತಕಸಂಪ್ರಹಾರ
ಸಂರಂಭಭಾವನ ವಿಲೋಲಖುರಾಗ್ರಪಾತೈಃ
ಆಮೇದುರೈರ್ಬಹುಳಸಾಸ್ನಗಳೈರುದಗ್ರ
ಪುಚ್ಛೈಶ್ಚ ವತ್ಸತರವತ್ಸತರೀನಿಕಾಯೈಃ ॥ ೩೯ ॥

ಹಂಭಾರವಕ್ಷುಭಿತದಿಗ್ವಲಯೈರ್ಮಹದ್ಭಿ
ರಪ್ಯುಕ್ಷಭಿಃ ಪೃಥುಕಕುದ್ಭರಭಾರಖಿನ್ನೈಃ ।
ಉತ್ತಂಭಿತಶ್ರುತಿಪುಟೀಪರಿಪೀತವಂಶ
ಧ್ವಾನಾಮೃತೋದ್ಧತವಿಕಾಸಿವಿಶಾಲಘೋಷೈಃ ॥ ೪೦ ॥

---

೩೮. ಸುರಿಸುತ್ತಿರುವ ಹಾಲುಕ್ಕ ಮೊಲೆಗಳನ್ನು ಬಾಯಲ್ಲಿಟ್ಟುಕೊಂಡು ಅಲ್ಲಾಡದಿರುವ ಬಾಯಿಂದ ಸುರಿಸುತ್ತಿರುವ ಹಾಲಿನ ನೊರೆಗಳುಳ್ಳ ಕೊಳಲಿನಲ್ಲಿ ಬಾರಿಸುತ್ತಿರುವ ಮನೋಹರವಾದ ಗೀತಧ್ವನಿಯನ್ನು ಕೇಳುತ್ತ ಮೇಲಕ್ಕೆ ನಿಮಿರಿಸಿಕೊಂಡಿರುವ ಕಿವಿಗಳುಳ್ಳ ಕರುಗಳಿಂದ ಸುತ್ತುವರಿಯಲ್ಪಟ್ಟ ಸ್ವಾಮಿಯನ್ನು ಸ್ಮರಿಸಬೇಕು.

೩೯. ಕೊಂಬಿನ ತುದಿಯಿಂದ ಮೆತ್ತಗೆ ತಲೆಯನ್ನು ಕೆರೆದುಕೊಳ್ಳುವ ಭಾವನೆಯಿಂದ ಚಂಚಲವಾದ ಗೊರಸುಗಳ ಏಟುಗಳುಳ್ಳ ಹೆಚ್ಚಾಗಿ ಬೆಳೆದು ದಪ್ಪವಾಗಿರುವ ಗಂಡೊಗಲುಳ್ಳ ಮೇಲಕ್ಕೆ ಎತ್ತಿಕೊಂಡಿರುವ ಬಾಲವುಳ್ಳ ಕಡಸುಗಳಿಂದಲೂ, ಹೋರಿಗಳಿಂದಲೂ ಕೂಡಿರುವ ಸ್ವಾಮಿಯನ್ನು ಸ್ಮರಿಸಬೇಕು.

೪೦ ಹಂಭಾ ಎಂಬ ಧ್ವನಿಯಿಂದ ಎಲ್ಲಾ ಕಡೆಗೂ ಕೇಳಿಸುವಂತೆ ಕೂಗುವ ಕುಳಿತುಕೊಂಡಿರುವ ಹುಡುಗರಿಂದಲೂ, ಸಬರಗಳ ಭಾರದಿಂದಲೂ, ಖಿನ್ನವಾಗಿರುವ ಕಿವಿಯನ್ನು ಎತ್ತಿಕೊಂಡು ಕೊಳಲಿನ ಧ್ವನಿಯನ್ನು ಕೇಳುತ್ತ ಆ ಅಮೃತದಿಂದ ಅಗಲವಾಗಿ ವಿಶಾಲವಾದ ಮೂಗಿನ ಹೊಳ್ಳೆಯುಳ್ಳ ದೊಡ್ಡ ಎತ್ತುಗಳಿಂದ ಕೂಡಿಕೊಂಡಿರುವ ಸ್ವಾಮಿಯನ್ನು ಧ್ಯಾನಿಸಬೇಕು

ಗೋಪೈಸ್ಸಮಾನಗುಣಶೀಲವಯೋವಿಲಾಸ
ವೇಶೈಶ್ಚ ಮೂರ್ಛಿತಕಲಸ್ವನ ವೇಣುವೀಣೈಃ ।
ಮಂದ್ರೋಚ್ಚತಾರಪಟುಗಾನಪರೈರ್ವಿಲೋಲ
ದೋರ್ವಲ್ಲರೀಲಲಿತಲಾಸ್ಯವಿತಾನದಕ್ಷೈಃ ॥ ೪೧ ॥

ಜಂಘಾಂತಿಪೀವರಕಟೀರತಟೀನಿಬದ್ಧ
ವ್ಯಾಲೋಲಕಿಂಕಿಣಿಘಟಾರಣಿತೈರಟದ್ಭಿಃ ।
ಮುಗ್ಧೈಸ್ತರಕ್ಷುನಖಕಲ್ಪಿತಕಾಂತಭೂಷೈ
ರವ್ಯಕ್ತಮಂಜುವಚನೈಃ ಪೃಥುಕೈಃ ಪರೀತಂ ॥ ೪೨ ॥

ಅಥ ಸುಲಲಿತಗೋಪಸುಂದರೀಣಾಂ
ಪೃಥುಕವರೀಷನಿತಂಬಮಂಥರಾಣಾಂ ।
ಗುರುಕುಚಭರಭಂಗುರಾವಲಗ್ನ
ತ್ರಿವಳಿವಿಜೃಂಭಿತ ರೋಮರಾಜಿಭಾಜಾಂ ॥ ೪೩ ॥

---

೪೧. ಒಂದೇ ಬಗೆಯಾದ ಗುಣ, ಸ್ವಭಾವ ವಯಸ್ಸು, ವಿಲಾಸ, ವೇಷಗಳುಳ್ಳ ಚನ್ನಾಗಿ ಹಾಡುತ್ತಿರುವ ಮಧುರವಾದ ಕೊಳಲಿನ ಧ್ವನಿಯುಳ್ಳ, ಮಂದ ಉಚ್ಚ ತಾರಗಳಲ್ಲಿ ಪಟುವಾದ ಗಾನದಲ್ಲಿ ಆಸಕ್ತರಾದ ಚಂಚಲವಾದ ತೋಳುಗಳಿಂದ ಚೆನ್ನಾಗಿರುವ ಕುಣಿತವನ್ನು ಮಾಡಿಸುತ್ತಿರುವ ಗೋಪರಿಂದ ಕೂಡಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೪೨. ಮಂಡಿಯವರೆಗೂ ಜೋಲುಬಿದ್ದಿರುವಂತೆ ಸೊಂಟಕ್ಕೆ ಕಟ್ಟಿಕೊಂಡಿರುವ ಚಂಚಲವಾದ ಗಂಟೆ ಗೆಜ್ಜೆಗಳ ಧ್ವನಿಯುಳ್ಳ ಓಡಾಡುತ್ತಿರುವ ಮನೋಹರವಾದ ಹುಲಿಯುಗುರುಗಳನ್ನು ಸೇರಿಸಿ ಮಾಡಿದ ಮನೋಹರವಾದ ಒಡವೆಗಳುಳ್ಳ ತೊದಲು ತೊದಲಾಗಿ ಮನೋಹರವಾದ ಮಾತುಳ್ಳ, ಮಕ್ಕಳಿಂದ ಕೂಡಿರುವ ಸ್ವಾಮಿಯನ್ನು ಸ್ಮರಿಸಬೇಕು.

೪೩. ದೊಡ್ಡದಾದ ತಲೆಗೂದಲು, ನಿತಂಬಗಳಿಂದ ಮೆತ್ತಗೆ ನಡೆಯುವ ದೊಡ್ಡದಾದ ಕುಚಗಳ ಭಾರದಿಂದ ಬಗ್ಗಿರುವ ತ್ರಿವಳಿಗಳಿಂದ ಕೂಡಿರುವ ರೋಮರಾಜಿಗಳುಳ್ಳ ಚೆನ್ನಾಗಿರುವ ಗೋಪಸುಂದರಿಯರ ಗುಂಪಿನಿಂದ ಕೂಡಿರುವ ಸ್ವಾಮಿಯನ್ನು ಸ್ಮರಿಸಬೇಕು.

ತದತಿರುಚಿರಚಾರುವೇಣುವಾದ್ಯಾ
ಮೃತರಸಪಲ್ಲವಿತಾಂಗಜಾಂಘ್ರಿಪಸ್ಯ ।
ಮುಕುಳವಿಮಲರಮ್ಯರೂಢರೋಮೋದ್ಗಮ
ಸಮಲಂಕೃತಗಾತ್ರವಲ್ಲರೀಣಾಂ ॥ ೪೪ ॥

ತದತಿರುಚಿರಮಂದಹಾಸಚಂದ್ರಾ-
ತಪಪರಿಜೃಂಭಿತರಾಗವಾರಿರಾಶೇಃ ।
ತರಳತದಂಗಭಂಗವಿಪ್ರುಟ್
ಪ್ರಕರಘನಶ್ರಮಬಿಂದುಸಂತತಾನಾಂ ॥ ೪೫ ॥

ತದತಿಲಲಿತಮಂದಚಿಲ್ಲಿಚಾಪ
ಚ್ಯುತನಿಶಿತೇಕ್ಷಣಮಾರಬಾಣವೃಷ್ಟ್ಯಾ ।
ದಳಿತಸಕಲಮರ್ಮವಿಹ್ವಲಾಂಗ
ಪ್ರವಿಸೃತದುಃಸಹವೇಪಥುವ್ಯಥಾನಾಂ ॥ ೪೬ ॥

---

೪೪. ಬಹು ಮನೋಹರವಾದ ಕೊಳಲುವಾದ್ಯದ ಗಾನಾಮೃತದಿಂದ ಚಿಗುರಿದ ಮರದಂತೆ ರೋಮಾಂಚವನ್ನು ಹೊಂದಿರುವ ಅವಯವಗಳಿಂದ ಕೂಡಿರುವ ಸ್ತ್ರೀಯರ ಗುಂಪಿನಿಂದ ಸೇವಿಸಲ್ಪಡುತ್ತಿರುವ ಸ್ವಾಮಿಯನ್ನು ಸ್ಮರಿಸಬೇಕು.

೪೫. ಬಹು ಮನೋಹರವಾದ ಮುಗುಳು ನಗೆಯೆಂಬ ಬೆಳದಿಂಗಳಿನಿಂದ ಹೆಚ್ಚಿಸಲ್ಪಟ್ಟ ರಾಗವೆಂಬ ಸಮುದ್ರದ ಚಂಚಲವಾದ ಅಲೆಗಳ ತುಂತುರುಗಳೆಂಬ ಆಯಾಸದ ಬೆವರುಬಿಂದುಗಳುಳ್ಳ ಸ್ತ್ರೀಯರ ಸಮೂಹದಿಂದ ಸೇವಿತನಾದ ಸ್ವಾಮಿಯನ್ನು ಧ್ಯಾನಮಾಡಬೇಕು.

೪೬. ಬಹು ಚೆನ್ನಾಗಿರುವ ಬಾಣದಿಂದ ಬಿಡುತ್ತಿರುವ ಚೂಪಾದ ಮನ್ಮಥ ಬಾಣಗಳ ಮಳೆಯಿಂದ ಕತ್ತರಿಸಲ್ಪಟ್ಟ ಮರ್ಮಸ್ಥಳವುಳ್ಳವರಾಗಿ ವ್ಯಥೆಪಡುತ್ತಾ ಆ ಅಂಗಳದಲ್ಲಿ ತಡೆಯಲಸಾಧ್ಯವಾದ ನಡುಕು ದುಃಖವುಳ್ಳ ಸ್ತ್ರೀಯರಿಂದ ಸೇವಿಸಲ್ಪಡುತ್ತಿರುವ ಸ್ವಾಮಿಯನ್ನು ಧ್ಯಾನಿಸಬೇಕು.

ತದತಿರುಚಿರವೇಷರೂಪಶೋಭಾ-
ಮೃತರಸಪಾನವಿಧಾನಲಾಲಸಾನಾಂ ।
ಪ್ರಣಯಸಲಿಲಪೂರವಾಹಿನೀನಾ
ಮಲಸವಿಲೋಲವಿಲೋಚನಾಂಬುಜಾಭ್ಯಾಂ ॥ ೪೭ ॥

ವಿಸ್ರಂಸತ್ಕಬರೀಕಲಾಪವಿಗಲತ್ಫುಲ್ಲಪ್ರಸೂನಾಸ್ರವ
ನ್ಮಾಧ್ವೀಲಂಪಟಚಂಚರೀಕಘಟಯಾ ಸಂಸೇವಿತಾನಾಂ ಮುಹುಃ ।
ಮಾರೋನ್ಮಾದಮದಸ್ಖಲನ್ಮೃದುಗಿರಾಮಾಲೋಲಕಾಂಚ್ಯುಲ್ಲಸ
ನ್ನೀವೀವಿಶ್ಲಥಮಾನಚೀನಸಿಚಯಾಂತಾರ್ಜಿತಂಬತ್ವಿಷಾಂ ॥ ೪೮ ॥

ಸ್ಖಲಿತಲಲಿತಪಾದಾಂಭೋಜಮಂದಾಭಿಘಾತ
ಚ್ಛುರಿತಮಣಿತುಲಾಕೋಟ್ಯಾಕುಲಾಶಾಮುಖಾನಾಂ ।
ಚಲದಧರದಳಾನಾಂ ಕುಡ್ಮಲಪಕ್ಷ್ಮಲಾಕ್ಷಿ-
ದ್ವಯಸರಸಿರುಹಾಣಾಮುಲ್ಲಸತ್ಕುಂಡಲಾನಾಂ ॥ ೪೯ ॥

---

೪೭. ಆ ಸ್ವಾಮಿಯ ಬಹು ಚೆನ್ನಾಗಿರುವ ರೂಪ, ವೇಷ, ಕಾಂತಿಯೆಂಬ ಅಮೃತರಸಪಾನದಲ್ಲಿ ಆಸಕ್ತರಾಗಿರುವ ಪ್ರೀತಿಯೆಂಬ ನೀರಿನಿಂದ ಕೂಡಿರುವ ನದಿಯಿಂದ ಕೂಡಿರುವ ಮದದಿಂದ ಅಲಸವಾಗಿರುವ ಕಣ್ಣುಗಳುಳ್ಳ ಸ್ತ್ರೀಯರ ಸಮೂಹದಿಂದ ಸೇವಿಸಲ್ಪಡುತ್ತಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೪೮. ಬಿಚ್ಚಿ ಹೋಗುತ್ತಿರುವ ತಲೆಯ ಗಂಟಿನಿಂದ ಬೀಳುತ್ತಿರುವ ಹೂವಿನ ಮಕರಂದಕ್ಕೆ ಬಂದೆರಗುತ್ತಿರುವ ದುಂಬಿಗಳ ಗುಂಪಿನಿಂದ ಬಾರಿಬಾರಿಗೂ ಸೇವಿಸಲ್ಪಟ್ಟ ಮನ್ಮಥನ ಕೊಬ್ಬಿನಿಂದ ಅಸ್ಪಷ್ಟವಾಗಿ ಮಾತನಾಡುತ್ತಿರುವ ಅಲ್ಲಾಡುತ್ತಿರುವ ಒಡ್ಯಾಣದಿಂದ ಬಂಧಿಸಲು ಕಷ್ಟವಾಗಿ ಬಾರಿ ಬಾರಿಗೂ ಜಾರಿಹೋಗುತ್ತಿರುವ ಚೀನಾದೇಶದ ಮಲ್ಲುಬಟ್ಟೆಯ ಕಾಂತಿಯಿಂದ ಕೂಡಿರುವ ಮಧ್ಯಪ್ರದೇಶವುಳ್ಳ ಸ್ತ್ರೀಯರಿಂದ ಸೇವಿಸಲ್ಪಡುತ್ತಿರುವ ಸ್ವಾಮಿಯನ್ನು ಸ್ಮರಿಸಬೇಕು.

೪೯ ಬಟ್ಟೆಯ ತುದಿಗೆ ಮಣಿಗಳನ್ನು ಪೋಣಿಸಿ ಅದನ್ನು ಉಟ್ಟುಕೊಂಡಿದ್ದಾರೆ. ಆಗ ಎಡವುವುದು ಮುಗ್ಗರಿಸುವುದು. ಇವೇ ಮುಂತಾದುವುಗಳಿಂದ ಕಾಲಿನ ಹೊಡೆತವು ನಿಧಾನವಾಗಿ ಬೀಳುವುದರಿಂದ ಆ ಮಣಿಗಳು ಚದುರುತ್ತಿರುವ ಅಲ್ಲಾಡುತ್ತಿರುವ ತುಟಿಗಳುಳ್ಳ ಮೊಗ್ಗಿನಂತಿರುವ ಕಣ್ಣುಗಳುಳ್ಳ, ಅಲ್ಲಾಡುತ್ತಿರುವ ಓಲೆಗಳುಳ್ಳ ಸ್ತ್ರೀಯರ ಗುಂಪಿನಿಂದ ಸೇವಿಸಲ್ಪಡುತ್ತಿರುವ ಸ್ವಾಮಿಯನ್ನು ಧ್ಯಾನಿಸಬೇಕು.

ದ್ರಾಘಿಷ್ಠ ಶ್ವಸನಸಮೀರಣಾಭಿತಾಪ
ಪ್ರಮ್ಲಾನೀಭವದರುಣೌಷ್ಠ ಪಲ್ಲವಾನಾಂ ।
ನಾನೋಪಾಯನವಿಲಸತ್ಕರಾಂಬುಜಾನಾ
ಮಾಲೀಭಿಸ್ಸತತನಿಷೇವಿತಂ ಸಮಂತಾತ್ ॥ ೫೦ ॥

ತಾಸಾಮಾಯತಲೋಲನೀಲನಯನವ್ಯಾಕೋಶಲೀನಾಂಬುಜ
ಸ್ರಗ್ಭಿಃ ಸಂಪರಿಪೂಜಿತಾಖಿಲತನುಂ ನಾನಾವಿಲಾಸಾಸ್ಪದಂ ।
ತನ್ಮುಗ್ಧಾನನಪಂಕಜಪ್ರವಿಗಳನ್ಮಾಧ್ವೀರಸಾಸ್ವಾದಿನೀಂ
ಬಿಭ್ರಾಣಂ ಪ್ರಣಯೋನ್ಮದಾಕ್ಷಿಮಧುಹೃನ್ಮಾಲಾಂ ಮನೋಹಾರಿಣೀಂ॥೫೧॥

ಗೋಪಿಗೋಪಪಶೂನಾಂ ಬಹಿಸ್ಸ್ಮರೇದಗ್ರತೋಽಸ್ಯಗೀರ್ವಾಣಘಟಾಂ ।
ವಿತ್ತಾರ್ಥಿನೀಂ ವಿರಂಚಿತ್ರಿನಯನ ಶತಮನ್ಯುಪೂರ್ವಿಕಾಂ ಸ್ತೋತ್ರಪರಾಂ॥೫೨॥

---

೫೦. ನಿಟ್ಟುಸಿರಿನ ಗಾಳಿಯ ಬಿಸಿಯಿಂದ ಬಾಡಿದ ತುಟಿಗಳುಳ್ಳ, ಬಗೆಬಗೆಯ ಕಾಣಿಕೆಗಳನ್ನು ಕೈಯಲ್ಲಿಟ್ಟುಕೊಂಡಿರುವ ಸ್ತ್ರೀಯರ ಸಮೂಹದಿಂದ ಎಲ್ಲಾ ಕಡೆಯಲ್ಲೂ ಸೇವಿಸಲ್ಪಡುತ್ತಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೫೧. ಆ ಸ್ತ್ರೀಯರುಗಳ ಚಂಚಲವೂ, ನೀಲಬಣ್ಣವಾಗಿಯೂ ಇರುವ ಅತಿ ಮುಚ್ಚಿಕೊಂಡಿರುವ ಕಮಲದ ಹಾರಗಳಿಂದ ಪೂಜಿಸಲ್ಪಟ್ಟ ದೇಹವುಳ್ಳ, ಬಗೆಬಗೆಯ ವಿಲಾಸಗಳುಳ್ಳ, ಆ ಸ್ತ್ರೀಯರ ಸುಂದರದವಾದ ಮುಖ ಕಮಲದಿಂದ ಕೆಳಕ್ಕೆ ಸೋರುತ್ತಿರುವ ಮಧುರಸವನ್ನು ಕುಡಿಯುತ್ತಿರುವ ಪ್ರಣಯದಿಂದ ಮದಿಸಿರುವ ಮನೋಹರವಾದ ಕಣ್ಣುಗಳ ಮಧುವನ್ನು ಹೊಂದುತ್ತಿರುವ ಮನೋಹರವಾದ ಮಾಲೆಯನ್ನು ಧರಿಸಿರುವ ಸ್ವಾಮಿಯನ್ನು ಸ್ಮರಿಸಬೇಕು.

೫೨. ಈ ಸ್ವಾಮಿಯ ಸುತ್ತಲೂ, ಗೋಪಿ, ಗೋಪ, ಪಶುಗಳನ್ನು ಸ್ಮರಿಸಬೇಕು. ಎದುರಿಗೆ ವರ ಕೇಳುತ್ತಿರುವ ದೇವತೆಗಳ ಸಮೂಹವನ್ನೂ ಬ್ರಹ್ಮ, ಶಿವ, ಇಂದ್ರರುಗಳು ಸ್ತೋತ್ರ ಮಾಡುತ್ತಿರುವಂತೆಯೂ ಸ್ಮರಿಸಬೇಕು.

ತದ್ವದ್ದಕ್ಷಿಣತೋ ಮುನಿನಿಕರಂ
ದೃಢಧರ್ಮವಾಂಛಯಾ ಸಮಾಮ್ನಾಯಪರಂ
ಯೋಗೀನ್ದ್ರಾನಥ ಪೃಷ್ಠೇ
ಮುಮುಕ್ಷಮಾಣಾನ್ಸಮಾಧಿನಾ ತು ಸನಕಾದ್ಯಾನ್ ॥ ೫೩ ॥

ಸವ್ಯೇ ಸಕಾಂತಾನಥಯಕ್ಷಸಿದ್ಧ
ಗಂಧರ್ವ ವಿದ್ಯಾಧರ ಚಾರಣಾಂ ಶ್ಚ ।
ಸಕಿನ್ನರಾನಪ್ಸರಸಶ್ಚ ಮುಖ್ಯಾಃ
ಕಾಮಾರ್ಥಿನೀರ್ನರ್ತನಗೀತವಾದ್ಯೈಃ ॥ ೫೪ ॥

ಶಂಖೇಂದುಕುಂದಧವಳಂ ಸಕಲಾಗಮಜ್ಞಂ
ಸೌದಾಮಿನೀತತಿಪಿಶಂಗಜಟಾಕಲಾಪಂ ।
ತತ್ಪಾದಪಂಕಜಗತಾಮಮಲಾಂ ಚ ಭಕ್ತಿಂ
ವಾಂಛನ್ತ ಮುಜ್ಝಿತತರಾನ್ಯಸಮಸ್ತಸಂಗಂ ॥ ೫೫ ॥

ನಾನಾವಿಧಶ್ರುತಿಗುಣಾನ್ವಿತಸಪ್ತರಾಗ
ಗ್ರಾಮತ್ರಯೀಗತಮನೋಹರಮೂರ್ಛನಾಭಿಃ ।
ಸಂಪ್ರೀಣಯನ್ತ ಮುತಿತಾಭಿರಪಿ ಪ್ರಭಕ್ತ್ಯಾ
ಸಂಚಿತಯೇನ್ನಭಸಿ ಮಾಂ ದ್ರುಹಿಣಪ್ರಸೂತಂ ॥ ೫೬ ॥

---

೫೩-೫೪. ಆ ಸ್ವಾಮಿಯ ದಕ್ಷಿಣದಲ್ಲಿ ಸರಿಯಾದ ಧರ್ಮವನ್ನು ತಿಳಿಯ ಬೇಕೆಂಬ ಆಸೆಯಿಂದ ವೇದಗಳನ್ನು ಉದ್ಘೋಷಿಸುತ್ತಿರುವ ಋಷಿಗಳ ಗುಂಪನ್ನು ಧ್ಯಾನಿಸ ಬೇಕು. ಹಿಂಭಾಗದಲ್ಲಿ ಮೋಕ್ಷವನ್ನಪೇಕ್ಷಿಸುತ್ತಿರುವ ಯೋಗೀಂದ್ರರಾದ ಸಮಾಧಿ ಯಿಂದಿರುವ ಸನಕಾದಿಗಳನ್ನು ಧ್ಯಾನಿಸಬೇಕು. ಎಡಗಡೆ ಹೆಂಡರಿಂದ ಕೂಡಿರುವ ಯಕ್ಷ, ಸಿದ್ಧ, ಗಂಧರ್ವ, ವಿದ್ಯಾಧರ, ಚಾರಣರನ್ನೂ ನರ್ತನದಿಂದ ಇಷ್ಟಾರ್ಥವನ್ನ ಪೇಕ್ಷಿಸುತ್ತಿರುವ ಮುಖ್ಯರಾದ ಅಪ್ಸರಸ್ಸುಗಳನ್ನೂ ಕಿನ್ನರರನ್ನೂ ಧ್ಯಾನಿಸಬೇಕು.

೫೫-೫೬. ಶಂಖ, ಚಂದ್ರ, ಕುಂದಪುಷ್ಪದಂತೆ ಬೆಳ್ಳಗಿರುವ, ಸಕಲವೇದಗಳನ್ನು ತಿಳಿದಿರುವ ಮಿಂಚುಗಳ ಗುಂಪಿನಂತಿರುವ, ಜಟೆಗಳಿಂದ ಕೂಡಿರುವ, ಅವನ ಪಾದ ಕಮಲಗಳಲ್ಲಿ ಅಚಲವಾದ ಭಕ್ತಿಯನ್ನೂ ಅಪೇಕ್ಷಿಸುತ್ತಿರುವ ಇತರ ಸಂಗವನ್ನು ಬಿಟ್ಟಿರುವ ನಾರದನನ್ನು ಸ್ಮರಿಸಬೇಕು. ಬಗೆಬಗೆಯಾದ ಶ್ರುತಿ, ಗುಣದಿಂದ ಕೂಡಿದ ಏಳು ರಾಗಗಳೂ, ವೇದಗತವಾಗಿ ಮನೋಹರವಾದ ಮೂರ್ಛನೆಗಳಿಂದ ಸಂತೋಷ ಪಡಿಸುತ್ತಿರುವ ಬ್ರಹ್ಮನನ್ನು ಉತ್ಪತ್ತಿಮಾಡಿರುವ ನನ್ನನ್ನು ಭಕ್ತಿಯಿಂದ ಚಿಂತಿಸಬೇಕು.

ಇತಿ ಧ್ಯಾತ್ವಾತ್ಮಾನಂ ಪಟವಿಶದಧೀರ್ನಂದತನಯಂ ।
ನರೋ ಬುದ್ಧ್ಯೈವಾರ್ಘ್ಯಪ್ರಭೃತಿಭಿರಂನಿಂದ್ಯೋಽಪಹೃತಿಭಿಃ ॥
ಯಜೇದ್ಭೂಯೋ ಭಕ್ತ್ಯಾ ಸ್ವವಪುಷಿ ಬಹಿಷ್ಠೈಶ್ಚ ವಿಭವೈಃ ।
ಇತಿ ಪ್ರೋಕ್ತಂ ಸರ್ವಂ ಯದಭಿಲಷಿತಂ ಭೂಸುರವರಾಃ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವೈಶಾಖಮಾಹಾತ್ಮ್ಯೇ
॥ ನವನವತಿತಮೋಽಧ್ಯಾಯಃ ॥

---

೫೭. ಈ ರೀತಿಯಾಗಿ ಆ ನಂದನ ಮಗನಾದ ಸ್ವಾಮಿಯನ್ನು ಬುದ್ಧಿಯಿಂದ ಧ್ಯಾನಮಾಡಿ, ಅರ್ಘ್ಯಪಾದ್ಯಾದ್ಯುಪಚಾರಗಳಿಂದಲೂ, ಮನಸ್ಸಿನ ಸ್ಥಿರತೆಯಿಂದಲೂ, ಹೊರಗಿನ ವಿಭವಗಳಿಂದಲೂ, ಸ್ವಾಮಿಯನ್ನು ಪೂಜಿಸಬೇಕು. ಎಲೈ ಬ್ರಾಹ್ಮಣನೇ ನಿನಗೆ ಬೇಕಾದುದೆಲ್ಲವನ್ನೂ ಹೇಳಿದ್ದೇನೆ. ಮೇಲೆ ಹೇಳಿದ ಪ್ರಕಾರಗಳಿಂದ ಭಗವಂತನಾದ ಶ್ರೀ ಕೃಷ್ಣನನ್ನು ಪೂಜಿಸಬೇಕು ಎಂದು ಯಮುನು ಹೇಳಿದನು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ವೈಶಾಖ ಮಹಾತ್ಮ್ಯೆಯೆಂಬ
ತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

